ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೨

ಚತುರಶೀತಿಲಿಂಗಮಾಹಾತ್ಮ್ಯಂ

(ಉತ್ತರಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೯

# ಶ್ರೀಸ್ಕಾಂದಮಹಾಪುರಾಣಂ

೫

ಆವಂತ್ಯಖಂಡ

೨

ಚತುರಶೀತಿಲಿಂಗಮಾಹಾತ್ಮ್ಯ

(ಉತ್ತರಭಾಗ)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೨

ಚತುರಶೀತಿಲಿಂಗಮಾಹಾತ್ಮ್ಯ

(ಉತ್ತರಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೫

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯ ಖಂಡದ ಎರಡನೆಯ 'ಚತುರಶೀತಿಲಿಂಗಮಾಹಾತ್ಮ್ಯ'ವು ಸಂಪೂರ್ಣವಾಗಿರುತ್ತದೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು. ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯ ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾ ಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವ ದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾವಂತ್ಯಖಂಡೇ
## ದ್ವಿತೀಯಂ ಚತುರಶೀತಿಲಿಂಗಮಾಹಾತ್ಮ್ಯಂ

(ದ್ವಿತೀಯೋ ಭಾಗಃ)

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರನಿಾಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ತ್ರಿಚತ್ವಾರಿಂಶೋಽಧ್ಯಾಯಃ
#### ಅಂಗಾರಕೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಶಿವ ಉವಾಚ :—

**ಚತ್ವಾರಿಂಶತ್ತಮಂ ವಿದ್ಧಿ ತ್ರ್ಯಧಿಕಂ ಪರ್ವತಾತ್ಮಜೇ ।**
**ಯಸ್ಯ ದರ್ಶನಮಾತ್ರೇಣ ಜಾಯಂತೇ ಸರ್ವಸಂಪದಃ ॥ ೧ ॥**
**ಆದಿಕಲ್ಪೇ ಪುರಾ ಜಾತೋ ವಕ್ರಾಂಗೋ ಲೋಹಿತಚ್ಛವಿಃ ।**
**ರೌದ್ರಸ್ತ್ವಂಗಾರಸದೃಶೋ ಮಮ ಗಾತ್ರಾದ್ವರಾನನೇ ।**
**ಮಯಾ ಧೃತೋ ಧರಣ್ಯಾಂ ಸ ವಿಖ್ಯಾತೋ ಭೂಮಿಪುತ್ರಕಃ ॥ ೨ ॥**

---

### ಕನ್ನಡದ ಅನುವಾದ
#### ಅಂಗಾರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಪರ್ವತರಾಜಪುತ್ರಿಯೆ ! ನಲವತ್ತ ಮೂರನೆಯ ಮಹಾಲಿಂಗವೇ ಅಂಗಾರೇಶ್ವರವೆಂಬುದು; ಅದನ್ನು ನೋಡುವ ಮಾತ್ರದಿಂದಲೇ ಸರ್ವೈಶ್ವರ್ಯಗಳೂ ಲಭಿಸುವುವು.

೨. ಸುಂದರಮುಖಿಯೆ ! ಜಗತ್ತಿನ ಆದಿಕಲ್ಪದಲ್ಲಿ ವಕ್ರಕಾಯನೂ, ಭಯಂಕರನೂ, ಕೆಂಡವನ್ನು ಹೋಲುವ ರಕ್ತಕಾಂತಿಯ ದೇಹದವನೂ ಆದವನೊಬ್ಬನು ನನ್ನ ದೇಹದಿಂದುದ್ಭವಿಸಿದನು. ನಾನು ಅವನನ್ನು ಭೂಮಿಯಲ್ಲಿ ಬಿಟ್ಟುಬಿಡಲು ಅವನು ಭೂಮಿಪುತ್ರನೆಂದೇ ಪ್ರಖ್ಯಾತನಾದನು.

ಜಾತಮಾತ್ರೇ ಸುತೇ ತಸ್ಮಿನ್ಮಹಾಕಾಯೇ ಭಯಾವಹೇ ।
ಕಂಪಿತಾ ಧರಣೀ ದೇವೀ ದೇವಾಸ್ತ್ರಸ್ತಾಃ ಸವಾಸವಾಃ ॥ ೩ ॥
ಕ್ಷೋಭಂಗತಾಃ ಸಮುದ್ರಾಶ್ಚ ಚೇಲುಶ್ಚ ಧರಣೀಧರಾಃ ।
ತೇನೈವ ಪೀಡಿತಂ ಸರ್ವಂ ಸದೇವಾಸುರಮಾನುಷಂ ॥ ೪ ॥
ಋಷಯೋ ವಾಲಖಿಲ್ಯಾಶ್ಚ ದೇವಾಃ ಶಕ್ರಪುರೋಗಮಾಃ ।
ಬೃಹಸ್ಪತಿಂ ಪುರಸ್ಕೃತ್ಯ ಬ್ರಹ್ಮಲೋಕಂ ಗತಾಃ ಪ್ರಿಯೇ ॥ ೫ ॥
ಸೋಚ್ಛ್ವಾಸಾಃ ಕಥಯಾಮಾಸುರ್ನಮಸ್ಕೃತ್ಯ ಪಿತಾಮಹಂ ।
ವೃತ್ತಾಂತಂ ವಿಸ್ತರಾತ್ಸರ್ವಂ ಲೋಕತ್ರಯವಿನಾಶನಂ ॥ ೬ ॥
ಹರಗಾತ್ರೋದ್ಭವೇನೈವ ಜಾತಮಾತ್ರೇಣ ಲೀಲಯಾ ।
ಲೋಕತ್ರಯಂ ಸಮಾಕ್ರಾಂತಂ ಪೀಡಿತಂ ಭಕ್ಷಿತಂ ತಥಾ ॥ ೭ ॥
ತಚ್ಛ್ರುತ್ವಾ ವಚನಂ ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಚಿಂತಯಿತ್ವಾ ತು ತೈಃ ಸಾರ್ಧಮಾಜಗಾಮ ಮಮಾಂತಿಕಂ ॥ ೮ ॥

---

೩. ದೊಡ್ಡ ಶರೀರದವನೂ, ಭಯವನ್ನುಂಟುಮಾಡುವವನೂ ಆದ ಅವನು ಹುಟ್ಟಿದ ಮಾತ್ರದಿಂದಲೇ ಭೂದೇವಿಯು ನಡುಗಿದಳು. ಇಂದ್ರಾದಿ ದೇವತೆಗಳೂ ಭಯತ್ರಸ್ತರಾದರು.

೪. ಸಮುದ್ರಗಳು ಕ್ಷೋಭಗೊಂಡುವು. ಪರ್ವತಗಳೆಲ್ಲವೂ ಕಂಪಿಸಿದುವು. ದೇವರಾಕ್ಷಸ ಮನುಷ್ಯರೊಡಗೊಂಡ ಲೋಕಗಳೆಲ್ಲವೂ ಅವನಿಂದ ಪೀಡಿಸಲ್ಪಟ್ಟುವು.

೫. ಪ್ರಿಯಳೆ! ಆಗ ಮಹರ್ಷಿಗಳೂ, ವಾಲಖಿಲ್ಯರೂ, ಮಹೇಂದ್ರನೇ ಮೊದಲಾದ ದೇವತೆಗಳೂ ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಬ್ರಹ್ಮಲೋಕಕ್ಕೆ ಹೋದರು.

೬. ಅಲ್ಲದೆ, ನಿಟ್ಟುಸಿರುಗಳನ್ನು ಬಿಡುತ್ತ ಪಿತಾಮಹನಿಗೆ ನಮಸ್ಕರಿಸಿ ಮೂರುಲೋಕಗಳಿಗೂ ವಿನಾಶವನ್ನುಂಟುಮಾಡುವಂತಿದ್ದ ಈ ಮಹಾವ್ಯಕ್ತಿಯ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿದರು.

೭. "ಪರಮೇಶ್ವರನ ದೇಹದಿಂದ ಹುಟ್ಟಿದೊಡನೆಯೇ ಈತನು ಅವಲೀಲೆಯಾಗಿ ಮೂರು ಲೋಕಗಳನ್ನೂ ಆಕ್ರಮಿಸಿಕೊಂಡು ಸಂಕಟಗೊಳಿಸುತ್ತಲೂ ಉಪಭೋಗಿಸುತ್ತಲೂ ಇರುವನು."

೮. ಲೋಕಪಿತಾಮಹನಾದ ಬ್ರಹ್ಮದೇವನು ಆ ಮಾತನ್ನು ಕೇಳಿ ಒಂದು ಕ್ಷಣಕಾಲ ಯೋಚಿಸಿ ಅವರೆಲ್ಲರೊಡನೆ ನಾನಿದ್ದಲ್ಲಿಗೆ ಬಂದು ಸೇರಿದನು.

ಮಯಾ ಪೃಷ್ಟಾಸ್ತು ತೇ ಸರ್ವೇ ಕಿಮರ್ಥಂ ಭಯವಿಹ್ವಲಾಃ ।
ಸೋಚ್ಛ್ವಾಸಹೃದಯಾ ದೀನಾಃ ಕಸ್ಮಾದ್ವೋ ಭಯಮಾಗತಂ ॥ ೯ ॥
ತೈಃ ಸರ್ವಂ ಕಥಿತಂ ದೇವಿ ಮಮಾಗ್ರೇ ಭಯವಿಹ್ವಲೈಃ ।
ತ್ವದಂಗಸಂಭವೇನೈವ ದೇವದೇವ ಜಗತ್ಪತೇ ।
ಪೀಡಿತಂ ಭಕ್ಷಿತಂ ಚೈವ ಸದೇವಾಽಸುರಮಾನವಂ ॥ ೧೦ ॥
ಇತಿ ತೇಷಾಂ ವಚಃ ಶ್ರುತ್ವಾ ಕ್ಷೇಮಾರ್ಥಂ ಕೃಪಯಾ ಮಯಾ ।
ಆಕಾರಿತೋ ಮತ್ಸಮೀಪಮುವಾಚ ವದತಾಂ ವರಃ ॥ ೧೧ ॥
ಆದೇಶೋ ದೀಯತಾಂ ದೇವ ಕಿಂ ಕರೋಮೀತ್ಯುವಾಚ ಸಃ ।
ನಾಕರ್ಷ ತ್ವಂ ಜಗದಿದಂ ಮಯಾ ಪ್ರೋಕ್ತಃ ಪುನಃ ಪುನಃ ॥ ೧೨ ॥
ಮಮಾಂಗಾದ್ರಜಸಾ ಜಾತಸ್ತೇನಾಽಂಗಾರಕ ಉಚ್ಯಸೇ ।
ಲೋಕಾನಾಂ ಸ್ವಸ್ತಯೇ ನಿತ್ಯಂ ಮಂಗಲೋಽಸಿ ಮಯಾ ಕೃತಃ ॥ ೧೩ ॥
ಇದಾನೀಂ ವಕ್ರತಾಂ ಯಾತೋ ವಕ್ರಸ್ತ್ವಂ ಗೀಯಸೇ ಬುಧೈಃ ।
ವಿಜ್ಞಪ್ತೋಽಹಂ ತದಾ ತೇನ ಮಮ ವಾಕ್ಯಂ ಶ್ರುತಂ ಯದಾ ।
ಆಹಾರೇಣ ವಿನಾ ದೇವ ಕಥಂ ತೃಪ್ತಿರ್ಭವಿಷ್ಯತಿ ॥ ೧೪ ॥

---

೯. ನಾನು ಅವರನ್ನು ಕಂಡು ಪ್ರಶ್ನೆಮಾಡಿದೆನು. ನೀವೆಲ್ಲರೂ ಯಾವ ಕಾರಣದಿಂದ ಭಯತ್ರಸ್ತರಾಗಿರುವಿರಿ? ನಿಮ್ಮ ಹೃದಯಗಳೇಕೆ ನಿಟ್ಟುಸಿರುಗಳಿಂದ ನಡುಗುತ್ತಿರುವುವು? ದೀನರಾದ ನಿಮಗೆ ಯಾರಿಂದ ಭಯವುಂಟಾಗಿರುವುದು?

೧೦. ಭಯಸಂಭ್ರಾಂತರಾದ ಅವರು ವೃತ್ತಾಂತವನ್ನೆಲ್ಲ ನನ್ನ ಸಮ್ಮುಖದಲ್ಲಿ ವಿಜ್ಞಾಪಿಸಿದರು. "ದೇವದೇವನೆ! ಲೋಕನಾಥನೆ! ನಿನ್ನ ಶರೀರದಿಂದ ಹುಟ್ಟಿದವನಿಂದಲೇ ದೇವಾಸುರಮನುಷ್ಯಲೋಕಗಳೆಲ್ಲವೂ ಪೀಡಿತಗಳೂ ಉಪಭುಕ್ತಗಳೂ ಆಗಿರುವುವು."

೧೧. ಇಂತೆಂದ ಅವರ ಮಾತುಗಳನ್ನು ಕೇಳಿ ಲೋಕಗಳ ಕ್ಷೇಮಕ್ಕಾಗಿ ಕನಿಕರಗೊಂಡು ನಾನು ಕರೆಯಲು ಆತನು ಸಮೀಪಕ್ಕೆ ಬಂದು ಮಾತನಾಡತೊಡಗಿದನು.

೧೨. "ದೇವದೇವನೆ! ನನಗೆ ಅಪ್ಪಣೆಯನ್ನು ಕೊಡು. ಈಗೇನು ಮಾಡಲಿ?" ಎಂದು ಕೇಳುತ್ತಿರುವ ಅವನಿಗೆ ನಾನು, "ಈ ಬ್ರಹ್ಮಾಂಡವನ್ನೀರೀತಿಯಾಗಿ ಪೀಡಿಸಬೇಡ" ಎಂದು ಮತ್ತೆ ಮತ್ತೆ ಹೇಳಿದೆನು.

೧೩. "ನನ್ನ ಅಂಗಗಳ ಧೂಳಿನಿಂದ ಹುಟ್ಟಿರುವುದರಿಂದ ನೀನು ಅಂಗಾರಕನೆಂದು ಕರೆಯಲ್ಪಡುವೆ. ಲೋಕಗಳ ಸೌಖ್ಯಕ್ಕಾಗಿ ನಿನ್ನನ್ನು ನಾನು ಮಂಗಳನನ್ನಾಗಿ ಮಾಡಿರುವೆನು.

೧೪. ಈಗ ನೀನು ವಕ್ರವರ್ತನೆಯುಳ್ಳವನಾಗಿರುವುದರಿಂದ ನಿನ್ನನ್ನು

ತಸ್ಮಾನ್ಮೇ ದೇಹಿ ಸುಸ್ಥಾನಮಾಧಿಪತ್ಯಂ ಚ ದೇಹಿ ಮೇ ।
ಶಕ್ತಿಂ ಚ ದೇಹಿ ಮೇ ಶೀಘ್ರಮಾಹಾರಂ ದೇಹಿ ಮೇ ಪ್ರಭೋ ॥ ೧೫ ॥
ತಸ್ಯ ತದ್ವಚನಂ ಶ್ರುತ್ವಾ ಪುತ್ರೋಽಯಂ ಮಮ ವಲ್ಲಭಃ ।
ತಸ್ಮಾದ್ದಾಸ್ಯಾಮಿ ಪರಮಂ ಸ್ಥಾನಮಕ್ಷಯಮುತ್ತಮಂ ॥ ೧೬ ॥
ಇತಿ ಸಂಚಿಂತ್ಯ ಮನಸಾ ಸ್ಮೃತಂ ಸ್ಥಾನಂ ಮಯೋತ್ತಮಂ ।
ಉತ್ಸಂಗೇ ಚ ಸುತಂ ಕೃತ್ವಾ ಪ್ರೇಮ್ಣಾ ಪ್ರೋಕ್ತಂ ಪುನಃ ಪುನಃ ॥ ೧೭ ॥
ದತ್ತಂ ಪುತ್ರ ಮಯಾ ಸ್ಥಾನಂ ಮಹಾಕಾಲವನೋತ್ತಮೇ ।
ಗಂಗೇಶ್ವರಸ್ಯ ಪೂರ್ವೇ ತು ಪ್ರಶಸ್ಯಂ ಸ್ಥಾನಮುತ್ತಮಂ ॥ ೧೮ ॥
ಖಗರ್ತಾ ಚೈವ ಶಿಪ್ರಾ ಚ ಸಂಗಮಸ್ತತ್ರ ವಿದ್ಯತೇ ॥ ೧೯ ॥
ಯದಾ ಮಯಾ ಧೃತಾ ಗಂಗಾ ತದಾ ಸಾ ಚಂದ್ರಮಂಡಲಾತ್ ।
ಪ್ರಮಾದಾತ್ಪತಿತಾ ಭೂಮೌ ಮಹಾಕಾಲವನೋತ್ತಮೇ ॥ ೨೦ ॥

---

ಪಂಡಿತರು ವಕ್ರನೆಂದೇ ಕರೆಯುವರು.'' ನನ್ನ ಮಾತುಗಳನ್ನು ಕೇಳುತ್ತಲೆ ಆತನು ವಿಜ್ಞಾಪಿಸಿಕೊಂಡನು. ''ಮಹಾದೇವ! ಆಹಾರವಿಲ್ಲದೆ ನನಗೆ ತೃಪ್ತಿಯುಂಟಾಗುವುದು ಹೇಗೆ?

೧೫. ಆದುದರಿಂದ ನನಗೆ ಈಗಲೇ ಒಂದು ಒಳ್ಳೆಯ ಸ್ಥಾನವನ್ನೂ, ಅಧಿಕಾರವನ್ನೂ, ಅಧಿಕಾರವನ್ನು ನಿರ್ವಹಿಸುವ ಶಕ್ತಿಯನ್ನೂ, ಆಹಾರವನ್ನೂ ತೋರಿಸಿಕೊಡು.''

೧೬. ಅವನ ಮಾತನ್ನು ಕೇಳಿ ನಾನೆಂದೆನು: ''ನೀನು ನನಗೆ ಬಹಳ ಪ್ರಿಯನಾದ ಪುತ್ರನು. ಆದುದರಿಂದ ನಿನಗೆ ಸರ್ವೋತ್ತಮವೂ, ನಾಶರಹಿತವೂ ಆದ ಪರಮಪದವಿಯನ್ನು ಕೊಡುವೆನು.''

೧೭. ಇಂತೆಂದು ಮನಸ್ಸಿನಲ್ಲಿಯೇ ಚಿಂತಿಸುತ್ತ ಉತ್ತಮವಾದ ಒಂದು ಸ್ಥಾನವನ್ನು ಜ್ಞಾಪಿಸಿಕೊಂಡೆನು. ಪ್ರೇಮದಿಂದ ಆತನನ್ನು ತೊಡೆಯಲ್ಲಿ ಕೂಡಿಸಿಕೊಂಡು ಹೇಳಿದೆನು.

೧೮. ''ಪುತ್ರನೆ! ನಿನಗೆ ನಾನು ಮಹಾಕಾಲವನದಲ್ಲಿ ಒಂದು ಉತ್ತಮ ಸ್ಥಾನವನ್ನು ಕೊಟ್ಟಿರುವೆನು. ಗಂಗೇಶ್ವರನಿಗೆ ಪೂರ್ವದಲ್ಲಿರುವ ಪ್ರದೇಶವು ಅತ್ಯಂತ ಪ್ರಶಸ್ತವಾಗಿರುವುದು.

೧೯. ಅಲ್ಲಿ ಖಗರ್ತಾನದಿಯೂ, ಶಿಪ್ರಾನದಿಯೂ ಸಂಗಮವಾಗುವ ತೀರ್ಥವು ಕಾಣುತ್ತಿರುವುದು.

೨೦. ನಾನು ಆಕಾಶದಿಂದ ಬಿದ್ದ ಗಂಗೆಯನ್ನು ಜಡೆಯಲ್ಲಿ ಧರಿಸಿದಾಗ ಜಟಾಜೂಟದ ಚಂದ್ರಬಿಂಬದಿಂದ ಅಕಸ್ಮಾತ್ತಾಗಿ ಸ್ವಲ್ಪಭಾಗವು ಮಹಾಕಾಲವನದಲ್ಲಿ ಬಿದ್ದಿತು.

ಖಗರ್ತೇತಿ ಚ ವಿಖ್ಯಾತಾ ಖಾದ್ಭ್ರಷ್ಟಾ ಪ್ರಾಽಪತತ್ಕ್ಷಿತೌ ।
ಅತೋ ಮಯಾಽವತಾರಸ್ತು ಸಹಸಾ ತತ್ರ ವೈ ಕೃತಃ ॥ ೨೧ ॥
ಲಿಂಗಮೂರ್ತಿರಹಂ ಪುತ್ರ ತಿಷ್ಠಾಮಿ ಸುರಪೂಜಿತಃ ।
ತತ್ಸ್ಥಾನಂ ದುರ್ಲಭಂ ದೇವೈಸ್ತಸ್ಮಾತ್ತ್ವಂ ಗಚ್ಛ ಸತ್ವರಂ ॥ ೨೨ ॥
ಪೂಜಿತೋಽಹಂ ತ್ವಯಾ ತತ್ರ ಸಂಗಮೇ ಲೋಕಪೂಜಿತೇ ।
ತ್ರಿಷು ಲೋಕೇಷು ಯಾಸ್ಯಾಮಿ ಖ್ಯಾತಿಂ ವೈ ತವ ನಾಮತಃ ॥ ೨೩ ॥
ಮಧ್ಯೇ ಗ್ರಹಾಣಾಂ ಸರ್ವೇಷಾಮಾಧಿಪತ್ಯಂ ಮಯಾ ತವ ।
ದತ್ತಂ ತೃತೀಯಕಂ ಸ್ಥಾನಂ ತತ್ರ ತೃಪ್ತಿರ್ಭವಿಷ್ಯತಿ ॥ ೨೪ ॥
ಪೂಜಾಂ ಪ್ರಾಪ್ಸ್ಯಸಿ ತತ್ರೈವ ಗ್ರಹಮಧ್ಯೇ ವ್ಯವಸ್ಥಿತಃ ।
ತಿಥಿರ್ದತ್ತಾ ಚತುರ್ಥೀ ತೇ ತಸ್ಯಾಂ ಯೇ ವ್ರತತತ್ಪರಾಃ ॥ ೨೫ ॥
ತ್ವಾಮುದ್ದಿಶ್ಯ ಕರಿಷ್ಯಂತಿ ಪೂಜಾಂ ಶಾಂತಿಂ ಸದಕ್ಷಿಣಾಂ ।
ತೇನ ಸರ್ವೇಣ ತೇ ತೃಪ್ತಿರ್ಭವಿಷ್ಯತಿ ನ ಸಂಶಯಃ ॥ ೨೬ ॥

---

೨೧. ಆಕಾಶದಿಂದ ಭೂಮಿಯಲ್ಲಿ ಬಿದ್ದ ಆ ಪ್ರವಾಹಕ್ಕೆ ಖಗರ್ತವೆಂದು ಹೆಸರಾಯಿತು. ಆದುದರಿಂದಲೇ ನಾನೂ ಅಲ್ಲಿಯೇ ಅವತಾರವನ್ನು ಮಾಡಲು ನಿಶ್ಚಯಿಸಿದೆನು.

೨೨. ಮಗನೆ! ಅಲ್ಲಿ ನಾನು ಲಿಂಗಸ್ವರೂಪದಿಂದ ದೇವತೆಗಳ ಪೂಜೆಯನ್ನು ಕೈಗೊಳ್ಳುತ್ತ ನಿಂತಿರುವೆನು. ಆ ಸ್ಥಾನವು ದೇವಾಧಿದೇವತೆಗಳಿಗೂ ದುರ್ಲಭವಾಗಿರುವುದು. ಆದುದರಿಂದ ನೀನು ತ್ವರೆಯಾಗಿ ಅಲ್ಲಿಗೆ ಹೊರಡು.

೨೩. ಸಕಲ ಲೋಕಮಾನ್ಯವಾದ ಆ ಸಂಗಮಪ್ರದೇಶದಲ್ಲಿ ನಿನ್ನಿಂದ ನಾನು ಪೂಜಿತನಾಗಲು ನಿನ್ನ ಹೆಸರಿನಿಂದಲೇ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವೆನು.

೨೪. ಸಮಸ್ತ ಗ್ರಹಗಳಲ್ಲಿಯೂ ನಿನಗೆ ಆಧಿಪತ್ಯವನ್ನೂ, ಸ್ಥಾನವನ್ನೂ ಕೊಟ್ಟಿರುವೆನು. ಇದು ನಿನಗೆ ಮೂರನೆಯ ಸ್ಥಾನವಾಗಿರಲಿ. ಅದರಿಂದ ನಿನಗೆ ಸಂತೋಷವುಂಟಾಗುವುದು.

೨೫. ಆ ಗ್ರಹಗಳ ಮಧ್ಯದಲ್ಲಿಯೇ ಇದ್ದುಕೊಂಡು ಪೂಜೆಯನ್ನು ಪಡೆಯುವೆ. ನಿನಗೆ ಚತುರ್ಥೀತಿಥಿಯನ್ನೂ ಕೊಟ್ಟಿರುವೆನು. ಆ ತಿಥಿಯಲ್ಲಿ ವ್ರತತತ್ಪರರಾಗಿರಬೇಕು.

೨೬. ಅಂದು ನಿನಗೆ ಪೂಜೆಯನ್ನೂ ದಕ್ಷಿಣೆಯಿಂದೊಡಗೂಡಿದ ಶಾಂತಿ ಕರ್ಮವನ್ನೂ ಮಾಡುವರೊ, ಅವರ ಪೂಜೆಯಿಂದ ನಿನಗೆ ಸಂಪೂರ್ಣ ತೃಪ್ತಿಯುಂಟಾಗುವುದರಲ್ಲಿ ಸಂದೇಹವಿಲ್ಲ.

ವಾರಶ್ಚೈಕಶ್ಚ ತೇ ದತ್ತೋ ಮಂಗಲಾರ್ಥಂ ಮಯಾ ತವ ।
ನವವಸ್ತ್ರಪರೀಧಾನಂ ವಿದ್ಯಾರಂಭಂ ದಿನೇ ತವ ।
ತೈಲಾಭ್ಯಂಗಂ ಕರಿಷ್ಯಂತಿ ನ ಚ ಪ್ರಾಪ್ಸ್ಯಂತಿ ತೇ ಬಲಂ ॥ ೨೭ ॥
ಇತ್ಯುಕ್ತಸ್ತು ಮಯಾ ದೇವಿ ವಕ್ರಾಂಗೋ ಮಂಗಲಃ ಸುತಃ ।
ಅಂಗಾರಕೇತಿ ವಿಖ್ಯಾತಸ್ತಥೇತ್ಯಂಗೀಚಕಾರ ಸಃ ॥ ೨೮ ॥
ಸಂತುಷ್ಟಸ್ತೇನ ವಾಕ್ಯೇನ ಮದೀಯೇನ ವರಾನನೇ ।
ಆಜಗಾಮ ಮುದಾ ಯುಕ್ತೋ ಮಹಾಕಾಲವನೋತ್ತಮೇ ॥ ೨೯ ॥
ಶಿಪ್ರಾಯಾಶ್ಚ ತಟೇ ರಮ್ಯೇ ಖಗರ್ತಾಸಂಗಮಾಂತಿಕಂ ।
ದೃಷ್ಟ್ವೋಽಹಂ ಲಿಂಗರೂಪೇಣ ಪರಾಂ ತುಷ್ಟಿಮುಪಾಗತಃ ॥ ೩೦ ॥
ಮಯಾ ಚಾಲಿಂಗಿತಃ ಪ್ರೇಮ್ಣಾ ಚುಂಬಿತಃ ಶಿರಸಿ ಪ್ರಿಯೇ ।
ವರೋ ದತ್ತೋ ವಿಶಾಲಾಕ್ಷಿ ವಾಂಛಿತಂ ತೇ ಭವಿಷ್ಯತಿ ॥ ೩೧ ॥
ದೃಷ್ಟೋಽಹಂ ಚ ತ್ವಯಾ ಪುತ್ರ ಭಕ್ತ್ಯಾ ಚಾರಾಧಿತಸ್ತ್ವಯಾ ।
ಮಮ ವಾಕ್ಯಂ ಕೃತಂ ಯಸ್ಮಾತ್ತಸ್ಮಾತ್ತುಷ್ಟೋಽಸ್ಮಿ ಮಂಗಲ ॥ ೩೨ ॥

---

೨೭. ನಿನ್ನ ಮಾಂಗಲ್ಯವೃದ್ಧಿಗಾಗಿ ನಿನಗೊಂದು ವಾರವನ್ನೂ ಕೊಟ್ಟಿರುವೆನು. ನಿನಗೆ ಮೀಸಲಾಗಿಟ್ಟಿರುವ ದಿನದಲ್ಲಿ ಯಾರು ನೂತನ ವಸ್ತ್ರವನ್ನು ಧರಿಸುವರೊ, ವಿದ್ಯಾಭ್ಯಾಸವನ್ನು ಪ್ರಾರಂಭಿಸುವರೊ, ಅಥವ ತೈಲಾಭ್ಯಂಜನವನ್ನು ಮಾಡಿಕೊಳ್ಳುವರೊ, ಅವರು ಎಂದಿಗೂ ಬಲಶಾಲಿಗಳಾಗಲಾರರು.''

೨೮. ದೇವಿಯೆ! ಇಂತು ಹೇಳಿದುದನ್ನು ಕೇಳಿ, ವಕ್ರಶರೀರಿಯೂ, ಮಂಗಳನೂ, ಅಂಗಾರಕನೆಂದು ಪ್ರಖ್ಯಾತನೂ ಆದ ನನ್ನ ಪುತ್ರನು ಹಾಗೆಯೇ ಆಗಲೆಂದು ಅಂಗೀಕರಿಸಿದನು.

೨೯. ಓ ವರವರ್ಣಿನಿಯೆ! ಆ ನನ್ನ ಮಾತಿನಿಂದ ಸಂತೋಷಗೊಂಡು ಹೊರಟು ಹರ್ಷಭರಿತನಾಗಿಯೇ ಉತ್ತಮವಾದ ಮಹಾಕಾಲವನಕ್ಷೇತ್ರಕ್ಕೆ ಬಂದು ಸೇರಿದನು.

೩೦–೩೧. ಶಿಪ್ರಾತೀರದ ಒಂದು ರಮ್ಯಪ್ರದೇಶದಲ್ಲಿ ಖಗರ್ತಾನದಿಯು ಅದರೊಡನೆ ಸೇರುವುದು. ಅಲ್ಲಿ ಲಿಂಗರೂಪದಿಂದ ನೆಲಸಿದ್ದ ನನ್ನನ್ನು ನೋಡಿ ಅಂಗಾರಕನು ಅತ್ಯಂತ ಸಂತೋಷವನ್ನು ಹೊಂದಿದನು. ನಾನೂ ಅವನನ್ನು ಪ್ರೀತಿಯಿಂದಾಲಿಂಗಿಸಿಕೊಂಡು ತಲೆಯನ್ನು ಮುತ್ತಿಡುತ್ತ ಅವನಿಗೀವರವನ್ನು ಇತ್ತೆನು. ''ಮಗನೆ! ನಿನ್ನ ವಾಂಛಿತಗಳೆಲ್ಲವೂ ಕೈಗೂಡುವುವು.

೩೨. ಪುತ್ರನಾದ ಮಂಗಳನೆ! ನೀನು ನನ್ನನ್ನು ನೋಡಿ ಭಕ್ತಿಭರಿತನಾಗಿ ಪೂಜೆಯನ್ನು ಮಾಡಿರುವೆ. ನನ್ನ ಮಾತುಗಳನ್ನೆಲ್ಲ ನಡೆಸಿರುವೆ. ಆದುದರಿಂದ ನಾನು ನಿನ್ನಲ್ಲಿ ಸುಪ್ರೀತನಾಗಿರುವೆನು.

ಅಂಗಾರೇಶ್ವರನಾಮಾಹಮದ್ಯಪ್ರಭೃತಿ ಪುತ್ರಕ ।
ತ್ರಿಷು ಲೋಕೇಷು ವಿಖ್ಯಾತೋ ಭವಿಷ್ಯಾಮಿ ನ ಸಂಶಯಃ ॥ ೩೩ ॥
ಯೇ ಮಾಂ ಪಶ್ಯಂತಿ ಸತತಂ ಸಂಗಮೇಽತ್ರ ವ್ಯವಸ್ಥಿತಂ ।
ನ ತೇಷಾಂ ಪುನರಾವೃತ್ತಿರ್ಭವಿಷ್ಯತಿ ಮಹೀತಲೇ ॥ ೩೪ ॥
ಯೇ ಮಾಂ ಸಂಪೂಜಯಿಷ್ಯಂತಿ ಹ್ಯಂಗಾರಕದಿನೇ ನರಾಃ ।
ಕಲೌ ಯುಗೇ ಕೃತಾರ್ಥಾಸ್ತೇ ಭವಿಷ್ಯಂತಿ ನ ಸಂಶಯಃ ॥ ೩೫ ॥
ಚತುರ್ಥ್ಯಾಂ ಮಂಗಲದಿನೇ ಯೇ ಮಾಂ ಪಶ್ಯಂತಿ ಸುವ್ರತಾಃ ।
ನ ತೇ ಯಾಸ್ಯಂತಿ ಸಂಸಾರೇ ಘೋರೇ ದುಃಖಶತಾಕುಲೇ ॥ ೩೬ ॥
ಅಮಾವಾಸ್ಯಾ ಚ ಭೌಮಶ್ಚ ಸಂಯೋಗೋ ದೃಶ್ಯತೇ ಯದಾ ।
ಖಗರ್ತಾಯಾಶ್ಚ ಶಿಪ್ರಾಯಾಃ ಸಂಗಮೇ ದೇವಪೂಜಿತೇ ॥ ೩೭ ॥
ಸ್ನಾತ್ವಾ ತದಾ ಪ್ರಪಶ್ಯಂತಿ ಮಾಮತ್ರೈವ ವ್ಯವಸ್ಥಿತಂ ।
ತೇಷಾಂ ಪುಣ್ಯಫಲಂ ದೇವಿ ಸಮಾಸಾಚ್ಛೃಣು ಸಾಂಪ್ರತಂ ॥ ೩೮ ॥
ವಾರಾಣಸ್ಯಾಂ ಪ್ರಯಾಗೇ ಚ ಕುರುಕ್ಷೇತ್ರೇ ಚ ಯತ್ಫಲಂ ।
ಗಯಾಯಾಂ ಪುಷ್ಕರೇ ಪ್ರೋಕ್ತಂ ತತ್ಪುಣ್ಯಮಧಿಕಂ ಭವೇತ್ ॥ ೩೯ ॥

---

೩೩. ಮಗನೆ! ಇಂದು ಮೊದಲುಗೊಂಡು ನಾನು ಅಂಗಾರೇಶ್ವರನೆಂಬ ಹೆಸರನ್ನು ತಾಳಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವೆನು. ಇದರಲ್ಲಿ ಸಂದೇಹವಿಲ್ಲವು.

೩೪. ಶಿಪ್ರಾಖಗರ್ತಾಸಂಗಮದಲ್ಲಿ ನೆಲಸಿರುವ ನನ್ನನ್ನು ನಿತ್ಯವೂ ಯಾರು ನೋಡುತ್ತಿರುವರೊ, ಅವರಿಗೆ ಪುನಃ ಭೂಲೋಕದಲ್ಲಿ ಜನ್ಮವುಂಟಾಗುವುದಿಲ್ಲ.

೩೫. ಕಲಿಯುಗದಲ್ಲಿ ಯಾರು ಮಂಗಳವಾರದ ದಿನ ನನ್ನ ಪೂಜೆಯನ್ನು ಚೆನ್ನಾಗಿ ಮಾಡುವರೊ, ಅವರು ನಿಸ್ಸಂದೇಹವಾಗಿಯೂ ಕೃತಕೃತ್ಯರಾಗುವರು.

೩೬. ಮಂಗಳವಾರದಲ್ಲಿ ಚತುರ್ಥೀತಿಥಿಯು ಬರಲು ಯಾವ ಪುಣ್ಯವಂತರು ನನ್ನ ದರ್ಶನವನ್ನು ಮಾಡುವರೊ, ಅವರು ಪುನಃ ಭಯಂಕರವೂ, ನೂರಾರು ದುಃಖಗಳಿಂದ ಕೂಡಿದುದೂ ಆದ ಸಂಸಾರದಲ್ಲಿ ಬೀಳುವುದಿಲ್ಲ.

೩೭-೩೮. ಅಮಾವಾಸ್ಯೆ ಮಂಗಳವಾರಗಳು ಯಾವಾಗ ಕೂಡಿಬರುವುವೊ, ಆಗ ದೇವತೆಗಳಿಗೂ ಪೂಜ್ಯವಾದ ಶಿಪ್ರಾಖಗರ್ತಾಸಂಗಮದಲ್ಲಿ ಸ್ನಾನವನ್ನು ಮಾಡಿಕೊಂಡು ಅಲ್ಲಿಯೇ ನೆಲಸಿರುವ ನನ್ನನ್ನು ನೋಡುವ ಪುಣ್ಯಾತ್ಮರ ಪುಣ್ಯಫಲವನ್ನು ವಿಸ್ತಾರವಾಗಿ ಹೇಳುವೆನು, ಕೇಳು.

೩೯. ವಾರಣಾಸಿ, ಪ್ರಯಾಗ, ಕುರುಕ್ಷೇತ್ರ, ಗಯಾ, ಪುಷ್ಕರಕ್ಷೇತ್ರಗಳಲ್ಲಿಯ ಸೇವೆಯಿಂದ ಯಾವ ಫಲವುಂಟೊ, ಅದಕ್ಕೂ ಹೆಚ್ಚಿನ ಫಲವು ಈ ಕ್ಷೇತ್ರದಲ್ಲಿ ಲಭಿಸುವುದು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಅಂಗಾರೇಶ್ವರದೇವಸ್ಯ ಶ್ರೂಯತಾಮುತ್ತರೇಶ್ವರಂ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
" ಅಂಗಾರಕೇಶ್ವರಮಾಹಾತ್ಮ್ಯವರ್ಣನಂ "
ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

೪೦. ಪಾರ್ವತಿಯೆ! ಇಂತು ನಿನಗೆ ಅಂಗಾರೇಶ್ವರಮಹಾಲಿಂಗದ ಪಾಪನಾಶಕವಾದ ಪ್ರಭಾವವನ್ನು ಹೇಳಿರುವೆನು. ಮುಂದೆ ಉತ್ತರೇಶ್ವರದೇವನ ಕಥೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಹಾತ್ಮ್ಯದಲ್ಲಿ " ಅಂಗಾರೇಶ್ವರಮಾಹಾತ್ಮ್ಯವರ್ಣನ "ವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಉತ್ತರೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಚತ್ವಾರಿಂಶತ್ತಮಂ ವಿದ್ಧಿ ಚತುರ್ಭಿರಧಿಕಂ ಪರಂ ।
ಯಸ್ಯ ದರ್ಶನಮಾತ್ರೇಣ ಸಮೀಹಿತಫಲಂ ಲಭೇತ್ ।
ಉತ್ತರೇಶಮಿತಿ ಖ್ಯಾತಂ ಸಮೀಹಿತಫಲಪ್ರದಂ ॥ ೧ ॥
ಪುರಾ ನಿಯುಕ್ತಾಃ ಶಕ್ರೇಣ ಯೇ ಮೇಘಾ ವೃಷ್ಟಿಕಾರಕಾಃ ।
ತೈಃ ಪ್ಲಾವಿತಂ ಜಗತ್ಸರ್ವಂ ಸಪರ್ವತಮಹೀತಲಂ ॥ ೨ ॥
ಏಕಾರ್ಣವೇ ತತೋ ಜಾತೇ ದೇವಾ ಭೀತಾ ಪರಾನನೇ ।
ನಿಃಸ್ವಾಧ್ಯಾಯವಷಟ್ಕಾರಾಃ ಸ್ವಧಾಸ್ವಾಹಾವಿವರ್ಜಿತಾಃ ॥ ೩ ॥
ನೈವಾಪ್ಯಾಯನಮಸ್ಮಾಕಂ ವಿನಾ ಹೋಮೇನ ಜಾಯತೇ ।
ವಯಮಾಪ್ಯಾಯಿತಾ ವಿಪ್ರೈರ್ಯಜ್ಞಭಾಗೈರ್ಯಥೋಚಿತೈಃ ॥ ೪ ॥
ತೇಷಾಂ ವಯಂ ಪ್ರಯಚ್ಛಾಮಃ ಕಾಮಾನ್ಯಜ್ಞಾದಿಪೂಜಿತಾಃ ।
ನಾಽಸ್ತಿ ತತ್ಸರ್ವಮೇವೈತದನ್ಯೋಽನ್ಯಮವದನ್ಸುರಾಃ ॥ ೫ ॥

---

### ಕನ್ನಡದ ಅನುವಾದ

#### ಉತ್ತರೇಶಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ನಲವತ್ತನಾಲ್ಕನೆಯದೇ ದರ್ಶನ ಮಾತ್ರದಿಂದ ಸಕಲಾಭೀಷ್ಟಗಳನ್ನೂ ವಶಗೊಳಿಸುವ ಉತ್ತರೇಶ್ವರಮಹಾಲಿಂಗ ವೆಂದು ತಿಳಿ.

೨. ಹಿಂದೊಮ್ಮೆ ಮೇಘಗಳು ಮಳೆಗರೆಯುವಂತೆ ಮಹೇಂದ್ರನಿಂದಾಜ್ಞಪ್ತ ಗಳಾಗಿ ಪರ್ವತಗಳು, ನಿಮ್ನೋನ್ನತಗಳೆನ್ನದೆ ಭೂಮಂಡಲವನ್ನೆಲ್ಲ ಮುಳುಗಿಸಿ ಬಿಟ್ಟುವು.

೩. ಮಂಗಳಮುಖಿಯೆ ! ಇಂತು ಎಲ್ಲೆಲ್ಲಿಯೂ ಸಮುದ್ರವೊಂದೇ ಕಾಣಿಸುತ್ತಿರಲು ದೇವತೆಗಳೆಲ್ಲರೂ ಭಯಗೊಂಡರು. ವೇದಾಧ್ಯಯನಗಳೂ, ದೇವತಾಹ್ವಾನಗಳೂ, ದೇವಪಿತೃಹೋಮಗಳೂ ಇಲ್ಲವಾದುವು.

೪. "ಹೋಮದ್ರವ್ಯಗಳಿಂದಲ್ಲದೆ ನಮಗೆ ತೃಪ್ತಿಯುಂಟಾಗಲಾರದು. ಬ್ರಾಹ್ಮಣರು ಯಥೋಚಿತವಾಗಿ ಯಜ್ಞಭಾಗಗಳನ್ನು ಕೊಡುತ್ತಿರುವುದರಿಂದಲೇ ನಾವು ಸಂತುಷ್ಟರಾಗುವೆವು.

೫. ಯಜ್ಞಾದಿ ಕರ್ಮಗಳಿಂದ ಪೂಜಿತರಾದ ನಾವು ಅವರಿಗೆ ಅಭೀಷ್ಟ

ದೃಷ್ಟ್ವಾ ಪೃಥ್ವೀಂ ಜಲೇ ಮಗ್ನಾಂ ಬ್ರಹ್ಮಾಣಂ ಶರಣಂ ಗತಾಃ ।
ಕಥಯಾಮಾಸುರತ್ಯುಗ್ರಂ ನಮಸ್ಕೃತ್ಯ ಪಿತಾಮಹಂ ॥ ೬ ॥
ಏಕಾರ್ಣವಾ ಮಹೀ ಜಾತಾ ವಿನಷ್ಟಾಃ ಕ್ರತವಃ ಪ್ರಭೋ ।
ನಿಃಸ್ವಾಧ್ಯಾಯವಷಟ್ಕಾರಂ ಜಗಜ್ಜಾತಂ ಪಿತಾಮಹ ॥ ೭ ॥
ದೇವಾನಾಂ ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಮುಹೂರ್ತಂ ಚಿಂತಯಾಮಾಸ ಕಿಮೇತದಿತಿ ವಿಸ್ಮಿತಃ ॥ ೮ ॥
ಅಕಾಲೇ ಪ್ರಲಯಃ ಕಸ್ಮಾನ್ನಿಮಗ್ನಾ ಪೃಥಿವೀ ಜಲೇ ।
ಗತಾ ಸೃಷ್ಟಿರ್ಮದೀಯಾ ತು ವ್ಯರ್ಥಂ ಜಾತಂ ವಚೋ ಮಮ ॥ ೯ ॥
ಇತಿ ಸಂಚಿಂತ್ಯ ಹೃದಯೇ ಸಂಸ್ಮಾರ ಬಲಸೂದನಂ ।
ಸ್ಮೃತಮಾತ್ರಸ್ತು ಬಲಹಾ ಹ್ಯಾಜಗಾಮ ಪಿತಾಮಹಂ ॥ ೧೦ ॥
ಪ್ರೋವಾಚ ವಚನಂ ಶ್ರುತ್ವಾ ನಮಸ್ಕೃತ್ಯ ಪಿತಾಮಹಂ ।
ಸ್ಮೃತೋಽಹಂ ಕೇನ ಕಾರ್ಯೇಣ ದೇಹ್ಯಾಜ್ಞಾಂ ಮೇ ಪಿತಾಮಹ ॥೧೧॥

---

ಗಳನ್ನು ಕೊಡುವೆವು; ಈಗ ಇದೆಲ್ಲವೂ ಇಲ್ಲದಂತಾಯಿತು" ಎಂದು ದೇವತೆಗಳು ತಮ್ಮತಮ್ಮಲ್ಲಿಯೇ ಹೇಳಿಕೊಂಡರು.

೬. ಭೂಮಿಯು ನೀರಿನಲ್ಲಿ ಮುಳುಗಿರುವುದನ್ನು ಕಂಡು ದೇವತೆಗಳೆಲ್ಲರೂ ಬ್ರಹ್ಮದೇವನನ್ನು ಶರಣುಹೊಕ್ಕು, ಪಿತಾಮಹನನ್ನು ನಮಸ್ಕರಿಸಿ ಸಕಲ ವೃತ್ತಾಂತವನ್ನೂ ಬಿನ್ನವಿಸಿದರು.

೭. "ಲೋಕೇಶ್ವರನೆ! ಭೂಮಿಯೆಲ್ಲವೂ ಒಂದೇ ಸಮುದ್ರದಿಂದಾವೃತ ವಾಗಿದೆ. ಲೋಕವೆಲ್ಲವೂ ಅಧ್ಯಯನವಷಟ್ಕಾರಗಳಿಲ್ಲದೆ ಶೂನ್ಯಪ್ರಾಯ ವಾಗಿರುವುದು."

೮. ದೇವತೆಗಳ ಮಾತನ್ನು ಕೇಳಿ ಲೋಕಸೃಷ್ಟಿಕರ್ತನಾದ ಬ್ರಹ್ಮನು ಆಶ್ಚರ್ಯಗೊಂಡು ಇದೇನೆಂದು ಒಂದು ಮುಹೂರ್ತಕಾಲ ಚಿಂತಿಸುತ್ತಿದ್ದನು.

೯. "ಅಕಾಲದಲ್ಲಿ ಪ್ರಳಯವೇಕಾಯಿತು? ಭೂಮಿಯೇಕೆ ನೀರಿನಲ್ಲಿ ಮುಳುಗಿತು? ನನ್ನ ಸೃಷ್ಟಿಯೆಲ್ಲವೂ ನಾಶವಾಯಿತೇಕೆ? ನನ್ನ ಮಾತೂ ವ್ಯರ್ಥ ವಾಯಿತಲ್ಲವೆ!"

೧೦. ಇಂತೆಂದು ಮನಸ್ಸಿನಲ್ಲಿಯೆ ಯೋಚಿಸುತ್ತ ಬಲಸೂದನನಾದ ಇಂದ್ರ ನನ್ನು ಸ್ಮರಿಸಿದನು. ನೆನಸಿದ ನಿಮಿಷದಲ್ಲಿಯೇ ಮಹೇಂದ್ರನು ಬ್ರಹ್ಮದೇವನ ಬಳಿಗೆ ಬಂದನು.

೧೧. ಪಿತಾಮಹನಿಗೆ ನಮಸ್ಕರಿಸಿ ಆತನು ಹೇಳಿದನು. "ಚತುರ್ಮುಖನೆ! ಯಾವ ಕಾರ್ಯಕ್ಕಾಗಿ ನನ್ನನ್ನು ಸ್ಮರಿಸಿದೆ? ನನಗೆ ಆಜ್ಞೆಯನ್ನು ಕೊಡು."

ಬ್ರಹ್ಮಣೋಕ್ತಸ್ತದಾ ಶಕ್ರಃ ಕಿಮರ್ಥಂ ಪ್ಲಾವಿತಾ ಮಹೀ ।
ಅಸಂಬದ್ಧೈಸ್ತ್ವದೀಯೈಶ್ಚ ಮೇಘೈಃ ಕಿಂ ಸಹಸಾ ಕೃತಂ ॥ ೧೨ ॥
ತತಃ ಸರ್ವೇ ಸಮಾಹೂತಾ ಮೇಘಾಃ ಶಕ್ರೇಣ ಪಾರ್ವತಿ ।
ಪಿತಾಮಹಸಮಕ್ಷಂ ತು ಸಮಾಯಾತಾಶ್ಚ ತತ್ಕ್ಷಣಾತ್ ॥ ೧೩ ॥
ಪಿತಾಮಹೇನ ಶಕ್ರೇಣ ಮರ್ಯಾದಾ ಚ ಕೃತಾ ತದಾ ।
ಗಜೋ ನಾಮ ಮಹಾಮೇಘಃ ಪೂರ್ವಸ್ಯಾಂ ದಿಶಿ ನಿರ್ಮಿತಃ ॥ ೧೪ ॥
ಗಜಾಕಾರೈಸ್ತತೋ ಮೇಘೈಃ ಸಹಸ್ರೈರ್ದಶಭಿರ್ವೃತಃ ।
ಗವಯೋ ದಕ್ಷಿಣಾಮಾಶಾಂ ಷಟ್ ಸಹಸ್ರಾಽಧಿಪಃ ಕೃತಃ ॥ ೧೫ ॥
ಶರಭಃ ಪಶ್ಚಿಮಾಮಾಶಾಂ ಸಹಸ್ರಾಧಿಪತಿಃ ಕೃತಃ ।
ಉತ್ತರೋ ನಾಮ ಯೋ ಮೇಘೋ ಮೇಘೈಃ ಕೋಟಿಭಿರಾವೃತಃ ॥ ೧೬ ॥
ಉತ್ತರಸ್ಯಾಂ ದಿಶಿ ತದಾ ಪ್ರಭುತ್ವೇ ಸಂಪ್ರತಿಷ್ಠಿತಃ ।
ಮರ್ಯಾದಾ ಚ ಕೃತಾ ದೇವಿ ಬ್ರಹ್ಮಣಾ ವಾಸವೇನ ತು ॥ ೧೭ ॥

---

೧೨. ಆಗ ಬ್ರಹ್ಮದೇವನು ಹೇಳಿದನು. "ಭೂಮಿಯೇಕೆ ಜಲಮಯವಾಯಿತು? ನಿನ್ನ ಮೇಘಗಳ ಅನಿಯತವಾದ ವರ್ತನೆಯಿಂದ ಎಂತಹ ಸಾಹಸ ಕಾರ್ಯವು ನಡೆದುಹೋಯಿತು, ನೋಡಿದೆಯಾ?"

೧೩. ಪಾರ್ವತಿಯೆ! ಆಗ ಮಹೇಂದ್ರನು ಸಕಲ ಮೇಘಗಣಗಳನ್ನೂ ಬಳಿಗೆ ಕರೆದನು. ಅವುಗಳೆಲ್ಲವೂ ನಿಮಿಷಮಾತ್ರದಲ್ಲಿಯೇ ಬ್ರಹ್ಮದೇವನ ಮುಂದೆ ಬಂದು ನಿಂತುವು.

೧೪. ಆಗ ಬ್ರಹ್ಮದೇವನೂ ಮಹೇಂದ್ರನೂ ಇವುಗಳ ವಿಷಯದಲ್ಲಿ ಒಂದು ನಿಯಮವನ್ನು ಕಲ್ಪಿಸಿದರು. ಗಜನೆಂಬ ಮಹಾಮೇಘನಿಗೆ ಪೂರ್ವದಿಕ್ಕಿನ ಆಧಿಪತ್ಯವನ್ನು ಕೊಟ್ಟರು.

೧೫. ಆ ಮೇಘರಾಜನು ಆನೆಯ ಆಕಾರದ ಹತ್ತುಸಾವಿರ ಮೇಘಗಳಿಂದ ಪರಿವೃತನಾಗಿದ್ದನು. ದಕ್ಷಿಣದಿಕ್ಕಿನಲ್ಲಿ ಗವಯನು ಆರುಸಾವಿರ ಪರಿವಾರವುಳ್ಳವನಾಗಿ ನಿಂತನು.

೧೬. ಶರಭನು ಪಶ್ಚಿಮದಿಕ್ಕಿಗೆ ಒಂದುಸಾವಿರ ಮೇಘಗಳಿಗೊಡೆಯನಾಗಿ ನಿಂತನು. ಉತ್ತರನೆಂಬ ಮೇಘರಾಜನು ಒಂದುಕೋಟಿ ಮೇಘಗಳಿಂದ ಆವೃತನಾದನು.

೧೭. ಅವನು ಉತ್ತರದಿಕ್ಕಿನಲ್ಲಿ ಮೇಘಾಧಿಪತ್ಯದಲ್ಲಿ ಪ್ರತಿಷ್ಠಿತನಾದನು. ದೇವಿಯೆ! ಇಂತು ಚತುರ್ಮುಖನೂ, ಮಹೇಂದ್ರನೂ ಆ ಮೇಘಗಳಿಗೆ ಮರ್ಯಾದೆಗಳನ್ನು ವಿಂಗಡಿಸಿಕೊಟ್ಟರು.

ಪ್ರಾವೃಟ್ಕಾಲೇ ಚ ವರ್ಷಧ್ವಂ ನಕ್ಷತ್ರೈರ್ಜಲಜೈರ್ದ್ರುತಂ ।
ಆರ್ದ್ರಾದಿಸ್ವಾತಿಪರ್ಯಂತಂ ನಕ್ಷತ್ರದಶಕಂ ಸ್ಮೃತಂ ॥ ೧೮ ॥
ಬ್ರಹ್ಮಶಕ್ರವಚಃ ಶ್ರುತ್ವಾ ತಥೇತಿ ಕೃತನಿಶ್ಚಯಾಃ ।
ವವೃಷುರ್ನಿಯತೇ ಕಾಲೇ ತನ್ನಾಮಾನಿ ಭವಂತಿ ಹಿ ॥ ೧೯ ॥
ಏವಂ ವ್ಯವಸ್ಥಿತೇ ಲೋಕೇ ಮರ್ಯಾದಾಯಾಂ ಸ್ಥಿತಾ ಘನಾಃ ।
ಬ್ರಾಹ್ಮಣಾ ವಿಜ್ವರಾ ಜಾತಾಸ್ತ್ರಿದಶಾ ಮುದಿತಾ ಭೃಶಂ ॥ ೨೦ ॥
ಕ್ರೂರಗ್ರಹೈರಥೋ ರುದ್ಧಾಸ್ತೇ ಮೇಘಾ ವೃಷ್ಟಿಕಾರಕಾಃ ।
ಶನೈಶ್ಚರೇಣ ಭೌಮೇನ ಭಾಸ್ಕರೇಣಾಽಥ ಕೇತುನಾ ॥ ೨೧ ॥
ಪೀಡಿತಾಃ ಶರಣಂ ಜಗ್ಮುರ್ವಾಸವಂ ಭಯವಿಹ್ವಲಾಃ ।
ನಿವೇದಿತಂ ಭಯಾತ್ಸರ್ವಂ ನಮಸ್ಕೃತ್ಯ ಪುನಃ ಪುನಃ ॥ ೨೨ ॥
ಮೇಘಾನಾಂ ವಚನಂ ಶ್ರುತ್ವಾ ಸಂತ್ರಸ್ತೋ ವಾಸವಸ್ತದಾ ।
ಉವಾಚ ವಚನಂ ತೇಷಾಂ ನಾಽಹಂ ಶಕ್ತೋ ನಿವಾರಣೇ ।
ಗ್ರಹಾಣಾಮಸಮರ್ಥೋಽಹಂ ಸರ್ವದೈವ ಪಯೋಧರಾಃ ॥ ೨೩ ॥

---

೧೮. ವರ್ಷಾಕಾಲದಲ್ಲಿಯೂ, ಜಲಕಾರಕಗಳಾದ ನಕ್ಷತ್ರಗಳಲ್ಲಿಯೂ ಮಾತ್ರ ನೀವು ಮಳೆಯನ್ನು ಕರೆಯಬೇಕು. ಆರ್ದ್ರೆಯನ್ನು ಮೊದಲುಮಾಡಿ ಸ್ವಾತಿಯವರೆಗಿರುವ ಹತ್ತು ನಕ್ಷತ್ರಗಳೂ ದಶನಕ್ಷತ್ರಗಳೆಂದು ಹೇಳುವರು."

೧೯. ಬ್ರಹ್ಮ ಮಹೇಂದ್ರರ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಅಂಗೀಕರಿಸಿ ಅಂದಿನಿಂದ ಆಯಾ ನಿಯತಕಾಲಗಳಲ್ಲಿ ಮಾತ್ರ ಮಳೆಗರೆಯುತ್ತ ಮೇಘಗಳು ಆಯಾ ನಕ್ಷತ್ರಗಳ ಹೆಸರುಗಳನ್ನೇ ತಾಳಿರುವುವು.

೨೦. ಇಂತು ಪ್ರಪಂಚವೂ ಸುವ್ಯವಸ್ಥಿತವಾಗಲು ಮೇಘಗಳೂ ನಿಯಮದಲ್ಲಿ ನಿಂತುವು. ಬ್ರಾಹ್ಮಣರೂ, ದೇವತೆಗಳೂ ನಿರ್ಭಯರೂ ಆನಂದಭರಿತರೂ ಆದರು.

೨೧. ಬಳಿಕ ಒಮ್ಮೆ ಮಳೆಗರೆಯುವ ಈ ಮೇಘಗಳು ಶನಿ, ಅಂಗಾರಕ, ಸೂರ್ಯ, ಕೇತುಗಳೆಂಬ ಕ್ರೂರಗ್ರಹಗಳಿಂದ ಬಂಧನಕ್ಕೊಳಗಾದುವು.

೨೨. ಪೀಡಿತಗಳೂ ಭಯಸಂಭ್ರಾಂತಗಳೂ ಆಗಿ ಅವು ಮಹೇಂದ್ರನನ್ನೇ ಶರಣುಹೊಕ್ಕು ಭಯದಿಂದ ನಡುಗುತ್ತ ಮತ್ತೆ ಮತ್ತೆ ನಮಸ್ಕರಿಸಿ ಎಲ್ಲವನ್ನೂ ಆತನಲ್ಲಿ ವಿಜ್ಞಾಪಿಸಿಕೊಂಡುವು.

೨೩. ಮೇಘಗಳ ಮಾತನ್ನು ಕೇಳಿ ಇಂದ್ರನೂ ನಡುಗಿ ಅವುಗಳಿಗೆ ಇಂತೆಂದನು. "ನಿಮ್ಮ ಕಷ್ಟವನ್ನು ನಿವಾರಿಸಲು ನಾನು ಶಕ್ತನಲ್ಲ. ಎಲೈ ಮೇಘಗಳಿರಾ! ಯಾವಾಗಲೂ ನಾನು ಗ್ರಹಗಳ ವಿಷಯದಲ್ಲಿ ಮಾತ್ರ ನಿಶ್ಶಕ್ತನಾಗಿರುವೆನು.

ಅಹಂ ರಾಜ್ಯಾತ್ಪರಿಭ್ರಷ್ಟಃ ಕೃತಃ ಕ್ರೂರಗ್ರಹೈಃ ಪುರಾ ।
ಸ್ಥಾಪಿತೋಽಹಂ ಕದಾಚಿಚ್ಚ ಸುಪ್ರಸನ್ನೈರ್ಗ್ರಹೈಃ ಪದೇ ॥ ೨೪ ॥
ಮಮ ಮಾನ್ಯಾಶ್ಚ ಪೂಜ್ಯಾಶ್ಚ ಗ್ರಹಾ ಏವ ಯತೋಽಧಿಕಾಃ ।
ಗ್ರಹಾಃ ಸರ್ವಹರಾಃ ಪ್ರೋಕ್ತಾ ಇತಿ ಮೇ ವರ್ತತೇ ಮತಿಃ ॥ ೨೫ ॥
ಏತಸ್ಮಿನ್ನಂತರೇ ಭೂಮೌ ಸಂಜಾತಾ ಶತವಾರ್ಷಿಕೀ ।
ಅನಾವೃಷ್ಟಿರ್ಮಹಾರೌದ್ರಾ ಸರ್ವಪ್ರಾಣಿವಿನಾಶಿನೀ ॥ ೨೬ ॥
ಅಸ್ಥಿಕಂಕಾಲಶಕಲಾ ಶ್ವೇತಪರ್ವತಸನ್ನಿಭಾ ।
ಪೃಥಿವೀ ತತ್ಕ್ಷಣಾಜ್ಜಾತಾ ವಿನಾ ತೋಯೇನ ಪಾರ್ವತಿ ॥ ೨೭ ॥
ದೇವಾಃ ಸರ್ವೇ ಪುನರ್ಭೀತಾ ಬ್ರಹ್ಮಾಣಂ ಶರಣಂಗತಾಃ ।
ಊಚುಶ್ಚ ಪ್ರಣತಾಃ ಸರ್ವೇ ತ್ರಾಹಿ ನಃ ಶರಣಾಗತಾನ್ ॥ ೨೮ ॥
ಅನಾವೃಷ್ಟ್ಯಾ ಜಗತ್ಸರ್ವಂ ಪೀಡಿತಂ ಚ ಪಿತಾಮಹ ।
ಅಕಾಲೇ ಪ್ರಲಯೋ ಜಾತಃ ಪುನರೇವ ಚ ತಾದೃಶಃ ॥ ೨೯ ॥

---

೨೪. ಆ ಗ್ರಹದೇವತೆಗಳೇ ನನಗಿಂತ ಹೆಚ್ಚಿನವರಾದುದರಿಂದ ನನಗೆ ಮಾನ್ಯರೂ, ಪೂಜ್ಯರೂ ಆಗಿರುವರು. ಅವರೇ ಸರ್ವಕ್ಕೂ ಕಾರಣರೆಂದು ಹೇಳಿರುವುದೆಂದು ನನ್ನ ಬುದ್ಧಿಗೆ ತೋರುತ್ತಿರುವುದು.

೨೫. ಹಿಂದೆ ಆ ಗ್ರಹಗಳು ಕ್ರೂರವಾಗಿದ್ದಾಗ ನಾನು ಸ್ವರ್ಗಾಧಿಪತ್ಯದಿಂದ ಭ್ರಷ್ಟನಾದೆನು. ಆ ಗ್ರಹಗಳು ಸುಮುಖಗಳಾದ ವೇಳೆಯಲ್ಲಿಯೇ ಪುನಃ ನನ್ನ ಅಧಿಕಾರದಲ್ಲಿ ಸ್ಥಾಪಿತನಾದೆನು.

೨೬. ಈ ಸಂವಾದವು ನಡೆಯುತ್ತಿರುವಂತೆಯೇ ಭೂಲೋಕದಲ್ಲಿ ಮಹಾಭಯಂಕರವೂ, ಸಕಲಪ್ರಾಣಿನಾಶಕವೂ ಆದ ನೂರು ವರ್ಷಗಳ ಕ್ಷಾಮವು ಉಂಟಾಯಿತು.

೨೭. ಪಾರ್ವತಿಯೆ! ಸ್ವಲ್ಪಕಾಲದಲ್ಲಿಯೇ ನೀರಿಲ್ಲದೆ ಭೂಮಿಯಲ್ಲಿ ಸತ್ತ ಪ್ರಾಣಿಗಳ ಅಸ್ಥಿಪಂಜರಗಳ ರಾಶಿಗಳು ಶ್ವೇತಪರ್ವತದಂತೆ ತೋರತೊಡಗಿದುವು.

೨೮. ಇದನ್ನು ಕಂಡು ದೇವತೆಗಳೆಲ್ಲರೂ ಪುನಃ ಭಯಗೊಂಡವರಾಗಿ ಬ್ರಹ್ಮನನ್ನೇ ಶರಣುಹೊಕ್ಕರು. ಸರ್ವರೂ ಪ್ರಣಾಮಗಳನ್ನು ಮಾಡಿ ಬೇಡಿಕೊಂಡರು. "ಶರಣಾಗತರಾಗಿ ಬಂದಿರುವ ನಮ್ಮನ್ನು ಕಾಪಾಡು.

೨೯. ಎಲೈ ಪಿತಾಮಹನೆ! ಮಳೆಯಿಲ್ಲದುದರಿಂದ ಲೋಕವೆಲ್ಲವೂ ಬಹಳ ಸಂಕಟಗೊಂಡಿರುವುದು. ಹಿಂದೆಯಾದಂತೆಯೇ ಪುನಃ ಅಕಾಲದಲ್ಲಿ ಪ್ರಳಯವು ಸಂಭವಿಸಿರುವುದು.

ತ್ವಯಾ ಚ ವಾಸವೇನೈವ ನಿಯುಕ್ತಾ ಯೇ ಪಯೋಧರಾಃ ।
ಕ್ರೂರಗ್ರಹೈರತೀವೋಗ್ರೈಃ ಪೀಡಿತಾಸ್ತೇ ಪಿತಾಮಹ ॥ ೩೦ ॥
ದೇವಾನಾಂ ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಅಹಂ ಬಿಭೇಮಿ ಭೋ ದೇವಾ ಗ್ರಹೈಸ್ತೈರ್ಬಲವತ್ತರೈಃ ॥ ೩೧ ॥
ಸರ್ವಂ ಜಾನಾಮಿ ಮಾಹಾತ್ಮ್ಯಂ ಗ್ರಹಾಣಾಂ ಕ್ರೂರಚೇತಸಾಂ ।
ಶನೈಶ್ಚರೇಣ ವಕ್ರೇಣ ಭವಂತಃ ಪೀಡಿತಾಃ ಸದಾ ॥ ೩೨ ॥
ವರುಣೋ ಯಾದಸಾಂ ನಾಥೋ ಮಂಗಲೇನ ಪ್ರಪೀಡಿತಃ ।
ರಾಜ್ಯಭ್ರಷ್ಟಸ್ತು ಬಹುಧಾ ಕೇತುನಾ ವಾಸವಃ ಕೃತಃ ॥ ೩೩ ॥
ಶಿರಚ್ಛೇದೋ ಮಯಾ ಪ್ರಾಪ್ತೋ ವಕ್ರೇಣ ರವಿಣಾ ಪುರಾ ।
ಏಕೈಕಶಃ ಸಮರ್ಥಾಸ್ತೇ ಕಿಂ ಪುನಃ ಸಂಘಶಸ್ತ್ವಮೀ ।
ತಸ್ಮಾತ್ಸರ್ವೇ ಮಹಾದೇವಂ ಗಚ್ಛಾಮಃ ಶರಣಂ ವಯಂ ॥ ೩೪ ॥
ಬ್ರಹ್ಮಣೋ ವಚನಂ ಶ್ರುತ್ವಾ ಸರ್ವೇ ದೇವಾಃ ಸವಾಸವಾಃ ।
ಬ್ರಹ್ಮಾಣಂ ಚ ಪುರಸ್ಕೃತ್ಯ ಮಾಮೇವ ಶರಣಂ ಗತಾಃ ॥ ೩೫ ॥

---

೩೦. ಲೋಕಪಾಲಕನೆ! ನೀನೂ ಮಹೇಂದ್ರನೂ ನಿಯತಕಾಲಗಳಲ್ಲಿ ಮಳೆಗರೆಯಲು ನಿಯೋಗಿಸಿದ ಮೇಘಗಳು ಕ್ರೂರಗಳೂ ಬಲಶಾಲಿಗಳೂ ಆದ ದುಷ್ಟಗ್ರಹಗಳಿಂದ ಪೀಡಿತಗಳಾಗಿವೆ.''

೩೧. ದೇವತೆಗಳ ಮಾತನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮದೇವನೂ ಹೇಳಿದನು. ''ಎಲೈ ದೇವತೆಗಳಿರಾ! ಬಲವತ್ತರಗಳಾದ ಆ ಗ್ರಹಗಳಿಗೆ ನಾನೂ ಭಯಗೊಳ್ಳುತ್ತಿರುವೆನು.

೩೨. ಕ್ರೂರಪರಾಕ್ರಮಿಗಳಾದ ಗ್ರಹಗಳ ಮಾಹಾತ್ಮ್ಯವನ್ನೆಲ್ಲ ಚೆನ್ನಾಗಿ ನಾನು ಬಲ್ಲೆನು. ವಕ್ರಗತಿಯ ಶನಿಯಿಂದ ನೀವು ಯಾವಾಗಲೂ ಪೀಡಿತರಾಗಿರುವಿರಿ.

೩೩. ಜಲಗಳಿಗೆ ಅಧಿನಾಥನಾದ ವರುಣನು ಅಂಗಾರಕನ ಉಪಟಳಕ್ಕೆ ಸಿಕ್ಕಿರುವನು. ಮಹೇಂದ್ರನು ಅನೇಕವೇಳೆ ಕೇತುಗ್ರಹದಿಂದ ರಾಜ್ಯಭ್ರಷ್ಟನಾಗಿರುವನು.

೩೪. ಹಿಂದೆ ಸೂರ್ಯನು ನನ್ನ ಭಾಗಕ್ಕೆ ವಕ್ರನಾಗಿರಲು ನನಗೆ ಶಿರಶ್ಛೇದವುಂಟಾಯಿತು. ಅವರೊಬ್ಬೊಬ್ಬರೇ ಇಷ್ಟು ಸಮರ್ಥರೆಂದಮೇಲೆ ಎಲ್ಲರೂ ಒಟ್ಟುಗೂಡಿದಮೇಲೆ ಹೇಳಬೇಕೆ? ಆದುದರಿಂದ ನಾವೆಲ್ಲರೂ ಮಹೇಶ್ವರನಲ್ಲಿಗೇ ಶರಣಾಗತರಾಗಿ ಹೋಗೋಣ.''

೩೫. ಬ್ರಹ್ಮನ ವಚನವನ್ನು ಕೇಳಿ ಆತನನ್ನೇ ಮುಂದುಮಾಡಿಕೊಂಡು ಮಹೇಂದ್ರಾದಿ ದೇವತೆಗಳೆಲ್ಲರೂ ನನ್ನಲ್ಲಿಗೇ ಶರಣುಬಂದರು.

ಉಕ್ತೋಽಹಂ ತ್ರಿದಶೈಃ ಸರ್ವೈಃ ಪಾಹಿ ನಃ ಶರಣಾಗತಾನ್ ।
ತ್ವಂ ನೋ ಧಾತಾ ವಿಧಾತಾ ಚ ಸೃಷ್ಟಿಸಂಹಾರಕಾರಕಃ ॥ ೩೬ ॥
ಕ್ರೂರಗ್ರಹೈರ್ಮಹಾದೇವ ರುದ್ಧಾ ಮೇಘಾಃ ಸಮಂತತಃ ।
ನ ಕುರ್ವಂತಿ ಪ್ರಭೋ ವೃಷ್ಟಿಮನಾವೃಷ್ಟಿಃ ಸುದಾರುಣಾ ॥ ೩೭ ॥
ಸರ್ವಪ್ರಾಣಿವಿನಾಶಾಯ ಸಂಜಾತಾ ಶತವಾರ್ಷಿಕೀ ।
ತೇಷಾಂ ತದ್ವಚನಂ ಶ್ರುತ್ವಾ ಮಯಾ ಜ್ಞಾತಂ ವರಾನನೇ ।
ಕ್ರೂರಗ್ರಹಾಣಾಂ ಸಾಮರ್ಥ್ಯಂ ಯಥಾ ಚ ವಿದಿತಂ ಮಮ ॥ ೩೮ ॥
ಇತಿ ಜ್ಞಾತ್ವಾ ಮಹಾದೇವಿ ಉಪಾಯಶ್ಚಿಂತಿತೋ ಮಯಾ ।
ಉತ್ತರೋ ನಾಮ ಯೋ ಮೇಘೋ ಮೇಘೈಃ ಕೋಟಿಭಿರಾವೃತಃ ।
ಆಹೂತಸ್ತತ್ಕ್ಷಣಾತ್ಪ್ರಾಪ್ತಃ ಕಿಂ ಕರೋಮೀತ್ಯುವಾಚ ಹ ॥ ೩೯ ॥
ಮಯಾ ಪ್ರೋಕ್ತೋ ಮಮಾದೇಶಾದ್ಗಚ್ಛ ತ್ವಂ ಘನಸಂಯುತಃ ।
ಮಹಾಕಾಲವನಂ ರಮ್ಯಂ ವಾಂಛಿತಾರ್ಥಫಲಪ್ರದಂ ॥ ೪೦ ॥
ಗಂಗೇಶ್ವರಸ್ಯ ದೇವಸ್ಯ ದಕ್ಷಿಣೇ ಲಿಂಗಮುತ್ತಮಂ ।
ತಮಾರಾಧಯ ಯತ್ನೇನ ಸ ತೇ ದಾಸ್ಯತಿ ವಾಂಛಿತಂ ॥ ೪೧ ॥

---

೩೬. ಮತ್ತು ಸಕಲ ದೇವತೆಗಳೂ ನನ್ನನ್ನು ಪ್ರಾರ್ಥಿಸಿದರು. "ದೇವ! ಶರಣಾಗತರಾದ ನಮ್ಮನ್ನು ಸಲಹು. ನೀನೇ ನಮಗೆ ತಂದೆಯೂ, ಲೋಕೇಶ್ವರನೂ, ಸೃಷ್ಟಿಲಯಗಳನ್ನು ಮಾಡುವವನೂ ಆಗಿರುವೆ.

೩೭. ಮಹಾದೇವನೆ! ಕ್ರೂರಗ್ರಹಗಳಿಂದ ಮೇಘಗಳೆಲ್ಲವೂ ಎಲ್ಲೆಡೆಗಳಲ್ಲಿಯೂ ತಡೆಯಲ್ಪಟ್ಟಿರುವುವು. ಆದುದರಿಂದ ಮಳೆಯನ್ನು ಸುರಿಸುವುದಿಲ್ಲ. ಲೋಕದಲ್ಲಿ ಅತ್ಯಂತ ಭೀಕರವಾದ ಕ್ಷಾಮವು ತಲೆದೋರಿರುವುದು.

೩೮. ಒಂದುನೂರು ವರ್ಷಗಳಿಂದ ನಡೆಯುತ್ತಿರುವ ಈ ಅನಾವೃಷ್ಟಿಯಿಂದ ಸಕಲ ಜೀವಿಗಳ ವಿನಾಶವಾಗುತ್ತಿರುವುದು." ಅವರ ಮಾತನ್ನು ಕೇಳಿ ನಾನೂ ಕ್ರೂರಗ್ರಹಗಳ ಪರಾಕ್ರಮವನ್ನು ತಿಳಿದುಕೊಂಡೆನು.

೩೯. ಮಹೇಶ್ವರಿಯೆ! ಎಲ್ಲವನ್ನೂ ತಿಳಿದು ಒಂದು ಉಪಾಯವನ್ನು ಚಿಂತಿಸಿದೆನು. ಉತ್ತರವೆಂಬ ಮಹಾಮೇಘವು ಒಂದುಕೋಟಿ ಮೇಘಗಳಿಂದ ಪರಿವಾರಿತವಾಗಿರುವುದಷ್ಟೆ. ಅದನ್ನು ನಾನು ಕರೆಯಲು ನಿಮಿಷಮಾತ್ರದಲ್ಲಿಯೇ ಪ್ರಾಪ್ತವಾಗಿ "ಏನು ಮಾಡಲಿ?" ಎಂದು ಕೇಳಿತು.

೪೦. ನಾನು ಹೇಳಿದೆನು. ನೀನು ನಿನ್ನ ಪರಿವಾರ ಮೇಘಗಳೊಡನೆ ಮನೋಹರವೂ ಸಕಲಾಭೀಷ್ಟದಾಯಕವೂ ಆದ ಮಹಾಕಾಲವನಕ್ಕೆ ಹೊರಡು.

೪೧. ಗಂಗೇಶ್ವರದೇವನಿಗೆ ದಕ್ಷಿಣದಿಕ್ಕಿನಲ್ಲಿ ಒಂದು ಉತ್ತಮವಾದ ಲಿಂಗವಿರುವುದು. ಅದನ್ನು ಭಕ್ತಿಯಿಂದ ಪೂಜಿಸು. ಅದೇ ನಿನ್ನ ಅಭೀಷ್ಟವನ್ನು ನೆರವೇರಿಸಿಕೊಡುವುದು.

ಏವಮುಕ್ತೋ ಮಯಾ ಮೇಘ ಉತ್ತರೋ ಮೇಘಸಂಯುತಃ ।
ಜಗಾಮ ತ್ವರಯಾ ಯುಕ್ತೋ ಮಹಾಕಾಲವನೋತ್ತಮೇ ॥ ೪೨ ॥
ದೃಷ್ಟ್ವಾ ವೃಷ್ಟಿಕರಂ ಲಿಂಗಂ ಪೂಜಯಾಮಾಸ ಭಕ್ತಿತಃ ।
ಶಿಪ್ರಾಜಲಂ ಗೃಹೀತ್ವಾ ತು ಸ್ನಾತ್ವಾ ಸ್ನಾತ್ವಾ ಪ್ರಯತ್ನತಃ ।
ತಾವದ್ಯಾವಜ್ಜಲಂ ಶಿಪ್ರಾಂ ಪುನರೇವಾಗತಂ ಪ್ರಿಯೇ ॥ ೪೩ ॥
ಏತಸ್ಮಿನ್ನಂತರೇ ತಸ್ಮಾದುದ್ಭೂತಂ ಧೂಮಮಂಡಲಂ ।
ಲಿಂಗಮಧ್ಯಾದ್ವರಾರೋಹೇ ಜ್ವಾಲಾಮಾಲಾಕುಲಂ ಮಹತ್ ॥ ೪೪ ॥
ತತೋ ಜ್ವಾಲಾಮಯಂ ಸರ್ವಮಭೂದಂಬರಗೋಚರಂ ।
ತಸ್ಯ ಜ್ವಾಲಾಸಮೂಹೇನ ದಗ್ಧಂ ವೈ ಗ್ರಹಮಂಡಲಂ ॥ ೪೫ ॥
ಸನಕ್ಷತ್ರಪಥಂ ಯಾವತ್ತತೋ ಭೀತಾ ಗ್ರಹಾಃ ಪ್ರಿಯೇ ।
ತಮೇವ ಶರಣಂ ಪ್ರಾಪ್ತಾ ಧೂಮಜ್ವಾಲಾಕುಲಾನನಾಃ ॥ ೪೬ ॥
ತತೋ ಬ್ರಹ್ಮಾ ಚ ವಿಷ್ಣುಶ್ಚ ತದ್ದೃಷ್ಟ್ವಾ ಮಹದದ್ಭುತಂ ।
ದೇವೈರ್ವೃತಃ ಸಹಸ್ರಾಕ್ಷೋ ಲಿಂಗಾಂತಿಕಮುಪಾಗತಃ ॥ ೪೭ ॥

---

೪೨. ಇಂತೆಂದ ನನ್ನ ಅಪ್ಪಣೆಯನ್ನು ಕೇಳಿ ಉತ್ತರನೆಂಬ ಮೇಘರಾಜನು ತನ್ನ ಪರಿವಾರದ ಮೇಘಗಳೊಡನೆ ಕೂಡಿ ವೇಗವಾಗಿ ಹೊರಟು ಮಹಾಕಾಲವನ ಕ್ಷೇತ್ರವನ್ನು ಸೇರಿದನು.

೪೩. ಮಳೆಗೆ ಕಾರಣವಾದ ಆ ಲಿಂಗವನ್ನು ಕಂಡು ಭಕ್ತಿಯಿಂದ ಪೂಜೆಯನ್ನು ಮಾಡಿದನು. ಪ್ರಿಯಳೆ! ಈತನು ಪ್ರಯತ್ನದಿಂದ ಶಿಪ್ರಾನದಿಯ ಜಲವನ್ನು ತಂದು ಲಿಂಗಕ್ಕೆ ಅಭಿಷೇಕವನ್ನು ಮಾಡುತ್ತಿದ್ದರೂ ಅದೆಲ್ಲ ತತ್‌ಕ್ಷಣವೇ ಮತ್ತೆ ಶಿಪ್ರಾನದಿಯನ್ನೇ ಸೇರುತ್ತಿದ್ದಿತು.

೪೪. ಇಷ್ಟರಲ್ಲಿಯೇ ಆ ಮಹಾಲಿಂಗದೊಳಗಿನಿಂದ ಜ್ವಾಲೆಗಳ ಪಙ್ಕ್ತಿಗಳಿಂದಾವೃತವಾದ ಮಹತ್ತರವಾದ ಮೇಘರಾಶಿಯು ಹೊರಹೊರಟಿತು.

೪೫. ಬಳಿಕ ಕಣ್ಣಿಗೆ ಕಾಣುವ ಆಕಾಶಭಾಗವೆಲ್ಲವೂ ಜ್ವಾಲಾಮಯವಾಯಿತು. ಆ ಜ್ವಾಲೆಗಳ ಸಮೂಹದಿಂದ ಗ್ರಹಗಳ ಗುಂಪೆಲ್ಲವೂ ಸುಡಲಾರಂಭಿಸಿತು.

೪೬. ಪ್ರಿಯಳೆ! ಹೀಗೆ ನಕ್ಷತ್ರಪಥದೊಡನೆ ತಾವು ಸುಡುತ್ತಿರಲು ಗ್ರಹದೇವತೆಗಳೆಲ್ಲರೂ ಭಯಗೊಂಡು ಹೊಗೆಯಿಂದಲೂ ಬೆಂಕಿಯಿಂದಲೂ ಮುಖಗಳು ಕಂದುತ್ತಿರಲು ಆ ಲಿಂಗವನ್ನೇ ಶರಣುಹೊಕ್ಕರು.

೪೭. ಈ ಮಹಾಶ್ಚರ್ಯವನ್ನು ಕಂಡು ಚತುರ್ಮುಖನೂ, ಮಹಾವಿಷ್ಣುವೂ, ಸಕಲ ದೇವತೆಗಳಿಂದ ಪರಿವಾರಿತನಾದ ಮಹೇಂದ್ರನೂ ಆ ಲಿಂಗದ ಬಳಿಗೆ ಬಂದು ಸೇರಿದರು.

ತಲ್ಲಿಂಗಂ ಸುಮಹಾಜ್ವಾಲಂ ಜ್ವಾಲಾಭಿಃ ಪೂರಿತಾಽಂಬರಂ ।
ದುಷ್ಪ್ರೇಕ್ಷ್ಯಂ ದುರ್ವಿದಂ ಭೀಮಂ ವರ್ಧಮಾನಂ ದದರ್ಶ ಹ ॥ ೪೮ ॥
ಅಕ್ಷ್ಣೋರ್ನಿಮೇಷಮಾತ್ರೇಣ ವವೃಧೇ ಯೋಜನಾಽಯುತಂ ।
ದೃಷ್ಟ್ವಾ ತು ವರ್ಧಮಾನಸ್ಯ ಲಿಂಗಸ್ಯಾಽತ್ಯದ್ಭುತಾಕೃತಿಂ ।
ಸುರೇಶೋ ಮೋಹಮಾಪನ್ನೋ ವಿಸಂಜ್ಞಾಶ್ಚ ಗ್ರಹಾಸ್ತದಾ ॥ ೪೯ ॥
ತತಸ್ತು ತಸ್ಯ ಲಿಂಗಸ್ಯ ವಾರಿಧಾರಾ ವಿನಿಃಸೃತಾಃ ।
ಏಕೋದ್ದೇಶಾದ್ವರಾರೋಹೇ ಧರಾ ತ್ವೇಕಾರ್ಣವೀಕೃತಾ ॥ ೫೦ ॥
ಲಿಂಗಸ್ಯಾನ್ಯಪ್ರದೇಶಾತ್ತು ವಾಯುಃ ಸಮಭವನ್ಮಹಾನ್ ।
ಇತರಸ್ಮಿನ್ಪ್ರದೇಶೇ ತು ಸಮೂಹಸ್ತಡಿತಾಮಭೂತ್ ॥ ೫೧ ॥
ಸಧೂಮಾ ಸಮಭೂಜ್ಜ್ವಾಲಾ ಲಿಂಗಸ್ಯಾಽನ್ಯಪ್ರದೇಶತಃ ॥ ೫೨ ॥
ಏವಮತ್ಯದ್ಭುತಂ ದೃಷ್ಟ್ವಾ ವರ್ಧಮಾನಂ ಸಮಂತತಃ ।
ಲಿಂಗಮವ್ಯಕ್ತಮುದ್ಭೂತಮಾಪೂರಿತನಭೋಽಂತರಂ ॥ ೫೩ ॥

---

೪೮. ಮಹಾ ತೇಜೋಮಯವೂ, ಜ್ವಾಲೆಗಳಿಂದ ಆಕಾಶವನ್ನು ತುಂಬುತ್ತಿರುವುದೂ, ನೋಡಲಶಕ್ಯವೂ, ತಿಳಿಯಲಾರದುದೂ ಆದ ಆ ಲಿಂಗವು ಬಹುವಾಗಿ ಬೆಳೆಯುತ್ತಿರುವುದನ್ನು ಇಂದ್ರನು ನೋಡಿದನು.

೪೯. ಕಣ್ಣು ಎವೆಯಿಕ್ಕುವುದರೊಳಗಾಗಿ ಲಿಂಗವು ಹತ್ತುಸಾವಿರ ಯೋಜನಗಳಷ್ಟು ಬೆಳೆಯಿತು. ಹೀಗೆ ಬೆಳೆಯುತ್ತಿರುವ ಲಿಂಗದ ಅದ್ಭುತಾಕಾರವನ್ನು ನೋಡಿ ದೇವೇಂದ್ರನು ಮೂರ್ಛೆಗೊಂಡನು. ಗ್ರಹಗಳೂ ನಿಶ್ಚೇಷ್ಟರಾದರು.

೫೦. ಬಳಿಕ ಆ ಮಹಾಲಿಂಗದ ಒಂದು ಪಾರ್ಶ್ವದಿಂದ ನೀರಿನ ಸಂತತಧಾರೆಗಳು ಸುರಿಯಲು ಭೂಮಿಯೆಲ್ಲವೂ ಒಂದೇ ಸಮುದ್ರದಲ್ಲಿ ಮುಳುಗಿ ಹೋದಂತಿದ್ದಿತು.

೫೧. ಲಿಂಗದ ಮತ್ತೊಂದು ಪ್ರದೇಶದಿಂದ ಬಲವಾದ ಬಿರುಗಾಳಿಯು ಬೀಸತೊಡಗಿತು. ಮತ್ತೊಂದು ಕಡೆಯಿಂದ ಮಿಂಚುಗಳ ಸಮೂಹವು ಹೊರಟಿತು.

೫೨. ಬೇರೊಂದು ಕಡೆಯಿಂದ ಹೊಗೆಯನ್ನುಗುಳುತ್ತ ಮಹಾಜ್ವಾಲೆಯು ಉತ್ಪನ್ನವಾಯಿತು.

೫೩. ಇಂತು ಅತ್ಯದ್ಭುತವೂ, ಅವ್ಯಕ್ತವೂ, ಆಕಾಶದ ವಿವರವನ್ನೆಲ್ಲ ಆವರಿಸುವಂತೆ ಎಲ್ಲೆಲ್ಲಿಯೂ ವೃದ್ಧಿಯಾಗುತ್ತಿರುವ ಆ ಲಿಂಗವನ್ನು ಎಲ್ಲರೂ ನೋಡಿದರು.

ಗ್ರಹಾಶ್ಚ ವಿಹ್ವಲಾ ಜಾತಾ ಧೂಮೇನಾಕುಲಿತೇಂದ್ರಿಯಾಃ ।
ತುಷ್ಟುವುಶ್ಚ ತದಾ ಲಿಂಗಂ ದಹ್ಯಮಾನಾಃ ಸಮಂತತಃ ॥ ೫೪ ॥

ಗ್ರಹಾ ಊಚುಃ:—

ನಮಃ ಸುರೂಪಾಯ ಸುರಾರ್ಚಿತಾಯ
ನಮೋ ವಿರೂಪಪ್ರಕೃತಿಕ್ರಿಯಾಯ ।
ನಮೋ ನಮೋ ರೂಪನಿರಾಶ್ರಯಾಯ
ಜಲಸ್ವರೂಪಾಯ ನಮೋ ನಮಸ್ತೇ ॥ ೫೫ ॥

ಇತಿ ಸ್ತುತೋ ಯದಾ ದೇವಿ ಗ್ರಹೈಃ ಕ್ರೂರೈಸ್ತದಾ ಪ್ರಿಯೇ ।
ಲಿಂಗಾತ್ಪ್ರಾದುರಭೂತ್ಸ್ವಸ್ಥಃ ಸ್ವರೂಪೋ ವಿಗ್ರಹಾಕೃತಿಃ ॥ ೫೬ ॥
ಭಸ್ಮಧೂಸರಸರ್ವಾಂಗೋ ಭೋಗಿಭೋಗಾಂಗದೋಜ್ಜ್ವಲಃ ।
ಹಿಮರಾಶಿನಿಭಾಕಾರೋ ರಜತಾಚಲನಿರ್ಮಲಃ ।
ಉವಾಚ ಚೈತಾನ್ಪ್ರಣತಾನ್ ಗ್ರಹಾನ್ಕಂಪಿತಕಂಧರಾನ್ ॥ ೫೭ ॥
ಕಿಂ ವಾ ಕಾಮ್ಯಂ ಮನೋಽಭೀಷ್ಟಂ ಭವದ್ಭ್ಯೋ ಯದ್ದದಾಮ್ಯಹಂ ।
ಮಮಾಽಮೋಘಮಿದಂ ಸರ್ವಂ ದರ್ಶನಂ ಚಾಽತಿದುರ್ಲಭಂ ॥ ೫೮ ॥

---

೫೪. ಗ್ರಹದೇವತೆಗಳೆಲ್ಲರೂ ಹೊಗೆಯಿಂದ ಇಂದ್ರಿಯವ್ಯಾಪಾರಗಳು ಕೆಟ್ಟು ಹೋಗಲು ಸಂಭ್ರಾಂತರಾಗಿ ನಾಲ್ಕು ಕಡೆಗಳಿಂದಲೂ ಸುಡಲ್ಪಡುತ್ತ ಆ ಲಿಂಗವನ್ನೇ ಸ್ತೋತ್ರಮಾಡಿದರು.

೫೫. ಗ್ರಹಗಳು ಹೇಳುತ್ತಾರೆ:—"ಸುಂದರರೂಪನೂ, ದೇವಪೂಜಿತನೂ, ರೂಪರಹಿತವಾದ ಪ್ರಕೃತಿಗೆ ಕಾರಣನೂ, ರೂಪಾದಿ ಕಲ್ಪನೆಗಳಿಗೆ ಆಶ್ರಯನಲ್ಲದವನೂ, ಜಲರೂಪನೂ ಆದ ನಿನ್ನನ್ನು ಪುನಃ ಪುನಃ ನಮಸ್ಕರಿಸುವೆವು."

೫೬. ಪ್ರಿಯಳೆ! ಇಂತೆಂದು ಕ್ರೂರಗ್ರಹಗಳೆಲ್ಲರೂ ಸ್ತೋತ್ರಮಾಡಲು ಆ ಲಿಂಗದ ಮಧ್ಯದಿಂದ ಸ್ವಸ್ಥಚಿತ್ತನೂ ಸುಂದರನೂ ಆದ ಆ ದೇವನು ವಿಗ್ರಹಧಾರಿಯಾಗಿ ಕಾಣಿಸಿಕೊಂಡನು.

೫೭. ಭಸ್ಮವನ್ನು ಸರ್ವಾಂಗಗಳಲ್ಲಿ ಲೇಪಿಸಿಕೊಂಡವನೂ, ಹಾವುಗಳ ಹೆಡೆಗಳೆಂಬ ಭುಜಬಂದಿಗಳಿಂದಲಂಕೃತನೂ, ಹಿಮರಾಶಿಯನ್ನು ಹೋಲುವ ಆಕೃತಿಯವನೂ, ರಜತಾಚಲದಂತೆ ಪರಿಶುದ್ಧನೂ ಆದ ಮಹಾದೇವನು ಪ್ರಣತರೂ, ಭಯದಿಂದ ನಡುಗುತ್ತಿರುವ ತಲೆಗಳುಳ್ಳವರೂ ಆದ ಆ ಗ್ರಹದೇವತೆಗಳನ್ನು ಕುರಿತು ಹೇಳಿದನು.

೫೮. "ನಿಮ್ಮ ಯಾವ ಕಾಮವನ್ನಾಗಲಿ, ಮನೋಭೀಷ್ಟವನ್ನಾಗಲಿ ನಿಮಗೆ ನಾನು ಕೊಡಬೇಕೆನ್ನುವಿರಿ? ನನ್ನ ಈ ದರ್ಶನವು ಯಾವಾಗಲೂ ಅತ್ಯಂತ ದುರ್ಲಭವಾದುದು. ವ್ಯರ್ಥವಾಗಬಾರದು.

ಭವದ್ಭ್ಯೋ ಲೋಕತುಷ್ಟ್ಯರ್ಥಂ ದರ್ಶನಂ ಹಿ ದದಾಮ್ಯಹಂ ।
ಏವಮುಕ್ತಾಸ್ತು ಗ್ರಹಾಃ ಸರ್ವೇ ಪ್ರೋಚುಃ ಪ್ರಾಂಜಲಯಸ್ತದಾ ॥ ೫೯ ॥
ಯದಿ ದೇಯೋ ವರೋ ದೇವ ಯದಿ ತುಷ್ಟೋಽಸಿ ಶಂಕರ ।
ಕರ್ಮಾರಂಭೇಷು ಸರ್ವೇಷು ಪೂಜಾಽಸ್ಮಾಕಂ ಯಥಾ ಭವೇತ್ ।
ತಥಾ ಕುರು ಮಹಾದೇವ ತೇನ ತೃಪ್ತಿರ್ಭವಿಷ್ಯತಿ ॥ ೬೦ ॥
ಏವಂ ಭವಿಷ್ಯತೀತ್ಯುಕ್ತ್ವಾ ಮೇಘಂ ಚೋತ್ತರಮುಕ್ತವಾನ್ ।
ತುಷ್ಟೋಽಸ್ಮ್ಯಹಂ ತು ತೇ ವತ್ಸ ಗೃಹಾಣ ವರಮೀಪ್ಸಿತಂ ॥ ೬೧ ॥
ತಚ್ಛ್ರುತ್ವಾ ವಚನಂ ತತ್ರ ಹ್ಯುತ್ತರಃ ಪ್ರಾಹ ಹರ್ಷಿತಃ ।
ಯಸ್ಮೇ ತುಷ್ಟೋಽಸಿ ಭಗವಂಸ್ತಸ್ಮಹ್ಯಂ ದೀಯತಾಂ ವರಂ ॥ ೬೨ ॥
ಯದಾಽಸ್ಮಾಕಂ ಮಹಾಬಾಧಾಂ ಕದಾ ಕೋಽಪಿ ಕರಿಷ್ಯತಿ ।
ತದಾ ವೃಷ್ಟಿರ್ವಿಘಾತವ್ಯಾ ತ್ವಯಾ ದೇವ ಸದಾ ಭುವಿ ॥ ೬೩ ॥
ರಕ್ಷಾ ಕಾರ್ಯಾ ಚ ಮೇಘಾನಾಂ ರಕ್ಷಣೀಯಾಸ್ತ್ವಯಾ ವಯಂ ।
ಏವಮಸ್ತ್ವಿತಿ ತೇನೋಕ್ತಂ ಲಿಂಗೇನ ನಗಗಾತ್ರಜೇ ॥ ೬೪ ॥

---

೫೯. ಲೋಕಗಳ ಸಂತೋಷಕ್ಕಾಗಿ ನಿಮಗೆಲ್ಲರಿಗೂ ಈಗ ದರ್ಶನವನ್ನು ಕೊಟ್ಟಿರುವೆನು.'' ಇಂತು ಹೇಳಲು ಸಕಲಗ್ರಹಗಳೂ ಕೈಗಳನ್ನು ಮುಗಿದು ಕೊಂಡು ಹೇಳಿಕೊಂಡರು.

೬೦. "ದೇವದೇವನಾದ ಶಂಕರನೆ! ನಮಗೆ ವರವನ್ನು ಕೊಡುವುದಾಗಿದ್ದರೆ, ನೀನು ಸಂತುಷ್ಟನಾಗಿರುವೆಯಾದರೆ, ಸಕಲಕಾರ್ಯಗಳ ಆರಂಭದಲ್ಲಿಯೂ ನಮಗೆ ಪೂಜೆಯು ಸಲ್ಲುವಂತೆ ಮಾಡಬೇಕು. ಮಹಾದೇವನೆ! ಅದರಿಂದಲೇ ನಮಗೆ ತೃಪ್ತಿಯುಂಟಾಗುವುದು.''

೬೧. ಮುಂದೆ ಹಾಗೆಯೇ ನಡೆಯುವುದೆಂದು ಅವರಿಗೆ ಅಭಯವನ್ನಿತ್ತು ಮಹಾದೇವನು ಉತ್ತರನೆಂಬ ಮೇಘನಿಗೆ ಹೇಳಿದನು. "ವತ್ಸನೆ! ನಿನ್ನ ಸೇವೆಯಿಂದ ಸಂತೋಷಗೊಂಡಿರುವೆನು. ನಿನಗೆ ಬೇಕಾದ ವರವನ್ನು ಕೇಳಿ ತೆಗೆದುಕೊ.''

೬೨. ಆತನ ಈ ಮಾತನ್ನು ಕೇಳಿ ಆನಂದಭರಿತನಾದ ಉತ್ತರನು ಹೇಳಿದನು. "ಭಗವಂತ! ನನ್ನಲ್ಲಿ ಸಂತುಷ್ಟನಾಗಿರುವೆಯಾದರೆ ನನಗೊಂದು ವರವನ್ನು ಕೊಡು.

೬೩. ನಮಗೆ ಯಾವಾಗಲಾದರೂ ಯಾರಾದರೂ ಮಹತ್ತರವಾದ ಪೀಡೆಯನ್ನುಂಟುಮಾಡಿದರೆ ಆಗ ದೇವದೇವನಾದ ನೀನೇ ಭೂಲೋಕದಲ್ಲಿ ಮಳೆಯನ್ನು ಕರೆಯಬೇಕು.

೬೪. ಮತ್ತು ಮೇಘಗಳ ಸಂರಕ್ಷಣೆಯನ್ನು ಮಾಡಬೇಕು. ನಿನ್ನಿಂದಲೇ

ಅದ್ಯಪ್ರಭೃತಿ ತೇ ನಾಮ್ನಾ ಖ್ಯಾತಿಂ ಯಾಸ್ಯಾಮಿ ಭೂತಲೇ ।
ಉತ್ತರೇಶ್ವರಸಂಜ್ಞೋಽಹಂ ಭವಿಷ್ಯಾಮಿ ನ ಸಂಶಯಃ ॥ ೧೫ ॥
ಯೇ ಮಾಂ ಸಂಪೂಜಯಿಷ್ಯಂತಿ ಭಕ್ತ್ಯಾ ಪರಮಯಾ ಯುತಾಃ ।
ತೇಷಾಂ ದಾಸ್ಯಾಮಿ ಸತತಂ ವಾಂಛಿತಾರ್ಥಫಲಂ ಭುವಿ ॥ ೧೬ ॥
ಪಶ್ಯಂತಿ ಪ್ರಯತಾ ಯೇ ಮಾಂ ಕೃತ್ವಾ ನಿಯಮಪೂರ್ವಕಂ ।
ತೇ ಯಾಸ್ಯಂತಿ ಪುರಂ ಶೈವಂ ಯಾವತ್ಕಲ್ಪಾಽಷ್ಟಕಾಽಯುತಂ ॥ ೧೭ ॥
ಆರೂಢಾಃ ಸೂರ್ಯಸಂಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ರುದ್ರಕನ್ಯಾಸಮಾಕೀರ್ಣೈರ್ಹಂಸಸಾರಸಸಂಯುತೈಃ ॥ ೧೮ ॥
ನೃತ್ಯವಾದಿತ್ರನಿರ್ಘೋಷೈರುತ್ಕಟಧ್ವನಿನಾದಿತೈಃ ।
ದೋಧೂಯಮಾನೈಶ್ಚ ನರೈಃ ಸ್ತೂಯಮಾನಾಃ ಸುರಾಽಸುರೈಃ ॥ ೧೯ ॥
ಪ್ರಸಂಗಾದ್ಭಕ್ತಿಹೀನೋಽಪಿ ಯೋ ಮಾಂ ಪಶ್ಯತ್ಯಶಾಠ್ಯತಃ ।
ಐಶ್ವರ್ಯಂ ತಸ್ಯ ದಾಸ್ಯಾಮಿ ಹ್ಯುತ್ತರೇಷು ಕುರುಷ್ವಥ ॥ ೨೦ ॥

---

ನಾವು ರಕ್ಷಿತರಾಗಬೇಕು.'' ಎಲೌ ಪಾರ್ವತಿಯೆ! ಆ ಲಿಂಗವು ಹಾಗೆಯೇ ಆಗಲೆಂದು ವರವನ್ನು ಕೊಟ್ಟಿತು.

೧೫. '' ಇಂದು ಮೊದಲಾಗಿ ನಾನು ನಿನ್ನ ಹೆಸರಿನಿಂದಲೇ ಭೂಮಂಡಲದಲ್ಲಿ ಪ್ರಖ್ಯಾತಿಯನ್ನು ಪಡೆಯುತ್ತೇನೆ. ನಾನು ಉತ್ತರೇಶ್ವರನೆಂಬ ಹೆಸರುಳ್ಳವನಾಗುವುದರಲ್ಲಿ ಸಂದೇಹವಿಲ್ಲ.

೧೬–೧೭. ಅನನ್ಯವಾದ ಭಕ್ತಿಯಿಂದ ಕೂಡಿ ಯಾರು ನನ್ನ ಪೂಜೆಯನ್ನು ಮಾಡುವರೊ, ಅವರಿಗೆ ಯಾವಾಗಲೂ ಭೂಲೋಕದಲ್ಲಿ ಅಭೀಷ್ಟಗಳನ್ನೆಲ್ಲ ಕೊಡುತ್ತಿರುವೆನು. ಯಾರು ಮೊದಲೇ ಸಂಕಲ್ಪವನ್ನು ಮಾಡಿಕೊಂಡು ಪ್ರಯತ್ನಪೂರ್ವಕವಾಗಿ ನನ್ನನ್ನು ನೋಡುವರೊ, ಅವರು ಎಂಬತ್ತುಸಾವಿರ ಕಲ್ಪಗಳವರೆಗೂ ಶಿವಪುರವಾದ ಕೈಲಾಸದಲ್ಲಿ ನೆಲಸಿರುವರು.

೧೮–೧೯. ಮತ್ತು ಸೂರ್ಯನನ್ನು ಹೋಲುವವುಗಳೂ, ಸರ್ವಾಭೀಷ್ಟಪ್ರದಗಳೂ, ರುದ್ರಕನ್ಯೆಯರಿಂದ ತುಂಬಿರುವವುಗಳೂ, ಹಂಸ ಸಾರಸಾದಿ ಪಕ್ಷಿಗಳಿಂದ ರಂಜಿಸುವವುಗಳೂ, ನೃತ್ಯ ಮಂಗಳವಾದ್ಯಗಳೊಡಗೂಡಿರುವ ಉಚ್ಚಧ್ವನಿಗಳಿಂದ ನಾದಿತಗಳೂ, ಮನುಷ್ಯರಿಂದ ಹೊರಲ್ಪಡುತ್ತಿರುವವುಗಳೂ ಆದ ದಿವ್ಯವಿಮಾನಗಳಲ್ಲಿ ಸಂಚರಿಸುತ್ತ ದೇವಾಸುರರಿಂದಲೂ ಸ್ತೋತ್ರಮಾಡಿಸಿಕೊಳ್ಳುತ್ತಿರುವರು.

೨೦. ಯಾವನು ಭಕ್ತಿಹೀನನಾಗಿದ್ದರೂ ಪ್ರಸಂಗವಶದಿಂದ ನನ್ನಲ್ಲಿಗೆ ಬಂದು ಮೂರ್ಖತನವನ್ನು ಬಿಟ್ಟು ನನ್ನನ್ನು ನೋಡುವನೊ, ಅವನಿಗೂ ನಾನು ಉತ್ತರಕುರುದೇಶಗಳಲ್ಲಿ ಐಶ್ವರ್ಯವನ್ನು ಕೊಡುತ್ತಿರುವೆನು.

ಸ್ಮರಿಷ್ಯತಿ ಚ ಯೋ ನಿತ್ಯಂ ಪ್ರಭಾತೇಚೋತ್ತರೇಶ್ವರಂ ।
ಸ ಯಾತಿ ಪರಮಂ ಸ್ಥಾನಂ ವಾಹಪ್ರಲಯವರ್ಜಿತಂ ॥ ೭೧ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಉತ್ತರೇಶ್ವರದೇವಸ್ಯ ಶೃಣು ತ್ರಿಲೋಚನೇಶ್ವರಂ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಉತ್ತರೇಶ್ವರಮಾಹಾತ್ಮ್ಯವರ್ಣನಂ" ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೭೧. ಯಾವನು ತಾನಿದ್ದಲ್ಲಿಯೇ ನಿತ್ಯವೂ ಪ್ರಾತಃಕಾಲದಲ್ಲಿ ಈ ಉತ್ತರೇಶ್ವರನನ್ನು ಸ್ಮರಿಸುತ್ತಿರುವನೊ, ಅವನು ಸಂಕಟನಾಶರಹಿತವಾದ ಪರಮಪದವನ್ನು ಹೊಂದುವನು.

೭೨. ಎಲೌ ದೇವಿಯೆ! ಇಂತು ಉತ್ತರೇಶ್ವರಮಹಾದೇವನ ಪ್ರಭಾವವನ್ನು ನಿನಗೆ ಹೇಳಿರುವೆನು. ಈ ಚರಿತ್ರೆಯು ಪಾಪಪರಿಹಾರಕವಾದುದು. ಇನ್ನು ತ್ರಿಲೋಚನೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಉತ್ತರೇಶಮಾಹಾತ್ಮ್ಯವರ್ಣನ"ವೆಂಬ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ತ್ರಿಲೋಚನೇಶ್ವರಮಾಹಾತ್ಮ್ಯವರ್ಣನಂ

ಶ್ರೀ ದೇವದೇವ ಉವಾಚ:—

ಪಂಚಚತ್ವಾರಿಕಂ ವಿದ್ಧಿ ದೇವಂ ತ್ರಿಲೋಚನೇಶ್ವರಂ ।
ಯಸ್ಯ ದರ್ಶನಮಾತ್ರೇಣ ಸರ್ವಸಿದ್ಧಿರವಾಪ್ಯತೇ ॥ ೧ ॥
ಇತಿಹಾಸಮಿಹಾಽಽಸೀದ್ವೈ ಪೀಠೇ ವಿರಜಸಂಜ್ಞಕೇ ।
ತ್ರಿಲೋಚನಸ್ಯ ಪ್ರಾಸಾದೇ ಮಣಿಮಾಣಿಕ್ಯನಿರ್ಮಿತೇ ॥ ೨ ॥
ನಾನಾಭಂಗಿಗವಾಕ್ಷಾಢ್ಯೇ ರತ್ನಸಾನಾವಿವಾಽಪರೇ ।
ದೇದೀಪ್ಯಮಾನಸೌವರ್ಣಕಲಶೇನ ವಿರಾಜಿತೇ ॥ ೩ ॥
ಪಾರ್ವಣೇನ ಶಶಾಂಕೇನ ಖೇದಾದಿವ ಸಮಾಸಿತೇ ।
ತತ್ರ ಪಾರಾವತದ್ವಂದ್ವಂ ವಸತ್ಸ್ವೈರಂ ಕೃತಾಲಯಂ ॥ ೪ ॥
ಪ್ರಾತಃ ಸಾಯಂ ಚ ಮಧ್ಯಾಹ್ನೇ ಕುರ್ವನ್ನಿತ್ಯಂ ಪ್ರದಕ್ಷಿಣಂ ।
ಉಡ್ಡೀಯಮಾನಂ ಪರಿತಃ ಪಕ್ಷವಾತೈರಿತಸ್ತತಃ ।
ರಜಃಪ್ರಾಸಾದಸಂಲಗ್ನಂ ದೂರೀಕುರ್ವದ್ದಿಶೋ ದಶ ॥ ೫ ॥

---

### ಕನ್ನಡದ ಅನುವಾದ

### ತ್ರಿಲೋಚನೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ನಲವತ್ತೈದನೆಯ ಮಹಾಲಿಂಗವೇ ತ್ರಿಲೋಚನೇಶ್ವರನೆಂಬುದು. ಅದನ್ನು ನೋಡುವುದರಿಂದ ಸಕಲಸಿದ್ಧಿಗಳೂ ಕೈಗೂಡುವುವು.

೨. ವೀರಜಸಂಜ್ಞಕವಾದ ಈ ಪೀಠದಲ್ಲಿ ಹಿಂದೆ ನಡೆದ ಒಂದು ಇತಿಹಾಸವನ್ನು ಹೇಳುವೆನು. ಇಲ್ಲಿ ತ್ರಿಲೋಚನನಮಂಟಪವು ನವರತ್ನಗಳಿಂದಲೂ, ಮಾಣಿಕ್ಯಗಳಿಂದಲೂ ನಿರ್ಮಿತವಾಗಿರುವುದು.

೩. ಎರಡನೆಯ ಮೇರುಪರ್ವತವೊ ಎಂಬಂತೆ ಉನ್ನತವಾಗಿ ಬಹುವಿಧಗಳಾದ ಗವಾಕ್ಷಗಳಿಂದ ಕೂಡಿರುವುದು. ಉಜ್ಜ್ವಲವಾದ ಚಿನ್ನದ ಕಳಶದಿಂದ ಅದು ಬಹುವಾಗಿ ಶೋಭಿಸುತ್ತಿರುವುದು.

೪. ಹುಣ್ಣಿಮೆಯ ಚಂದ್ರನೇ ಅಲ್ಲಿ ಖೇದವನ್ನು ಕಳೆಯಲು ಬಂದು ನೆಲಸಿದಂತಿದ್ದಿತು. ಆ ಗೋಪುರದಲ್ಲಿ ಒಂದು ಕಪೋತದ್ವಂದ್ವವು ಮನೆಯನ್ನು ಮಾಡಿಕೊಂಡು ಆನಂದದಿಂದಿದ್ದಿತು.

೫. ಪ್ರಾತಃಕಾಲ, ಸಾಯಂಕಾಲ, ಮಧ್ಯಾಹ್ನ ಸಮಯಗಳಲ್ಲಿ ನಿತ್ಯವೂ ಆ ಶಿವಾಲಯಕ್ಕೆ ಪ್ರದಕ್ಷಿಣೆಗಳನ್ನು ಮಾಡುತ್ತ, ಸುತ್ತಲೂ ಆ ಪಕ್ಷಿಗಳು

ತ್ರಿಲೋಚನೇತಿ ಸತತಂ ನಾಮಭಕ್ತೈರುದಾಹೃತಂ ।
ತ್ರಿವಿಷ್ಟಪೇತಿ ಚ ತಥಾ ತಯೋಃ ಕರ್ಣಾಽತಿಥೀಭವೇತ್ ॥ ೬ ॥
ಚತುರ್ವಿಧಾನಿ ವಾದ್ಯಾನಿ ಶಂಭುಪ್ರೀತಿಕರಾಣ್ಯಲಂ ।
ತಯೋಃ ಕರ್ಣಗುಹಾಂ ಪ್ರಾಪ್ಯ ಪ್ರತಿಶಬ್ದಂ ಪ್ರತನ್ವತೇ ॥ ೭ ॥
ಮಂಗಲಾರಾತ್ರಿಕಜ್ಯೋತಿಸ್ತ್ರಿಸಂಧ್ಯಂ ಪಕ್ಷಿಣೋಸ್ತಯೋಃ ।
ನೇತ್ರಾಂತಂ ನಿರ್ವಿಶನ್ನಿತ್ಯಂ ಭಕ್ತಚೇಷ್ಟಾಂ ಪ್ರದರ್ಶಯತ್ ॥ ೮ ॥
ಪ್ರಾಣಯಾತ್ರಾಂ ವಿಹಾಯಾಽಪಿ ಕದಾಚಿತ್ಸ್ಥಿರಮಾನಸೌ ।
ನೋಡ್ಡೀಯ ವಾಂಛಿತಂ ಯಾತಃ ಪಶ್ಯಂತೌ ಕೌತುಕಂ ಖಗೌ ॥ ೯ ॥
ತತ್ರಾಽಸಕೃಜ್ಜನಾಕೀರ್ಣಂ ಪ್ರಾಸಾದಂ ಪರಿತೋಽವನೌ ।
ತಂಡುಲಾದಿಚರಂತೌ ತೌ ಕುರ್ವಂತೌ ಚ ಪ್ರದಕ್ಷಿಣಂ ॥ ೧೦ ॥
ದೇವದಕ್ಷಿಣದಿಗ್ಭಾಗೇ ವಿಷ್ಣುದೇಹೋದ್ಭವಂ ಜಲಂ ।
ತೃಷಾರ್ತೌ ಪಿಬತೋ ನಿತ್ಯಂ ಸ್ನಾತ್ವಾ ಚಾಜಗ್ಮತುಶ್ಚ ತೌ ॥ ೧೧ ॥

---

ಹಾರಾಡುತ್ತಿದ್ದುವು. ಮತ್ತು ಗೋಪುರದಲ್ಲಿರುವ ದೂಳಿಯನ್ನು ತಮ್ಮರೆಕ್ಕೆಗಳ ಗಾಳಿಯಿಂದ ಹತ್ತುದಿಕ್ಕುಗಳಿಗೂ ಚೆಲ್ಲಿ ಶುಭ್ರಗೊಳಿಸುತ್ತಿದ್ದುವು.

೬. ನಿರಂತರವೂ ಅಲ್ಲಿ ನೆರೆದ ಭಕ್ತರು ತ್ರಿಲೋಚನ, ತ್ರಿವಿಷ್ಟಪ ಮುಂತಾದ ಮಹೇಶ್ವರನ ನಾಮಗಳನ್ನು ಹೇಳುತ್ತಿರಲು ಆ ಹೆಸರುಗಳೇ ಅವುಗಳ ಕಿವಿಗಳಿಗೆ ಬೀಳುತ್ತಿದ್ದುವು.

೭. ಮಹಾದೇವನಿಗೆ ಪ್ರೀತಿಕರಗಳಾದ ನಾಲ್ಕುಬಗೆಗಳಾದ ವಾದ್ಯಗಳೂ ಬಾಜಿಸಲ್ಪಡುತ್ತಿರಲು, ಆ ನಾದವು ಅವುಗಳ ಕರ್ಣರಂಧ್ರಗಳನ್ನು ಪ್ರವೇಶಿಸಿ ಪ್ರತಿಧ್ವನಿಯನ್ನುಂಟುಮಾಡುತ್ತಿದ್ದುವು.

೮. ತ್ರಿಸಂಧ್ಯೆಗಳಲ್ಲಿಯೂ ಪರಮೇಶ್ವರನಿಗೆ ಬೆಳಗುತ್ತಿರುವ ಮಂಗಳಾರತಿಗಳ ಜ್ಯೋತಿಯು ಅವುಗಳ ಕಣ್ಣುಗಳಲ್ಲಿ ಹೊಕ್ಕು ಭಕ್ತರ ವ್ಯಾಪಾರಗಳನ್ನು ತೋರಿಸುತ್ತಿದ್ದಿತು.

೯–೧೦. ಆ ಎರಡು ಪಕ್ಷಿಗಳೂ ಒಮ್ಮೊಮ್ಮೆ ಉಸಿರಾಡುವುದನ್ನೂ ನಿಲ್ಲಿಸಿ ಹಾರಾಡುವುದನ್ನುಳಿದು, ಏಕಾಗ್ರಮನಸ್ಸುಗಳಿಂದ ಪೂಜೆಗಳ ಕೌತುಕವನ್ನೇ ನೋಡುತ್ತ ಸಂತೋಷಗೊಳ್ಳುತ್ತಿದ್ದುವು. ಪದೇ ಪದೇ ಜನರಿಂದ ನಿಬಿಡಿತವಾದ ಆ ದೇವಾಲಯದ ಸುತ್ತಲೂ ಭೂಮಿಯಲ್ಲಿ ಚೆಲ್ಲಿರುವ ಅಕ್ಷತೆಗಳ ಅಕ್ಕಿಯ ಕಾಳುಗಳನ್ನು ತಿನ್ನುತ್ತ ಪ್ರದಕ್ಷಿಣೆಗಳನ್ನೂ ಮಾಡುತ್ತಿದ್ದುವು.

೧೧. ಮಹೇಶ್ವರನ ದಕ್ಷಿಣದಿಕ್ಕಿನಲ್ಲಿರುವ ವಿಷ್ಣುಶರೀರದಿಂದ ಹುಟ್ಟಿದ ತೀರ್ಥದಲ್ಲಿ ನಿತ್ಯವೂ ಬಾಯಾರಿದಾಗ ನೀರನ್ನು ಕುಡಿಯುತ್ತಲೂ, ಸ್ನಾನಮಾಡುತ್ತಲೂ ಇದ್ದುವು.

ತಯೋರಿತ್ಥಂ ವಿಚರತೋಸ್ತ್ರಿಲೋಚನಸಮೀಪತಃ ।
ಅಗಾದ್ಬಹುತಿಥಃ ಕಾಲೋ ದ್ವಿಜಯೋಃ ಸಾಧುಚೇಷ್ಟಯೋಃ ॥ ೧೨ ॥
ಅಥ ದೇವಾಲಯಸ್ಕಂಧೇ ಗವಾಕ್ಷಾಂತರ್ಗತೌ ಚ ತೌ ।
ಶ್ಯೇನೇನ ಕೇನಚಿದ್ದೃಷ್ಟೌ ಕ್ರೂರದೃಷ್ಟ್ಯಾ ಸುಖಂ ಸ್ಥಿತೌ ॥ ೧೩ ॥
ತಚ್ಚ ಪಾರಾವತದ್ವಂದ್ವಂ ಶ್ಯೇನಃ ಪರಿಜಿಘೃಕ್ಷಯಾ ।
ಅವತೀರ್ಯಾಂಬರಾದಾಶು ಉಪವಿಷ್ಟಃ ಶಿವಾಲಯೇ ॥ ೧೪ ॥
ತತೋ ವಿಲೋಕಯಾಮಾಸ ತದಾಗಮವಿನಿರ್ಗಮೌ ।
ಕೇನ ಮಾರ್ಗೇಣ ವಿಶತೋ ದುರ್ಗಮೇಣ ಪತತ್ರಿಣೌ ॥ ೧೫ ॥
ಕೇನಾಧ್ವನಾ ಚ ನಿರ್ಯಾತಃ ಕಿಂ ಕಾಲೇ ಕುರುತಶ್ಚ ಕಿಂ ।
ಕಥಂ ಯುಗಪದೇತೌ ಮೇ ಗ್ರಾಹ್ಯೌ ಸ್ವೈರಂ ಭವಿಷ್ಯತಃ ।
ದುರ್ಬಲೋಪ್ಯಾಕಲಯಿತುಂ ಸಹಸಾಽರಿರ್ನ ಶಕ್ಯತೇ ॥ ೧೬ ॥
ಕರಿಣಾಂ ಚ ಸಹಸ್ರೇಣ ವರಾಶ್ವಾನಾಂ ಚ ಲಕ್ಷತಃ ।
ನ ಕರ್ಮ ಸಿದ್ಧ್ಯೇನ್ನೃಪತೇರ್ದುರ್ಗೇಣೈಕೇನ ಯದ್ಭವೇತ್ ॥ ೧೭ ॥

---

೧೨. ಇಂತು ಸಾಧುವರ್ತನೆಯಿಂದ ತ್ರಿಲೋಚನೇಶ್ವರನ ಸಮೀಪದಲ್ಲಿಯೇ ಆ ಎರಡು ಪಕ್ಷಿಗಳೂ ವಾಸಮಾಡಿಕೊಂಡಿರಲು ಅನೇಕ ವರ್ಷಗಳ ಕಾಲವು ಕಳೆದುಹೋಯಿತು.

೧೩. ಸುಖವಾಗಿ ಆ ಪಕ್ಷಿದ್ವಯವು ಇಂತು ವಾಸಿಸುತ್ತಿರಲು, ಒಮ್ಮೆ ದೇವಾಲಯದ ಗೋಪುರದ ಗವಾಕ್ಷಿಯಲ್ಲಿ ಕುಳಿತಿರುವಾಗ ಅವು ಒಂದಾನೊಂದು ಗಿಡುಗನ ದೃಷ್ಟಿಗೆ ಬಿದ್ದುವು.

೧೪. ಆ ಕಪೋತಗಳೆರಡನ್ನೂ ಹಿಡಿಯಬೇಕೆಂಬ ಅಭಿಲಾಷೆಯಿಂದ ಆ ಶ್ಯೇನವು ಆಕಾಶದಿಂದಿಳಿದು ಶಿವಾಲಯದ ಮೇಲೆ ಕುಳಿತುಕೊಂಡಿದ್ದಿತು.

೧೫. ಮತ್ತು ಆ ಪಾರಿವಾಳಗಳು ಬಂದು ಹೋಗುವ ಮಾರ್ಗವನ್ನು ನೋಡಿ ಯಾವ ದುರ್ಗಮವಾದ ಮಾರ್ಗದ ಮೂಲಕ ಒಳ ಹೊಗುತ್ತಿರುವುವೆಂಬುದನ್ನೂ ತಿಳಿದುಕೊಂಡಿತು.

೧೬–೧೭. ಯಾವ ಮಾರ್ಗದಿಂದ ಹೊರಕ್ಕೆ ಬರುವುವೆಂಬುದನ್ನೂ ಯಾವ ಕಾಲಗಳಲ್ಲಿ ಏನುಮಾಡುವುವೆಂಬುದನ್ನೂ ತಿಳಿದು ತನ್ನಲ್ಲಿಯೇ ಚಿಂತಿಸಿತು. "ಈ ಎರಡು ಪಕ್ಷಿಗಳೂ ಒಮ್ಮೆಯೇ ನನಗೆ ತಾವಾಗಿಯೇ ಸಿಕ್ಕುವ ಉಪಾಯ ವಾವುದು? ದುರ್ಬಲವಾದ ಶತ್ರುವೂ ಅನಿರೀಕ್ಷಿತವಾದ ಪ್ರಯತ್ನದಿಂದಲೇ ವಶನಾಗಲಾರನು. ಮಹಾರಾಜನಿಗೆ ಒಂದುಸಾವಿರ ಆನೆಗಳಿಂದಲೂ, ಲಕ್ಷ ಕುದುರೆಗಳಿಂದಲೂ ಯಾವ ಕಾರ್ಯವು ಸಾಧ್ಯವಾಗಲಾರದೊ, ಅದನ್ನೇ ಒಂದು ದುರ್ಗದ ಮಾತ್ರದಿಂದ ಸಾಧಿಸಬಹುದು.

ದುರ್ಗಸ್ಥೋ ನಾಽಭಿಭೂಯೇತ ವಿಪಕ್ಷಃ ಕೇನಚಿತ್ಕ್ವಚಿತ್ ।
ಸ್ವತಂತ್ರಂ ಯದಿ ದುರ್ಗಂ ಸ್ಯಾದಪಮಾರ್ಗಪ್ರಕಾಶಕಂ ॥ ೧೮ ॥
ಇತಿ ದುರ್ಗೇ ಬಲಂ ಶಂಸಂಛ್ಯೇನೋ ರೋಷಾಽರುಣೇಕ್ಷಣಃ ।
ಅಸಾಧ್ಯಸೌ ಕಲರವೌ ವೀಕ್ಷ್ಯ ಯಾತೋ ನಭೋಽಂಗಣೇ ॥ ೧೯ ॥
ಅಥ ಪಾರಾವತೀ ದಕ್ಷಾ ವಿಪಕ್ಷಕ್ಷಪಣೇಕ್ಷಣಂ ।
ಮಹಾಬಲಂ ದುರ್ಗಬಲಾತ್ಪ್ರಾಹ ಪಾರಾವತಂ ಪತಿಂ ॥ ೨೦ ॥

ಕಲರವ್ಯುವಾಚ :—

ಪ್ರಿಯ ಪಾರಾವತ ಪ್ರಾಜ್ಞ ಸರ್ವಕಾಮ ಸುಖಾರವ ।
ತವದೃಗ್ವಿಷಯಂ ಪ್ರಾಪ್ತಃ ಶ್ಯೇನೋಽಯಂ ಪ್ರಬಲೋ ರಿಪುಃ ॥ ೨೧ ॥
ಸಚ ತದ್ವಾಕ್ಯಮಾಕರ್ಣ್ಯ ಪಾರಾವತ್ಯಾಶ್ಚ ಸತ್ಪತಿಃ ।
ಪಾರಾವತೀಮುವಾಚೇದಂ ಕಾ ಚಿಂತೇತಿ ತವ ಪ್ರಿಯೇ ॥ ೨೨ ॥

ಪಾರಾವತ ಉವಾಚ :—

ಕತಿ ನಾಮ ನ ಸಂತೀಹ ಸುಭಗೇ ವ್ಯೋಮಚಾರಿಣಃ ।
ಕತಿ ದೇವಾಲಯಾದ್ಯೇಷು ಖಗಾ ನೋಪವಸಂತಿ ಹಿ ॥ ೨೩ ॥

---

೧೮. ದುರ್ಗದಲ್ಲಿ ನೆಲಸಿರುವ ಶತ್ರುವು ಯಾರಿಂದಲೂ ಯಾವಾಗಲೂ ಪರಾಜಿತನಾಗುವುದಿಲ್ಲ. ಸ್ವತಂತ್ರವಾದ ದುರ್ಗವೊಂದಿದ್ದರೆ ಸಕಲ ಶತ್ರುಗಳನ್ನೂ ಹಿಂದಿರುಗಿಸಬಹುದು.''

೧೯. ಇಂತೆಂದು ದುರ್ಗದ ಬಲವನ್ನು ಹೊಗಳುತ್ತ ಗಿಡಗವು ಕೋಪ ದಿಂದ ಕೆಂಪೇರಿದ ಕಣ್ಣುಗಳುಳ್ಳದ್ದಾಗಿ ನಿಶ್ಚಿಂತೆಯಿಂದ ಕಲಾಲಾಪಗಳನ್ನು ಮಾಡುತ್ತಿದ್ದ ಆ ಪಾರಿವಾಳಗಳನ್ನು ಕಂಡು ಆಕಾಶದಲ್ಲಿ ಹಾರಿಹೋಯಿತು.

೨೦. ಆಗ ಶತ್ರುನಾಶಕಾಮಿಯೂ, ದುರ್ಗಬಲದಿಂದ ದುಸ್ಸಾಧ್ಯನೂ ಆದ ತನ್ನ ಪತಿಯನ್ನು ಕಂಡು ತೀಕ್ಷ್ಣಬುದ್ಧಿಯ ಆ ಹೆಣ್ಣುಪಾರಿವಾಳವು ಹೇಳಿತು.

೨೧. ಹೆಣ್ಣುಹಕ್ಕಿಯು ಹೇಳುತ್ತದೆ:—ಪ್ರಿಯಪತಿಯೆ! ಸರ್ವಜ್ಞನಾದ ನೀನೇ ನನ್ನ ಸರ್ವಾಭೀಷ್ಟಗಳನ್ನೂ ಕೊಡುವವನಾಗಿರುವೆ. ನಮಗೆ ಪ್ರಬಲ ವೈರಿಯಾದ ಈ ಗಿಡುಗವು ನಿನ್ನ ದೃಷ್ಟಿಗೂ ಬಿದ್ದಿರುವುದಲ್ಲವೆ.

೨೨. ಹೆಣ್ಣುಪಾರಿವಾಳವಾಡಿದ ಈ ಮಾತನ್ನು ಕೇಳಿ ಪತಿಯಾದ ಪಾರಾ ವತವು "ಪ್ರಿಯಳೆ! ನಿನಗೊದಗಿರುವ ಚಿಂತೆಯೇನು?" ಎಂದು ಕೇಳಿತು.

೨೩. ಗಂಡು ಹಕ್ಕಿಯು ಹೇಳುತ್ತದೆ:—ಸೌಭಾಗ್ಯವತಿಯೆ! ಆಕಾಶದಲ್ಲಿ ಹಾರಾಡುವ ಗೃಧ್ರಪಕ್ಷಿಗಳು ಎಷ್ಟು ವಿಧಗಳಿರುವುದಿಲ್ಲ? ಅವುಗಳಲ್ಲಿಯೂ ದೇವಾ ಲಯಗಳೇ ಮುಂತಾದ ಕಟ್ಟಡಗಳಲ್ಲಿ ವಾಸಮಾಡುತ್ತಿರುವುವು ಎಷ್ಟಿರುವುದಿಲ್ಲ?

ಕತಿ ಚೈವ ನ ಪಶ್ಯಂತಿ ನೌ ಸುಖಸ್ಥಾವಿಹ ಪ್ರಿಯೇ ।
ತೇಭ್ಯೋ ಯದೀಹ ಭೇತವ್ಯಂ ಕುತೋ ನೌ ತತ್ಸುಖಂ ಪ್ರಿಯೇ ॥ ೨೪ ॥
ರಮ ತ್ವಂ ಚ ಮಯಾ ಸಾರ್ಧಂ ತ್ಯಜ ಚಿಂತಾಮಿಮಾಂ ಶುಭೇ ।
ಅಸ್ಯ ಶ್ಯೇನವರಾಕಸ್ಯ ಗಣನಾಽಪಿ ನಮೇ ಹೃದಿ ॥ ೨೫ ॥
ಇತ್ಥಂ ಪಾರಾವತವರಾಚ್ಛ್ರುತ್ವಾ ಪಾರಾವತೀ ವಚಃ ।
ಮೌನಮಾಲಂಬ್ಯ ಸಂತಸ್ಥೇ ಪತ್ಯುಃಪಾದಾರ್ಪಿತೇಕ್ಷಣಾ ॥ ೨೬ ॥
ಹಿತವಕ್ತ್ರ್ಯೋಪದಿಶ್ಯಾಽಪಿ ಪ್ರಿಯಂ ಪ್ರಿಯಚಿಕೀರ್ಷಯಾ ।
ಪತ್ನ್ಯಾ ಜೋಷಂ ಸಮಾಸ್ಥೇಯಂ ಕಾರ್ಯಂ ಪತ್ಯುರ್ವಚಃ ಸದಾ॥ ೨೭ ॥
ಅನ್ಯೇದ್ಯುರಪ್ಯಥಾಯಾತಃ ಶ್ಯೇನಃ ಪಶ್ಯನ್ಸದಂಪತೀ ।
ಅಪರಿಚ್ಛಿನ್ನಯಾ ದೃಷ್ಟ್ಯಾ ಯಥಾ ಮೃತ್ಯುರ್ಗತಾಯುಷಂ ॥ ೨೮ ॥
ಅಥ ಮಂಡಲಗತ್ಯಾ ಸ ಪ್ರಾಸಾದಂ ಪರಿತೋ ಭ್ರಮನ್ ।
ಪ್ರೋವಾಚ ಪ್ರೇಯಸೀ ನಾಥ ದೃಷ್ಟೋ ದುಷ್ಟಸ್ತ್ವಯಾಽಹಿತಃ ॥ ೨೯ ॥
ತಸ್ಯಾ ವಾಕ್ಯಂ ಸಮಾಕರ್ಣ್ಯ ಪುನಃ ಕಲರವೋಽಬ್ರವೀತ್ ।
ಕಿಂ ಕರಿಷ್ಯತ್ಯಸೌ ಮುಗ್ಧೇ ಮಮ ವ್ಯೋಮವಿಹಾರಿಣಃ ॥ ೩೦ ॥

---

೨೪. ನಾವು ಇಲ್ಲಿ ಸುಖವಾಗಿರುವುದನ್ನು ಕಂಡಿರುವ ಪಕ್ಷಿಗಳೂ ಅನೇಕ ಗಳಿಲ್ಲವೆ? ಪ್ರಿಯಳೆ! ಅವುಗಳಿಗೆಲ್ಲ ಭಯಗೊಳ್ಳುತ್ತಿದ್ದರೆ ನಮಗೆ ಸುಖವೆಲ್ಲಿ ಯದು ?

೨೫. ಮಂಗಳಾಂಗಿಯೆ ! ನನ್ನೊಡನೆ ಸುಖಿಸುತ್ತ ನೀನು ಈ ಚಿಂತೆಯನ್ನು ಬಿಟ್ಟುಬಿಡು. ಈ ನೀಚ ಗಿಡುಗನ ಗಣನೆಯೇ ನನ್ನ ಮನಸ್ಸಿಗೆ ಬರುವುದಿಲ್ಲ."

೨೬. ಇಂತೆಂದ ಪತಿಯ ಮಾತನ್ನು ಕೇಳಿ ಹೆಣ್ಣುಪಕ್ಷಿಯು ಮರುಮಾತ ನ್ನಾಡದೆ ಪತಿಯ ಪಾದಗಳಲ್ಲಿಯೇ ನೆಟ್ಟದೃಷ್ಟಿಯುಳ್ಳದ್ದಾಗಿ ಸುಮ್ಮನಾಯಿತು.

೨೭. ಹಿತವನ್ನು ಬಯಸುವ ಪತ್ನಿಯು ಗಂಡನಿಗೆ ಪ್ರಿಯವನ್ನುಂಟು ಮಾಡಲು ಉಪದೇಶವನ್ನು ಮಾಡಬಹುದಾದರೂ ಪತಿಯೊಡನೆ ಒಂದಾಗಿರಬೇಕು ಮತ್ತು ಆತನ ಅಪ್ಪಣೆಯನ್ನೇ ಪಾಲಿಸುತ್ತಿರಬೇಕು.

೨೮. ಮತ್ತೊಂದು ದಿನವೂ ಆ ಶ್ಯೇನವು ಬಂದು ಮೃತ್ಯುದೇವತೆಯು ಗತಾಯುಷನನ್ನು ಆತುರದಿಂದ ನೋಡುವಂತೆ ಆ ಪಾರಿವಾಳ ದಂಪತಿಗಳನ್ನು ತದೇಕದೃಷ್ಟಿಯಿಂದ ನೋಡುತ್ತಿದ್ದಿತು.

೨೯. ಮತ್ತು ಮಂಡಲಾಕಾರವಾಗಿ ಪ್ರಾಸಾದದ ಸುತ್ತಲೂ ಹಾರಾಡು ತ್ತಿರಲು ಹೆಣ್ಣುಪಾರಿವಾಳವು, "ನಾಥನೆ! ದುಷ್ಟನಾದ ನಿನ್ನ ಶತ್ರುವು ಬಂದಿರು ವುದನ್ನು ನೋಡಿದೆಯ ?" ಎಂದಿತು.

೩೦-೩೧. ಹೆಂಡತಿಯ ಮಾತನ್ನು ಕೇಳಿ ಗಂಡುಹಕ್ಕಿಯು ಹೇಳುತ್ತದೆ.

ದುರ್ಗಂ ಚ ಸ್ವರ್ಗತುಲ್ಯಂ ಮೇ ಯತ್ರ ನಾಽಸ್ತ್ಯರಿತೋ ಭಯಂ ।
ಅಯಂ ನ ತಾಂ ಗತಿಂ ವೇತ್ತಿ ಯಾಂ ವೇದಾಽಹಂ ನಭೋಂಗಣೇ ॥ ೩೧ ॥
ಪ್ರಡೀನೋಡ್ಡೀನಸಂಡೀನಕಾಂಡವ್ಯಾಂಡಕಪಾಟಿಕಾ ।
ಸ್ರಂಸಿನೀ ಮಂಡಲವತೀ ಗತಯೋಽಷ್ಟಾವುದಾಹೃತಾಃ ॥ ೩೨ ॥
ಯದ್ಯೇತಾಸು ಹಿ ಕೌಶಲ್ಯಂ ಮಯಿ ವರ್ತತಿ ಚ ಪ್ರಿಯೇ ।
ಗತಿಷು ಕ್ವಾಽಪಿ ಕಸ್ಯಾಽಪಿ ಪಕ್ಷಿಣೋ ನ ತಥಾಽಂಬರೇ ।
ಸುಖೇನ ತಿಷ್ಠ ಕಾ ಚಿಂತಾ ಮಯಿ ಜೀವತಿ ತೇ ಪ್ರಿಯೇ ॥ ೩೩ ॥
ಇತಿ ತದ್ವಚನಂ ಶ್ರುತ್ವಾ ಆಸ್ಥಿತಾ ಮೂಕವತ್ಸತೀ ।
ಅಪರೇದ್ಯುರಪಿ ಶ್ಯೇನಸ್ತತ್ರಾಯಾತಃ ಶಿಲಾತಲೇ ॥ ೩೪ ॥
ಕಿಯದಂತರಮಾಸಾದ್ಯ ಉಪವಿಷ್ಟೋಽತಿಹೃಷ್ಟವತ್ ।
ಆಯಾಮಾಂತೇ ಚ ಸ ಸ್ಥಿತ್ವಾ ತತ್ಕುಲಾಯ ಕುಲಸ್ಯ ಚ ।
ಪುನಃ ಶ್ಯೇನೋ ವಿನಿರ್ಯಾತಃ ಸಾಽಪಿ ಕಾಂತಾಽಬ್ರವೀತ್ಪುನಃ ॥ ೩೫ ॥
ಪ್ರಿಯ ಸ್ಥಾನಮಿದಂ ತ್ಯಾಜ್ಯಂ ದುಷ್ಟದೃಷ್ಟಿ ವಿದೂಷಿತಂ ।
ಅಸೌ ಕ್ರೂರೋಽತಿನಿಕಟಮುಪವಿಷ್ಟೋಽತಿಹೃಷ್ಟವತ್ ॥ ೩೬ ॥

---

"ಎಲೌ ಮೂಢಳೆ! ಆಕಾಶದಲ್ಲಿ ವಿಹರಿಸಲು ಶಕ್ತನಾಗಿರುವ ನನಗೆ ಈ ಗಿಡಗನೇನನ್ನು ಮಾಡಬಲ್ಲದು? ಈ ನನ್ನ ದುರ್ಗವು ಸ್ವರ್ಗಕ್ಕೆ ಸಮಾನವಾಗಿರುವುದು. ಇಲ್ಲಿ ಯಾವ ಶತ್ರುವಿನಿಂದಲೂ ಭಯವಿಲ್ಲ. ಆಕಾಶದಲ್ಲಿ ಹಾರುವುದರಲ್ಲಿ ನಾನು ತಿಳಿದಿರುವ ಗತಿಕೌಶಲ್ಯವನ್ನು ಇದೆಂದಿಗೂ ತಿಳಿದಿರಲಾರದು.

೩೨–೩೩. ಪ್ರಡೀನ, ಉಡ್ಡೀನ, ಸಂಡೀನ, ಕಾಂಡವ್ಯ, ಅಂಡಕ, ಪಾಟಿಕಾ, ಸ್ರಂಸಿನಿ ಮತ್ತು ಮಂಡಲವತಿ ಎಂಬುದಾಗಿ ಪಕ್ಷಿಸಂಚಾರಗಳು ಎಂಟು ವಿಧಗಳೆಂಬುದಾಗಿ ಹೇಳಿರುವರು. ಪ್ರಿಯಳೆ! ಈ ಎಲ್ಲವುಗಳಲ್ಲಿಯೂ ನನಗೆ ತಿಳಿದಿರುವ ಕೌಶಲ್ಯವು ಎಲ್ಲಿಯೂ ಯಾವ ಪಕ್ಷಿಗೂ ಆಕಾಶಮಾರ್ಗದಲ್ಲಿ ತಿಳಿದಿಲ್ಲವು. ಇಂಥ ನಾನು ಜೀವಿಸಿರಲು ನಿನಗೇನು ಚಿಂತೆ? ಸುಖದಿಂದಿರು."

೩೪. ಇಂತೆಂದ ಗಂಡನ ಮಾತನ್ನು ಕೇಳಿ ಹೆಂಡತಿಯು ಮೂಕಳಂತೆ ಕುಳಿತುಬಿಟ್ಟಳು. ಮಾರನೆಯ ದಿನವೇ ಆ ಗಿಡಗನು ಮತ್ತೆ ಬಂದು ಸಮಿಪದಲ್ಲಿದ್ದ ಒಂದು ಕಲ್ಲುಬಂಡೆಯ ಮೇಲೆ ಕುಳಿತುಕೊಂಡಿತು.

೩೫. ಅದು ಸ್ವಲ್ಪದೂರದಲ್ಲಿಯೇ ಬಹಳ ಸಂತೋಷಗೊಂಡಂತೆ ಕಾಣುತ್ತ ಕುಳಿತಿದ್ದಿತು. ಆ ಪಾರಿವಾಳಗಳ ಗೂಡಿದ್ದ ಪ್ರದೇಶಕ್ಕೆ ಒಂದು ಬಾರಿನಷ್ಟು ದೂರದಲ್ಲಿಯೇ ಕುಳಿತಿದ್ದು ಮತ್ತೆ ಗಿಡಗವು ಹೊರಟುಹೋಗಲು ಹೆಣ್ಣು ಪಾರಿವಾಳವು ಮತ್ತೊಮ್ಮೆ ಹೇಳಿತು.

೩೬. "ಪ್ರಿಯನೆ! ಈ ದುಷ್ಟನ ದೃಷ್ಟಿಗೆ ಬಿದ್ದು ದೂಷಿತವಾಗಿರುವ

ಸಾಽವಜ್ಞಂ ಸ ಪುನಃ ಪ್ರಾಹ ಕಿಂ ಕರಿಷ್ಯತ್ಯಸೌ ಪ್ರಿಯೇ।
ಮೃಗಾಕ್ಷೀಣಾಂ ಸ್ವಭಾವೋಽಯಂ ಪ್ರಾಯಶೋ ಭೀರುವೃತ್ತಯಃ ॥೩೭॥
ಇತರೇದ್ಯುರಪಿ ಪ್ರಾಪ್ತಃ ಸ ಚ ಶ್ಯೇನೋ ಮಹಾಬಲಃ।
ತಯೋರಭಿಮುಖಂ ತತ್ರ ಸ್ಥಿತೋ ಯಾಮದ್ವಯಾಽವಧಿ ॥ ೩೮ ॥
ಪುನರ್ವಿಲೋಕ್ಯ ತದ್ವರ್ತ್ಮ ಶೀಘ್ರಂ ಯಾತೋ ಯಥಾಗತಂ।
ಗತೇಽಥ ಶಕುನೌ ತಸ್ಮಿನ್ಸಾ ಸಾ ಬಭಾಷೇ ವಿಹಂಗಮಂ ॥ ೩೯ ॥
ನಾಥ ಸ್ಥಾನಾಂತರಂ ಯಾವೋ ಮೃತ್ಯುರ್ನೌ ನಿಕಟೇಽಸ್ವಗಾತ್ ।
ಪುನರ್ದೃಷ್ಟೇ ಪ್ರಣಷ್ಟಃ ಸ್ಯಾದಾವಾಸಶ್ಚ ಸುಖಂ ಪ್ರಿಯ ॥ ೪೦ ॥
ಪ್ರಿಯ ಯಸ್ಯಾಽಸ್ತಿ ಪಕ್ಷಸ್ಯ ಗತಿಃ ಸರ್ವತ್ರ ಸಿದ್ಧಿದಾ।
ಸ ಕಿಂ ಸ್ವದೇಶರಾಗೇಣ ನಾಶಂ ಪ್ರಾಪ್ನೋತಿ ಬುದ್ಧಿಮಾನ್ ॥ ೪೧ ॥
ಸೋಪಸರ್ಗಂ ನಿಜಂ ದೇಶಂ ತ್ಯಕ್ತ್ವಾ ಯೋಽನ್ಯಂ ತು ನವ್ರಜೇತ್ ।
ಸ ಪಂಗುರ್ನಾಶಮಾಪ್ನೋತಿ ಕೂಲಸ್ಥಿತ ಇವ ದ್ರುಮಃ ॥ ೪೨ ॥

---

ಈ ಗೂಡನ್ನು ನಾವು ತ್ಯಜಿಸಬೇಕು. ಈ ಕ್ರೂರಪಕ್ಷಿಯು ಇಂದು ಮಹಾ ಸಂತೋಷಗೊಂಡಂತೆ ಅತಿ ಸಮೀಪದಲ್ಲಿಯೇ ಕುಳಿತಿದ್ದಿತು."

೩೭. ಗಂಡುಪಕ್ಷಿಯು ಬಹಳ ಔದಾಸೀನ್ಯದಿಂದ ಮತ್ತೆ ಹೇಳಿತು. "ಇದು ಸ್ತ್ರೀಯರಿಗೆ ಸ್ವಭಾವವಾಗಿಯೇ ಇರುವುದು. ಇದು ಏನುಮಾಡಬಲ್ಲುದು? ಹೆಂಗಸರೆಲ್ಲರೂ ಸ್ವಭಾವದಿಂದ ಭಯಗೊಳ್ಳುವವರೇ ಆಗಿರುವರು."

೩೮. ಮಹಾಬಲಶಾಲಿಯಾದ ಆ ಗಿಡಗನು ಮತ್ತೊಂದು ದಿನವೂ ಪ್ರಾಪ್ತವಾಗಿ ಅವುಗಳೆದುರಿನಲ್ಲಿ ಎರಡು ಯಾಮಗಳವರೆಗೂ ನಿಂತಿದ್ದಿತು.

೩೯. ಪುನಃ ಅವುಗಳು ಬಂದು ಹೋಗುವ ದಾರಿಯನ್ನು ನೋಡಿಕೊಂಡು ಬಂದಂತೆಯೇ ಹೊರಟುಹೋಯಿತು. ಆ ಶಕುನಿಯು ಹೋದಮೇಲೆ ಹೆಣ್ಣು ಕಪೋತವು ಗಂಡನಿಗೆ ಹೇಳಿತು.

೪೦. "ಪ್ರಿಯನೆ! ನಾವು ಬೇರೆ ಸ್ಥಳಕ್ಕೆ ಹೋಗೋಣ. ನಮಗೆ ಮೃತ್ಯುವು ಸಮೀಪಿಸುತ್ತಿರುವುದು. ಮತ್ತೊಮ್ಮೆ ಈ ಗಿಡಗನು ನೋಡಿದರೆ ನಮ್ಮ ಗೂಡೂ ಸೌಖ್ಯವೂ ಒಮ್ಮೆಯೇ ನಾಶವಾಗುವುವು.

೪೧. ನಾಥ! ಯಾವನಿಗೆ ಎಲ್ಲೆಲ್ಲಿಯೂ ಸಿದ್ಧಿಪ್ರದವಾದ ಗತಿಯುಳ್ಳ ಪಕ್ಷವಿರುವುದೊ, ಅಂತಹ ಬುದ್ಧಿಶಾಲಿಯು ಸ್ವದೇಶಾಭಿಮಾನದಿಂದ ನಾಶವನ್ನು ಹೊಂದಬೇಕೆ?

೪೨. ಕಷ್ಟಗಳಿಂದ ಕೂಡಿದ ತನ್ನ ದೇಶವನ್ನು ಬಿಟ್ಟು ಬೇರೆ ದೇಶಕ್ಕೆ ಯಾವನು ಹೋಗಲಿಷ್ಟಪಡುವುದಿಲ್ಲವೊ, ಅವನೇ ಕುಂಟನು. ನದಿಯ ದಡದಲ್ಲಿರುವ ವೃಕ್ಷದಂತೆ ಅವನು ನಾಶವನ್ನು ಹೊಂದುವನು.

ಪ್ರಿಯೋದಿತಂ ನಿಶಮ್ಯೇತಿ ಸ ಭವಿತ್ರೀದಶಾರ್ದ್ದಿತಃ ।
ತಾಂ ವಾಕ್ಯಂ ಪುನರಪ್ಯಾಹ ಪ್ರಿಯೇ ಮಾಭೈಃ ಖಗಾರ್ದಿತಾ ॥ ೪೩ ॥
ಅಪರಸ್ಮಿನ್ನಹನಿ ಚ ಸಶ್ಯೇನಃ ಪ್ರಾತರೇವಹಿ ।
ತದ್ದ್ವಾರದೇಶಮಾಸಾದ್ಯ ಸಾಯಂ ಯಾವತ್ ಸ್ಥಿತೋಽಚಲಃ ॥ ೪೪ ॥
ಅಸ್ತಾಽಚಲಸ್ಯ ಶಿಖರಂ ಯಾತೇ ಭಾನೌ ಗತೇ ಖಗೇ ।
ಕುಲಾಯಾದ್ಬಾಹ್ಯಮಾಗತ್ಯೋವಾಚ ಪಾರಾವತೀ ಪತಿಂ ॥ ೪೫ ॥
ನಾಥ ನಿರ್ಗಮನಸ್ಯಾಽಯಂ ಕಾಲಃ ಕಾಲೋಽಸ್ತಿ ದೂರತಃ ।
ಯಾವತ್ತಾವದ್ವಿನಿರ್ಯಾಹಿ ತ್ಯಕ್ತ್ವಾ ಮಾಮಪಿ ಶಂಸಿನೀಂ ॥ ೪೬ ॥
ತ್ವಯಿ ಜೀವತಿ ದುಷ್ಪ್ರಾಪ್ಯಂ ನ ಕಿಂಚಿಜ್ಜಗತೀತಲೇ ।
ಪುನರ್ದಾರಾಃ ಪುನಃ ಪುತ್ರಾಃ ಪುನರ್ವಸು ಪುನರ್ಗೃಹಂ ॥ ೪೭ ॥
ಯದ್ಯಾತ್ಮಾ ರಕ್ಷಿತಃ ಪುಂಸಾಂ ದಾರೈರಪಿ ಧನೈರಪಿ ।
ತದಾ ಸರ್ವಂ ಹರಿಶ್ಚಂದ್ರಭೂಪತೇರಿವ ಲಭ್ಯತೇ ॥ ೪೮ ॥

---

೪೩. ಪತ್ನಿಯಾಡಿದ ಈ ಮಾತುಗಳನ್ನು ಕೇಳಿಯೂ ಗಂಡು ಪಾರಿವಾಳವು ಭವಿಷ್ಯದಿಂದ ಚೋದಿತವಾಗಿ ಹೆಂಡತಿಗೆಂದಿತು. "ಪ್ರಿಯಳೆ! ಆ ಪಕ್ಷಿಯಿಂದ ಸಂಕಟಗೊಳ್ಳುವೆವೆಂಬ ಭಯವನ್ನು ತ್ಯಜಿಸು."

೪೪. ಮತ್ತೊಂದು ದಿನವೂ ಆ ಶ್ಯೇನವು ಪ್ರಾತಃಕಾಲದಲ್ಲಿಯೇ ಬಂದು ಪಾರಿವಾಳಗಳ ಗೂಡಿನ ಬಾಗಿಲ ಬಳಿಯಲ್ಲಿಯೇ ಸಾಯಂಕಾಲದವರೆಗೂ ನಿಶ್ಚಲವಾಗಿ ಕುಳಿತಿದ್ದಿತು.

೪೫. ಸೂರ್ಯನು ಅಸ್ತಪರ್ವತದ ಶಿಖರವನ್ನು ಸೇರಲು ಅದು ಹೊರಟುಹೋಯಿತು. ಆಗ ಹೆಣ್ಣುಪಕ್ಷಿಯು ಗೂಡಿನಿಂದ ಹೊರಕ್ಕೆ ಬಂದು ಪತಿಗೆ ಹೇಳಿಕೊಂಡಿತು.

೪೬. "ನಾಥನೆ! ನಾವು ಹೊರಟುಹೋಗಲು ಇದೇ ಸುಸಮಯವಾಗಿದೆ. ಕಷ್ಟಕಾಲವು ದೂರವಾಗಿರುವಾಗಲೇ ನಿನಗೆ ಹಿತವನ್ನು ಹೇಳುತ್ತಿರುವ ನನ್ನನ್ನುಳಿದಾದರೂ ನೀನು ಹೊರಟುಹೋಗು.

೪೭. ನೀನು ಜೀವಿಸಿರಲು ನಿನಗೆ ಅಪ್ರಾಪ್ಯವಾದುದು ಭೂಮಂಡಲದಲ್ಲಿಯೇ ಯಾವುದೂ ಇರಲಾರದು. ಹೆಂಡಿರನ್ನಾಗಲಿ, ಪುತ್ರರನ್ನಾಗಲಿ, ಧನವನ್ನಾಗಲಿ, ಮನೆಯನ್ನಾಗಲಿ ಪುನಃ ಪಡೆಯಬಹುದು.

೪೮. ಮನುಷ್ಯರು ಹೆಂಡಿರನ್ನಾದರೂ ಧನವನ್ನಾದರೂ ತ್ಯಜಿಸಿ ಆತ್ಮರಕ್ಷಣೆಯನ್ನು ಮಾತ್ರ ಮಾಡಿಕೊಳ್ಳುವರಾದರೆ ಹರಿಶ್ಚಂದ್ರನಂತೆ ಕಾಲಾನಂತರದಲ್ಲಿಯಾದರೂ ಎಲ್ಲವನ್ನೂ ಪಡೆಯಬಹುದು.

ಅಯಮಾತ್ಮಾ ಪ್ರಿಯೋ ಬಂಧುರಯಮಾತ್ಮಾ ಮಹದ್ಧನಂ ।
ಧರ್ಮಾರ್ಥಕಾಮಮೋಕ್ಷಾಣಾಮಯಮಾತ್ಮಾರ್ಜಕಃ ಪರಃ ॥ ೪೯ ॥
ಯಾವದಾತ್ಮನಿ ವೈ ಕ್ಷೇಮಂ ತಾವತ್ಕ್ಷೇಮಂ ಜಗತ್ತ್ರಯೇ ।
ಸೋಽಪಿ ಕ್ಷೇಮಃ ಸುಗತಿನಾ ಯಶಸಾ ಸಹ ವಾಂಛ್ಯತೇ ॥ ೫೦ ॥
ಯಶೋಹೀನಂ ತು ಯತ್ಕ್ಷೇಮಂ ತತ್ಕ್ಷೇಮಾನ್ನಿಧನಂ ವರಂ ।
ತದ್ಯಶಃ ಪ್ರಾಪ್ಯತೇ ಪುಂಭಿರ್ನೀತಿಮಾರ್ಗಪ್ರವರ್ತಿಭಿಃ ॥ ೫೧ ॥
ಅತೋ ನೀತಿಪಥಂ ಚಿಂತ್ಯಂ ನಾಥ ಸ್ಥಾನಾದಿತೋ ವ್ರಜ ।
ನವ್ರಜಿಷ್ಯಸಿ ಚೇತ್ತ್ವಾತಸ್ತತೋ ಮಾಂ ಸಂಸ್ಮರಿಷ್ಯಸಿ ॥ ೫೨ ॥
ಇತ್ಯುಕ್ತೋಽಪಿ ಸನ್ವೈ ಪತ್ನ್ಯಾ ಪಾರಾವತ್ಯಾ ಸುಮೇಧಯಾ ।
ನ ನಿರ್ಯಯೌ ತತಃ ಸ್ಥಾನಾದ್ಭವಿತ್ರ್ಯಾ ಪ್ರತಿವಾರಿತಃ ॥ ೫೩ ॥
ಅಥೋಷಸಿ ಸಮಾಗತ್ಯ ಶ್ಯೇನೇನ ಬಲಿನಾ ತದಾ ।
ನಿರ್ಗಮದ್ವಾರಮಾರುದ್ಧಂ ಕಿಂಚಿದ್ಭಕ್ಷ್ಯವತಾ ತದಾ ॥ ೫೪ ॥

---

೪೯. ಆತ್ಮನೇ ಸಕಲರಿಗೂ ಅತ್ಯಂತ ಪ್ರಿಯನಾದ ಬಂಧುವು. ಅವನೇ ಮಹೈಶ್ವರ್ಯವು. ಈ ಆತ್ಮನೇ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಂಪಾದಿಸುವವನಾಗಿರುವನು.

೫೦. ತನ್ನ ಕ್ಷೇಮವುಂಟಾದರೆ ಮೂರು ಲೋಕಗಳಲ್ಲಿಯೂ ಕ್ಷೇಮವೆಂದೆಣಿಸುವನು. ಆ ಕ್ಷೇಮವೂ ಸಹ ಸದ್ಗತಿಸತ್ಕೀರ್ತಿಗಳಿಂದ ಕೂಡಿದಂತೆಯೇ ಅಪೇಕ್ಷಿತವಾಗಿರುವುದು.

೫೧. ಯಶಸ್ಸನ್ನು ತರಲಾರದ ಯಾವ ಕ್ಷೇಮವಿರುವುದೊ, ಅದಕ್ಕಿಂತಲೂ ಮರಣವೇ ಲೇಸು. ಅಂತಹ ಯಶಸ್ಸು ನೀತಿಮಾರ್ಗಗಳಲ್ಲಿ ನಡೆಯುವ ಮನುಷ್ಯರಿಗೆ ಮಾತ್ರ ಲಭಿಸುತ್ತದೆ.

೫೨. ನಾಥನೆ! ಆದುದರಿಂದ ಯಾವಾಗಲೂ ನೀತಿಯ ಮಾರ್ಗವನ್ನೇ ಯೋಚಿಸುತ್ತಿರಬೇಕು. ನೀನು ಈ ಸ್ಥಳದಿಂದ ಹೊರಟುಹೋಗು. ಈಗ ಹೊರಡುವುದಿಲ್ಲವಾದರೆ ಆಮೇಲೆ ನಾನು ಹೇಳಿರುವ ಮಾತುಗಳನ್ನು ಜ್ಞಾಪಿಸಿಕೊಳ್ಳುವೆ.''

೫೩. ಇಂತು ಮಹಾಮೇಧಾವಿಯಾದ ಹೆಣ್ಣುಪಾರಿವಾಳವು ಹೇಳುತ್ತಿದ್ದರೂ ಆ ಗಂಡುಹಕ್ಕಿಯು ಮುಂದೆ ನಡೆಯಬೇಕಾಗಿರುವ ಸಂಚಿತಕರ್ಮದಿಂದ ಚೋದಿತವಾಗಿ ಆ ಸ್ಥಾನದಿಂದ ಚಲಿಸಲಿಲ್ಲ.

೫೪. ಮಾರನೆಯ ದಿನದ ಪ್ರಾತಃಕಾಲದಲ್ಲಿಯೇ ಗಿಡಗನು ಸ್ವಲ್ಪ ಆಹಾರವನ್ನು ತೆಗೆದುಕೊಂಡುಬಂದು ಆ ಕಪೋತಗಳು ಹೊರಕ್ಕೆ ಬರುವ ಮಾರ್ಗವನ್ನು ಅಡ್ಡಗಟ್ಟಿ ಕುಳಿತುಕೊಂಡಿತು.

ದಿನಾನಿ ಕತಿಚಿತ್ತತ್ರಾಽತಿಷ್ಠಚ್ಛ್ಯೇನೋ ಮಹಾಬಲಃ ।
ಪಾರಾವತಮುವಾಚೇದಂ ಧಿಕ್ತ್ವಾಂ ಪೌರುಷವರ್ಜಿತಂ ॥ ೫೫ ॥
ಕಿಂ ವಾ ಯುಧ್ಯಸ್ವ ದುರ್ಬುದ್ಧೇ ಕಿಂ ವಾ ನಿರ್ಯಾಹಿ ಮೇ ಗಿರಾ ।
ಕ್ಷುಧಾಕ್ಷೀಣೋ ಮೃತಃ ಪಶ್ಚಾನ್ನಿರಯಂ ಪಶ್ಯಸಿ ಧ್ರುವಂ ।
ವಿಧಿರೇವ ಹಿ ಸಾಹಾಯ್ಯಂ ನ ಕುರ್ಯಾತ್ತವ ನೋದಿತಂ ॥ ೫೬ ॥
ಇತ್ಥಂ ಶ್ಯೇನೇನ ಸ ಪ್ರೋಕ್ತಃ ಪತ್ನ್ಯಾ ಸ ಸಹಿತಃ ಖಗಃ ।
ಅಯುಧ್ಯತ್ತೇನ ಶ್ಯೇನೇನ ಸ್ವದುರ್ಗದ್ವಾರಮಾಶ್ರಿತಃ ॥ ೫೭ ॥
ಕ್ಷುಧಿತಸ್ತೃಷಿತಃ ಸೋಽಥ ಶ್ಯೇನೇನ ಬಲಿನಾ ಧೃತಃ ।
ಚರಣೇನ ದೃಢೇನಾಽಽಶು ಚಂಚ್ವಾ ಸಾಽಪಿ ಧೃತಾ ಖಗೀ ॥ ೫೮ ॥
ತಾವಾದಾಯೋಡ್ಡಯಾಂಚಕ್ರೇ ಶ್ಯೇನೋ ವ್ಯೋಮನಿ ಸತ್ವರಂ ।
ಚಿಂತಯನ್ಭಕ್ಷಣಸ್ಥಾನಮನ್ಯತ್ಪಕ್ಷಿವಿವರ್ಜಿತಂ ॥ ೫೯ ॥
ಅಥ ಪತ್ನ್ಯಾ ಕಲರವಃ ಪ್ರೋಕ್ತಸ್ತತ್ರ ಸುಮೇಧಯಾ ।
ಯತೋಽವಮಾನಿತಾ ನಾಥ ತ್ವಯಾಽಹಂ ಸ್ತ್ರೀತಿ ಬುದ್ಧಿತಃ ॥ ೬೦ ॥

---

೫೫. ಮಹಾ ಬಲಶಾಲಿಯಾದ ಶ್ಯೇನವು ಕೆಲವು ದಿನಗಳವರೆಗೂ ಹಾಗೆ ಕುಳಿತಿದ್ದು ಗಂಡುಪಾರಿವಾಳಕ್ಕೆ ಒಮ್ಮೆ ಹೇಳಿತು : "ಪೌರುಷಹೀನನಾದ ನಿನಗೆ ಧಿಕ್ಕಾರವಿರಲಿ.

೫೬. ದುರ್ಬುದ್ಧಿಯೆ! ಹಸಿವಿನಿಂದ ಒಳಗೇ ಕ್ಷಯಿಸಿ ಸಾಯಲು ಬಳಿಕ ನಿಜವಾಗಿಯೂ ನರಕವನ್ನೇ ಕಾಣುವೆ. ಆದುದರಿಂದ ನನ್ನೊಡನೆ ಯುದ್ಧವನ್ನು ಮಾಡು. ಹೊರಕ್ಕೆ ಬಾ. ಸ್ವಪ್ರಯತ್ನವಿಲ್ಲದೆ ವಿಧಿಯೂ ಸಹ ನಿನಗೆ ಸಹಾಯವನ್ನು ಮಾಡುವುದಿಲ್ಲವಷ್ಟೆ."

೫೭. ಇಂತು ಶ್ಯೇನವು ಮಾತನಾಡಲು ಆ ಕಪೋತವು ಹೆಂಡತಿಯೊಡನೆ ತನ್ನ ದುರ್ಗದ ಬಾಗಿಲ ಬಳಿಗೆ ಬಂದು ಆ ಬಲಶಾಲಿಯೊಡನೆ ಹೋರಾಡ ತೊಡಗಿತು.

೫೮. ಹಸಿವು ನೀರಡಿಕೆಗಳಿಂದ ಬಸವಳಿದಿದ್ದ ಅದನ್ನು ಗಿಡುಗವು ತನ್ನ ಬಲವಾದ ಕಾಲುಗಳಿಂದ ಹಿಡಿದುಕೊಂಡಿತು. ಹೆಣ್ಣುಪಾರಿವಾಳವನ್ನೂ ಕೊಕ್ಕಿನಲ್ಲಿ ಕಚ್ಚಿಕೊಂಡಿತು.

೫೯-೬೦. ಎರಡನ್ನೂ ಹೊತ್ತುಕೊಂಡು ಬಲಶಾಲಿಯಾದ ಆ ಗಿಡಗವು ಇತರ ಪಕ್ಷಿಗಳಿಲ್ಲದಂತಹ ಸ್ಥಾನವನ್ನು ಹುಡುಕುತ್ತ ತಿನ್ನಬೇಕೆಂಬ ಆತುರದಿಂದ ಆಕಾಶದಲ್ಲಿ ಹಾರಿಹೋಯಿತು. ಆಗ ಗಂಡುಪಕ್ಷಿಗೆ ಬುದ್ಧಿಸಂಪನ್ನವಾದ ಹೆಣ್ಣುಪಾರಿವಾಳವು ಪುನಃ ಹೇಳಿತು. "ನಾಥನೆ! ನೀನು ನನ್ನನ್ನು ಸ್ತ್ರೀಯಳೆಂದು ತಿಳಿದು ಅವಮಾನಗೊಳಿಸಿದೆ.

ಅತೋಽವಸ್ಥಾಮಿಮಾಂ ಪ್ರಾಪ್ತಃ ಕಿಂ ಕುರ್ಯಾಮಬಲಾ ಯತಃ ।
ಅಧುನಾಽಪಿ ವಚಶ್ಚೈಕಂ ಕರೋಷಿ ಯದಿ ಮೇ ಪ್ರಿಯ ॥ ೬೧ ॥
ತದಾ ಹಿತಂ ತೇ ವಕ್ಷ್ಯಾಮಿ ಕುರ್ವೇ ತದವಿಚಾರಿತಂ ।
ಮನ್ಮೈಕವಾಕ್ಯಕರಣಾತ್ ಸ್ತ್ರೀಜಿತೋ ನ ಭವಿಷ್ಯಸಿ ॥ ೬೨ ॥
ಯಾವದಾಸ್ಯಂ ಗತಾಽಸ್ಮ್ಯಸ್ಯ ಯಾವತ್ಪಸ್ಥೋ ನ ಭೂಮಿಗಃ ।
ತಾವದಾತ್ಮವಿಮುಕ್ತ್ಯೈ ತ್ವಂ ಚಂಚ್ವಾ ಪಾದಂ ದೃಢಂ ದಶ ॥ ೬೩ ॥
ಇತಿ ಪತ್ನೀವಚಃ ಶ್ರುತ್ವಾ ತಥಾ ಸ ಕೃತವಾನ್ ಖಗಃ ।
ಸ ಪೀಡಿತೋ ದೃಢಂ ಪಾದೇ ಶ್ಯೇನಶ್ಚೀತ್ಕೃತವಾನ್ಸಹು ॥ ೬೪ ॥
ತೇನಚೀತ್ಕರಣೇನಾಽಥ ಮುಕ್ತಾ ಸಾ ಮುಖಸಂಪುಟಾತ್ ।
ಪಾದಾಂಗುಲೀನಾಂ ಶೂನ್ಯತ್ವೇ ಸೋಽಪಿ ಪಾರಾವತೋಽಪತತ್ ॥ ೬೫ ॥
ವಿಪದ್ಯಪಿ ಚ ಪ್ರಾಜ್ಞೈರ್ನ ಸಂತ್ಯಾಜ್ಯಃ ಕ್ವಚಿದುದ್ಯಮಃ ।
ಕ್ವ ಚ ಚಂಚೂಪುಟೆಸ್ತಸ್ಯ ಕ್ವ ಚ ತತ್ಪಾದಪೀಡನಂ ॥ ೬೬ ॥

---

೬೧. ಆದುದರಿಂದಲೇ ನೀನು ಇಂತಹ ದುರವಸ್ಥೆಯನ್ನು ಹೊಂದುವವನಾದೆ. ನಾನು ಅಬಲೆಯಾದುದರಿಂದ ಏನನ್ನುಮಾಡಲಿ? ಪ್ರಿಯನೇ! ಈಗಲಾದರೂ ನನ್ನ ಒಂದು ಮಾತಿನಂತಾದರೂ ನಡೆದುಕೊ.

೬೨. ನಿನಗೆ ಹಿತವಾದುದನ್ನೇ ಹೇಳುವೆನು. ಅಂತೆಯೇ ನಾನೂ ನಿಸ್ಸಂದೇಹವಾಗಿ ನಡೆದುಕೊಳ್ಳುವೆನು. ನನ್ನ ಒಂದು ಮಾತಿನಂತೆ ನಡೆದುಕೊಳ್ಳುವುದರಿಂದ ನೀನು ಸ್ತ್ರೀಜಿತನಾಗಿ ಹೋಗುವುದಿಲ್ಲ.

೬೩. ನಾನು ಈ ಗಿಡಗನ ಮುಖದಲ್ಲಿ ಸಿಕ್ಕಿರುವಾಗಲೇ, ಇದು ಭೂಮಿಯಲ್ಲಿ ಕುಳಿತುಕೊಳ್ಳುವುದಕ್ಕೆ ಮೊದಲೇ ನೀನು ನಿನ್ನ ಬಿಡುಗಡೆಗೆ ಪ್ರಯತ್ನವನ್ನು ಮಾಡಿ ನಿನ್ನ ಕೊಕ್ಕಿನಿಂದ ಇದರ ಕಾಲನ್ನು ಬಲವಾಗಿ ಕಡಿದುಹಾಕು.''

೬೪. ಇಂತೆಂದ ಹೆಂಡತಿಯ ಮಾತನ್ನು ಕೇಳಿ ಆ ಗಂಡುಹಕ್ಕಿಯು ಹಾಗೆಯೇ ಮಾಡಿತು. ಗಿಡಗವೂ ಕಾಲುಗಳಲ್ಲಿ ಬಹಳವಾಗಿ ನೋವನ್ನನುಭವಿಸುತ್ತ ಗಟ್ಟಿಯಾಗಿ ಚೀತ್ಕಾರವನ್ನು ಮಾಡಿತು.

೬೫. ಆ ಚೀತ್ಕಾರವನ್ನು ಮಾಡುವಾಗ ಬಾಯಿಯಿಂದ ಹೆಣ್ಣುಪಕ್ಷಿಯು ಕಳಚಿಕೊಂಡಿತು. ಕಾಲಿನ ಬೆರಳುಗಳು ನಿಶ್ಚೇಷ್ಟಗಳಾಗಲು ಗಂಡೂ ಸಹ ಕೆಳಕ್ಕೆ ಬಿದ್ದಿತು.

೬೬. ಮಹಾ ವಿಪತ್ಕಾಲದಲ್ಲಿಯೂ ಬುದ್ಧಿವಂತರು ಪುರುಷಪ್ರಯತ್ನವನ್ನು ಕೈಬಿಡಬಾರದು. ಮಹಾ ಬಲಶಾಲಿಯಾದ ಗಿಡಗನ ಕೊಕ್ಕಿನ ಹಿಡಿತವೆಲ್ಲಿ? ಪಾದಗಳ ಪೀಡನವೆಲ್ಲಿ?

ಕ್ಷೌ ಚ ದ್ವಯೋಸ್ತಥಾ ಭೂತಂ ದೂರೇ ಮೋಕ್ಷಣಮುದ್ಭುತಂ ।
ದುರ್ಬಲೇಽಪ್ಯುದ್ಯಮಃ ಶ್ರೇಯಾನಿತಿ ಶಾಸ್ತ್ರೇಷು ಗೀಯತೇ ॥ ೬೭ ॥
ತಸ್ಮಾದ್ಭಾಗ್ಯಾಽನುಸಾರೇಣ ಫಲತ್ಯೇವ ಸದೋದ್ಯಮಃ ।
ಪ್ರಶಂಸಂತ್ಯುದ್ಯಮಂ ಚಾಽತೋ ವಿಪದ್ಯಪಿ ಮನೀಷಿಣಃ ॥ ೬೮ ॥
ಅಥ ತೌ ಕಾಲಯೋಗೇನ ಜಂಬೂಮಾರ್ಗೇ ಮೃತೌ ತದಾ ।
ಜಂಬೂಮಾರ್ಗೇ ಮೃತಾ ಯೇ ವೈ ತೇಷಾಂ ಸ್ವರ್ಗಃ ಸದಾಽಕ್ಷಯಃ॥೬೯॥
ಪುಣ್ಯಶೇಷೇ ತದಾ ಜಾತೋ ಗಂಧರ್ವತನಯಃ ಶುಭಃ ।
ಮಂದಾರದಾಮತನಯೋ ನಾಮ್ನಾ ಪರಿಮಲಾಲಯಃ ॥ ೭೦ ॥
ಅನೇಕವಿದ್ಯಾನಿಲಯಃ ಕಲಾಕೌಶಲಭಾಜನಂ ।
ಕೌಮಾರಂ ವಪುರಾಸಾದ್ಯ ಶಿವಭಕ್ತಿಪರೋಽಭವತ್ ॥ ೭೧ ॥
ನಿಯಮಂ ಚಾಽಪಿ ಜಗ್ರಾಹ ವಿಜಿತೇಂದ್ರಿಯಮಾನಸಃ ।
ಏಕಪತ್ನೀವ್ರತಂ ನಿತ್ಯಂ ಚರಿಷ್ಯಾಮೀತಿ ನಿಶ್ಚಿತಂ ॥ ೭೨ ॥

---

೬೭. ಆ ಎರಡು ಪಕ್ಷಿಗಳಿಗೂ ಈ ವಿಧವಾದ ಅದ್ಭುತವೆನಿಸಿದ ಮೋಕ್ಷವು ಎಷ್ಟು ದೂರದ ವಿಷಯವು? ದುರ್ಬಲನಾದವನಲ್ಲಿಯೂ ಉದ್ಯಮವೇ ಶ್ರೇಯಸ್ಕರವೆಂದು ಶಾಸ್ತ್ರಗಳು ಹೇಳುತ್ತಿರುವುವು.

೬೮. ಆದುದರಿಂದ ಕರ್ತೃವಿನ ಭಾಗ್ಯಕ್ಕನುಸಾರವಾಗಿ ಯಾವಾಗಲೂ ಪುರುಷಪ್ರಯತ್ನವು ಫಲವನ್ನು ಖಂಡಿತವಾಗಿಯೂ ಕೊಡುವುದು. ವಿದ್ವಾಂಸರೂ ಆ ಕಾರಣದಿಂದಲೇ ವಿಪತ್ಕಾಲದಲ್ಲಿಯೂ ಪುರುಷಕಾರವನ್ನೇ ಪ್ರಶಂಸೆಮಾಡುತ್ತಿರುವರು.

೬೯. ಬಳಿಕ ಕಾಲಕರ್ಮಧರ್ಮದಿಂದ ಆ ಎರಡು ಪಾರಿವಾಳಗಳೂ ಜಂಬೂಮಾರ್ಗದಲ್ಲಿ ಸತ್ತುಹೋದುವು. ಯಾರು ಜಂಬೂಮಾರ್ಗದಲ್ಲಿ ಸಾಯುವರೊ, ಅವರೆಲ್ಲರಿಗೂ ಶಾಶ್ವತವಾದ ಸ್ವರ್ಗವು ಲಭಿಸುವುದಷ್ಟೆ.

೭೦. ಆ ಗಂಡುಪಾರಿವಾಳವು ತನ್ನ ಪುಣ್ಯಶೇಷದ ಫಲವಾಗಿ ಪರಿಶುದ್ಧನಾದ ಮಂದಾರದಾಮನೆಂಬ ಗಂಧರ್ವನಿಗೆ ಮಗನಾಗಿ ಪರಿಮಳಾಲಯನೆಂಬ ಹೆಸರಿನಿಂದ ಪ್ರಖ್ಯಾತನಾದನು.

೭೧. ಅನೇಕ ವಿದ್ಯೆಗಳಿಗೆ ಅವನು ನಿಲಯನಾಗಿದ್ದನು. ಕಲಾಕೌಶಲ್ಯಗಳಿಗೆ ಭಾಜನನು. ನವಯೌವನದ ಶರೀರವನ್ನು ತಾಳಿದ್ದ ಆತನು ಶಿವಭಕ್ತಿಯಲ್ಲಿಯೇ ನಿರತನಾದನು.

೭೨. ಮತ್ತು ನಿಯಮವನ್ನೂ ಸ್ವೀಕರಿಸಿದನು. ಇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಿದ್ದನು. ಯಾವಜ್ಜೀವವೂ ಏಕಪತ್ನೀವ್ರತವನ್ನೇ ಪಾಲಿಸುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದನು.

ಪರಯೋಷಿತ್ಸಮಾಸಕ್ತಿರಾಯುಃ ಕೀರ್ತಿಂ ಬಲಂ ಸುಖಂ ।
ಹರೇತ್ಸ್ವರ್ಗಗತಿಂ ಚಾಽಪಿ ತಸ್ಮಾತ್ತಾಂ ವರ್ಜಯೇತ್ಸುಧೀಃ ॥ ೭೩ ॥
ಅಪರಂ ಚಾಽಪಿ ನಿಯಮಂ ಸ ಶುಚಿಷ್ಮಾನ್ ಸಮಾದದೇ ।
ಗತಜನ್ಮಾಂತರಾಭ್ಯಾಸಾತ್ತ್ರಿಲೋಚನಸಮಾಶ್ರಯಾತ್ ॥ ೭೪ ॥
ಸಮಸ್ತಪುಣ್ಯನಿಲಯಃ ಸಮಸ್ತಾರ್ಥಪ್ರಕಾಶಕಃ ।
ಸಮಸ್ತಕಾಮಜನಕಂ ಪರಾನಂದೈಕಕಾರಣಂ ॥ ೭೫ ॥
ಯಾವಚ್ಛರೀರಂ ನಿರುಜಂ ಯಾವನ್ನೇಂದ್ರಿಯವಿಪ್ಲವಃ ।
ತಾವತ್ತ್ರಿಲೋಚನೋಽವಂತ್ಯಾಂ ಮಂತವ್ಯೋ ನಾಽತ್ರ ಸಂಶಯಃ ॥ ೭೬ ॥
ಇತ್ಥಂ ಮಂದಾರದಾಮಿಃ ಸ ಕಾಶ್ಯಾಂ ಪರಿಮಲಾಲಯಃ ।
ನಿತ್ಯಂ ತ್ರಿವಿಷ್ಟಪಂ ದ್ರಷ್ಟುಂ ಸಮಾಗಚ್ಛೇತ್ಪ್ರಯತ್ನತಃ ॥ ೭೭ ॥
ಪಾರಾವತ್ಯಪಿ ಸಂಜಾತಾ ರತ್ನದೀಪಸ್ಯ ಮಂದಿರೇ ।
ನಾಗರಾಜಸ್ಯ ಪಾತಾಲೇ ನಾಮ್ನಾ ರತ್ನಾವಲೀತಿ ಚ ॥ ೭೮ ॥

---

೭೩. ಪರಸ್ತ್ರೀಯರಲ್ಲಿ ಆಸಕ್ತಿಯೆಂಬುದು ಆಯುಷ್ಯವನ್ನೂ, ಕೀರ್ತಿಯನ್ನೂ, ಬಲವನ್ನೂ, ಸೌಖ್ಯವನ್ನೂ, ಪರದಲ್ಲಿ ಸ್ವರ್ಗಪ್ರಾಪ್ತಿಯನ್ನೂ ನಾಶಗೊಳಿಸುವುದು. ಆದುದರಿಂದ ಬುದ್ಧಿಶಾಲಿಯಾದವನು ಅದನ್ನು ತ್ಯಜಿಸಬೇಕು.

೭೪. ಮಹಾಪರಿಶುದ್ಧನಾದ ಆತನು ಮತ್ತೊಂದು ವ್ರತವನ್ನು ಕೈಗೊಂಡನು. ಹಿಂದಿನ ಜನ್ಮದ ಅಭ್ಯಾಸದ ಬಲದಿಂದ ಅವನು ತ್ರಿಲೋಚನೇಶ್ವರನನ್ನೇ ಆಶ್ರಯಿಸಿ ಸೇವಿಸುತ್ತಿದ್ದನು.

೭೫. "ಆತನೇ ಸಕಲಪುಣ್ಯಗಳಿಗೆ ನಿವಾಸಭೂತನು. ಸಕಲಶಾಸ್ತ್ರಾರ್ಥಗಳಿಗೆ ಪ್ರಕಾಶಕನು. ಆ ಮಹಾಲಿಂಗವೇ ಸಕಲಾಭೀಷ್ಟಗಳನ್ನೂ ಕೊಡುವುದು; ಅನಿರ್ವಚನೀಯಾನಂದಕ್ಕೆ ಕಾರಣವಾಗಿರುವುದು.

೭೬. ಈ ಶರೀರವು ರೋಗರಹಿತವಾಗಿರುವ ವರೆಗೂ, ಇಂದ್ರಿಯಗಳ ಪಾಟವವು ಕುಗ್ಗದಿರುವವರೆಗೂ, ಅವಂತೀಕ್ಷೇತ್ರದಲ್ಲಿರುವ ತ್ರಿಲೋಚನೇಶ್ವರನನ್ನು ಸೇವಿಸುತ್ತಿರುವೆನು. ಇದರಲ್ಲಿ ಸಂದೇಹವಿಲ್ಲ."

೭೭. ಇಂತು ಮಂದಾರದಾಮನ ಮಗನಾದ ಪರಿಮಳಾಲಯನು ನಿಯಮವನ್ನು ತೊಟ್ಟು, ಕಾಶಿಯಲ್ಲಿ ವಾಸಿಸುತ್ತಿದ್ದರೂ ಪ್ರಯತ್ನಪೂರ್ವಕವಾಗಿ ತ್ರಿಲೋಚನೇಶ್ವರನನ್ನು ನೋಡಲು ನಿತ್ಯವೂ ಮಹಾಕಾಲವನಕ್ಕೆ ಬರುತ್ತಿದ್ದನು.

೭೮. ಆ ಹೆಣ್ಣುಪಾರಿವಾಳವೂ ಪಾತಾಳಲೋಕದಲ್ಲಿ ಸರ್ಪರಾಜನಾದ ರತ್ನದೀಪನೆಂಬವನ ಮನೆಯಲ್ಲಿ ಜನ್ಮವನ್ನು ತಾಳಿ ರತ್ನಾವಳಿಯೆಂಬ ಹೆಸರಿನಿಂದ ಬೆಳೆಯುತ್ತಿದ್ದಳು.

ಸಮಸ್ತನಾಗಕನ್ಯಾನಾಂ ರೂಪಶೀಲಕಲಾಗುಣೈಃ ।
ಏಕೈವ ರತ್ನಭೂತಾಽಽಸೀದ್ರತ್ನದೀಪೋರಗಾತ್ಮಜಾ ॥ ೭೯ ॥
ತಸ್ಯಾಃ ಸಖೀದ್ವಯಂ ಚಾಸೀದೇಕಾ ನಾಮ್ನಾ ಪ್ರಭಾವತೀ ।
ಕಲಾವತೀ ತಥಾಽನ್ಯಾಚ ನಿತ್ಯಂ ತದನುಗೇ ಶುಭೇ ॥ ೮೦ ॥
ಸ್ವದೇಹಾದನಪಾಯಿನ್ಯೌ ಛಾಯಾಕಾಂತೀ ಯಥಾ ತಥಾ ।
ಪೂರ್ವೇ ಸಖ್ಯೌ ಭವೇತಾಂ ಹಿ ರತ್ನಾವಲ್ಯಾ ಮಹೇಶ್ವರಿ ॥ ೮೧ ॥
ಸಾ ತು ಬಾಲ್ಯೇ ವ್ಯತಿಕ್ರಾಂತೇ ಕಿಂಚಿದುದ್ಭಿನ್ನಯೌವನಾ ।
ಶಿವಭಕ್ತಂ ಸ್ವಪಿತರಂ ದೃಷ್ಟ್ವಾ ನಿಯಮಮಗ್ರಹೀತ್ ॥ ೮೨ ॥
ಪಿತಸ್ತ್ರಿಲೋಚನಂ ಕಾಶ್ಯಾಮರ್ಚಯಿತ್ವಾ ದಿನೇ ದಿನೇ ।
ಆಭ್ಯಾಂ ಸಖೀಭ್ಯಾಂ ಸಹಿತಾ ಮೌನಂ ತ್ಯಕ್ಷ್ಯಾಮಿ ನಾಽನ್ಯಥಾ ॥ ೮೩ ॥
ಏವಂ ನಾಗಕುಮಾರೀ ಸಾ ಸಖೀದ್ವಯಸಮನ್ವಿತಾ ।
ತ್ರಿಲೋಚನಂ ಸಮಭ್ಯರ್ಚ್ಯ ಗೃಹಾನಹರಹರ್ವ್ರಜತ್ ॥ ೮೪ ॥

---

೭೯. ರತ್ನದೀಪಮಹಾರಾಜನ ಕನ್ಯೆಯಾದ ಆಕೆಯು ಸೌಂದರ್ಯ, ಸದ್ಗುಣ, ಕಲಾಪೂರ್ಣತೆ ಮುಂತಾದ ಗುಣಗ್ರಾಮದಿಂದ ಸಕಲ ನಾಗಕನ್ಯಕೆಯರಲ್ಲಿಯೂ ರತ್ನಪ್ರಾಯಳಾಗಿದ್ದಳು.

೮೦. ಆಕೆಗೆ ಇಬ್ಬರು ಸಖಿಯರಿದ್ದರು. ಒಬ್ಬಳ ಹೆಸರು ಪ್ರಭಾವತಿ. ಮತ್ತೊಬ್ಬಳು ಕಲಾವತಿ. ಸೌಭಾಗ್ಯಶಾಲಿಗಳಾದ ಇಬ್ಬರೂ ನಿತ್ಯವೂ ರತ್ನಾವಳಿಯನ್ನು ಎಡಬಿಡದೆ ಸೇವಿಸುತ್ತಿದ್ದರು.

೮೧. ಶರೀರದ ನೆರಳು ಕಾಂತಿಗಳಂತೆ ಅವರಿಬ್ಬರೂ ಆವಳಿಗೆ ಅನಪಾಯಿನಿಯರಾಗಿದ್ದರು. ಮಹೇಶ್ವರಿಯೆ! ಇವರೇ ಹಿಂದಿನ ಜನ್ಮದಲ್ಲಿಯೂ ಆಕೆಗೆ ಸಖಿಯರಾಗಿದ್ದರು.

೮೨. ಆಕೆಯೂ ಬಾಲ್ಯವು ಕಳೆದು ಯೌವನವು ತಲೆದೋರುತ್ತಿರಲು ತನ್ನ ತಂದೆಯು ಶಿವನಲ್ಲಿ ಭಕ್ತಿಯನ್ನು ಮಾಡುತ್ತಿದ್ದುದನ್ನು ಕಂಡು ತಾನು ನಿಯಮವನ್ನು ಸ್ವೀಕರಿಸಿದಳು.

೮೩. "ತಂದೆಯೆ! ಕಾಶಿಯಲ್ಲಿರುವ ತ್ರಿಲೋಚನೇಶ್ವರನನ್ನು ಈ ನನ್ನ ಸಖಿಯರೊಡನೆ ಪ್ರತಿನಿತ್ಯವೂ ಪೂಜೆಯನ್ನು ಮಾಡುವವರೆಗೂ ಮೌನದಿಂದಿದ್ದು ಬಳಿಕ ಮಾತನಾಡುವೆನು. ಇದಕ್ಕೆ ತಪ್ಪುವುದಿಲ್ಲ."

೮೪. ಇಂತು ಆ ನಾಗಕನ್ಯೆಯು ಇಬ್ಬರು ಸಖಿಯರೊಡಗೂಡಿ ಪ್ರತಿನಿತ್ಯದಲ್ಲಿಯೂ ಕಾಶಿಗೆ ಹೋಗಿ ತ್ರಿಲೋಚನೇಶ್ವರನ ಪೂಜೆಯನ್ನು ಮಾಡಿಕೊಂಡು ಮನೆಗೆ ಹಿಂದಿರುಗುತ್ತಿದ್ದಳು.

ಮಾಂ ಪ್ರತ್ಯಗ್ರೈಃ ಸುಕುಸುಮೈಃ ಸುಶುಭ್ರೈರಿಷ್ಟಗಂಧಿಭಿಃ ।
ಸುವಿಚಿತ್ರಾಣಿ ಮಾಲ್ಯಾನಿ ಪರಿಗುಂಫ್ಯಾಽರ್ಚಯೇದ್ವಿಭುಂ ॥ ೮೫ ॥
ತಿಸ್ರೋಽಪಿ ಗೀತಂ ಗಾಯಂತಿ ಲಲಿತಂ ಚೈವ ಸುಸ್ವರಂ ।
ನಾರೀಮಂಡಲಭೇದೇನ ಲಾಸ್ಯಂ ತಿಸ್ರೋಽಪಿ ಕುರ್ವತೇ ॥ ೮೬ ॥
ವೀಣಾವೇಣುಮೃದಂಗಾಂಶ್ಚ ಲಯತಾಲವಿಚಕ್ಷಣಾಃ ।
ವಾದಯಂತಿ ಮುದಾಯುಕ್ತಾಸ್ತಿಸ್ರೋಽಪಿ ವಿರಮಂತಿ ವೈ ॥ ೮೭ ॥
ಇತ್ಥಮಾರಾಧಯಂತೀಶಂ ತಿಸ್ರೋ ನಾಗಕುಮಾರಿಕಾಃ ।
ವಿಚಿತ್ರಭಂಗೀಮಾಲಾಭಿರರ್ಚಯಂತ್ಯಸ್ತ್ರಿಲೋಚನಂ ॥ ೮೮ ॥
ಪ್ರಾತಶ್ಚತುರ್ಥ್ಯಾಂ ತಾಃ ಸ್ನಾತ್ವಾ ತೀರ್ಥೇ ಪಿಲಿಪಿಲೇ ಶುಭೇ ।
ತ್ರಿಲೋಚನಂ ಸಮಭ್ಯರ್ಚ್ಯಾಽಥ ಪ್ರಸುಪ್ತಾ ರಂಗಮಂಟಪೇ ॥ ೮೯ ॥
ಸುಪ್ತಾಸು ತಾಸು ಸ ಶಿವಸ್ತ್ರಿನೇತ್ರಃ ಶಶಿಭೂಷಣಃ ।
ವಾಸಾರ್ಧವಿಲಸಚ್ಛಕ್ತಿರ್ನಾಗಯಜ್ಞೋಪವೀತಕಃ ॥ ೯೦ ॥

---

೮೫. ಸರ್ವೇಶ್ವರನಾದ ನನ್ನನ್ನು ನೂತನಗಳೂ, ಪವಿತ್ರಗಳೂ, ಸುವಾಸನೆಯುಳ್ಳವುಗಳೂ ಆದ ಪುಷ್ಪಗಳ ಚಿತ್ರವಿಚಿತ್ರಗಳಾದ ಮಾಲೆಗಳಿಂದ ಅಲಂಕರಿಸುತ್ತಿದ್ದರು.

೮೬. ಆ ಮೂವರೂ ಮನೋಹರವಾಗಿ ಇಂಪಾದ ಧ್ವನಿಯಿಂದ ಸಂಗೀತಗಳನ್ನು ಹಾಡುತ್ತಿದ್ದರು. ಹೆಂಗಸರಿಗೆ ಉಚಿತಗಳಾದ ಭಾವಭೇದಗಳನ್ನು ತೋರಿಸುತ್ತ ಮೂವರೂ ನಾಟ್ಯಗಳನ್ನು ಪ್ರದರ್ಶಿಸುತ್ತಿದ್ದರು.

೮೭. ಲಯ ತಾಳಗಳಲ್ಲಿ ಪಾಂಡಿತ್ಯವನ್ನು ಪಡೆದಿದ್ದ ಅವರು ವೀಣೆ, ಕೊಳಲು, ಮೃದಂಗ ಮುಂತಾದ ವಾದ್ಯಗಳನ್ನು ಆನಂದದಿಂದ ಬಾಜಿಸುತ್ತ ಮೂವರೂ ವಿಶ್ರಮಿಸಿಕೊಳ್ಳುತ್ತಿದ್ದರು.

೮೮. ಇಂತು ಆ ಮೂವರು ನಾಗಕುಮಾರಿಕೆಯರೂ ಮಹೇಶ್ವರನನ್ನು ಪೂಜಿಸುತ್ತಿದ್ದರು; ವಿಚಿತ್ರಗಳಾದ ಹಾವಾಭಾವಗಳ ಪರಂಪರೆಗಳಿಂದ ತ್ರಿಲೋಚನನನ್ನರ್ಚಿಸುತ್ತಿದ್ದರು.

೮೯. ಒಂದಾನೊಂದು ಚತುರ್ಥೀದಿನದಲ್ಲಿ ಪಾವನವಾದ ಪಿಲಿಪಿಲಾ ತೀರ್ಥದಲ್ಲಿ ಪ್ರಾತಸ್ನಾನವನ್ನು ತೀರಿಸಿಕೊಂಡು ತ್ರಿಲೋಚನೇಶ್ವರನ ಪೂಜೆಯನ್ನು ನೆರವೇರಿಸಿ ಅವರು ಮೂವರೂ ರಂಗಮಂಟಪದಲ್ಲಿ ನಿದ್ರಿಸುತ್ತಿದ್ದರು.

೯೦. ಅವರು ಮಲಗಿರುವಾಗಲೇ ಶಿವನು ತ್ರಿನೇತ್ರನೂ, ಚಂದ್ರಶೇಖರನೂ, ಎಡಗಡೆಯ ಅರ್ಧದೇಹದಲ್ಲಿ ಶಕ್ತಿಯನ್ನು ಪ್ರಕಾಶಗೊಳಿಸುತ್ತಿರುವವನೂ, ಸರ್ಪಯಜ್ಞೋಪವೀತವನ್ನು ಧರಿಸಿದವನೂ ಆಗಿ ಕಾಣಿಸಿಕೊಂಡನು.

ಲಿಂಗಾದೇವ ಹಿ ನಿರ್ಗತ್ಯ ಗಂಗಾಪನ್ನಗಮೇಖಲಃ ।
ಪ್ರತ್ಯುವಾಚ ತತಃ ಕನ್ಯಾ ವಿಭುರುತ್ತಿಷ್ಠತೇತಿ ಸಃ ॥ ೯೧ ॥
ಉತ್ಥಾಯ ತಾ ವಿನಿರ್ಮುಥ್ಯ ಲೋಚನೇ ಶ್ರುತಿಸಂಗಮೇ ।
ಅಂಗಮೋಟನವತ್ಯಶ್ಚ ತದಾ ನಿಘೂರ್ಣಿತೇಕ್ಷಣಾಃ ॥ ೯೨ ॥
ಯಾವತ್ಪಶ್ಯಂತಿ ಪುರತಃ ಸಂಭ್ರಮಾಪನ್ನಮಾನಸಾಃ ।
ಅತರ್ಕಿತಾಗಮಸ್ತಾವತ್ತಾಭಿರ್ದೃಷ್ಟಸ್ತ್ರಿಲೋಚನಃ ॥ ೯೩ ॥
ವವಂದಿರೇಽಥ ತಾ ಬಾಲಾ ಜ್ಞಾತ್ವಾಲಕ್ಷ್ಮಭಿರೀಶ್ವರಂ ।
ತುಷ್ಟುವುಶ್ಚ ಪ್ರಹೃಷ್ಟಾಸ್ತಾಃ ಸಸ್ನಕಂಠ್ಯೋಽತಿವಿಕ್ಲವಂ ॥ ೯೪ ॥
ಜಯ ಶಂಭೋ ಜಯೇಶಾನ ಜಯ ಸರ್ವಗ ಸರ್ವದ ।
ಜಯ ತ್ರಿಪುರಸಂಹರ್ತರ್ಜಯಾಂಧಕನಿಷೂದನ ॥ ೯೫ ॥
ಜಯ ಜಾಲಂಧರಹರ ಜಯ ಕಂದರ್ಪದರ್ಪಹೃತ್ ।
ಜಯ ತ್ರೈಲೋಕ್ಯಜನಕ ಜಯ ತ್ರೈಲೋಕ್ಯವಂದಿತ ।
ಜಯ ಭಕ್ತಜನಾಽಧೀಶ ಜಯ ಪ್ರಮಥನಾಯಕ ॥ ೯೬ ॥

---

೯೧. ಗಂಗೆ ಮತ್ತು ಸರ್ಪಗಳನ್ನು ಜಟಾಕಲಾಪದಲ್ಲಿ ಧರಿಸಿ ಆ ಮಹಾಲಿಂಗದ ಮಧ್ಯದಿಂದಲೇ ಮೇಲಕ್ಕೆದ್ದು ಆ ಕನ್ಯಕೆಯರನ್ನು ಕುರಿತು "ಮೇಲಕ್ಕೇಳಿ" ಎಂದು ಹೇಳಿದನು.

೯೨. ಅವರೂ ಎದ್ದು ಆಕರ್ಣಾಂತಗಳಾದ ತಮ್ಮ ನೇತ್ರಗಳನ್ನುಜ್ಜಿಕೊಂಡು ಮೈಮುರಿದು ನಿದ್ರಾಭರದಿಂದ ಘೂರ್ಣಿತಗಳಾದ ನೇತ್ರಗಳುಳ್ಳವರಾಗಿ ಕುಳಿತುಕೊಂಡರು.

೯೩. ಸಂಭ್ರಮದಿಂದ ತುಂಬಿದ ಮನಸ್ಸುಳ್ಳವರಾಗಿ ಮುಂದೆ ನೋಡುತ್ತಿರುವಂತೆಯೇ ನಿಷ್ಕಾರಣವಾಗಿ ಇದ್ದಕ್ಕಿದ್ದಂತೆಯೇ ಪ್ರತ್ಯಕ್ಷನಾಗಿದ್ದ ತ್ರಿಲೋಚನೇಶ್ವರನನ್ನು ಅವರು ನೋಡಿದರು.

೯೪. ಆ ಬಾಲಕಿಯರು ಚಿಹ್ನೆಗಳಿಂದ ಆತನೇ ಮಹಾದೇವನೆಂಬುದನ್ನು ತಿಳಿದು ನಮಸ್ಕಾರಗಳನ್ನು ಮಾಡಿದರು. ಆನಂದದಿಂದ ಗಂಟಲು ಬಿಗಿದುಬರಲು ಅತಿ ಗದ್ಗದಿತವಾದ ಧ್ವನಿಯಿಂದಲೇ ಆತನನ್ನು ಸ್ತೋತ್ರಮಾಡಿದರು.

೯೫. "ಶಂಭುವೆ! ಸರ್ವೇಶ್ವರನೆ! ಸರ್ವಾಂತರ್ಯಾಮಿಯೆ! ಸರ್ವಾಭೀಷ್ಟಫಲದಾಯಕನೆ! ತ್ರಿಪುರಾಸುರರನ್ನು ನಿಗ್ರಹಿಸಿದವನೆ! ಅಂಧಕಾಸುರಸಂಹಾರಕನೆ! ನಿನಗೆ ಜಯವಾಗಲಿ.

೯೬. ಜಾಲಂಧರನನ್ನು ಕೊಂದವನೂ, ಮನ್ಮಥನ ಮದವನ್ನಡಗಿಸಿದವನೂ, ಮೂರು ಲೋಕಗಳಿಗೆ ಕಾರಣನಾದವನೂ, ಮೂರು ಲೋಕಗಳ ನಿವಾಸಿಗಳಿಂದ ನಮಸ್ಕೃತನೂ, ಭಕ್ತಜನರಿಗೆ ಅಧಿನಾಯಕನೂ, ಪ್ರಮಥಗಣಗಳಿಗೊಡೆಯನೂ ಆದ ನಿನಗೆ ಜಯವಾಗಲಿ.

ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋನಮಃ ।
ತ್ರಿಲೋಚನ ನಮಸ್ತುಭ್ಯಂ ತ್ರಿವಿಷ್ಟಪ ನಮೋಽಸ್ತುತೇ ॥ ೯೭ ॥
ಇತ್ಯುಕ್ತ್ವಾ ದಂಡವದ್ಭೂಮೌ ಪ್ರಣಿಪೇತುಃ ಕುಮಾರಿಕಾಃ ।
ಅಥೋತ್ಥಾಪ್ಯ ಕುಮಾರೀಸ್ತಾಃ ಪ್ರೋವಾಚ ಶಶಿಭೂಷಣಃ ॥ ೯೮ ॥
ಸುತೋ ಮಂದಾರದಾಮ್ನಶ್ಚ ನಾಮ್ನಾ ಪರಿಮಲಾಲಯಃ ।
ಪತಿರ್ವಿದ್ಯಾಧರವರೋ ಭವತೀನಾಂ ಭವಿಷ್ಯತಿ ॥ ೯೯ ॥
ಚಿರಂ ವಿದ್ಯಾಧರೇ ಲೋಕೇ ಭೋಗಾನ್ ಭುಕ್ತ್ವಾ ಸಮಂತತಃ ।
ತತೋ ಹ್ಯವಂತಿಕಾಂ ಪ್ರಾಪ್ಯ ಮಾಂ ಧ್ಯಾತ್ವಾ ಸಿದ್ಧಿಮಾಪ್ಸ್ಯಥ ॥ ೧೦೦ ॥
ಜನ್ಮಾಂತರೇಽಪಿ ಮೇ ಭಕ್ತಿರ್ಭವತೀಭಿಶ್ಚ ತೇನ ಚ ।
ವಿಹಿತಾ ತೇನ ವೋ ಜನ್ಮ ನಿರ್ಮಲಂ ಭಕ್ತಿಭಾವಿತಂ ॥ ೧೦೧ ॥
ಏತತ್ಪ್ರಭಾವತೀ ಸ್ತೋತ್ರಂ ಯೇ ಪಠಿಷ್ಯಂತಿ ಮೇ ಪುರಃ ।
ತೇಭ್ಯಃ ಕಾಮಾನ್ಪ್ರದಾಸ್ಯಾಮಿ ಭವತೀನಾಮಯಂ ವರಃ ॥ ೧೦೨ ॥

---

೯೭. ನಿನಗೆ ಅನಂತ ನಮಸ್ಕಾರಗಳನ್ನು ಮಾಡುತ್ತಿರುವೆವು. ಓ ತ್ರಿಲೋಚನೇಶ್ವರ! ನಿನಗೆ ಮಣಿಯುವೆವು. ತ್ರಿವಿಷ್ಟಪನೆ! ನಿನಗೆ ಪ್ರಣಾಮಗಳನ್ನು ಮಾಡುತ್ತಿರುವೆವು.''

೯೮. ಇಂತೆಂದು ಆ ಕನ್ಯಕೆಯರೆಲ್ಲರೂ ಭೂಮಿಯಲ್ಲಿ ಪ್ರಣಾಮಗಳನ್ನು ಮಾಡುತ್ತಿರಲು ಚಂದ್ರಶೇಖರನು ಆ ಕುಮಾರಿಯರನ್ನು ಮೇಲಕೆತ್ತಿ ಹೇಳತೊಡಗಿದನು.

೯೯. "ಮಂದಾರದಾಮನೆಂಬುವನ ಪುತ್ರನೂ, ಪರಿಮಳಾಲಯನೆಂಬ ಹೆಸರುಳ್ಳವನೂ ಆದ ಉತ್ತಮ ವಿದ್ಯಾಧರನೊರ್ವನು ನಿಮ್ಮೆಲ್ಲರಿಗೂ ಪತಿಯಾಗುವನು.

೧೦೦. ನೀವು ವಿದ್ಯಾಧರಲೋಕದಲ್ಲಿ ಆತನೊಡನೆ ಬಹಳಕಾಲ ಸಮಸ್ತ ಭೋಗಗಳನ್ನೂ ಅನುಭವಿಸಿ ಬಳಿಕ ಅವಂತೀಕ್ಷೇತ್ರವನ್ನು ಹೊಂದಿ ನನ್ನ ಧ್ಯಾನದಲ್ಲಿ ನಿರತರಾಗಿ ಸಿದ್ಧಿಯನ್ನು ಹೊಂದುವಿರಿ.

೧೦೧. ಪೂರ್ವಜನ್ಮದಲ್ಲಿಯೂ ನೀವೂ ಆತನೂ ನನ್ನಲ್ಲಿ ಅನನ್ಯಭಕ್ತಿಯನ್ನು ಮಾಡಿರುವಿರಿ. ಆದುದರಿಂದಲೇ ಈಗ ಪರಿಶುದ್ಧವೂ ಭಕ್ತಿಭಾಜನವೂ ಆದ ಜನ್ಮವು ನಿಮಗೆ ಲಭಿಸಿರುವುದು.

೧೦೨. ಈ ಪ್ರಭಾವತೀ ಸ್ತೋತ್ರವನ್ನು ಯಾರು ನನ್ನ ಮುಂದೆ ಪಠನ ಮಾಡುವರೊ, ಅವರಿಗೆ ಅಭಿಲಾಷೆಗಳನ್ನೆಲ್ಲ ಕೈಗೂಡಿಸುವೆನು. ಇದೇ ನಿಮಗೊಂದು ವರವಾಗಿರಲಿ.''

ಇತ್ಯುಕ್ತವತಿ ದೇವೇಶೇ ತಾಃ ಕನ್ಯಾ ಹೃಷ್ಟಮಾನಸಾಃ ।
ಪ್ರಣಮ್ಯ ಪ್ರೋಚುರೀಶಾನಂ ಪ್ರಬದ್ಧಕರಸಂಪುಟಾಃ ॥ ೧೦೩ ॥
ನಾಗಕನ್ಯಾ ಊಚುಃ:—
ಪೃಚ್ಛಾಮೋ ಬ್ರೂಹಿ ನೋ ನಾಥ ಕರುಣಾಕರ ಶಂಕರ ।
ಜನ್ಮಾಂತರೇ ಕಥಂ ಸೇವಾ ಚತುರ್ಭಿರ್ಭವತಃ ಕೃತಾ ॥ ೧೦೪ ॥
ತತಃ ಪ್ರಾಕ್ತನವೃತ್ತಾಂತಮೇತಸ್ಯಾಪಿ ಕೃತಾತ್ಮನಃ ।
ಅಸ್ಮಾಕಮಪಿ ಚಾಖ್ಯಾಹಿ ಕೃಪಾಂ ಕುರು ಕೃಪಾನಿಧೇ ॥ ೧೦೫ ॥
ಇತಿ ಶ್ರುತ್ವಾ ಪ್ರಣಯತೋ ಬಾಲೋದೀರಿತಮೀಪ್ಸಿತಂ ।
ಪ್ರೋವಾಚ ತಾಸಾಮಪಿ ಚ ಭವಾಂತರವಿಚೇಷ್ಟಿತಂ ॥ ೧೦೬ ॥
ಈಶ್ವರ ಉವಾಚ:—
ಶೃಣುಧ್ವಂ ನಾಗತನಯಾಸ್ತಿಸ್ರೋಽಪಿ ಹಿ ಸಮಾಹಿತಾಃ ।
ಪ್ರಾಗ್ಭವಂ ಭವತೀನಾಂ ಚ ತಸ್ಯಾಽಪಿ ಕಥಯಾಮ್ಯಹಂ ॥ ೧೦೭ ॥
ಏಷಾ ರತ್ನಾವಲೀ ಪೂರ್ವಮಾಸೀತ್ಪಾರಾವತೀ ಖಗೀ ।
ಸ ಚ ವಿದ್ಯಾಧರವರಃ ಪತಿರಸ್ಯಾಃ ಖಗೋಽಭವತ್ ॥ ೧೦೮ ॥

---

೧೦೩. ಇಂತು ಆ ದೇವಾಧಿದೇವನು ಹೇಳುತ್ತಿರಲು ಆ ಕನ್ಯಕೆಯರು ಆನಂದಭರಿತವಾದ ಮನಸ್ಸಿನಿಂದ ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ಆ ಮಹೇಶ್ವರನಲ್ಲಿ ಬಿನ್ನವಿಸಿಕೊಂಡರು.

೧೦೪. ನಾಗಕನ್ಯೆಯರು ಹೇಳುತ್ತಾರೆ:—"ಲೋಕನಾಥನೆ! ಕರುಣಾಸಾಗರ! ಸುಖಪ್ರದ! ನಾವೊಂದು ಪ್ರಶ್ನೆಯನ್ನು ಮಾಡುವೆವು. ಉತ್ತರವನ್ನು ಹೇಳುವವನಾಗು. ನಾವು ನಾಲ್ವರೂ ಜನ್ಮಾಂತರದಲ್ಲಿ ನಿನ್ನ ಸೇವೆಯನ್ನು ಯಾವ ವಿಧದಿಂದ ಮಾಡಿರುವೆವು?

೧೦೫. ಈ ಪುಣ್ಯಾತ್ಮನ ಮತ್ತು ನಮ್ಮ ಹಿಂದಿನ ಜನ್ಮದಲ್ಲಿ ನಡೆದ ವೃತ್ತಾಂತವನ್ನು ನಮಗೆ ತಿಳಿಸು. ಕೃಪಾನಿಧಿಯೆ! ಅನುಗ್ರಹವನ್ನು ಮಾಡು."

೧೦೬. ಇಂತೆಂದು ಬಾಲಕಿಯರು ತಮ್ಮ ಈಪ್ಸಿತವನ್ನು ಬಿನ್ನವಿಸಲು, ಅದನ್ನು ಕೇಳಿ ಮಹಾದೇವನು ವಾತ್ಸಲ್ಯದಿಂದ ಜನ್ಮಾಂತರದಲ್ಲಿ ಅವರೆಲ್ಲರೂ ಮಾಡಿದ ಶಿವಭಕ್ತಿ ವಿಚಾರವನ್ನು ಹೇಳಿದನು.

೧೦೭. ಈಶ್ವರನು ಹೇಳುತ್ತಾನೆ:—"ಎಲೌ ನಾಗಕನ್ಯಕೆಯರಿರಾ! ಮೂವರೂ ಸಮಾಹಿತಮನಸ್ಕರಾಗಿ ಕೇಳಿರಿ. ನಿಮ್ಮ ಮೂವರ ಮತ್ತು ಆ ಪರಿಮಳಾಲಯನ ಪೂರ್ವಜನ್ಮವೃತ್ತಾಂತವನ್ನು ಹೇಳುವೆನು.

೧೦೮. ಈ ರತ್ನಾವಳಿಯು ಹಿಂದಿನ ಜನ್ಮದಲ್ಲಿ ಹೆಣ್ಣುಪಾರಿವಾಳದ ಪಕ್ಷಿಯಾಗಿದ್ದಳು. ಆ ಉತ್ತಮ ವಿದ್ಯಾಧರನೂ ಈಕೆಗೆ ಆ ಜನ್ಮದಲ್ಲಿಯೂ ಪತಿಯಾದ ಗಂಡುಹಕ್ಕಿಯಾಗಿದ್ದನು.

ಪ್ರಾಸಾದೇ ಚ ಮನ್ಯೈತಾಭ್ಯಾಮುಷಿತಂ ಸುಚಿರಂ ಸುಖಂ ।
ರಜಃ ಪ್ರಾಸಾದಸಂಲಗ್ನಂ ಸುಸ್ನಂ ಪಕ್ಷ್ಮಾನಿಲೈಃ ಪುನಃ ॥ ೧೦೯ ॥
ಉಪರಿಷ್ಟಾದಧಸ್ತಾಚ್ಚ ಕೃತಾಭೂರಿ ಪ್ರದಕ್ಷಿಣಾಃ ।
ವ್ಯೋಮ್ನಿ ಸಂಚರಮಾಣಾಭ್ಯಾಂ ಸಂಚೀರ್ಣಂ ಚ ಮಮಾಜಿರೇ ॥ ೧೧೦ ॥
ಸ್ನಾತಂ ಚತುರ್ನದೇ ತೀರ್ಥೇ ಪೀತಂ ತತ್ರಾಂಬು ಚಾಽಸಕೃತ್ ।
ಆಭ್ಯಾಂ ಕಲರವಾಭ್ಯಾಂ ಚ ಕೃತಾಃ ಕಲರವಾ ಮುದಾ ॥ ೧೧೧ ॥
ಏತಾಭ್ಯಾಂ ಸ್ಥಿರಚಿತ್ತಾಭ್ಯಾಂ ಮುದಿತಾ ತ್ವಮತೀವ ಹಿ ।
ದೃಷ್ಟ್ವಾ ಹಿ ಕೌತುಕಾನ್ಯತ್ರ ಮಮ ಭಕ್ತೈಃ ಕೃತಾನ್ಯಪಿ ॥ ೧೧೨ ॥
ಅಮೂಭ್ಯಾಂ ಬಹುಶೋ ದೃಷ್ಟ್ವಾ ಮಮ ಮಂಗಲದೀಪಿಕಾಃ ।
ಪೀತಂ ಶ್ರುತಿಪುಟಾಭ್ಯಾಂ ಚ ಮಮ ನಾಮಾಽಕ್ಷರಾಽಮೃತಂ ।
ತಿರ್ಯಗ್ಯೋನಿಪ್ರಭಾವೇಣ ನ ಮೃತೌ ಮಮ ಸನ್ನಿಧೌ ॥ ೧೧೩ ॥
ಜಂಬೂಮಾರ್ಗೇ ಮೃತೌ ಯಸ್ಮಾತ್ಸ್ವರ್ಗಪ್ರಾಪ್ತಿಕರೇ ಧ್ರುವಂ ।
ತಸ್ಮಾತ್ಪಾರಾವತೀ ಹ್ಯೇಷಾ ರತ್ನದೀಪಸುತಾಽಭವತ್ ॥ ೧೧೪ ॥

---

೧೦೯. ಈ ದಂಪತಿಗಳು ನನ್ನ ಶಿಲಾಲಯದ ಗೋಪುರದಲ್ಲಿ ಬಹಳಕಾಲ ಸುಖವಾಗಿ ವಾಸಮಾಡಿಕೊಂಡಿದ್ದುವು. ಪ್ರಾಸಾದದಲ್ಲಿ ಬಿದ್ದ ಧೂಳನ್ನೆಲ್ಲ ತಮ್ಮ ರೆಕ್ಕೆಗಳ ಗಾಳಿಯಿಂದ ಕಳೆಯುತ್ತಿದ್ದುವು.

೧೧೦. ಆಕಾಶದಲ್ಲಿಯೂ ಭೂಮಿಯಲ್ಲಿಯೂ ಎರಡು ಪಕ್ಷಿಗಳೂ ಅನೇಕ ಪ್ರದಕ್ಷಿಣೆಗಳನ್ನು ಮಾಡುತ್ತಿದ್ದುವು. ಆಕಾಶದಲ್ಲಿ ಸಂಚರಿಸುತ್ತಿದ್ದ ಇವು ನನ್ನ ದೇವಾಲಯದ ಅಂಗಳದಲ್ಲಿಯೇ ಸುತ್ತುತ್ತಿದ್ದುವು.

೧೧೧. ಚತುರ್ನದತೀರ್ಥದಲ್ಲಿ ಸ್ನಾನವನ್ನುಮಾಡುತ್ತಿದ್ದುವು. ಅದರ ನೀರನ್ನು ಅನೇಕವೇಳೆ ಕುಡಿದಿರುವುವು. ಈ ಎರಡು ಪಾರಿವಾಳಗಳೂ ಸಂತೋಷ ದಿಂದ ಕಲರವಗಳನ್ನುಮಾಡುತ್ತಿದ್ದುವು.

೧೧೨. ಏಕಾಗ್ರಚಿತ್ತಗಳಾದ ಈ ಪಕ್ಷಿಗಳಲ್ಲಿ ನೀನು ಅತ್ಯಂತ ಸಂತುಷ್ಟಳಾ ಗಿರುತ್ತಿದ್ದೆ. ಮತ್ತು ನನ್ನ ಭಕ್ತರು ಮಾಡುತ್ತಿದ್ದ ಅನೇಕ ಉತ್ಸವಗಳ ಕೌತುಕ ಗಳನ್ನೂ ನೋಡುತ್ತಿದ್ದೆ.

೧೧೩. ಎರಡು ಪಕ್ಷಿಗಳೂ ನನ್ನ ಮಂಗಳಾರತಿಗಳನ್ನು ಅನೇಕವೇಳೆ ನೋಡಿರುವುವು. ಕಿವಿಗಳಿಂದ ನನ್ನ ನಾಮಾಕ್ಷರಗಳ ಅಮೃತವನ್ನೂ ಬಹಳ ವೇಳೆ ಪಾನಮಾಡಿರುವುವು. ಆದರೆ ತಿರ್ಯಗ್ಜಂತುಗಳಾಗಿ ಹುಟ್ಟಿದ್ದುದರಿಂದ ನನ್ನ ಸನ್ನಿಧಾನದಲ್ಲಿ ಮರಣವನ್ನು ಹೊಂದಲಿಲ್ಲ.

೧೧೪. ಆದರೆ ನಿಸ್ಸಂಶಯವಾಗಿಯೂ ಸ್ವರ್ಗಪ್ರಾಪ್ತಿಯನ್ನು ಕೈಗೂಡಿಸುವ ಜಂಬೂಮಾರ್ಗದಲ್ಲಿ ಎರಡೂ ಸತ್ತುಹೋದುವು. ಆದುದರಿಂದಲೇ ಈ ಹೆಣ್ಣು ಪಾರಿವಾಳವು ರತ್ನದೀಪನ ಮಗಳಾಗಿ ಹುಟ್ಟಿರುವಳು.

ಪತಿಃ ಪಾರಾವತೋಽಸ್ಯಾಶ್ಚ ಜಾತೋ ವಿದ್ಯಾಧರಾಂಗಜಃ ।
ಏಷಾ ಪ್ರಭಾವತೀ ನಾಗೀ ನಾಗರಾಜಸ್ಯ ಸದ್ಮನಿ ।
ಇಹ ಜನ್ಮನಿ ಕನ್ಯಾಽಽಸೀತ್ಪೂರ್ವಜನ್ಮ ಬ್ರವೀಮಿ ಚ ॥ ೧೧೫ ॥
ತ್ರಿಶಿಖಸ್ಯೋರಗೇಂದ್ರಸ್ಯ ಸುತಾ ಚೇಯಂ ಕಲಾವತೀ ।
ಏತಸ್ಯಾ ಅಪಿ ವೃತ್ತಾಂತಂ ನಿಶಾಮಯ ತು ವಚ್ಮ್ಯಹಂ ॥ ೧೧೬ ॥
ಭವಾಂತರೇ ತೃತೀಯೇತಃ ಕನ್ಯೇ ಚಾರಾಯಣಸ್ಯ ಚ ।
ಆಸ್ತಾಂ ಮಹರ್ಷೇಃ ಶೀಲಾಢ್ಯೇ ಪ್ರೇಮವತ್ಯೌ ಪರಸ್ಪರಂ ॥ ೧೧೭ ॥
ಪಿತ್ರಾ ಚಾರಾಯಣೇನಾಽಪಿ ತಾಭ್ಯಾಂ ಸಂಪ್ರೇರಿತೇನ ವೈ ।
ಆಮುಷ್ಯಾಯಣಪುತ್ರಾಯ ದತ್ತೇ ನಾರಾಯಣಾಯ ಹಿ ॥ ೧೧೮ ॥
ಅಪ್ರಾಪ್ತಯೌವನೋಽರಣ್ಯೇ ಸಮಿದಾಹರಣಾಯ ವೈ ।
ಗತೋ ವಿಧಿವಶಾದ್ದಷ್ಟೋ ದಂದಶೂಕೇನ ಕಾನನೇ ॥ ೧೧೯ ॥
ಭವಾನೀ ಗೌತಮೀ ನಾಮ್ನ್ಯೌ ತೇ ತು ಚಾರಾಯಣಾಂಗಜೇ ।
ವೈಧವ್ಯದುಃಖಮಾಪನ್ನೇ ದೈನ್ಯಗ್ರಸ್ತೇ ಬಭೂವತುಃ ॥ ೧೨೦ ॥

---

೧೧೫. ಈಕೆಯ ಪತಿಯಾದ ಗಂಡು ಹಕ್ಕಿಯೂ ವಿದ್ಯಾಧರವಂಶದಲ್ಲಿ ಜನ್ಮವನ್ನು ತಾಳಿರುವನು. ಇನ್ನು ಈ ಪ್ರಭಾವತಿಯೆಂಬ ನಾಗಕನ್ಯೆಯು ನಾಗರಾಜನ ಮನೆಯಲ್ಲಿ ಜನ್ಮವನ್ನು ಪಡೆದಿರುವಳಲ್ಲವೆ, ಈ ಕನ್ಯೆಯ ಪೂರ್ವ ಜನ್ಮದ ಕಥೆಯನ್ನು ಹೇಳುವೆನು.

೧೧೬. ಈ ಕಲಾವತಿಯೂ ತ್ರಿಶಿಖನೆಂಬ ನಾಗೇಂದ್ರನ ಮಗಳಾಗಿರುವಳು, ಈಕೆಯ ವೃತ್ತಾಂತವನ್ನೂ ನಾನು ಹೇಳುವೆನು, ಕೇಳು.

೧೧೭. ಇವರಿಬ್ಬರೂ ಹಿಂದಣ ಮೂರನೆಯ ಜನ್ಮದಲ್ಲಿ ಚಾರಾಯಣನೆಂಬ ಮಹರ್ಷಿಗೆ ಪುತ್ರಿಯರಾಗಿದ್ದರು. ಸದಾಚಾರಸಂಪನ್ನೆಯರಾದ ಇಬ್ಬರೂ ಪರಸ್ಪರ ಪ್ರೇಮದಿಂದ ವರ್ತಿಸುತ್ತಿದ್ದರು.

೧೧೮. ಅವರಿಂದ ಪ್ರೇರಿತನಾಗಿ ತಂದೆಯಾದ ಚಾರಾಯಣನು ಇಬ್ಬರನ್ನೂ ಆಮುಷ್ಯಾಯಣನೆಂಬ ಬ್ರಾಹ್ಮಣೋತ್ತಮನ ಮಗನಾದ ನಾರಾಯಣನಿಗೆ ಮದುವೆ ಮಾಡಿಕೊಟ್ಟನು.

೧೧೯. ಆತನು ಯೌವನವಂತನಾಗದೆಯೇ ಒಮ್ಮೆ ಸಮಿತ್ತುಗಳನ್ನು ತರಲು ಅರಣ್ಯಕ್ಕೆ ಹೋಗಿದ್ದಾಗ ಅದೃಷ್ಟವಶದಿಂದ ಮಹಾಸರ್ಪದಿಂದ ದಷ್ಟನಾದನು.

೧೨೦. ಚಾರಾಯಣಪುತ್ರಿಯರಾದ ಭವಾನಿ ಮತ್ತು ಗೌತಮಿಯೆಂಬ ಹೆಸರಿನ ಇಬ್ಬರೂ ವೈಧವ್ಯದುಃಖವನ್ನನುಭವಿಸುತ್ತ ಅತಿ ದೀನರಾಗಿರುತ್ತಿದ್ದರು.

ಅತ ಏವ ಪ್ರಯತ್ನೇನ ಪರಿಣೇತಾ ವಿವರ್ಜಯೇತ್ ।
ದೇವತಾಸರಿದಾಹ್ವಾನಕನ್ಯಾ ಪಾಣಿಗ್ರಹಂ ಸುಧೀಃ ॥ ೧೨೧ ॥
ಅಥರ್ಷೇಃ ಕಸ್ಯಚಿದ್ದೈವಾದಾಶ್ರಮೇ ದೇವಸನ್ನಿಭೇ ।
ರಂಭಾಫಲಾನ್ಯದತ್ತಾನಿ ಮೋಹಾಜ್ಜಗ್ರಹತುಸ್ತದಾ ॥ ೧೨೨ ॥
ಕೃತ್ವಾ ನಾನೋಪವಾಸಾದಿವ್ರತಾನಿ ಬ್ರಾಹ್ಮಣಾಂಗಜೇ ।
ಅಥ್ಯಾಸ್ಯ ನಿಧನಂ ಕಾಲಾಚ್ಛಾಖಾಮೃಗ್ಯೌ ಬಭೂವತುಃ ॥ ೧೨೩ ॥
ಫಲಚೌರ್ಯವಿಪಾಕೇನ ವಾನರತ್ವಂ ತಯೋರಭೂತ್ ।
ಶೀಲರಕ್ಷಣಭಾವೇನಾಽವಂತ್ಯಾಂ ಜನಿಮವಾಪತುಃ ॥ ೧೨೪ ॥
ಸ ಚ ನಾರಾಯಣೋ ವಿಪ್ರಃ ಪಿತೃಶುಶ್ರೂಷಣೇ ರತಃ ।
ದಷ್ಟೋಽಪಿ ದಂದಶೂಕೇನ ಕಾಶ್ಯಾಂ ಪಾರಾವತೋಽಭವತ್ ॥ ೧೨೫ ॥
ಏವಂ ಭವಾಂತರೇ ಚಾಸೀದೇತಯೋಃ ಪತಿರೇವ ಸಃ ।
ತಿಸೃಣಾಂ ಭವತೀನಾಂ ಚ ಭಾವೀ ಭರ್ತಾ ಪುನಃ ಸ ವೈ ॥ ೧೨೬ ॥

---

೧೨೧. ಆದುದರಿಂದಲೇ ಬುದ್ಧಿವಂತನಾದ ವರನು ಮದುವೆಯನ್ನು ಮಾಡಿಕೊಳ್ಳುವಾಗ ದೇವತೆ ಮತ್ತು ನದಿಗಳ ಹೆಸರುಳ್ಳ ಕನ್ಯೆಯರ ಪಾಣಿಗ್ರಹವನ್ನು ಸರ್ವಪ್ರಕಾರದಿಂದಲೂ ತ್ಯಜಿಸಬೇಕು.

೧೨೨. ಒಮ್ಮೆ ಇವರಿಬ್ಬರೂ ದೇವಲೋಕಸದೃಶವಾದ ಒಬ್ಬಾನೊಬ್ಬ ಮಹರ್ಷಿಯ ಆಶ್ರಮಕ್ಕೆ ಹೋಗಿದ್ದಾಗ ದೈವವಶದಿಂದ ಆತನು ಕೊಡದಿದ್ದ ಬಾಳೆಯಹಣ್ಣುಗಳನ್ನು ಆಶೆಯಿಂದ ತೆಗೆದುಕೊಂಡರು.

೧೨೩. ಬ್ರಾಹ್ಮಣಪುತ್ರಿಯರಾದ ಇವರಿಬ್ಬರೂ ಅನೇಕ ಉಪವಾಸಗಳೇ ಮೊದಲಾದ ವ್ರತಗಳನ್ನುಮಾಡಿ ಕಾಲಕ್ರಮದಲ್ಲಿ ಮೃತರಾಗಿ ಮುಂದಿನ ಜನ್ಮದಲ್ಲಿ ಕೋತಿಗಳಾಗಿ ಜನಿಸಿದರು.

೧೨೪. ಫಲಗಳನ್ನು ಅಪಹರಿಸಿದ ಪಾಪದಿಂದ ಕಪಿಜನ್ಮವುಂಟಾದರೂ ತಮ್ಮ ಸೌಶೀಲ್ಯವನ್ನುಳಿಸಿಕೊಂಡ ಪುಣ್ಯದ ಫಲವಾಗಿ ಅವಂತೀಕ್ಷೇತ್ರದಲ್ಲಿ ಜನ್ಮವನ್ನು ತಾಳಿದರು.

೧೨೫. ನಾರಾಯಣನೆಂಬ ಆ ಬ್ರಾಹ್ಮಣಪುತ್ರನೂ ಯಾವಜ್ಜೀವವೂ ಪಿತೃಶುಶ್ರೂಷೆಯಲ್ಲಿ ನಿರತನಾಗಿದ್ದುದರಿಂದ ಸರ್ಪದಷ್ಟನಾಗಿ ದುರ್ಮರಣವನ್ನು ಹೊಂದಿದರೂ ಕಾಶಿಯಲ್ಲಿ ಪಾರಿವಾಳವಾಗಿ ಜನಿಸಿದನು.

೧೨೬. ಹೀಗೆ ಆತನೊಬ್ಬನೇ ಹಿಂದಿನ ಮೂರನೆಯ ಜನ್ಮದಲ್ಲಿ ಇವರಿಬ್ಬರಿಗೂ, ಹಿಂದಿನ ಜನ್ಮದಲ್ಲಿ ಈ ರತ್ನಾವಳಿಗೂ ಪತಿಯಾಗಿದ್ದನು. ಈಗಲೂ ನಿಮ್ಮ ಮೂವರಿಗೂ ಆತನೇ ಪತಿಯಾಗುವನು.

ಪ್ರಾಸಾದಸ್ಯಾಽಪಿ ಪಾರ್ಶ್ವೇ ತು ನ್ಯಗ್ರೋಧಶ್ಚ ಮಹಾನಗಃ ।
ತಸ್ಮಿಂಭಾಮಿನಿ ವಾಸಾರ್ಹೇ ಶಾಖಾಮೃಗೌ ಬಭೂವತುಃ ॥ ೧೨೭ ॥
ವಿಷ್ಣುದೇಹಜಲೇ ತೀರ್ಥೇ ಕ್ರೀಡಯಾ ಚ ಮಮಜ್ಜತುಃ ।
ಪಪತುಶ್ಚಾಽಪಿ ಪಾನೀಯಂ ತಸ್ಮಿಂಸ್ತೀರ್ಥೇ ತೃಷಾತುರೇ ॥ ೧೨೮ ॥
ಜಾತಿಸ್ವಭಾವಚಾಪಲ್ಯಾತ್ಕ್ರೀಡಂತ್ಯೌ ಚ ಪ್ರದಕ್ಷಿಣಂ ।
ಚಕ್ರತುರ್ಬಹುಕೃತ್ವಶ್ಚ ಲಿಂಗಂ ದದೃಶತುರ್ಬಹು ॥ ೧೨೯ ॥
ವಿಚರಂತ್ಯಾವಿತಃ ಸ್ವೈರಂ ತತ್ರ ನ್ಯಗ್ರೋಧಸನ್ನಿಧೌ ।
ಕೇನಚಿದ್ಯೋಗಿವೇಷೇಣ ಪಾಶೇನ ಚ ನಿಯಂತ್ರಿತೇ ॥ ೧೩೦ ॥
ಭಿಕ್ಷಾರ್ಥಂ ಶಿಕ್ಷಿತೇ ತೇನ ನ ಲುಪ್ತಿರ್ನ ನಿವರ್ತನಂ ।
ಅಥ ತೇ ಕ್ವಾಽಪಿ ಮರ್ಕಟ್ಯೌ ಕಾಲಧರ್ಮವಶಂಗತೇ ॥ ೧೩೧ ॥
ಅವಂತೀವಾಸಪುಣ್ಯೇನ ತ್ರಿಲೋಚನಸ್ಯ ಸೇವಯಾ ।
ಪ್ರಾದಕ್ಷಿಣ್ಯಾಽನುರೂಪೇಣ ಜಾತೇ ನಾಗಸುತೇ ಅಪಿ ॥ ೧೩೨ ॥

---

೧೨೭. ನನ್ನ ಪ್ರಾಸಾದದ ಪಕ್ಕದಲ್ಲಿಯೇ ಬಹಳ ಉನ್ನತವಾದ ಆಲದ ಮರವೊಂದಿರುವುದು. ಇವರಿಬ್ಬರೂ ವಾಸಕ್ಕೆ ಯೋಗ್ಯವಾದ ಆ ಮರದಲ್ಲಿ ಕಪಿಗಳಾಗಿ ವಾಸಿಸುತ್ತಿದ್ದರು.

೧೨೮. ಆಟದ ಬುದ್ಧಿಯಿಂದಲೇ ವಿಷ್ಣುದೇಹೋದ್ಭವೆಯಾದ ಶಿಪ್ರಾನದಿಯ ಜಲದಲ್ಲಿ ಸ್ನಾನಮಾಡಿದುವು. ಬಾಯಾರಿಕೆಯಾದಾಗ ಆ ತೀರ್ಥದಲ್ಲಿಯೇ ನೀರನ್ನು ಕುಡಿದುವು.

೧೨೯. ತಮ್ಮ ಜಾತಿಗೆ ಸ್ವಭಾವವಾದ ಚಾಪಲ್ಯದಿಂದ ಹಾರಾಡುತ್ತಲೇ ಅನೇಕ ಸಲ ಪ್ರದಕ್ಷಿಣೆಗಳನ್ನೂ ಮಾಡಿದುವು. ಅನೇಕ ವೇಳೆ ಶಿವಲಿಂಗದ ದರ್ಶನವನ್ನೂ ಮಾಡಿದವು.

೧೩೦. ಆ ಆಲದ ಮರದ ಸಮೀಪದಲ್ಲಿಯೇ ಸ್ವೇಚ್ಛೆಯಿಂದ ಸಂಚರಿಸುತ್ತಿರಲು ಒಂದು ದಿನ ಯೋಗಿಯವೇಷವನ್ನು ಧರಿಸಿದವನೊಬ್ಬನು ಇವುಗಳನ್ನು ಹಗ್ಗದಿಂದ ಹಿಡಿದುಹಾಕಿದನು.

೧೩೧. ಭಿಕ್ಷಾಟನೆಗಾಗಿ ಅವನು ಇವುಗಳಿಗೆ ಆಟಗಳನ್ನು ಹೇಳಿಕೊಟ್ಟನು. ಅಂದಿನಿಂದ ಹಾರಾಟವಾಗಲಿ ಸ್ವೇಚ್ಛೆಯ ಗಮನವಾಗಲಿ ಇಲ್ಲವಾಯಿತು. ಕೆಲವು ಕಾಲದ ಮೇಲೆ ಎರಡು ಹೆಣ್ಣುಕೋತಿಗಳೂ ಕಾಲಧರ್ಮವನ್ನೈದಿದುವು.

೧೩೨. ಅವಂತೀಕ್ಷೇತ್ರದಲ್ಲಿ ವಾಸಮಾಡಿದ ಪುಣ್ಯದಿಂದಲೂ, ತ್ರಿಲೋಚನೇಶ್ವರನ ಸೇವೆಯಿಂದಲೂ, ಪ್ರದಕ್ಷಿಣೆಗಳ ಪುಣ್ಯದಿಂದಲೂ ಈಗ ನಾಗಕನ್ನಿಕೆಯರಾಗಿ ಜನಿಸಿರುವರು.

ಅಧುನಾ ತಂ ಪತಿಂ ಪ್ರಾಪ್ಯ ವಿದ್ಯಾಧರಕುಮಾರಕಂ ।
ನಿರ್ವಿಶ್ಯ ಸ್ವರ್ಗಭೋಗಾಂಶ್ಚಾಽವಂತ್ಯಾಂ ನಿರ್ವೃತಿಮಾಪ್ಯ ಚ ॥ ೧೩೩ ॥
ಯೈರಲ್ಪಮಪಿ ಚಾಽವಂತ್ಯಾಂ ಕೃತಂ ಕರ್ಮ ಶುಭಾವಹಂ ।
ತಸ್ಯ ಮೋಕ್ಷಃ ಪರೀಪಾಕೋ ನಿಶ್ಚಿತಂ ಮದನುಗ್ರಹಾತ್ ॥ ೧೩೪ ॥
ತ್ರೈಲೋಕ್ಯೇಽಪಿ ಚ ಸರ್ವಸ್ಮಿಂಛ್ರೇಷ್ಠಾವಂತೀ ಪುರೀ ಸದಾ ।
ತತೋಽಪಿ ಲಿಂಗಮೋಂಕಾರಂ ತತೋಽಪ್ಯತ್ರ ತ್ರಿಲೋಚನಂ ।
ತಿಷ್ಠಮಾನೋಽತ್ರ ಲಿಂಗೇಽಹಂ ಭುಕ್ತಿಂ ಮುಕ್ತಿಂ ದದಾಮಿ ವೈ ॥ ೧೩೫ ॥
ಅತಃ ಸರ್ವಪ್ರಯತ್ನೇನಾಽವಂತ್ಯಾಂ ಪೂಜ್ಯಸ್ತ್ರಿಲೋಚನಃ ।
ಇತ್ಯುಕ್ತ್ವಾ ದೇವದೇವೇಶಸ್ತತ್ಪ್ರಾಸಾದಾಂತರೇಽವಿಶತ್ ॥ ೧೩೬ ॥
ಲಿಂಗಸ್ವರೂಪಮಾಸಾದ್ಯ ಶುಭಂ ತ್ರಿಭುವನಾದಪಿ ।
ತಾಶ್ಚ ಸ್ವಸದನಂ ಪ್ರಾಪ್ಯ ತದ್ವೃತ್ತಾಂತಮಶೇಷತಃ ।
ಸ್ವಮಾತುಃ ಪುರತಶ್ಚೋಕ್ತ್ವಾ ಕೃತಕೃತ್ಯಾ ಇವಾಽಭವನ್ ॥ ೧೩೭ ॥
ಏಕದಾ ಮಾಧವೇ ಮಾಸಿ ಸಹಸಾರ್ಥಾಃ ಸಮಾಗತಾಃ ।
ವಿದ್ಯಾಧರಾಸ್ತಥಾ ನಾಗಾ ಮಿಲಿತಾಃ ಸಪರಿಚ್ಛದಾಃ ॥ ೧೩೮ ॥

---

೧೩೩. ಈಗ ಆ ವಿದ್ಯಾಧರಪುತ್ರನಾದ ಪರಿಮಳಾಲಯನನ್ನು ಗಂಡನನ್ನಾಗಿ ಪಡೆದು ಸ್ವರ್ಗಭೋಗಗಳನ್ನೆಲ್ಲ ಆತನೊಡನೆ ಅನುಭವಿಸಿ ಅವಂತೀಕ್ಷೇತ್ರದಲ್ಲಿಯೇ ಸುಖವಾಗಿ ನೆಲಸಿರುವಿರಿ.

೧೩೪. ಯಾರು ಅವಂತೀಕ್ಷೇತ್ರದಲ್ಲಿ ಅತ್ಯಲ್ಪವಾದರೂ ಪುಣ್ಯಪ್ರದವಾದ ಕರ್ಮವನ್ನು ಮಾಡಿರುವರೊ, ಅವರ ಕರ್ಮಕ್ಕೆ ನಿಶ್ಚಯವಾಗಿಯೂ ನನ್ನ ಅನುಗ್ರಹದಿಂದ ಮೋಕ್ಷವೊಂದೇ ಫಲವಾಗಿರುವುದು. ಆದುದರಿಂದ ಮೂರು ಲೋಕಗಳಲ್ಲಿಯೂ ಯಾವಾಗಲೂ ಅವಂತೀನಗರಿಯೇ ಸರ್ವೋತ್ತಮವಾದುದು.

೧೩೫. ಅದರಲ್ಲಿಯೂ ಓಂಕಾರೇಶ್ವರಲಿಂಗವೂ, ಅದಕ್ಕಿಂತ ತ್ರಿಲೋಚನೇಶ್ವರಲಿಂಗವೂ ಪರಮಪೂಜ್ಯಗಳು. ಈ ಲಿಂಗದಲ್ಲಿ ನಾನೇ ಸ್ವತಃ ನಿಂತು ಭೋಗಮೋಕ್ಷಗಳನ್ನು ಕೊಡುತ್ತಿರುವೆನು.

೧೩೬. ಆದುದರಿಂದ ಸರ್ವಪ್ರಯತ್ನದಿಂದಲೂ ಅವಂತಿಯಲ್ಲಿರುವ ತ್ರಿಲೋಚನೇಶ್ವರನ ಪೂಜೆಯನ್ನು ಮಾಡಬೇಕು.'' ಇಂತೆಂದು ಆ ಕನ್ಯಕೆಯರಿಗೆ ಹೇಳಿ ಮಹಾದೇವನು ಆ ಪ್ರಾಸಾದದೊಳಗೆ ಅಂತರ್ಹಿತನಾದನು.

೧೩೭. ಒಡನೆಯೆ ಆತನು ಮೂರು ಲೋಕಗಳಲ್ಲಿಯೂ ಪರಮಪಾವನವೆನಿಸಿದ ಲಿಂಗದ ಸ್ವರೂಪವನ್ನು ತಾಳಿದನು. ಅವರೂ ತಮ್ಮ ಮನೆಗಳಿಗೆ ಬಂದು ನಡೆದ ವೃತ್ತಾಂತವೆಲ್ಲವನ್ನೂ ತಮ್ಮ ತಾಯಂದಿರಿಗೆ ತಿಳಿಸಿ ಕೃತಾರ್ಥರಾದೆವೆಂದೆಣಿಸಿದರು.

೧೩೮. ಒಮ್ಮೆ ವೈಶಾಖಮಾಸದಲ್ಲಿ ಸಕಲ ಸಂಭಾರಗಳೊಂದಿಗೆ ಯಾತ್ರಾರ್ಥವಾಗಿ ಹೊರಟು ವಿದ್ಯಾಧರರೂ ನಾಗರೂ ಒಂದೆಡೆಯಲ್ಲಿ ಕೂಡಿದರು.

ವಿರಜಸ್ಕೇ ಮಹಾಕ್ಷೇತ್ರೇ ತ್ರಿಲೋಚನಸಮೀಪತಃ ।
ದೇವಸ್ಯ ವರದಾನಾಚ್ಚ ಪೃಷ್ಟ್ವಾಽನ್ಯೋನ್ಯಂ ಕುಲಾವಲಿಂ ॥ ೧೩೯ ॥
ವಿದ್ಯಾಧರಾಯ ತಾಃ ಕನ್ಯಾ ನಾಗೈಸ್ತಿಸ್ರೋಽಪಿ ಕಲ್ಪಿತಾಃ ।
ಮಂದಾರದಾಮಃ ಸಂತುಷ್ಟಃ ಪ್ರಾಪ್ಯ ತಚ್ಚ ಸ್ನುಷಾತ್ರಯಂ ॥ ೧೪೦ ॥
ರತ್ನದೀಪೈಶ್ಚ ನಾಗೇಂದ್ರಃ ಪದ್ಮೀ ಚ ಭುಜಗೇಶ್ವರಃ ।
ವಿಶಿಖೋಽಪಿ ಫಣೀಂದ್ರಶ್ಚ ದೃಷ್ಟ್ವಾ ಏತೇ ತ್ರಯೋಽಪಿ ಚ ।
ಜಾಮಾತರಂ ಸಮಾಸಾದ್ಯ ಶುಭಂ ಪರಿಮಲಾಲಯಂ ॥ ೧೪೧ ॥
ಅನ್ಯೋನ್ಯಂ ಸ್ವಜನಾಸ್ತೇ ತು ಮುದಾ ವಿಕಸಿತೇಕ್ಷಣಾಃ ।
ವಿವಾಹೋತ್ಸವಮಾರಚ್ಯ ಸ್ವಂ ಸ್ವಂ ಭವನಮಾವಿಶನ್ ॥ ೧೪೨ ॥
ತ್ರಿಲೋಚನಸ್ಯ ಲಿಂಗಸ್ಯ ವರ್ಣಯಂತೋಽಪಿ ಗೌರವಂ ।
ಸ ಚ ವಿದ್ಯಾಧರಃ ಶ್ರೀಮಾನ್ನಾಗೀಭಿರ್ವಿಪುಲಂ ಸುಖಂ ।
ಭುಕ್ತ್ವಾಽವಂತೀಂ ತತಃ ಪ್ರಾಪ್ಯ ಸಂಸೇವ್ಯ ಚ ತ್ರಿಲೋಚನಂ ॥ ೧೪೩ ॥

---

೧೩೯. ಮಹಾದೇವನು ಕೊಟ್ಟಿದ್ದ ವರಕ್ಕೆ ಅನುಸಾರವಾಗಿ ವಿರಜಸ್ಕ ಕ್ಷೇತ್ರದಲ್ಲಿ ತ್ರಿಲೋಚನೇಶ್ವರನ ಸಮೀಪದಲ್ಲಿಯೇ ಸೇರಿ ಪರಸ್ಪರ ವಂಶಾವಳಿಗಳನ್ನು ವಿಚಾರಿಸಿಕೊಂಡರು.

೧೪೦. ಮತ್ತು ಆ ಮೂವರು ಕನ್ಯೆಯರನ್ನೂ ಪರಿಮಳಾಲಯನಿಗೇ ಮದುವೆ ಮಾಡಿಕೊಡಬೇಕೆಂದು ನಿಶ್ಚಯವಾಯಿತು. ಮಂದಾರದಾಮನೂ ಇಂತು ಮೂವರು ಸೊಸೆಯರನ್ನು ಪಡೆದು ಸಂತುಷ್ಟನಾದನು.

೧೪೧. ರತ್ನಾವಳಿಯು ತಂದೆಯಾದ ರತ್ನದೀಪನೆಂಬ ನಾಗೇಂದ್ರನೂ, ಪ್ರಭಾವತಿಯ ಜನಕನಾದ ಪದ್ಮಿಯೆಂಬವನೂ, ಕಲಾವತಿಯ ತಂದೆಯಾದ ವಿಶಿಖನೆಂಬ ಭುಜಗೇಂದ್ರನೂ ಸರ್ವಾಂಗಸುಂದರನಾದ ಪರಿಮಳಾಲಯನನ್ನು ಅಳಿಯನನ್ನಾಗಿ ಪಡೆದು ಮೂವರೂ ಬಹಳ ಆನಂದಭರಿತರಾದರು.

೧೪೨. ಬಳಿಕ ಸಂತೋಷದಿಂದ ಬಾಂಧವರೆಲ್ಲರೂ ಅರಳಿದ ಕಂಗಳುಳ್ಳವರಾಗಿ ಪರಸ್ಪರಸೌಹಾರ್ದದಿಂದ ವಿವಾಹಮಹೋತ್ಸವವನ್ನು ನೆರವೇರಿಸಿಕೊಂಡು ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.

೧೪೩. ಮತ್ತು ಆ ತ್ರಿಲೋಚನೇಶ್ವರಮಹಾಲಿಂಗದ ಮಾಹಾತ್ಮ್ಯವನ್ನು ಬಹಳವಾಗಿ ಹೊಗಳುತ್ತಿದ್ದರು. ಸರ್ವೈಶ್ವರ್ಯಾನ್ವಿತನಾದ ಆ ವಿದ್ಯಾಧರನೂ ಪತ್ನಿಯರಾದ ನಾಗಕನ್ಯಕೆಯರೊಡನೆ ಅಪಾರಸೌಖ್ಯವನ್ನನುಭವಿಸಿ ಅವಂತೀ ಕ್ಷೇತ್ರಕ್ಕೆ ಬಂದು ತ್ರಿಲೋಚನೇಶ್ವರನನ್ನು ಸೇವಿಸಿದನು.

ಗಾಯನ್ಗೀತಂ ಸುಮಧುರಂ ನಾಗೀಭಿಃ ಸಹಿತಃ ಕೃತೀ ।
ಆತ್ಮಾನಂ ಚಾಽತಿ ವಿಸ್ಮೃತ್ಯ ಮಧ್ಯೇ ಲಿಂಗಂ ಲಯಂಗತಃ ॥ ೧೪೪ ॥
ತ್ರಿಲೋಚನಸ್ಯ ಮಹಿಮಾ ಕಲೌ ದೇವೇನ ಗೋಪಿತಃ ।
ತತೋಽಲ್ಪಸತ್ತ್ವಾ ಮನುಜಾ ನ ತಲ್ಲಿಂಗಮುಪಾಸತೇ ॥ ೧೪೫ ॥
ತ್ರಿಲೋಚನಕಥಾಮೇತಾಂ ಶ್ರುತ್ವಾ ಪಾಪಾನ್ವಿತೋಽಪ್ಯಹೋ ।
ವಿಪಾಪೋ ಜಾಯತೇ ಮರ್ತ್ಯೋ ಲಭತೇ ಚ ಪರಾಂ ಗತಿಂ ॥ ೧೪೬ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ತ್ರಿಲೋಚನಸ್ಯ ದೇವಸ್ಯ ಶೃಣು ವೀರೇಶ್ವರಂ ಪರಂ ॥ ೧೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ತ್ರಿಲೋಚನೇಶ್ವರಮಾಹಾತ್ಮ್ಯವರ್ಣನಂ"
ನಾಮ ಪಂಚಚತ್ವಾರಿಂಶೋಽಧ್ಯಾಯಃ

---

೧೪೪. ನಾಗಸ್ತ್ರೀಯರೊಡಗೂಡಿ ಮಧುರವಾಗಿ ಸಂಗೀತವನ್ನು ಹಾಡುತ್ತ ಕೃತಾರ್ಥನಾಗಿ ಧ್ಯಾನದಲ್ಲಿ ತನ್ನನ್ನೇ ಮರೆತು ಪರವಶನಾಗಿ ಆ ಲಿಂಗದ ಮಧ್ಯದಲ್ಲಿಯೇ ಐಕ್ಯವನ್ನು ಪಡೆದನು.

೧೪೫. ತ್ರಿಲೋಚನೇಶ್ವರನ ಮಹಿಮೆಯುನ್ನು ಮಹಾದೇವನೇ ಕಲಿಯುಗದಲ್ಲಿ ಮರೆಮಾಡಿರುವನು. ಆದುದರಿಂದ ಪಾಮರರಾದ ಜನರು ಆ ಲಿಂಗದ ಉಪಾಸನೆಯನ್ನು ಮಾಡುವುದಿಲ್ಲ.

೧೪೬. ತ್ರಿಲೋಚನೇಶ್ವರನ ಈ ಚರಿತ್ರೆಯನ್ನು ಕೇಳಿದ ಮನುಷ್ಯನು ಮಹಾಪಾತಕಗಳನ್ನು ಮಾಡಿದವನಾದರೂ, ಪಾಪರಹಿತನಾಗಿ ಉತ್ತಮ ಗತಿಯನ್ನು ಪಡೆಯುವನು.

೧೪೭. ದೇವಿಯೆ! ಇಂತು ನಿನಗೆ ತ್ರಿಲೋಚನೇಶ್ವರ ಮಹಾಲಿಂಗದ ಪಾಪನಾಶಕವಾದ ಮಹಿಮೆಯ ಕಥೆಯನ್ನು ಹೇಳಿರುವೆನು. ಇನ್ನು ವೀರೇಶ್ವರ ಮಹಾದೇವನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ತ್ರಿಲೋಚನೇಶ್ವರಮಾಹಾತ್ಮ್ಯವರ್ಣನ"ವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಚತ್ವಾರಿಂಶೋಽಧ್ಯಾಯಃ

### ವೀರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ಷಟ್ಚತ್ವಾರಿಂಶಕಂ ದೇವಿ ವೀರೇಶ್ವರಮಥೋ ಶೃಣು ।
ಯಸ್ಯ ದರ್ಶನಮಾತ್ರೇಣ ಕುಲವೃದ್ಧಿರ್ಭವೇದ್ಧ್ರುವಮ್ ॥ ೧ ॥
ನಿಶಾಮಯ ಮಹಾದೇವಿ ವೀರೇಶಾವಿರ್ಭವಂ ಪರಂ ।
ಯಚ್ಛ್ರುತ್ವಾ ಪಿತರಃ ಪುಣ್ಯಂ ಪ್ರಾಪ್ನುಯುರ್ವಿಪುಲಂ ಶಿವೇ ॥ ೨ ॥
ಆಸೀದಮಿತ್ರಜಿನ್ನಾಮ ರಾಜಾ ಪರಪುರಂಜಯಃ ।
ಧಾರ್ಮಿಕಃ ಸತ್ತ್ವಸಂಪನ್ನಃ ಪ್ರಜಾರಂಜನತತ್ಪರಃ ॥ ೩ ॥
ಯಶೋಧನೋ ವದಾನ್ಯಶ್ಚ ಸುಧೀರ್ಬ್ರಾಹ್ಮಣದೈವತಃ ।
ಸದೈವಾಽವಭೃಥಸ್ನಾತಃ ಪರಿಕ್ಲಿನ್ನಶಿರೋರುಹಃ ॥ ೪ ॥
ವಿನೀತೋ ನೀತಿಸಂಪನ್ನಃ ಕುಶಲಃ ಸರ್ವಕರ್ಮಸು ।
ವಿದ್ಯಾವಿಶಾರದಶ್ಚಾಽಥ ಗುಣವಾನ್ಗುಣಿವತ್ಸಲಃ ॥ ೫ ॥

---

## ಕನ್ನಡದ ಅನುವಾದ

### ವೀರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ! ಇನ್ನು ನಲವತ್ತಾರನೆಯದಾದ ವೀರೇಶ್ವರಲಿಂಗದ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದ ಸಂತಾನವೃದ್ಧಿಯಾಗುವುದು ನಿಶ್ಚಯವು.

೨. ಮಹೇಶ್ವರಿಯೆ! ಮೊದಲು ವೀರೇಶ್ವರನು ಆವಿರ್ಭವಿಸಿದ ಉತ್ತಮ ಚರಿತ್ರೆಯನ್ನು ಕೇಳು. ಮಂಗಳಾಂಗಿಯೆ! ಈ ಕಥೆಯನ್ನು ಕೇಳಿದವರ ಪಿತೃಗಳು ಅಪಾರವಾದ ಪುಣ್ಯವನ್ನು ಪಡೆಯುವರು.

೩. ಹಿಂದೆ ಶತ್ರುಪಟ್ಟಣಗಳನ್ನು ಭೇದಿಸಿದವನೂ, ಧರ್ಮತತ್ಪರನೂ, ಸತ್ತ್ವಗುಣೋಪೇತನೂ, ಪ್ರಜೆಗಳನ್ನು ಸಂತೋಷಗೊಳಿಸುವುದರಲ್ಲಿಯೇ ನಿರತನೂ ಆದ ಅಮಿತ್ರಜಿತ್ ಎಂಬ ರಾಜನೊಬ್ಬನಿದ್ದನು.

೪. ಆತನು ಯಶೋಧನನೂ, ಮಧುರಭಾಷಿಯೂ, ತೀಕ್ಷ್ಣಬುದ್ಧಿಯೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ, ಯಾವಾಗಲೂ ಯಜ್ಞಗಳನ್ನುಮಾಡಿ ಅವಭೃಥಸ್ನಾನಗಳಿಂದ ಒದ್ದೆಯಾದ ತಲೆಗೂದಲುಳ್ಳವನೂ ಆಗಿರುತ್ತಿದ್ದನು.

೫. ವಿನಯಾನ್ವಿತನೂ, ನೀತಿಮಾರ್ಗವನ್ನರಿತವನೂ, ಸಕಲಕಾರ್ಯಗಳಲ್ಲಿ ದಕ್ಷನೂ, ಸಕಲವಿದ್ಯೆಗಳಲ್ಲಿ ಪಾರಂಗತನೂ, ಸದ್ಗುಣಭರಿತನೂ, ಗುಣಿಗಳಲ್ಲಿ ಅಭಿಮಾನವುಳ್ಳವನೂ ಆಗಿದ್ದನು.

ಕೃತಜ್ಞೋ ಮಧುರಾಲಾಪಃ ಪಾಪಕರ್ಮಪರಾಙ್ಮುಖಃ ।
ಸತ್ಯವಾಂಛೌಚನಿಲಯಃ ಸತ್ಯವಾಗ್ವಿಜಿತೇಂದ್ರಿಯಃ ॥ ೬ ॥
ರಣಾಂಗಣೇ ಕೃತಾಂತಸ್ಯ ಸಂಖ್ಯಾವಾಂಶ್ಚ ಸದೋಜಿರೇ ।
ಕಾಮಿನೀ ಕೇಲಿಕಾಲಜ್ಞೋ ಯುವಾಽಪಿ ಸ್ಥವಿರಪ್ರಿಯಃ ॥ ೭ ॥
ಧರ್ಮಾಽರ್ಥಧನಕೋಶಶ್ಚ ಸಮೃದ್ಧಬಲವಾಹನಃ ।
ಸುಭಗಶ್ಚ ಸುರೂಪಶ್ಚ ಸುಮೇಧಾಃ ಸುಪ್ರಜಾ ಪ್ರಿಯಃ ॥ ೮ ॥
ಸ್ಥೈರ್ಯಧೈರ್ಯಸಮಾಪನ್ನೋ ದೇಶಕಾಲವಿಚಕ್ಷಣಃ ।
ಮಾನ್ಯಾನಾಂ ಮಾನದೋ ನಿತ್ಯಂ ಸರ್ವದೂಷಣವರ್ಜಿತಃ ॥ ೯ ॥
ವಾಸುದೇವಾಂಘ್ರಿಯುಗಲೇ ಚೇತೋವೃತ್ತಿಂ ನಿಧಾಯ ಚ ।
ಚಕಾರ ರಾಜ್ಯಂ ನಿರ್ದ್ವಂದ್ವಂ ಧಿಗ್ಧಿಗೀತಿ ವಿವರ್ಜಿತಂ ॥ ೧೦ ॥
ಅಲಂಘ್ಯಶಾಸನಃ ಶ್ರೀಮಾನ್ವಿಷ್ಣುಭಕ್ತಿಪರಾಯಣಃ ।
ಅಭುನಕ್ಪ್ರವರಾನ್ಭೋಗಾನ್ ಸಮಂತಾದ್ವಿಷ್ಣುಸಂಸ್ಕೃತಾನ್ ॥ ೧೧ ॥

---

೬. ಮತ್ತು ಕೃತಜ್ಞನೂ, ಮಧುರವಾಕ್ಯಹಿತನೂ, ಪಾಪಕರ್ಮಗಳಿಂದ ವಿಮುಖನೂ, ಸತ್ಯವಂತನೂ, ಶುಚಿಯೂ, ಸತ್ಯವಾದಿಯೂ, ಜಿತೇಂದ್ರಿಯನೂ ಆಗಿದ್ದನು.

೭. ಯುದ್ಧರಂಗದಲ್ಲಿ ಕಾಲಯಮನೂ, ಸಜ್ಜನರ ಗಡಣದಲ್ಲಿ ಗಣ್ಯನೂ, ಯುವತಿಯರೊಡನೆ ಕಾಮಕೇಳಿಯ ಕಾಲವನ್ನರಿತವನೂ, ಯೌವನವಂತನಾದರೂ ಜ್ಞಾನವಯೋವೃದ್ಧರಿಗೆ ಪ್ರಿಯನೂ ಆಗಿದ್ದನು.

೮. ಧರ್ಮಕ್ಕಾಗಿಯೇ ತನ್ನ ಧನಕೋಶವನ್ನು ವಿನಿಯೋಗಿಸುತ್ತ, ಅಸಂಖ್ಯಾತ ಸೈನ್ಯ ಮತ್ತು ವಾಹನಗಳುಳ್ಳವನಾಗಿ, ಆ ರಾಜನು ಸೌಭಾಗ್ಯಾನ್ವಿತನೂ, ಸುಂದರನೂ, ಸದ್ಬುದ್ಧಿಯೂ, ಸತ್ಪ್ರಜೆಗಳಿಗೆ ಪರಮಪ್ರಿಯನೂ ಆಗಿದ್ದನು.

೯. ಸ್ಥೈರ್ಯಧೈರ್ಯಗಳಿಂದ ಕೂಡಿದವನೂ, ದೇಶಕಾಲಗಳನ್ನು ಚೆನ್ನಾಗಿ ಅರಿತವನೂ, ನಿತ್ಯವೂ ಸತ್ಕಾರಾರ್ಹರಿಗೆ ಉಚಿತಪೂಜೆಗಳನ್ನು ಮಾಡುವವನೂ, ಸಕಲ ದೋಷಗಳನ್ನು ತ್ಯಜಿಸಿದವನೂ ಆಗಿದ್ದನು.

೧೦. ಆ ರಾಜೇಂದ್ರನು ಶ್ರೀ ವಾಸುದೇವನ ಪಾದಕಮಲಗಳಲ್ಲಿಯೇ ಅನನ್ಯವಾದ ಮನಸ್ಸನ್ನು ನೆಲೆಗೊಳಿಸಿ ಪ್ರಜೆಗಳ ಧಿಕ್ಕಾರಗಳಿಂದಲೂ, ಈತಿಬಾಧೆಗಳಿಂದಲೂ ರಹಿತವಾದ ರಾಜ್ಯಭಾರವನ್ನು ಏಕಾಧಿಪತ್ಯದಿಂದ ಮಾಡುತ್ತಿದ್ದನು.

೧೧. ಆತನ ಅಪ್ಪಣೆಯನ್ನು ಯಾರೂ ಮೀರುತ್ತಿರಲಿಲ್ಲ. ಶ್ರೀಮಂತನಾದ ಆತನು ವಿಷ್ಣುಭಕ್ತಿಪರಾಯಣನಾಗಿ ಸಮಸ್ತಗಳಾದ ಉತ್ತಮಭೋಗಗಳನ್ನೂ ಮಹಾವಿಷ್ಣುವಿಗೆ ನಿವೇದಿಸಿ ಅವುಗಳನ್ನು ಆತನ ಪ್ರಸಾದವೆಂಬ ಬುದ್ಧಿಯಿಂದಲೇ ಅನುಭವಿಸುತ್ತಿದ್ದನು.

ಹರೇರಾರಾಧನಾನ್ಯುಚ್ಚೈಃ ಪ್ರತಿಸೌಧಂ ಪದೇ ಪದೇ ।
ತಸ್ಯ ರಾಜ್ಯೇ ಸಮಭವನ್ಮಹಾಭಾಗ್ಯನಿಧೇಃ ಶಿವೇ ॥ ೧೨ ॥
ಗೋವೃಂದಗೋಪಗೋಪಾಲ ಗೋಪೀಜನ ಮನೋಹರ ।
ಗದಾಪಾಣೇ ಗುಣಾತೀತ ಗುಣಾಢ್ಯ ಗರುಡಧ್ವಜ ॥ ೧೩ ॥
ಕೇಶಿಹನ್ಕೈಟಭಾರಾತೇ ಕಂಸಾರೇ ಕಮಲಾಪತೇ ॥ ೧೪ ॥
ಕೃಷ್ಣ ಕೇಶವ ಕಂಜಾಕ್ಷ ಕೀನಾಶ ಭಯನಾಶನ ।
ಪುರುಷೋತ್ತಮ ಪಾಪಾರೇ ಪುಂಡರೀಕವಿಲೋಚನ ॥ ೧೫ ॥
ಪೀತಕೌಶೇಯವಸನ ಪದ್ಮನಾಭ ಪರಾತ್ಪರ ।
ಜನಾರ್ದನ ಜಗನ್ನಾಥ ಜಾಹ್ನವೀಜಲಜನ್ಮಭೂಃ ॥ ೧೬ ॥
ಜನ್ಮಿನಾಂ ಜನ್ಮಹರಣ ಜಂಜಪೂಕೌಘನಾಶನ ।
ಶ್ರೀವತ್ಸವಕ್ಷಃ ಶ್ರೀಕಂಠ ಶ್ರೀಕರ ಶ್ರೇಯಸಾಂ ನಿಧೇ ॥ ೧೭ ॥
ಶ್ರೀರಂಗಶಾರ್ಙ್ಗ ಕೋದಂಡ ಶೌರೇ ಶೀತಾಂಶುಲೋಚನ ।
ದೈತ್ಯಾರೇ ದಾನವಾರಾತೇ ದಾಮೋದರ ದುರಂತಕ ॥ ೧೮ ॥
ದೇವಕೀಹೃದಯಾನಂದ ದಂದಶೂಕೇಶ್ವರೇಶಯ ।
ವಿಷ್ಣೋ ವೈಕುಂಠನಿಲಯ ಬಾಣಾರೇ ವಿಷ್ಟರಶ್ರವಃ ॥ ೧೯ ॥

---

೧೨. ಪಾರ್ವತಿಯೆ! ಆ ಮಹಾಭಾಗ್ಯಶಾಲಿಯ ರಾಜ್ಯದ ಪ್ರತಿಯೊಂದು ಮನೆಯಲ್ಲಿಯೂ ಅಡಿಗಡಿಗೂ ಶ್ರೀಮನ್ನಾರಾಯಣನ ಆರಾಧನೆಯ ಉತ್ಸವಗಳು ನಡೆಯುತ್ತಿದ್ದುವು.

೧೩–೨೦. "ಗೋಸಮೂಹವನ್ನು ಕಾಪಾಡಿದ ಗೋಪಾಲನೆ! ಗೋಪಿಜನ ಮನೋಹರನೆ! ಗದಾಪಾಣಿಯೆ! ತ್ರಿಗುಣಗಳನ್ನು ಮೀರಿದವನೆ! ಸಮಸ್ತ ಕಲ್ಯಾಣಗುಣನಿಲಯನೆ! ಗರುಡಧ್ವಜನೆ! ಕೇಶಿವೈರಿಯೆ! ಕೈಟಭಮರ್ದನನೆ! ಕಂಸನಿಷೂದನನೆ! ಲಕ್ಷ್ಮೀರಮಣನೆ! ಕೃಷ್ಣ! ಕೇಶವ! ಕಮಲನಯನ! ರಾಕ್ಷಸಭಯವನ್ನು ನಿವಾರಿಸಿದವನೆ! ಪುರುಷೋತ್ತಮ! ಪಾಪದೂರನೆ! ಪುಂಡರೀಕಾಕ್ಷ! ಪೀತಾಂಬರಧಾರಿ! ಪದ್ಮನಾಭ! ಪರವೆನಿಸಿದ ಪ್ರಕೃತಿಗೂ ಪರನಾದವನೆ! ಜನಾರ್ದನ! ಲೋಕೇಶ್ವರ! ಗಂಗಾಜಲಕ್ಕೆ ಜನ್ಮಸ್ಥಳವಾದವನೆ! ಹುಟ್ಟಿ ಸಾಯುವವರ ಜನ್ಮಬಂಧವನ್ನು ಕಳೆಯುವವನೆ! ಪಾಪರಾಶಿಯನ್ನು ನಾಶಮಾಡುವವನೆ! ಶ್ರೀವತ್ಸಾಂಕಿತವಕ್ಷನೆ! ಶ್ರೀಕಂಠ! ಐಶ್ವರ್ಯಪ್ರದ! ಸಕಲ ಶ್ರೇಯಸ್ಸುಗಳ ನೆಲೆಯಾದವನೆ! ಶ್ರೀರಂಗನಾಥ! ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದವನೆ! ಶೌರಿಯೆ! ಚಂದ್ರಶೀತಲನೇತ್ರನೆ! ರಾಕ್ಷಸಶತ್ರುವೆ! ದಾನವ ಮರ್ದನನೆ! ದಾಮೋದರನೆ! ದುಷ್ಟರಿಗೆ ಯಮನಾದವನೆ! ದೇವಕಿಯ ಹೃದಯಕ್ಕೆ ಆನಂದವನ್ನುಂಟುಮಾಡಿದವನೆ! ಸರ್ಪರಾಜನಾದ ಆದಿಶೇಷನ

ವಿಷ್ವಕ್ಸೇನ ವಿಭೋ ವೀರ ವನಮಾಲಿನ್ಬಲಿಪ್ರಿಯ ।
ತ್ರಿವಿಕ್ರಮ ತ್ರಿಲೋಕೇಶ ಚಕ್ರಪಾಣೇ ಚತುರ್ಭುಜ ॥ ೨೦ ॥
ಇತ್ಯಾದೀನಿ ಪವಿತ್ರಾಣಿ ನಾಮಾನಿ ಪ್ರತಿಮಂದಿರೇ ।
ಸ್ತ್ರೀವೃದ್ಧಬಾಲಗೋಪಾಲವದನೋದೀರಿತಾನಿ ತು ॥ ೨೧ ॥
ಶ್ರೂಯಂತೇ ಯತ್ರ ಕುತ್ರಾಽಪಿ ರಮ್ಯಾಣಿ ಮಧುವಿದ್ವಿಷಃ ।
ಸುರಮ್ಯಕಾನನಾನ್ಯೇವ ವಿಲೋಕ್ಯಂತೇ ಗೃಹೇ ಗೃಹೇ ॥ ೨೨ ॥
ವಿಚಿತ್ರಾಣಿ ಚರಿತ್ರಾಣಿ ಗೀಯಂತೇ ಚ ಗೃಹೇ ಗೃಹೇ ।
ಸೌಧಭಿತ್ತಿಷು ದೃಶ್ಯಂತೇ ಚಿತ್ರಾಣಿ ಕೃತ್ರಿಮಾಣಿ ಚ ॥ ೨೩ ॥
ಋತೇ ಹರಿಕಥಾಯಾಸ್ತು ನಾಽನ್ಯಾ ವಾರ್ತಾ ನಿಶಮ್ಯತೇ ।
ಹರಿಣಾ ನೈವ ವಧ್ಯಂತೇ ಹರಿಣಾ ಮಾಂಸಧಾರಿಣಃ ॥ ೨೪ ॥
ತಸ್ಯ ರಾಜ್ಞೋ ಭಯಾದ್ವ್ಯಾಧೈರರಣ್ಯೇ ಸುಖಚಾರಿಣಃ ।
ನ ಮತ್ಸ್ಯಾ ನೈವ ಚ ಬಕಾ ವರಾಹಾಶ್ಚ ನ ಕೇನಚಿತ್ ॥ ೨೫ ॥

---

ಮೇಲೆ ಪವಡಿಸಿರುವವನೆ! ಸರ್ವವ್ಯಾಪಿಯೆ! ವೈಕುಂಠವಾಸಿಯೆ! ಬಾಣ ಶತ್ರುವೆ! ವಿಷ್ಟರಶ್ರವನೆ! ವಿಷ್ವಕ್ಸೇನ! ಸರ್ವೇಶ್ವರ! ಮಹಾವೀರ! ವನಮಾಲಾ ಧರನೆ! ಬಲಿಪ್ರಿಯನೆ! ತ್ರಿವಿಕ್ರಮನೆ! ಮೂರು ಲೋಕಗಳಿಗೂ ಒಡೆಯನೆ! ಚಕ್ರವನ್ನು ಕೈಯಲ್ಲಿ ಹಿಡಿದಿರುವವನೆ! ಚತುರ್ಭುಜ!''

೨೧. ಇವೇ ಮುಂತಾದ ಪಾವನಗಳಾದ ವಿಷ್ಣುನಾಮಗಳನ್ನು ಪ್ರತಿ ಯೊಂದು ಮನೆಯಲ್ಲಿಯೂ ಸ್ತ್ರೀಯರೂ, ಬಾಲಕರೂ, ವೃದ್ಧರೂ, ಗೋಪಾಲಕರೂ ಬಾಯಿಯಿಂದ ಉಚ್ಚರಿಸುತ್ತಿದ್ದರು.

೨೨. ಎಲ್ಲೆಲ್ಲಿ ನೋಡಿದರೂ ಮಧುಮರ್ದನನ ಮನೋಹರ ನಾಮಗಳೇ ಕೇಳಿಬರುತ್ತಿದ್ದುವು. ಒಂದೊಂದು ಮನೆಯಲ್ಲಿಯೂ ರಮ್ಯಗಳಾದ ಉಪವನ ಗಳು ಕಾಣುತ್ತಿದ್ದುವು.

೨೩. ಮನೆಮನೆಗಳಲ್ಲಿಯೂ ಪರಮಾತ್ಮನ ವಿಚಿತ್ರವ್ಯಾಪಾರಗಳ ಚರಿತ್ರೆ ಗಳೇ ಹಾಡಲ್ಪಡುತ್ತಿದ್ದುವು. ಮಹಡಿಗಳ ಗೋಡೆಗಳ ಮೇಲೆ ಚಿತ್ರಕಾರರಿಂದ ಬರೆಯಲ್ಪಟ್ಟ ವೈಷ್ಣವಚಿತ್ರಗಳು ಬಹಳವಾಗಿ ಕಂಗೊಳಿಸುತ್ತಿದ್ದುವು.

೨೪-೨೫. ಹರಿಕಥೆಯೊಂದನ್ನುಳಿದು ಎಲ್ಲಿಯೂ ಬೇರೊಂದು ಮಾತೇ ಕೇಳುತ್ತಿರಲಿಲ್ಲ. ಆ ಮಹಾರಾಜನ ಭಯದಿಂದ ಬೇಡರೂ ಅರಣ್ಯಗಳಲ್ಲಿ ಜಿಂಕೆ ಗಳನ್ನು ಕೊಲ್ಲದಿರಲು ಅವುಗಳು ಹೃಷ್ಟಪುಷ್ಟಗಳಾಗಿ ಸುಖದಿಂದ ಓಡಾಡಿ ಕೊಂಡಿದ್ದುವು. ಆ ಭಯದಿಂದಲೇ ಸಾಧಾರಣವಾಗಿ ಮತ್ಸ್ಯಮಾಂಸಗಳನ್ನು ತಿನ್ನುವವರೂ ಮೀನುಗಳನ್ನಾಗಲಿ, ಬಕಪಕ್ಷಿಗಳನ್ನಾಗಲಿ, ವರಾಹಗಳನ್ನಾಗಲಿ ಎಲ್ಲಿಯೂ ಕೊಲ್ಲುತ್ತಿರಲಿಲ್ಲ.

ಹನ್ಯಂತೇ ಕ್ವಾಽಪಿ ತದ್ಭೀತ್ಯಾ ಮತ್ಸ್ಯಮಾಂಸಾಽಶಿನಾಽಪಿ ವೈ ।
ಅಪುತ್ರಾ ನ ನರಾಸ್ತಸ್ಯ ರಾಷ್ಟ್ರೇಽಮಿತ್ರಜಿತಃ ಕ್ವಚಿತ್ ॥ ೨೬ ॥
ಸ್ತನ್ಯಪಾನಂ ನ ಕುರ್ವಂತಿ ಸಂಪ್ರಾಪ್ಯ ಹರಿವಾಸರಂ ।
ಪಶವೋಽಪಿ ತೃಣಾಽಽಹಾರಂ ಪರಿತ್ಯಜ್ಯ ಹರೇರ್ದಿನೇ ।
ಉಪೋಷಣಪರಾ ಜಾತಾ ಅನ್ಯೇಷಾಂ ಕಾ ಕಥಾ ನೃಣಾಂ ॥ ೨೭ ॥
ಮಹಾಮಹೋತ್ಸವಃ ಸರ್ವೈಃ ಪುರೌಕೋಭಿರ್ವಿತನ್ಯತೇ ।
ಅಸ್ಮಿನ್ಪ್ರಶಾಸತಿ ಭುವಂ ಸಂಪ್ರಾಪ್ತೇ ಹರಿವಾಸರೇ ॥ ೨೮ ॥
ಯೋ ವಿಷ್ಣುಭಕ್ತಿರಹಿತಃ ಪ್ರಾಣೈರಪಿ ಧನೈರಪಿ ।
ಸ ಏವ ದಂಡ್ಯೋ ಭುಂಕ್ತೇ ಯೋ ರಾಜ್ಞೋಽಮಿತ್ರಜಿತಃ ಕ್ಷಿತೌ ॥ ೨೯ ॥
ಅಂತ್ಯಜಾ ಅಪಿ ತದ್ರಾಷ್ಟ್ರೇ ಶಂಖಚಕ್ರಾಂಕಧಾರಿಣಃ ।
ಸಂಪ್ರಾಪ್ಯ ವೈಷ್ಣವೀಂ ದೀಕ್ಷಾಂ ದೀಕ್ಷಿತಾ ಇತಿ ಸಂಸ್ಥಿತಾಃ ॥ ೩೦ ॥
ಶುಭಾನಿ ಯಾನಿ ಕರ್ಮಾಣಿ ಕ್ರಿಯಂತೇಽನುದಿನಂ ಜನೈಃ ।
ವಾಸುದೇವೇ ಸಮರ್ಪ್ಯಂತೇ ತಾನಿ ತೈರಫಲೇಪ್ಸುಭಿಃ ॥ ೩೧ ॥

---

೨೬. ಆ ಅಮಿತ್ರಜಿದ್ರಾಜನ ರಾಷ್ಟ್ರದಲ್ಲೆಲ್ಲಿಯೂ ಪುತ್ರಹೀನರಾದ ಜನರೇ ಇರಲಿಲ್ಲ. ಹರಿವಾಸರವು ಬರಲು ಎಳೆಯ ಮಕ್ಕಳೂ ಸ್ತನ್ಯಪಾನವನ್ನು ಮಾಡುತ್ತಿರಲಿಲ್ಲ.

೨೭–೨೮. ಹರಿದಿನಗಳಲ್ಲಿ ಪಶುಗಳೂ ಹುಲ್ಲುಮೇಯುವುದನ್ನುಳಿದು ಉಪವಾಸವನ್ನು ಮಾಡುತ್ತಿದ್ದುವೆಂದಮೇಲೆ ಮಿಕ್ಕ ಮನುಷ್ಯರ ಮಾತನ್ನು ಬೇರೆ ಹೇಳಲೇಕೆ? ಈತನು ರಾಜ್ಯವನ್ನಾಳುತ್ತಿರಲು ಹರಿವಾಸರವು ಪ್ರಾಪ್ತವಾದ ದಿನವಲ್ಲಿ ಸಮಸ್ತಪುರನಿವಾಸಿಗಳೂ ಸೇರಿ ಅದ್ಭುತವಾದ ಮಹೋತ್ಸವವೊಂದನ್ನು ನಡೆಸುತ್ತಿದ್ದರು.

೨೯. ರಾಜನಾದ ಅಮಿತ್ರಜಿತನ ಆಳ್ವಿಕೆಯಲ್ಲಿ ಯಾವನು ವಿಷ್ಣುಭಕ್ತಿಯನ್ನು ಮಾಡುವುದಿಲ್ಲವೊ, ಯಾವನು ಹರಿವಾಸರದಲ್ಲಿ ಭೋಜನವನ್ನು ಮಾಡುವನೊ, ಅವರಿಗೆ ಪ್ರಣಾಂತವಾದ ಶಿಕ್ಷೆಯೂ ಸರ್ವಸ್ವಹರಣವೂ ದಂಡಗಳಾಗಿದ್ದುವು.

೩೦. ಆತನ ರಾಷ್ಟ್ರದಲ್ಲಿ ಅಂತ್ಯಜರೂ ಶಂಖಚಕ್ರಗಳ ಚಿಹ್ನೆಗಳನ್ನು ಧರಿಸಿಕೊಂಡು ವೈಷ್ಣವದೀಕ್ಷೆಯನ್ನು ಸ್ವೀಕರಿಸಿ ದೀಕ್ಷಿತರೆಂದೇ ಕರೆಯಿಸಿಕೊಳ್ಳುತ್ತಲಿದ್ದರು.

೩೧. ಜನರು ದಿನದಿನದಲ್ಲಿಯೂ ಯಾವ ಶುಭಕರ್ಮಗಳನ್ನು ಮಾಡುತ್ತಿದ್ದರೊ, ಅವುಗಳನ್ನೆಲ್ಲ ಫಲಾಪೇಕ್ಷೆಯಿಲ್ಲದವರಾಗಿ ಶ್ರೀಮನ್ನಾರಾಯಣನಲ್ಲಿಯೇ ಸಮರ್ಪಿಸುತ್ತಿದ್ದನು.

ವಿನಾ ಮುಕುಂದ ಗೋವಿಂದ ಪರಮಾನಂದಮಚ್ಯುತಂ ।
ನಾಽನ್ಯೋ ಜಪ್ಯೇತ ನಮ್ಯೇತ ಸಭಾಜ್ಯೇತ ಜನೈಃ ಕ್ವಚಿತ್ ।
ಕೃಷ್ಣ ಏವ ಪರೋ ಬಂಧುಸ್ತಸ್ಯಾಽಽಸೀದವನೀಪತೇಃ ॥ ೩೨ ॥
ಏವಂ ತಸ್ಮಿನ್ಮಹೀಪಾಲೇ ರಾಜ್ಯೇ ಸಮನುಶಾಸತಿ ।
ಏಕದಾ ನಾರದಃ ಶ್ರೀಮಾಂಸ್ತಂ ದಿದೃಕ್ಷುಃ ಸಮಾಯಯೌ ॥ ೩೩ ॥
ರಾಜ್ಞಾ ಸಮರ್ಚಿತಃ ಸೋಽಥ ಮಧುಪರ್ಕವಿಧಾನತಃ ।
ನಾರದೋ ವರ್ಣಯಾಮಾಸ ತಮಮಿತ್ರಜಿತಂ ನೃಪಂ ॥ ೩೪ ॥

ಶ್ರೀ ನಾರದ ಉವಾಚ:—

ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಪ್ಯಸಿ ದಿವೌಕಸಾಂ ।
ಸರ್ವಭೂತೇಷು ಗೋವಿಂದಂ ಪರಿಪಶ್ಯನ್ವಿಶಾಂಪತೇ ॥ ೩೫ ॥
ಯೋ ವೇದಪುರುಷೋ ವಿಷ್ಣುರ್ಯೋ ಯಜ್ಞಪುರುಷೋ ಹರಿಃ ।
ಯೋಽಂತರಾತ್ಮಾಸ್ಯ ಜಗತಃ ಕರ್ತಾ ಹರ್ತಾಽವಿತಾ ವಿಭುಃ ॥ ೩೬ ॥
ತನ್ಮಯಂ ಪಶ್ಯತೋ ವಿಶ್ವಂ ತವ ಭೂಪಾಲಸತ್ತಮ ।
ದರ್ಶನಂ ಪ್ರಾಪ್ಯ ಶುಭದಂ ಶುಚಿತ್ವಮಗಮಂ ಪರಂ ॥ ೩೭ ॥

---

೩೨. ಮುಕುಂದನೂ, ಗೋವಿಂದನೂ, ಪರಮಾನಂದಸ್ವರೂಪನೂ ಆದ ಅಚ್ಯುತನೊಬ್ಬನಿಗಲ್ಲದೆ ರಾಜ್ಯದ ಜನರು ಬೇರೆ ಯಾರಿಗೂ ಜಪಗಳನ್ನಾಗಲಿ, ನಮಸ್ಕಾರಗಳನ್ನಾಗಲಿ, ಪೂಜೆಗಳನ್ನಾಗಲಿ ಸಲ್ಲಿಸುತ್ತಿರಲಿಲ್ಲ. ಆ ಮಹಾರಾಜನಿಗೆ ಶ್ರೀಕೃಷ್ಣನೇ ಪರಮದೈವತವಾಗಿದ್ದನು.

೩೩. ಇಂತು ಆ ಮಹಾರಾಜನು ಧರ್ಮದಿಂದ ರಾಜ್ಯವನ್ನಾಳುತ್ತಿರಲು ಒಮ್ಮೆ ನಾರದಮಹಾಮುನಿಯು ಆತನನ್ನು ನೋಡಬೇಕೆಂಬ ಕುತೂಹಲದಿಂದ ಅಲ್ಲಿಗೈತಂದನು.

೩೪. ರಾಜನೂ ಆತನಿಗೆ ಮಧುಪರ್ಕವೇ ಮುಂತಾದ ವಿಧಾನದಿಂದ ಪೂಜೆಯನ್ನು ಮಾಡಲು ನಾರದನು ಆ ಅಮಿತ್ರಜಿದ್ರಾಜನನ್ನು ಹೊಗಳತೊಡಗಿದನು.

೩೫. ನಾರದನು ಹೇಳುತ್ತಾನೆ:—ಮಹಾರಾಜನೆ! ಸಕಲ ಪ್ರಾಣಿಗಳಲ್ಲಿಯೂ ಪರಮಾತ್ಮನನ್ನೇ ಕಾಣುತ್ತಿರುವ ನೀನೇ ಧನ್ಯನು. ಕೃತಾರ್ಥನು. ಸರ್ವರಿಗೆ ಸಮ್ಮಾನಾರ್ಹನೂ ಆಗಿರುವೆ.

೩೬–೩೭. ವೇದವೇದ್ಯನಾದ ಯಾವ ಪರಮಪುರುಷನು ವಿಷ್ಣುವೆನಿಸಿರುವನೊ, ಯಾವ ಯಜ್ಞಪುರುಷನು ಶ್ರೀ ಹರಿಯಾಗಿರುವನೊ, ಯಾವನು ಸರ್ವವ್ಯಾಪಿಯಾಗಿ ಬ್ರಹ್ಮಾಂಡಕ್ಕೆ ಅಂತರ್ಯಾಮಿಯೆನಿಸಿ ಅದರ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಿರುವನೊ, ಅಂತಹ ಶ್ರೀಮನ್ನಾರಾಯಣನನ್ನೇ

ಏಷ ಏವ ಹಿ ಸಾರೋಽತ್ರ ಸಂಸಾರೇ ಕ್ಷಣಭಂಗುರೇ ।
ಕಮಲಾಕಾಂತಪಾದಾಬ್ಜಭಕ್ತಿಭಾವೋಽಖಿಲಪ್ರದಃ ॥ ೩೮ ॥
ಪರಿತ್ಯಜ್ಯ ಹಿ ಯಃ ಸರ್ವಂ ವಿಷ್ಣುಮೇಕಂ ಸದಾ ಭಜೇತ್ ।
ಸುಮೇಧಸಂ ಭಜಂತೇ ತಂ ಪದಾರ್ಥಾಃ ಸರ್ವ ಏವ ಹಿ ॥ ೩೯ ॥
ಹೃಷೀಕೇಶೇ ಹೃಷೀಕಾಣಿ ಯಸ್ಯ ಸ್ಥೈರ್ಯಂ ಗತಾನ್ಯಹೋ ।
ಸ ಏವ ಸ್ಥೈರ್ಯಮಾಪ್ನೋತಿ ಬ್ರಹ್ಮಾಂಡೇಽತೀವ ಚಂಚಲೇ ॥ ೪೦ ॥
ಯೌವನಂ ಧನಮಾಯುಷ್ಯಂ ಜಲಂ ಪದ್ಮದಲೇ ಯಥಾ ।
ಅತೀವ ಚಂಚಲಂ ಜ್ಞಾತ್ವಾಽಚ್ಯುತಮೇವ ಸದಾಽಽಶ್ರಯೇತ್ ॥ ೪೧ ॥
ವಾಚಿ ಚೇತಸಿ ಕರ್ಣೇಽಥ ಯಸ್ಯ ದೇವೋ ಜನಾರ್ದನಃ ।
ಸ ಏವ ಸರ್ವದಾ ವಂದ್ಯೋ ನರರೂಪೀ ಜನಾರ್ದನಃ ।
ನಿರ್ವ್ಯಾಜಪ್ರಣಿಧಾನೇನ ಶೀಲಯಿತ್ವಾ ಶ್ರಿಯಃಪತಿಂ ।
ಪುರುಷೋತ್ತಮತಾಂ ಕೋ ನ ಪ್ರಾಪ್ತಸ್ತ್ವಮಿವ ಭೂತಲೇ ॥ ೪೨ ॥

---

ವಿಶ್ವದಲ್ಲಿ ಎಲ್ಲೆಡೆಗಳಲ್ಲಿಯೂ ಕಾಣುತ್ತ ಚಕ್ರವರ್ತಿಗಳಲ್ಲಿ ಉತ್ತಮನೆನಿಸಿದ ನಿನ್ನ ಪವಿತ್ರವಾದ ದರ್ಶನವನ್ನು ಪಡೆದು ನಾನೂ ಬಹಳ ಪರಿಶುದ್ಧನೇ ಆಗಿರುವೆನು. ಕ್ಷಣಭಂಗುರವೆನಿಸಿದ ಈ ಸಂಸಾರದಲ್ಲಿ ಲಕ್ಷ್ಮೀರಮಣನ ಪಾದ ಕಮಲಗಳಲ್ಲಿಡುವ ಅನನ್ಯ ಭಕ್ತಿಯೊಂದೇ ಸಾರಭೂತವಾದುದು. ಅದೇ ಸರ್ವಾಭೀಷ್ಟಗಳನ್ನೂ ಕೊಡುವುದು.

೩೯. ಯಾವನು ಸಕಲವನ್ನೂ ಬಿಟ್ಟು ವಿಷ್ಣುವೊಬ್ಬನನ್ನೇ ನಿರಂತರ ದಲ್ಲಿಯೂ ಭಜಿಸುತ್ತಿರುವನೊ, ಆ ಬುದ್ಧಿಶಾಲಿಯನ್ನು ಸಕಲ ಸೌಖ್ಯಗಳೂ ತಾವಾಗಿಯೇ ಓಲೈಸುವುವು.

೪೦. ಅತ್ಯಂತ ಚಂಚಲವಾದ ಈ ಬ್ರಹ್ಮಾಂಡದಲ್ಲಿ ಯಾವ ಮಾನವನ ಇಂದ್ರಿಯಗಳು ಪರಮಾತ್ಮನಲ್ಲಿ ಎಡಬಿಡದೆ ನೆಲಸಿರುವುವೊ, ಅವನೇ ಮನ ಸ್ಸಮಾಧಾನವನ್ನು ಪಡೆಯುವನು.

೪೧. ಯೌವನವೂ, ಐಶ್ವರ್ಯವೂ, ಆಯುಷ್ಯವೂ ಕಮಲದೆಲೆಯಲ್ಲಿ ಬಿದ್ದ ನೀರಿನ ಹನಿಯಂತೆ ಅಶಾಶ್ವತವೆಂಬುದನ್ನರಿತು ಪ್ರಾಜ್ಞನಾದವನು ಅಚ್ಯುತ ನನ್ನೇ ಆಶ್ರಯಿಸಬೇಕು.

೪೨. ಮಾತಿನಲ್ಲಿಯೂ, ಮನಸ್ಸಿನಲ್ಲಿಯೂ, ಕಿವಿಯಲ್ಲಿಯೂ, ಯಾವನಿಗೆ ಸರ್ವಕಾಲದಲ್ಲಿಯೂ ಜನಾರ್ದನನಾಮವೇ ನಲಿದಾಡುತ್ತಿರುವುದೋ ಆತನೇ ವಂದನಾರ್ಹನು. ಆತನು ಮನುಷ್ಯಾಕಾರವನ್ನು ತಾಳಿದ ಪರಮಾತ್ಮನೆಂದೇ ತಿಳಿಯಬೇಕು. ಫಲಾಪೇಕ್ಷೆಯಿಲ್ಲದಂತೆ ಭಕ್ತಿಯನ್ನು ಮಾಡಿ ಶ್ರೀ ಕಾಂತನನ್ನು

ಅನಯಾ ವಿಷ್ಣುಭಕ್ತ್ಯಾ ತೇ ಸಂತುಷ್ಟೇಂದ್ರಿಯಮಾನಸಃ ।
ಉಪಕರ್ತುರ್ಮನಸಾ ಬ್ರೂಯಾಂ ತನ್ನಿಶಾಮಯ ಭೂಪತೇ ॥ ೪೩ ॥
ಮಾಲಾ ವಿದ್ಯಾಧರಸುತಾ ನಾಮ್ನಾ ಮಲಯಗಂಧಿನೀ ।
ಕ್ರೀಡಂತೀ ಪಿತುರಾಕ್ರೋಡೇ ಹೃತಾ ಕಂಕಾಲಕೇತುನಾ ॥ ೪೪ ॥
ಕಪಾಲಕೇತುಪುತ್ರೇಣ ದಾನವೇನ ಬಲೀಯಸಾ ॥ ೪೫ ॥
ಆಗಾಮಿನ್ಯಾಂ ತೃತೀಯಾಯಾಂ ತಸ್ಯಾಃ ಪಾಣಿಗ್ರಹಃ ಕಿಲ।
ಪಾತಾಲೇ ಚಂಪಕಾವತ್ಯಾಂ ನಗರ್ಯಾಂ ಸಾಽಸ್ತಿ ಸಾಂಪ್ರತಂ ॥ ೪೬ ॥
ಹಾಟಕೇಶಾತ್ಸಮಾಗಚ್ಛಂಸ್ತಯಾಽಹಂ ಸಾಽಶ್ರು ನೇತ್ರಯಾ ।
ದೃಷ್ಟಃ ಪ್ರಣಮ್ಯ ವಿಜ್ಞಪ್ತೋ ಯಥಾ ತಚ್ಛ ನಿಶಾಮಯ ॥ ೪೭ ॥
ಬ್ರಹ್ಮಚಾರಿನ್ಮುನಿಶ್ರೇಷ್ಠ ಗಂಧಮಾದನಶೈಲತಃ ।
ಬಾಲಕ್ರೀಡನಕಾಸಕ್ತಾಂ ಮಾಂ ಜಹ್ರೇ ತ್ರಸ್ತಮಾನಸಾಂ ॥ ೪೮ ॥

---

ಸಂತೋಷಗೊಳಿಸಿದ ಯಾವನು ತಾನೆ ನಿನ್ನಂತೆಯೇ ಭೂಲೋಕದಲ್ಲಿ ಪುರುಷ ಶ್ರೇಷ್ಠನೆನಿಸಿರುವುದಿಲ್ಲ?

೪೩. ಈ ನಿನ್ನ ಮಹಾವಿಷ್ಣುಭಕ್ತಿಯಿಂದ ನನ್ನ ಇಂದ್ರಿಯಗಳೂ ಮನಸ್ಸೂ ಸಂತೋಷಗೊಂಡಿರುವುವು. ಮಹಾರಾಜನೆ! ನಿನಗೆ ಉಪಕಾರವನ್ನು ಮಾಡುವ ಬುದ್ಧಿಯಿಂದ ನಾನು ಹೇಳುವುದನ್ನು ಕೇಳು.

೪೪. ಮಾಲಾವಿದ್ಯಾಧರನಿಗೆ ಮಲಯಗಂಧಿನಿಯೆಂಬ ಹೆಸರಿನ ಒರ್ವ ಕನ್ಯೆಯಿರುವಳು. ತಂದೆಯ ಉದ್ಯಾನವನದಲ್ಲಿ ಆಡುತ್ತಿದ್ದ ಆಕೆಯನ್ನು ಕಂಕಾಳ ಕೇತುವೆಂಬುವನು ಅಪಹರಿಸಿದನು.

೪೫. ಕಪಾಲಕೇತುವಿನ ಪುತ್ರನಾದ ಆತನು ಮಹಾಬಲಶಾಲಿಯಾದ ರಾಕ್ಷಸನಾಗಿರುವನು.

೪೬. ಮುಂದೆ ಬರಲಿರುವ ತದಿಗೆಯ ದಿನದಲ್ಲಿ ಆಕೆಯ ಮದುವೆಯಾಗ ಲಿರುವುದು. ಪಾತಾಳಲೋಕದ ಚಂಪಕಾವತಿಯೆಂಬ ನಗರದಲ್ಲಿ ಈಗ ಆಕೆಯು ಬಂಧನದಲ್ಲಿರುವಳು

೪೭. ಹಾಟಕೇಶ್ವರಕ್ಷೇತ್ರದಿಂದ ಬರುತ್ತ ದಾರಿಯಲ್ಲಿ ಕಣ್ಣೀರನ್ನು ಸುರಿಸುತ್ತಿದ್ದ ಆಕೆಯನ್ನು ನಾನು ಕಂಡೆನು. ಆಕೆಯು ನನಗೆ ನಮಸ್ಕರಿಸಿ ವಿಜ್ಞಾಪಿಸಿ ಕೊಂಡುದನ್ನು ಹೇಳುವೆನು; ಕೇಳು.

೪೮. "ಬ್ರಹ್ಮಚಾರಿಯೆ! ಮುನಿಶ್ರೇಷ್ಠನೆ! ಗಂಧಮಾದನಪರ್ವತದಲ್ಲಿ ಬಾಲಕ್ರೀಡೆಯಲ್ಲಿ ಆಸಕ್ತಳಾಗಿದ್ದ ನನ್ನ ಮನಸ್ಸಿನಲ್ಲಿ ಭಯವನ್ನುಂಟುಮಾಡಿ ಈ ರಾಕ್ಷಸನು ನನ್ನನ್ನಪಹರಿಸಿದನು.

ಕಂಕಾಲಕೇತುರ್ದುರ್ವೃತ್ತಸ್ತಸ್ಯ ನಾಽಸ್ತಿ ಚ ಘಾತಕಃ ।
ಸ ಸ್ವತ್ರಿಶೂಲಘಾತೇನ ವ್ರಿಯತೇ ನಾಽನ್ಯಥಾ ರಣೇ ।
ಜಗತ್ಪರ್ಯಾಕುಲೀಕೃತ್ಯ ನಿದ್ರಾತ್ಯಥ ವಿನಿರ್ಭಯಃ ॥ ೪೯ ॥
ಯದಿ ಕೋಽಪಿ ಕೃತಜ್ಞೋ ಮಾಂ ಹತ್ವೇಮಂ ದುಷ್ಟದಾನವಂ ।
ಮದ್ದತ್ತೇನ ತ್ರಿಶೂಲೇನ ನಯೇದ್ಭದ್ರಂ ಚ ವೈ ಕೃತಂ ॥ ೫೦ ॥
ಯದ್ಯತ್ರೋಪಚಿಕೀರ್ಷುಸ್ತ್ವಂ ರಕ್ಷ ಮಾಂ ದುಷ್ಟದಾನವಾತ್ ।
ಮಮಾಽಪಿ ಹಿ ವರೋ ದತ್ತೋ ಭಗವತ್ಯೋಮಯಾ ಪುರಾ ।
ವಿಷ್ಣುಭಕ್ತೋ ಯುವಾ ಧೀಮಾನ್ಪುತ್ರಿ ತ್ವಾಂ ಪರಿಣೇಷ್ಯತಿ ॥ ೫೧ ॥
ಅತ್ರೈತೀಯಾತಿಥಿ ಯಥಾ ತದ್ವಾಕ್ಯಂ ತಥ್ಯತಾಂ ವ್ರಜೇತ್ ।
ತಥಾ ನಿಮಿತ್ತಮಾತ್ರಂ ತ್ವಂ ಭವ ಯತ್ನಂ ಸಮಾಚರ ॥ ೫೨ ॥
ಇತಿ ತದ್ವಚನಾದ್ರಾಜನ್ವಿಷ್ಣುಭಕ್ತಿಪರಾಯಣಂ ।
ಯುವಾನಂ ಚಾಽಪಿ ಧೀಮಂತಂ ತ್ವಾಮನುಪ್ರಾಪ್ತವಾನಹಂ ॥ ೫೩ ॥

---

೪೯. ದುರಾಚಾರಿಯಾದ ಈ ಕಂಕಾಳಕೇತುವಿಗೆ ಮರಣವನ್ನುಂಟು ಮಾಡುವವನು ಬೇರೊಬ್ಬನಿಲ್ಲ. ಯುದ್ಧದಲ್ಲಿಯಾದರೂ ಅವನು ತನ್ನ ತ್ರಿಶೂಲದಿಂದಲೇ ಸಾಯುವನಲ್ಲದೆ ಬೇರೆ ಆಯುಧಗಳಿಂದ ಸಾಯುವುದಿಲ್ಲ. ಸಕಲ ಬ್ರಹ್ಮಾಂಡವನ್ನು ಅಲ್ಲೋಲಗೊಳಿಸಿ ಬಂದು ಈಗ ನಿರ್ಭಯನಾಗಿ ಇಲ್ಲಿ ನಿದ್ರಿಸುತ್ತಿರುವನು.

೫೦. ಯಾವನಾದರೂ ಮಹಾತ್ಮನು ಬಂದು ನಾನು ಕೊಡುವ ತ್ರಿಶೂಲದಿಂದ ಈ ದುಷ್ಟರಾಕ್ಷಸನನ್ನು ನಿಗ್ರಹಿಸಿ ನನ್ನನ್ನು ಬಿಡಿಸಿಕೊಂಡು ಹೋದರೆ ಉಪಕಾರವನ್ನು ಮಾಡಿದಂತಾಗುವುದು.

೫೧. ಈ ಕಾರ್ಯದಲ್ಲಿ ನೀನು ಉಪಕಾರವನ್ನು ಮಾಡಬಯಸುವೆಯಾದರೆ ನನ್ನನ್ನು ಈ ದುಷ್ಟರಾಕ್ಷಸನಿಂದ ಸಂರಕ್ಷಿಸು. ದೇವೇಶ್ವರಿಯಾದ ಪಾರ್ವತಿಯು ನನಗೆ ಹಿಂದೆ 'ಪುತ್ರಿಯೆ! ವಿಷ್ಣುಭಕ್ತನೂ, ಯುವಕನಾದರೂ ಮಹಾಪ್ರಾಜ್ಞನೂ ಆದವನೊಬ್ಬನು ನಿನ್ನನ್ನು ಮದುವೆಯಾಗುವನು' ಎಂದು ವರವನ್ನು ಕೊಟ್ಟಿರುವಳು.

೫೨. ಆಕೆಯ ವಾಕ್ಯವು ನಾಳಿನ ತದಿಗೆಯೊಳಗೆ ಸತ್ಯವಾಗುವಂತೆ ನೀನೂ ನಿಮಿತ್ತಮಾತ್ರನಾಗಿದ್ದುಕೊಂಡು ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡು.''

೫೩. ಮಹಾರಾಜನೆ! ಇಂತೆಂದ ಆ ಮಲಯಗಂಧಿನಿಯ ಮಾತುಗಳನ್ನು ಕೇಳಿ ವಿಷ್ಣುಭಕ್ತಿಪರಾಯಣನೂ, ಪ್ರಾಪ್ತವಯಸ್ಕನೂ, ಮಹಾಮೇಧಾವಿಯೂ ಆಗಿರುವ ನಿನ್ನೆಡೆಗೆ ಬಂದಿರುವೆನು.

ತದ್ಗಚ್ಛ ಕಾರ್ಯಸಿದ್ಧ್ಯೈ ತ್ವಂ ಹತ್ವಾ ತಂ ದುಷ್ಟದಾನವಂ ।
ಆನಯಾಽಽಶು ಮಹಾಬಾಹೋ ಶುಭಾಂ ಮಲಯಗಂಧಿನೀಂ ॥ ೫೪ ॥
ಸಾ ತು ವಿದ್ಯಾಧರೀ ಬಾಲಾ ವಿಲೋಕ್ಯ ತ್ವಾಂ ನರೇಶ್ವರ ।
ಅವಶ್ಯಮೇವ ತಚ್ಛೂಲಂ ದಾಸ್ಯತೀತಿ ವಿನಿಶ್ಚಿತಂ ।
ಪಾರ್ವತೀವಚನಾದ್ದುಷ್ಟಂ ಘಾತಯಿಷ್ಯಸ್ಯಸಂಶಯಂ ॥ ೫೫ ॥
ಇತಿ ನಾರದವಾಕ್ಯಂ ಸ ನಿಶಮ್ಯಾಽಮಿತ್ರಜಿನ್ನೃಪಃ ।
ಅನಲ್ಪೋತ್ಕಲಿಕೋ ಜಾತೋ ವಿದ್ಯಾಧರಸುತಾಂ ಪ್ರತಿ ।
ಉಪಾಯಂ ಚಾಽಪಿ ಪಪ್ರಚ್ಛ ಗಂತುಂ ವೈ ಚಂಪಕಾವತೀಂ ॥ ೫೬ ॥
ನಾರದೇನ ಪುನಃ ಪ್ರೋಕ್ತಃ ಸ ರಾಜಾ ಗಿರಿರಾಜಜೇ ।
ತೂರ್ಣಮರ್ಣವಮಾಸಾದ್ಯ ಪೂರ್ಣಿಮಾದಿವಸೇ ನೃಪ ।
ಭವಾನ್ ದ್ರಕ್ಷ್ಯತಿ ಪೋತಸ್ಥ ಕಲ್ಪವೃಕ್ಷರಥಾಸ್ಥಿತಾಂ ॥ ೫೭ ॥
ತತ್ರ ದಿವ್ಯಾಂಗನಾಂ ಕಾಂಚಿದ್ದಿವ್ಯಪರ್ಯಂಕಸುಸ್ಥಿತಾಂ ।
ವೀಣಾಮಾದಾಯ ಗಾಯಂತೀಂ ಗಾಥಾಮತ್ಯಂತಸುಸ್ವರಂ ॥ ೫೮ ॥

---

೫೪. ಮಹಾಪರಾಕ್ರಮಿಯೆ! ಕಾರ್ಯಸಿದ್ಧಿಗಾಗಿ ಬೇಗನೆ ಹೊರಡು. ಆ ದುಷ್ಟದೈತ್ಯನನ್ನು ನಿಗ್ರಹಿಸಿ ಮಂಗಳಾಂಗಿಯಾದ ಆ ಮಲಯಗಂಧಿನಿಯನ್ನು ಕರೆದುಕೊಂಡು ಬರುವವನಾಗು.

೫೫. ರಾಜೇಂದ್ರನೆ! ಆ ವಿಧ್ಯಾಧರ ಕನ್ಯೆಯು ನಿನ್ನನ್ನು ನೋಡಿದ ಮಾತ್ರದಿಂದಲೇ ಖಂಡಿತವಾಗಿಯೂ ಆ ಶೂಲವನ್ನು ಕೊಡುವಳು. ಇದರಲ್ಲಿ ಸಂದೇಹವಿಲ್ಲ. ಪಾರ್ವತಿಯ ವರದಂತೆಯೇ ನೀನೂ ಆ ದುಷ್ಟನನ್ನು ನಿಸ್ಸಂಶಯವಾಗಿಯೂ ನಿಗ್ರಹಿಸುವೆ.

೫೬. ಅಮಿತ್ರಜಿನ್ಮಹಾರಾಜನು ನಾರದಮುನಿಯ ಈ ಮಾತುಗಳನ್ನು ಕೇಳಿ ಆ ವಿದ್ಯಾಧರಪುತ್ರಿಯ ವಿಷಯದಲ್ಲಿ ಅತ್ಯಂತ ಕುತೂಹಲವುಳ್ಳವನಾಗಿ ಚಂಪಕಾವತೀನಗರಕ್ಕೆ ಹೋಗುವ ಉಪಾಯವನ್ನು ಆತನಲ್ಲಿ ಕೇಳಿದನು.

೫೭. ಪರ್ವತರಾಜಪುತ್ರಿಯೆ! ನಾರದನು ಆ ರಾಜನಿಗೆ ಮತ್ತೆ ಹೇಳಿದನು. ಮಹಾರಾಜನೆ! ಪೂರ್ಣಿಮೆಯ ದಿವಸದಲ್ಲಿ ಮಹಾಸಮುದ್ರದ ಬಳಿಗೆ ಹೋಗಲು ಸಮುದ್ರಮಧ್ಯದಲ್ಲಿ ಒಂದು ದೋಣಿಯನ್ನೂ, ಅದರಲ್ಲಿ ಕಲ್ಪವೃಕ್ಷದ ಕೆಳಗೆ ರಥದಲ್ಲಿ ಕುಳಿತಿರುವ ಕನ್ಯೆಯೊಬ್ಬಳನ್ನೂ ನೋಡುವೆ.

೫೮. ಆ ದಿವ್ಯಾಂಗನೆಯು ದಿವ್ಯ ಪರ್ಯಂಕದಲ್ಲಿ ಪವಡಿಸಿ ವೀಣೆಯನ್ನು ಬಾಜಿಸುತ್ತ ಅತ್ಯಂತ ಮಧುರವಾದ ಧ್ವನಿಯಲ್ಲಿ ಮುಂದೆ ಹೇಳುವ ಗಾದೆಯನ್ನು ಹಾಡುತ್ತಿರುವಳು.

ಯತ್ಕರ್ಮವಿಹಿತಂ ಯೇನ ಶುಭಂ ವಾಽಪ್ಯಥವಾಽಶುಭಂ ।
ಸ ಏವ ಭುಂಕ್ತೇ ತತ್ತಥ್ಯಂ ವಿಧಿಸ್ತತ್ರನಿಯಂತ್ರಿತಃ ॥ ೫೯ ॥
ಗಾಥಾಮಿಮಾಂ ತು ಸಂಗೀಯ ಸರಥಾ ಸಮಹೀರುಹಾ ।
ಸಪರ್ಯಂಕಾ ಕ್ಷಣಾದೇವ ಮಧ್ಯೇ ಸಿಂಧುಂ ಪ್ರವೇಕ್ಷ್ಯತಿ ॥ ೬೦ ॥
ಭವಾನಪ್ಯವಿಶಂಕಂ ಚ ತತಃ ಪೋತಾಸ್ಮ್ಯಹಾರ್ಣವೇ ।
ತಮನುವ್ರಜತು ಕ್ಷಿಪ್ರಂ ಯಜ್ಞವಾರಾಹಸಾತ್ಮವಾನ್ ॥ ೬೧ ॥
ತತೋ ದ್ರಕ್ಷ್ಯಸಿ ಪಾತಾಲೇ ನಗರೀಂ ಚಂಪಕಾವತೀಂ ।
ಮಹಾಮನೋಹರಾಂ ರಾಜನ್ ಸನಾಥಾಂ ಬಾಲಯಾ ತಯಾ ॥ ೬೨ ॥
ಇತ್ಯುಕ್ತ್ವಾಽಂತರ್ಹಿತೋ ದೇವಿ ಸ ಚತುರ್ಮುಖನಂದನಃ ।
ರಾಜಾಽಪ್ಯರ್ಣವಮಾಸಾದ್ಯ ಯಥೋಕ್ತಂ ಪರಿಲಕ್ಷ್ಯ ಚ ॥ ೬೩ ॥
ವಿವೇಶಾಂತಃಸಮುದ್ರಂ ಚ ನಗರೀಮಾಸಸಾದ ತಾಂ ।
ಸಾಽಪಿ ವಿದ್ಯಾಧರೀ ಬಾಲಾ ನೇತ್ರಯೋಃ ಪ್ರಾಘುಣೀ ಕೃತಾ ॥ ೬೪ ॥
ತೇನ ರಾಜ್ಞಾ ತ್ರಿಜಗತೀಸೌಂದರ್ಯಶ್ರೀರಿವೈಕಿಕಾ ।
ಪಾತಾಲೇ ದೇವತೇಯಂ ವಾ ಮಮ ನೇತ್ರೋತ್ಸವಾಯ ಕಿಂ ॥ ೬೫ ॥

---

೫೯. "ಯಾವನಿಂದ ಯಾವ ಕರ್ಮವು ಮಾಡಲ್ಪಟ್ಟಿದೆಯೊ, ಶುಭವಾದರೂ ಅಶುಭವಾದರೂ ಆ ಕರ್ಮದ ಫಲವನ್ನು ಅವನೇ ಅನುಭವಿಸಬೇಕು. ಅದರಲ್ಲಿ ಬ್ರಹ್ಮನೂ ಸಹ ಅಸ್ವತಂತ್ರನಾಗಿರುವನು."

೬೦. ಈ ಗಾದೆಯನ್ನು ಹಾಡಿದಮೇಲೆ ಆಕೆಯು ನಿಮಿಷಮಾತ್ರದಲ್ಲಿಯೇ ರಥ, ವೃಕ್ಷ, ಪರ್ಯಂಕಾದಿಗಳೊಡನೆ ಸಮುದ್ರಮಧ್ಯದಲ್ಲಿ ಇಳಿದುಹೋಗುವಳು.

೬೧. ನೀನೂ ಆ ದೋಣಿಯಲ್ಲಿಯೇ ಕುಳಿತುಕೊಂಡು ಯಜ್ಞವರಾಹಸ್ವಾಮಿಯನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ ನಿಶ್ಚಿಂತೆಯಾಗಿ ಆಕೆಯನ್ನೇ ಹಿಂಬಾಲಿಸಬೇಕು.

೬೨. ಎಲೈ ರಾಜನೆ! ಬಳಿಕ ಪಾತಾಳಲೋಕಕ್ಕೆ ಹೋಗಿ ಆ ಬಾಲಕಿಯು ವಾಸವಾಗಿರುವ ಅತ್ಯಂತ ರಮಣೀಯವಾದ ಚಂಪಕಾವತಿಯನ್ನು ಕಾಣುವೆ."

೬೩. ಇಂತೆಂದು ಚತುರ್ಮುಖಪುತ್ರನಾದ ನಾರದನು ಅಂತರ್ಧಾನವನ್ನು ಹೊಂದಿದನು. ರಾಜನೂ ಸಮುದ್ರತೀರವನ್ನು ಸೇರಿ ಆತನು ಹೇಳಿದಂತೆಯೇ ಎಲ್ಲವೂ ನಡೆದುದನ್ನು ಕಂಡನು.

೬೪–೬೫. ತರುವಾಯ ಆತನು ಸಮುದ್ರವನ್ನು ಪ್ರವೇಶಿಸಿ ಆ ನಗರವನ್ನೂ ಸೇರಿದನು. ಮೂರು ಲೋಕಗಳ ಸೌಂದರ್ಯವನ್ನೆಲ್ಲ ಒಂದೇ ಮೂರ್ತಿಯಾಗಿ ಅಳವಡಿಸಿದಂತೆ ಮಹಾಸುಂದರಿಯಾಗಿದ್ದ ಆ ವಿದ್ಯಾಧರಕನ್ಯೆಯೂ ರಾಜೇಂದ್ರನ ಕಣ್ಣುಗಳಿಗೆ ಪ್ರಿಯಾತಿಥಿಯಾದಳು.

ನಿರಮಾಯಿ ಮಮೋದ್ದೇಶಾತ್ಸ್ರಷ್ಟ್ರಾಸೃಷ್ಟಿರ್ವಿಲಕ್ಷಣಾ ।
ಕುಹೂ ರಾಹುಭಯದ್ವೇಷಾತ್ಕಾಂತಿಶ್ಚಾಂದ್ರಮಸೀ ಕಿಮು ॥ ೬೬ ॥
ಯೋಷಿದ್ರೂಪಂ ಸಮಾಶ್ರಿತ್ಯ ತಿಷ್ಠತ್ಯತ್ರಾಕುತೋಭಯಾ ।
ಇತ್ಥಂ ಕ್ಷಣಂ ಚ ನಿರ್ವರ್ಣ್ಯ ಸ ರಾಜಾಽಗಚ್ಛದಂತಿಕಂ ॥ ೬೭ ॥
ಸಾ ವಿಲೋಕ್ಯಾಥ ತಂ ಬಾಲಂ ನಿತರಾಂ ಮಧುರಾಕೃತಿಂ ।
ವಿಶಾಲೋರಃಸ್ಥಲತಲಪ್ರಲಂಬತುಲಸೀಸ್ರಜಂ ॥ ೬೮ ॥
ಶಂಖಚಕ್ರಾಂಕಸುಭಗಭುಜದ್ವಯವಿರಾಜಿತಂ ।
ಹರಿನಾಮಾಕ್ಷರ ಸುಧಾ ಸುಧೌತರದನಾವಲಿಂ ॥ ೬೯ ॥
ಭವಾನೀಭಕ್ತಿಬೀಜೋತ್ಥಭೂರುಹಂ ಪುರುಷಾಕೃತಿಂ ।
ಅನೇನಾತ್ರ ಕೃತಂ ಕಸ್ಯ ಭವನಂ ಮಧುರಾಕೃತಿ ॥ ೭೦ ॥
ಇತಿ ಪರ್ಯಾಕುಲೀಕೃತ್ಯ ಚಕ್ಷುಷೀ ಚ ಮುಹುರ್ಮುಹುಃ ।
ಕಂಕಾಲಕೇತುರ್ದುರ್ವೃತ್ತಸ್ತ್ವವಧ್ಯಃ ಪರಹೇತಿಭಿಃ ॥ ೭೧ ॥

---

೬೬. "ಪಾತಾಳಲೋಕದಲ್ಲಿ ಈ ದೇವತೆಯು ನನಗಾಗಿಯೇ ನನ್ನ ಕಣ್ಣುಗಳಿಗೆ ಉತ್ಸವವನ್ನುಂಟುಮಾಡುವುದಕ್ಕಾಗಿಯೇ ಬ್ರಹ್ಮದೇವನಿಂದ ವಿಲಕ್ಷಣ ವನಿತೆಯಾಗಿ ನಿರ್ಮಿತಳಾಗಿರುವಳೇನೊ!

೬೭. ಅಥವಾ ಅಮಾವಾಸ್ಯೆ ರಾಹುಗಳ ಭಯದಿಂದ ಚಂದ್ರನ ಕಾಂತಿಯೇನಾದರೂ ಹೆಂಗಸಿನ ರೂಪವನ್ನು ತಾಳಿ ಇಲ್ಲಿಗೆ ಬಂದು ಯಾವ ಭಯವೂ ಇಲ್ಲದೆ ವಾಸಮಾಡುತ್ತಿರುವುದೊ ಏನೋ!?"

೬೮. ಇಂತೆಂದು ಕ್ಷಣಕಾಲದವರೆಗೂ ಯೋಚಿಸಿ ಆ ರಾಜನು ಆಕೆಯ ಬಳಿಗೆ ಹೋದನು. ಆ ಕನ್ಯೆಯೂ ಸರ್ವಾಂಗಗಳಲ್ಲಿಯೂ ಸುಂದರನಾಗಿದ್ದ ರಾಜನನ್ನು ನೋಡಿದಳು. ವಿಶಾಲವಾದ ಆತನ ವಕ್ಷಸ್ಥಳದಲ್ಲಿ ತುಳಸೀಮಾಲೆಯು ತೂಗಾಡುತ್ತಿದ್ದಿತು.

೬೯. ಆತನು ಶಂಖ, ಚಕ್ರಗಳ ಚಿಹ್ನೆಗಳನ್ನೂ ಪುಷ್ಟಗಳಾದ ಭುಜಗಳಲ್ಲಿ ತಳೆದು ರಾಜಿಸುತ್ತಿದ್ದನು. ಶ್ರೀಹರಿಯ ನಾಮಾಕ್ಷರಗಳೆಂಬ ಸುಧೆಯಿಂದಲೇ ಆತನ ದಂತಪಙ್ಕ್ತಿಯು ಹೊಳೆಯುತ್ತಿದ್ದಿತು.

೭೦. ಪಾರ್ವತಿಯಲ್ಲಿ ಅಚಲವಾದ ತನ್ನ ಭಕ್ತಿಯೆಂಬ ಬೀಜದಿಂದ ಹುಟ್ಟಿದ ಪುರುಷರೂಪದ ಕಲ್ಪವೃಕ್ಷವೊ ಎಂಬಂತಿದ್ದ ಆತನನ್ನು ಕಂಡು, "ಈತನಿಂದ ಯಾವ ಮಹಾಪುರುಷನ ಮನೆಯು ಆನಂದಗೊಳಿಸಲ್ಪಟ್ಟಿರುವುದೊ" ಎಂದು ಚಿಂತಿಸಿದಳು.

೭೧. ಇಂತೆಂದು ಕಣ್ಣುಗಳನ್ನು ಮತ್ತೆ ಮತ್ತೆ ಸುತ್ತಲೂ ತಿರುಗಿಸಿ ನೋಡುತ್ತ ಆತನಿಗೆ ಹೇಳಿದಳು; "ದುರಾಚಾರಿಯಾದ ಕಂಕಾಳಕೇತುವು ಇತರರ ಅಸ್ತ್ರಶಸ್ತ್ರಗಳಿಂದ ಸಾಯುವವನಲ್ಲ.

ತಾವದ್ಗುಪ್ತಂ ಸಮಾತಿಷ್ಠ ಶಸ್ತ್ರಾಗಾರೇಽತ್ರ ಗಹ್ವರೇ ।
ನಮೇ ಕನ್ಯಾವ್ರತಂ ಭಗ್ನಂ ಸಾಮರ್ಥ್ಯಾಚ್ಚಂಡಿಕಾವರಾತ್ ॥ ೭೨ ॥
ಆಗಾಮಿನ್ಯಾಂ ತೃತೀಯಾಯಾಂ ಪರಶ್ವಃ ಪಾಣಿಪೀಡನಂ ।
ಸ ಚಿಕೀರ್ಷತಿ ದುಷ್ಟಾತ್ಮಾ ಗತಾಯುರ್ಮಮ ಶಾಪತಃ ॥ ೭೩ ॥
ಮಾ ತದ್ಭೀತಿಂ ಕುರು ಯುವಂಸ್ತ್ವತ್ಕಾರ್ಯಂ ಭವಿತಾಽಚಿರಾತ್ ।
ವಿದ್ಯಾಧರ್ಯೇತಿ ಚೋಕ್ತಃ ಸ ಶಸ್ತ್ರಾಗಾರೇ ನಿಗೂಢವತ್ ॥ ೭೪ ॥
ಸ್ಥಿರೋ ವೀರೋ ಮಹಾಬಾಹುರ್ದಾನವಾಗಮನೇಕ್ಷಣಃ ॥ ೭೫ ॥
ಅಥ ಸಾಯಂ ಸಮಾಯಾತೋ ದಾನವೋ ಭೀಷಣಾಕೃತಿಃ ।
ತ್ರಿಶೂಲಂ ಕಲಯನ್ಪಾಣೌ ಮೃತ್ಯೋರಪಿ ಭಯಾವಹಂ ॥ ೭೬ ॥
ಆಗತ್ಯ ದಾನವೋ ರೌದ್ರಃ ಪ್ರಲಯಾಂಬುದನಿಃಸ್ವನಃ ।
ವಿದ್ಯಾಧರೀಂ ಜಗಾದೇತಿ ಮದಾಘೂರ್ಣಿತಲೋಚನಃ ॥ ೭೭ ॥
ಗೃಹಾಣೇಮಾನಿ ರತ್ನಾನಿ ದಿವ್ಯಾನಿ ವರವರ್ಣಿನಿ ।
ಕನ್ಯಾತ್ವಂ ಹಿ ಪರಶ್ವಸ್ತೇ ಪಾಣಿಗ್ರಾಹೋ ಭವಿಷ್ಯತಿ ॥ ೭೮ ॥

---

೭೨. ನಾನು ಹೇಳುವವರೆಗೂ ಅಂಧಕಾರಮಯವಾದ ಈ ಶಸ್ತ್ರಾಗಾರದಲ್ಲಿ ಬಚ್ಚಿಟ್ಟುಕೊಂಡಿರು. ಮಹೇಶ್ವರಿಯ ವರದ ಫಲವಾಗಿ ಇಲ್ಲಿಯವರೆಗೂ ನನ್ನ ಕನ್ಯಾವ್ರತಕ್ಕೆ ಭಂಗವುಂಟಾಗಿರುವುದಿಲ್ಲ.

೭೩. ನಾಳಿದ್ದು ಬರಲಿರುವ ತದಿಗೆಯ ದಿನ ನನ್ನ ಪಾಣಿಗ್ರಹಣವನ್ನು ಆ ದುರಾತ್ಮನು ಮಾಡಿಕೊಳ್ಳಲೆಳಸಿರುವನು. ಆದರೆ ನನ್ನ ಶಾಪದಿಂದ ಅವನ ಆಯುಷ್ಯವೇ ಮುಗಿದುಹೋಗಿರುವುದು.

೭೪. ಯುವಕನೆ! ಆತನ ಭಯವನ್ನಿಟ್ಟುಕೊಳ್ಳಬೇಡ. ನಿನ್ನ ಕಾರ್ಯವು ಕ್ಷಿಪ್ರದಲ್ಲಿಯೇ ಜಯಪ್ರದವಾಗುವುದು.'' ಇಂತೆಂದು ವಿದ್ಯಾಧರಕನ್ಯೆಯು ಹೇಳಲು ಆ ರಾಜಕುಮಾರನು ಶಸ್ತ್ರಶಾಲೆಯಲ್ಲಿ ಅಡಗಿಕೊಂಡಿದ್ದನು.

೭೫. ಶೂರನೂ, ಮಹಾಪರಾಕ್ರಮಿಯೂ ಆದ ಆತನು ರಾಕ್ಷಸೇಂದ್ರನ ಆಗಮನವನ್ನೇ ನಿರೀಕ್ಷಿಸುತ್ತ ಸ್ಥಿರವಾಗಿ ಕುಳಿತಿದ್ದನು.

೭೬. ಸಾಯಂಕಾಲವಾಗುತ್ತಲೆ ಭಯಂಕರಾಕಾರನಾದ ಆ ರಾಕ್ಷಸನು ಯಮನಿಗೂ ಭಯವನ್ನುಂಟುಮಾಡುವ ತನ್ನ ತ್ರಿಶೂಲವನ್ನು ಕೈಯಲ್ಲಿ ತಿರುವುತ್ತ ಅಲ್ಲಿಗೆ ಪ್ರಾಪ್ತನಾದನು.

೭೭. ಭೀಕರನೂ, ಪ್ರಳಯಕಾಲದ ಮೇಘದಂತೆ ಗರ್ಜಿಸುವವನೂ, ಮದದಿಂದ ತಿರುಗುತ್ತಿರುವ ಕಣ್ಣಾಲಿಗಳುಳ್ಳವನೂ ಆದ ಆ ರಾಕ್ಷಸನು ಬಂದು ವಿದ್ಯಾಧರಕನ್ಯೆಗೆ ಹೇಳಿದನು.

೭೮. "ಸುಂದರಾಂಗಿಯೆ! ದಿವ್ಯಗಳಾದ ಈ ರತ್ನಗಳನ್ನು ಸ್ವೀಕರಿಸು.

ದಾಸೀನಾಮಯುತಂ ಪ್ರಾತರ್ದಾಸ್ಯಾಮಿ ತವ ಸುಂದರಿ ।
ಆಸುರೀಣಾಂ ಸುರೀಣಾಂ ಚ ದಾನವೀನಾಂ ಮನೋಹರಂ ॥ ೭೯ ॥
ಗಂಧರ್ವೀಣಾಂ ಕಿನ್ನರೀಣಾಂ ಸತತಂ ಪರಿಚಾರಿಕಾಃ ।
ವಿದ್ಯಾಧರೀಣಾಂ ನಾಗೀನಾಂ ಯಕ್ಷೀಣಾಂ ಚ ಶತಾನಿ ಷಟ್ ॥ ೮೦ ॥
ರಾಕ್ಷಸೀನಾಂ ಶತಾನ್ಯಷ್ಟೌ ಶತಮಪ್ಸರಸಾಂ ವರಂ ।
ಏತಾಸ್ತೇ ಪರಿಚಾರಿಣ್ಯೋ ಭವಿಷ್ಯಂತ್ಯಮಲಾಶಯೇ ॥ ೮೧ ॥
ಯಾವತ್ಸಂಪತ್ತಿಸಂಭಾರೋ ದಿಕ್ಪಾಲಾನಾಂ ಗೃಹೇಷು ವೈ ।
ಮತ್ಪರಿಗ್ರಹತಾಂ ಪ್ರಾಪ್ತೌ ತಾವತಸ್ತ್ವಂ ಮಹೇಶ್ವರಿ ॥ ೮೨ ॥
ದಿವ್ಯಾನ್ಭೋಗಾನ್ಮಯಾ ಸಾರ್ಧಂ ಭೋಕ್ಷ್ಯಸೇ ಮತ್ಪರಿಗ್ರಹಾತ್ ।
ಕದಾ ಪರಶ್ವೋ ಭವಿತಾ ಯಸ್ಮಿನ್ವೈವಾಹಿಕೋ ವಿಧಿಃ ॥ ೮೩ ॥
ತ್ವದಂಗಸಂಗಸಂಸ್ಪರ್ಶಸುಖಾಸ್ವಾದಾತಿಮೇದುರಃ ।
ಪರಾಂ ನಿರ್ವೃತಿಮಾಪ್ಸ್ಯಾಮಿ ಪರಶ್ವೋ ನಿಕಟಂ ಯದಿ ॥ ೮೪ ॥

---

ನೀನು ಕನ್ಯೆಯಾಗಿರುವೆ. ನಾಳಿದ್ದು ನಿನ್ನ ಪಾಣಿಗ್ರಹಣಮಹೋತ್ಸವವು ನಡೆಯುವುದು.

೭೯. ಸುಂದರಿಯೆ! ಅಸುರರು, ಸುರರು, ದಾನವರುಗಳಲ್ಲಿ ಬಹಳ ಮನೋಹರೆಯರಾದ ಹತ್ತುಸಾವಿರಮಂದಿ ದಾಸಿಯರನ್ನು ಬೆಳಿಗ್ಗೆಯೆ ನಿನಗೆ ಕೊಡುವೆನು.

೮೦. ಗಂಧರ್ವರು, ಕಿನ್ನರರು, ವಿದ್ಯಾಧರರು, ನಾಗರು, ಯಕ್ಷರೇ ಮೊದಲಾದವರಲ್ಲಿ ಆರುನೂರು ಪರಿಚಾರಿಕೆಯರನ್ನು ನಿನ್ನ ನಿತ್ಯದ ಸೇವೆಗಾಗಿ ಕೊಡುವೆನು.

೮೧. ಶುದ್ಧಮನಸ್ಕಳೆ! ರಾಕ್ಷಸಿಯರ ಎಂಟುನೂರು ಜನರೂ, ಅಪ್ಸರಸ್ತ್ರೀಯರ ಒಂದು ನೂರು ಉತ್ತಮೆಯರೂ ನಿನಗೆ ಪರಿಚಾರಿಣಿಯರಾಗಿರುವರು.

೮೨. ದಿಕ್ಪಾಲಕರ ಮನೆಗಳಲ್ಲಿ ಎಷ್ಟರಮಟ್ಟಿನ ಅಷ್ಟೈಶ್ವರ್ಯಗಳ ಸಮೃದ್ಧಿಯಿರುವುದೊ, ಅದೆಲ್ಲಕ್ಕೂ ನೀನು ನನ್ನ ಕೈಯನ್ನು ಹಿಡಿಯುವುದರಿಂದ ಸರ್ವಾಧಿಕಾರಿಣಿಯಾಗುವೆ.

೮೩. ನನ್ನನ್ನು ಪರಿಗ್ರಹಿಸುವುದರಿಂದ ನನ್ನೊಡನೆ ಅನೇಕ ದಿವ್ಯ ಭೋಗಗಳನ್ನನುಭವಿಸುವೆ. ಆ ವಿವಾಹವು ನಡೆಯಬೇಕಾಗಿರುವ ನಾಳಿದ್ದೆಂಬ ದಿನವು ಯಾವಾಗ ಬರುವುದೊ, ಏನೊ!

೮೪. ಆ ನಾಳಿದ್ದಿನ ದಿನವು ಹತ್ತಿರದಲ್ಲಿಯೇ ಇದ್ದಿದ್ದರೆ ನಿನ್ನ ಅಂಗಸಂಗದಿಂದಲೂ, ಸ್ಪರ್ಶದಿಂದಲೂ ಉಂಟಾದ ಸುಖವನ್ನು ಸವಿದು ಪರಮಾನಂದಭರಿತನಾಗಿರುತ್ತಿದ್ದೆನು.

ಮನೋರಥಾಶ್ಚಿರಂ ಯಾವದ್ಯೇ ಮೇ ಹೃದಿ ಸಮೇಧಿತಾಃ ।
ತಾನ್ಕೃತಾರ್ಥೀ ಕರಿಷ್ಯಾಮಿ ಪರಶ್ವಸ್ತವ ಸಂಗಮಾತ್ ॥ ೮೫ ॥
ಜಿತ್ವಾ ದೇವಾನ್ರಣೇ ಸರ್ವಾನಿಂದ್ರಾದೀನ್ಮೃಗಲೋಚನೇ ।
ತ್ರೈಲೋಕ್ಯೈಶ್ವರ್ಯಸಂಪತ್ತೇಸ್ತ್ವಾಂ ಕರಿಷ್ಯಾಮಿ ಚೇಶ್ವರೀಂ ॥ ೮೬ ॥
ಅಥಾಯಾಂಕೇ ತ್ರಿಶೂಲಂ ಚ ಸುಷ್ವಾಪೇತಿ ಪ್ರಲಪ್ಯಸಃ ।
ನರಮಾಂಸಸ್ಯ ಸ್ವಾದೇನ ಪ್ರಮತ್ತೋ ವೀತಸಾಧ್ವಸಃ ॥ ೮೭ ॥
ವರಂ ಸ್ಮರಂತೀ ಸಾ ಗೌರ್ಯಾ ವಿದ್ಯಾಧರಕುಮಾರಿಕಾ ।
ವಿಜ್ಞಾಯ ತಂ ಪ್ರಮತ್ತಂ ಚ ಪ್ರಸುಪ್ತಂ ಚಾಽತಿ ನಿರ್ಭಯಂ ।
ಆಹೂಯ ತಂ ನರವರಂ ವರಂ ಸರ್ವಾಂಗಸುಂದರಂ ॥ ೮೮ ॥
ವಿಷ್ಣುಭಕ್ತಿ ಕೃತತ್ರಾಣಂ ಪ್ರಾಣನಾಥೇತಿ ಜಲ್ಪ್ಯ ಚ ।
ಶೂಲಂ ತದಂಕಾದಾದಾಯ ದದೌ ತಸ್ಮೈ ಚ ಸುಂದರೀ ॥ ೮೯ ॥
ತದಾದಾಯ ತ್ರಿಶೂಲಂ ಚ ಸ ತದಾಽಮಿತ್ರಜಿನ್ನೃಪಃ ।
ಸಂಸ್ಮರಂಶ್ಚಕ್ರಿಣಂ ಚಿತ್ತೇ ಜಗದ್ರಕ್ಷಾಮಣಿಂ ಹರಿಂ ॥ ೯೦ ॥

---

೮೫. ನಾಳಿದ್ದು ನಿನ್ನನ್ನು ಸೇರುವುದರಿಂದ ನನ್ನ ಹೃದಯದಲ್ಲಿ ಬಹಳ ಕಾಲದಿಂದಲೂ ಬೆಳೆದು ಬರುತ್ತಿರುವ ಮನೋರಥಗಳನ್ನೆಲ್ಲ ಸಫಲಗೊಳಿಸಿ ಕೊಳ್ಳುವೆನು.

೮೬. ಹರಿಣಾಕ್ಷಿಯೇ! ಇಂದ್ರನೇ ಮೊದಲಾದ ಸಮಸ್ತ ದೇವತೆಗಳನ್ನೂ ಯುದ್ಧದಲ್ಲಿ ಜಯಿಸಿ ನಿನ್ನನ್ನೇ ಮೂರು ಲೋಕಗಳ ಸಮಸ್ತೈಶ್ವರ್ಯರಾಶಿಗೂ ಅಧೀಶ್ವರಿಯನ್ನಾಗಿ ಮಾಡುವೆನು.''

೮೭. ಇಂತೆಂದು ಗಳಹುತ್ತ ನರಮಾಂಸವನ್ನು ತಿಂದು ಪ್ರಮತ್ತನಾಗಿ ಪ್ರಜ್ಞೆಯನ್ನು ಕಳೆದುಕೊಂಡಿದ್ದ ಆ ರಾಕ್ಷಸನು ತನ್ನ ತ್ರಿಶೂಲವನ್ನು ತೊಡೆಯ ಮೇಲಿರಿಸಿಕೊಂಡು ನಿದ್ರೆಯನ್ನು ಮಾಡಿದನು.

೮೮. ಆ ವಿದ್ಯಾಧರಕನ್ಯೆಯು ತನಗೆ ಪಾರ್ವತಿಯಿತ್ತಿದ್ದ ವರವನ್ನು ಸ್ಮರಿಸಿ ಕೊಂಡು ಆ ರಾಕ್ಷಸನು ಪ್ರಮಾದದಿಂದ ಅತಿನಿರ್ಭಯನಾಗಿ ಗಾಢನಿದ್ರೆಯಲ್ಲಿರು ವುದನ್ನು ತಿಳಿದು ಸರ್ವಾಂಗಸುಂದರನಾದ ಆ ರಾಜೇಂದ್ರನನ್ನು ಬಳಿಗೆ ಕರೆದಳು.

೮೯. ವಿಷ್ಣುಭಕ್ತಿಯನ್ನೇ ಆತ್ಮರಕ್ಷೆಯನ್ನಾಗಿ ಹೊಂದಿರುವ ಆತನನ್ನು 'ಪ್ರಾಣನಾಥ' ಎಂದು ಸಂಬೋಧಿಸಿ ಆ ಸುಂದರಿಯು ರಾಕ್ಷಸನ ಮಡಿಲಲ್ಲಿದ್ದ ತ್ರಿಶೂಲವನ್ನು ತೆಗೆದುಕೊಂಡು ಆತನ ಕೈಗೆ ಕೊಟ್ಟಳು.

೯೦. ಆ ತ್ರಿಶೂಲವನ್ನು ಅಮಿತ್ರಜಿದ್ರಾಜೇಂದ್ರನು ತೆಗೆದುಕೊಂಡು ಚಕ್ರ ಪಾಣಿಯೂ, ಲೋಕರಕ್ಷಾಮಣಿಯೂ ಆದ ಶ್ರೀಮನ್ನಾರಾಯಣನನ್ನು ಮನಸ್ಸಿ ನಲ್ಲಿಯೇ ನೆನೆದನು.

ಜಗಾದೋತ್ತಿಷ್ಠ ರೇ ದುಷ್ಟ ಕನ್ಯಾದೂಷಣಲಾಲಸ ।
ಯುದ್ಧ್ಯಸ್ವ ಚ ಮಯಾ ಸಾರ್ಧಂ ನ ಸುಪ್ತಂ ಹನ್ಮ್ಯಹಂ ರಿಪುಂ ॥ ೯೧ ॥
ಇತಿ ಸಂಶ್ರುತ್ಯ ಸಂಪ್ರಾಪ್ತಃ ಕಸ್ಯ ದೃಷ್ಟ್ಯೋಽದ್ಯ ಚಾಂತಕಃ ।
ಕ ಆಯುಷಾದ್ಯ ಸಂತ್ಯಕ್ತೋ ಯಃ ಪ್ರಾಪ್ತೋ ಮಮ ಗೋಚರಂ॥ ೯೨ ॥
ಮಮ ಪ್ರಚಂಡದೋರ್ದಂಡಕಂಡೂಕಂಡೂಯನಕ್ಷಮಃ ।
ಮಾಲ್ಯೋ ನರೋಽಯಂ ಭವಿತಾ ಕಿಂ ತ್ರಿಶೂಲೇನ ಸುಂದರಿ ॥ ೯೩ ॥
ಮಾಭೈರ್ಮೇ ಕೌತುಕಂ ಪಶ್ಯ ಭಕ್ಷ್ಯೋಽಯಂ ಮಮ ಸಾಂಪ್ರತಂ ।
ಕಾಲೇನ ಮತ್ತೋ ಭೀತೇನ ಸ್ವಯಮೇವೋಪಢೌಕಿತಃ ॥ ೯೪ ॥
ಇತ್ಯುಕ್ತ್ವಾ ಮುಷ್ಟಿಘಾತೇನ ತೇನೋಚ್ಚೈರ್ದಂಡಸೂನುನಾ ।
ಹೃದಯೇ ನಿಹತೋ ರಾಜಾ ಶಿಲಾಽತಿಕಠಿನೇದ್ರುತಂ ॥ ೯೫ ॥
ಸ ಚಕ್ರಿಣಾ ಕೃತತ್ರಾಣಃ ಪೀಡಾಂ ನಾಲ್ಪೀಯಸೀಮಪಿ ।
ವಿವೇದ ಕಠಿನೋರಸ್ಕಃ ಕರಸ್ತಸ್ಯ ಪ್ರಪೀಡಿತಃ ॥ ೯೬ ॥

---

೯೧. ತರುವಾಯ ಆ ರಾಕ್ಷಸನನ್ನು ಕೂಗಿ ಹೇಳಿದನು. "ಎಲಾ ಮೂರ್ಖನೆ! ಕನ್ಯೆಯರನ್ನು ಕೆಡಿಸುವ ದುರ್ಬುದ್ಧಿಯುಳ್ಳವನೆ! ಏಳು. ನನ್ನೊಡನೆ ಯುದ್ಧವನ್ನು ಮಾಡು. ಗಾಢನಿದ್ರೆಯಲ್ಲಿರುವ ಶತ್ರುವನ್ನು ನಾನು ಕೊಲ್ಲುವವನಲ್ಲ."

೯೨. ಈ ಮಾತನ್ನು ಕೇಳಿ ಆ ದಾನವನೆಚ್ಚತ್ತು ಯುದ್ಧಸನ್ನದ್ಧನಾಗಿ ಹೇಳಿದನು. "ಯಾವನಿಗೆ ಇಂದು ಯಮನ ದರ್ಶನವಾಗಲಿರುವುದೋ? ಯಾವನ ಆಯುಷ್ಯವು ಇಂದಿಗೆ ಮುಗಿದಿರುವುದೋ? ಅಂತಹನೇ ನನ್ನ ದೃಷ್ಟಿಗೆ ಬೀಳಬೇಕಾಗಿರುವುದು.

೯೩. ಸುಂದರಾಂಗಿಯೆ! ನನಗೆ ತ್ರಿಶೂಲದಿಂದಾಗಬೇಕಾದುದೇನು? ಪ್ರಚಂಡಗಳಾದ ನನ್ನ ಬಾಹುದಂಡಗಳ ತೀಟೆಯನ್ನು ತೀರಿಸಿಕೊಳ್ಳುವೆನೆಂದು ಮನಸ್ಸು ಮಾಡಿದರೆ ಈ ಮನುಷ್ಯನು ಹೂವಿನ ಮಾಲೆಯಂತಾಗುವನು.

೯೪. ಭಯಗೊಳ್ಳಬೇಡ. ನನ್ನ ಯುದ್ಧದ ಚಮತ್ಕಾರವನ್ನಾದರೂ ನೋಡು. ನನ್ನಿಂದ ಭಯಗೊಂಡ ಕಾಲಯಮನೇ ಇಂದು ತಾನಾಗಿಯೇ ಇವನನ್ನು ನನಗೆ ಉಪಹಾರವನ್ನಾಗಿ ಕಳುಹಿಸಿರುವನು."

೯೫. ಇಂತೆಂದು ನುಡಿದು ಆ ರಾಕ್ಷಸನು ದಂಡೋಪಮವಾದ ತನ್ನ ಕೈಯಲ್ಲಿ ಮುಷ್ಟಿಯನ್ನು ಹಿಡಿದು ವೇಗವಾಗಿ ಬಂದು ಕಲ್ಲಿಗಿಂತಲೂ ಕಠಿನವಾಗಿದ್ದ ಆ ರಾಜೇಂದ್ರನ ವಕ್ಷಸ್ಥಳಕ್ಕೆ ಬಲವಾಗಿ ಗುದ್ದಿದನು.

೯೬. ಪರಮಾತ್ಮನಿಂದಲೇ ರಕ್ಷಿತನಾದ ಆ ರಾಜೇಂದ್ರನ ವಕ್ಷಸ್ಥಳವು ಕಠಿನವಾಗಿದ್ದುದರಿಂದ ಆತನಿಗೆ ಸ್ವಲ್ಪವಾದರೂ ನೋವೇ ತಿಳಿಯಲಿಲ್ಲ. ಆದರೆ ಆ ರಾಕ್ಷಸನ ಮುಷ್ಟಿಯೇ ಶಿಥಿಲವಾಯಿತು.

ಅಥ ಕೋಪವತಾ ರಾಜ್ಞಾ ಹತೋ ವಕ್ತ್ರೇ ಚಪೇಟಯಾ ।
ಆಘೂರ್ಣಿತಶಿರಾ ಭೂಮೌ ಪತಿತ್ವಾ ಪುನರುತ್ಥಿತಃ ।
ಉವಾಚ ಚ ವಚೋ ಧೈರ್ಯಮವಷ್ಟಭ್ಯ ಮಹಾಬಲೀ ॥ ೯೭ ॥

ದಾನವ ಉವಾಚ:—

ಜ್ಞಾತಂ ತತ್ತ್ವಂ ಮನುಷ್ಯೋಽಸಿ ನೃರೂಪೇಣ ಚತುರ್ಭುಜಃ ।
ತತಸ್ತ್ವಂ ಛಿದ್ರಮಾಸಾದ್ಯ ಹಂತುಂ ಮಾಂ ದಾನವಾಂತಕ ॥ ೯೮ ॥
ಏವಂ ವಿಧೋಹಿ ಮಧುಭಿದ್ಯದಿ ತ್ವಂ ಬಲವಾನಸಿ ।
ವಿಹಾಯೈತನ್ಮಹಚ್ಛೂಲಂ ಯುಧ್ಯಸ್ವ ಸ್ವಾಯುಧೈರ್ಮಯಾ ॥ ೯೯ ॥
ತ್ವಂಯಾ ಕಪಟರೂಪೇಣ ಬಲಿನಾ ಕೈಟಭಾದಯಃ ।
ನ ಬಲೇನ ಹತಾಃ ಸಂಖ್ಯೇ ಹತಾ ಏವ ಛಲೇನ ಹಿ ॥ ೧೦೦ ॥
ಬಲಿಂ ಪಾತಾಲಮನಯಸ್ತ್ವಂ ನೃವಾಮನತಾಂ ದಧತ್ ।
ನೃಸಿಂಹತ್ವೇನ ಭವತಾ ಹಿರಣ್ಯಕಶಿಪುರ್ಹತಃ ॥ ೧೦೧ ॥

---

೯೭. ಬಳಿಕ ಆ ರಾಜನು ಕೋಪದಿಂದ ದಾನವನ ಮುಖಕ್ಕೆ ಹಸ್ತಪ್ರಹಾರವನ್ನು ಕೊಡಲು ಅವನು ತಲೆದಿರುಗಿ ಭೂಮಿಯಲ್ಲಿ ಬಿದ್ದು ಪುನಃ ಚೇತರಿಸಿಕೊಂಡು ಮಹಾಪರಾಕ್ರಮಶಾಲಿಯಾದ್ದರಿಂದ ಧೈರ್ಯವನ್ನು ಮುಂದುಮಾಡಿಕೊಂಡು ಹೇಳಿದನು.

೯೮. ರಾಕ್ಷಸನು ಹೇಳುತ್ತಾನೆ:—ಈಗ ಪರಮಾರ್ಥವನ್ನು ತಿಳಿದೆನು. ನೀನು ಮನುಷ್ಯನಾಗಿ ಕಂಡರೂ ನರರೂಪನಾದ ಮಹಾವಿಷ್ಣುವೇ ಆಗಿರುವೆ. ದಾನವವೈರಿಯೆ! ಆದುದರಿಂದಲೇ ನನ್ನ ಛಿದ್ರವನ್ನರಿತು ನನ್ನನ್ನು ಕೊಲ್ಲಲು ಈ ರೀತಿ ಪ್ರಯತ್ನಿಸಿರುವೆ.

೯೯. ಮಧುವೈರಿಯೂ ಈ ಪ್ರಕಾರದವನೇ ಆಗಿರುವನಲ್ಲವೆ. ನೀನು ನಿಜವಾಗಯೂ ಶೂರನಾಗಿದ್ದರೆ ನನ್ನ ಶೂಲವನ್ನು ನನಗಿತ್ತು ನಿನ್ನ ಆಯುಧಗಳಿಂದಲೇ ನನ್ನೊಡನೆ ಯುದ್ಧಮಾಡು.

೧೦೦. ಮಾಯಾರೂಪಧಾರಿಯೂ, ಬಲಶಾಲಿಯೂ ಆದ ನಿನ್ನಿಂದ ಕೈಟಭನೇ ಮೊದಲಾದ ಅನೇಕ ರಾಕ್ಷಸರು ಯುದ್ಧದಲ್ಲಿ ಕೇವಲ ಕಪಟೋಪಾಯಗಳಿಂದಲೇ ಹತರಾದರಲ್ಲದೆ ನಿನ್ನ ಪರಾಕ್ರಮದಿಂದಲ್ಲ.

೧೦೧. ಕುಬ್ಜಮಾನುಷರೂಪದಿಂದ ನೀನು ಬಲಿಯನ್ನು ಪಾತಾಳಲೋಕಕ್ಕೆ ತುಳಿದುಹಾಕಿದೆ. ನರಸಿಂಹ ರೂಪದಿಂದ ಹಿರಣ್ಯಕಶಿಪುವು ಹತನಾದನು.

ತಥಾ ಜಟಿಲರೂಪೇಣ ಲಂಕೇಶೋ ವಿನಿಪಾತಿತಃ ।
ಗೋಪಾಲವೇಷಮಾಲಂಬ್ಯ ಕಂಸಾದ್ಯಾ ಘಾತಿತಾಸ್ತ್ವಯಾ ।
ಸ್ತ್ರೀಭೂಯಚಾಽಹರಸ್ತ್ವಂ ಹಿ ವಿಪ್ರತಾರ್ಯಾಽಸುರಾನ್ ಸುಧಾಂ ॥೧೦೨॥
ಯಾದೋರೂಪೇಣ ಭವತಾ ಶಂಖಾದ್ಯಾ ನಿಹತಾ ಇಹ ।
ಮಾಯಾವಿನಾ ತ್ವಯಾಽಗಣ್ಯಾಃ ಸರ್ವಮರ್ಮಜ್ಞ ಮಾಧವ ॥ ೧೦೩ ॥
ನ ತ್ವತ್ತೋಽಹಂ ಬಿಭೇಮ್ಯದ್ಯ ಸದ್ಯಃಪಾತಃ ಶರೀರಿಣಾಂ ।
ವರಂ ಶ್ರಯ ಶ್ರಯೇ ಮೃತ್ಯುಂ ಬಲೇನಾಽಪಿ ಛಲೇನ ವಾ ॥ ೧೦೪ ॥
ನ ತ್ಯಕ್ಷ್ಯಸಿ ತ್ರಿಶೂಲಂ ತ್ವಂ ನತ್ವಾಂ ಯೋತ್ಸ್ಯಾಮ್ಯಹಂ ರಣೇ ।
ಅವಶ್ಯಮೇವ ಮರ್ತವ್ಯಂ ಮಯಾ ಪ್ರಾತಃ ಶರೀರಿಣಾ ॥ ೧೦೫ ॥
ಇಯಂ ವಿದ್ಯಾಧರೀ ಕನ್ಯಾ ನ ಮಯಾ ದೂಷಿತಾ ಸತೀ ।
ಸಾಕ್ಷಾಚ್ಛ್ರೀರಿವ ಮಂತವ್ಯಾ ತವಾರ್ಥಂ ರಕ್ಷಿತಾ ಮಯಾ ॥ ೧೦೬ ॥
ಇತ್ಯುಕ್ತ್ವಾ ವಾಮದೋರ್ದಂಡಪ್ರಹಾರೇಣಾಽಪಿ ನಿಷ್ಠುರಂ ।
ನಿಜಘಾನ ದನೋಃ ಸೂನುಸ್ತಂ ಶಿಲೋಚ್ಚಯಘಾತಿನಾ ॥ ೧೦೭ ॥

---

೧೦೨. ಹಾಗೆಯೇ ಜಡೆಗಳನ್ನು ತಳೆದ ಮುನಿವೇಷದ ನಿನ್ನಿಂದ ಲಂಕೇಶ್ವರನಾದ ರಾವಣನು ನಿಗ್ರಹಿಸಲ್ಪಟ್ಟನು. ಗೋಪಾಲ ಬಾಲಕನ ವೇಷವನ್ನು ತಾಳಿ ಕಂಸನೇ ಮುಂತಾದವರನ್ನು ನೀನೇ ಕೊಂದೆ. ಸ್ತ್ರೀವೇಷವನ್ನು ತಾಳಿ ದಾನವರನ್ನು ಮೋಸಗೊಳಿಸಿ ಅಮೃತವನ್ನು ಅಪಹರಿಸಿದೆ.

೧೦೩. ಮಾಧವನೆ! ಮಹಾಮಾಯಾವಿಯಾದ ನೀನು ಸಕಲರ ಮರ್ಮಗಳನ್ನೂ ತಿಳಿದುಕೊಂಡು ಮತ್ಸ್ಯರೂಪವನ್ನು ತಾಳಿ ಶಂಖನೇ ಮೊದಲಾದ ಅನೇಕ ರಾಕ್ಷಸರನ್ನು ಕೊಂದೆ.

೧೦೪. ಇಂದು ನಾನು ನಿನಗೆ ಭಯಪಡುವುದಿಲ್ಲ. ಶರೀರಿಯಾದವನು ಎಂದಾದರೂ ಸಾಯಲೇ ಬೇಕು. ಪರಾಕ್ರಮದಿಂದಲಾಗಲಿ, ಮೋಸದಿಂದಲಾಗಲಿ, ನಿನ್ನ ಕೈಯಲ್ಲಿಯೇ ಮೃತ್ಯುವನ್ನು ಪಡೆಯುವೆನು.

೧೦೫. ನೀನು ನನ್ನ ತ್ರಿಶೂಲವನ್ನು ಬಿಡುವುದಿಲ್ಲ. ನಿನ್ನೊಡನೆ ನಾನು ಯುದ್ಧರಂಗದಲ್ಲಿ ಕಾದಾಡುವುದಿಲ್ಲ. ನಾನೂ ದೇಹಧಾರಿಯಾಗಿರುವುದರಿಂದ ನಾಳೆಯಾದರೂ ಅವಶ್ಯಕವಾಗಿ ಸಾಯಲೇಬೇಕು.

೧೦೬. ಈ ವಿದ್ಯಾಧರಕನ್ಯೆಯು ಸತಿಯಾಗಿರುವಳು. ಇವಳನ್ನು ನಾನು ಕೆಡಿಸಿರುವುದಿಲ್ಲ. ನಿನಗಾಗಿಯೇ ನಾನು ಕಾಪಾಡಿರುವ ಇವಳನ್ನು ನೀನೂ ಸಾಕ್ಷಾನ್ಮಹಾಲಕ್ಷ್ಮಿಯೆಂದೇ ತಿಳಿ.

೧೦೭. ಇಂತೆಂದು ಆ ದಾನವಪುತ್ರನು ಪರ್ವತಶಿಖರಪಾತದಂತೆ ಪ್ರಬಲವಾದ ತನ್ನ ಎಡಗೈಯಿಂದ ರಾಜೇಂದ್ರನನ್ನು ಬಲವಾಗಿ ಹೊಡೆದನು.

ನೃಪತಿಸ್ತ್ವಥ ಸಂಧಾರ್ಯರ್ಯ ವಿಷಹ್ಯ ರಣಮೂರ್ಧನಿ ।
ಜಘಾನಾಶು ತದಾ ಕ್ರೂರಂ ತ್ರಿಶೂಲೇನಾಽಥ ವಕ್ಷಸಿ ॥ ೧೦೮ ॥
ತತ್ಪ್ರಹಾರಾನ್ಮಹಾಬಾಹುಃ ಪಂಚತ್ವಮುಗಮತ್ಕ್ಷಣಾತ್ ।
ಲಕ್ಷ್ಮ್ಯೈಚಕಾರ ತದ್ವಕ್ತ್ರಂ ತ್ರಿಶೂಲಂ ತೋಲಯನ್ಕರೇ ॥ ೧೦೯ ॥
ಪಶ್ಯತೋಽಸ್ಯ ಮಹಾಬಾಹೋಃ ಸ ಚ ಪ್ರಾಣಾನ್ಜಹೌ ಕ್ಷಣಾತ್ ।
ಇತ್ಥಂ ಕಂಕಾಲಕೇತುಂ ಸ ನಿಹತ್ಯ ಸುರಕಂಪನಂ ॥ ೧೧೦ ॥
ವಿದ್ಯಾಧರೀಂ ಪ್ರಪಶ್ಯಂತೀಂ ಪ್ರಾಹ ಹೃಷ್ಟತನೂರುಹಃ ।
ನಾರದಸ್ಯ ಮುನೇರ್ವಾಕ್ಯಾತ್ತವ ಸುಶ್ರೋಣಿ ವಾಂಛಿತಂ ॥ ೧೧೧ ॥
ಕೃತಂ ಮಯಾ ಕೃತಜ್ಞೇ ಕಿಂ ಕರವಾಣ್ಯಧುನಾ ವದ ।
ಶ್ರುತ್ವೇತಿ ತಸ್ಯ ಸಾ ವಾಕ್ಯಂ ಪ್ರಾಹ ಗಂಭೀರಚೇತಸಾ ॥ ೧೧೨ ॥

ಮಲಯಗಂಧಿನ್ಯುವಾಚ :—

ಅತ್ಯುದಾರಮತೇ ವೀರ ನಿಜಪ್ರಾಣೈಃ ಪಣೀಕೃತಾಂ ।
ಕಿಂ ಮಾಂ ಪೃಚ್ಛಸಿ ಯುವತೀಂ ಕುಲಕನ್ಯಾಮದೂಷಿತಾಂ ॥ ೧೧೩ ॥

---

೧೦೮. ರಾಜನೂ ಅದನ್ನು ತಡೆದುಕೊಂಡು ಯುದ್ಧಕ್ಕೆ ಮುಂದಾಗಿ ಬಂದು ರಾಕ್ಷಸನ ಎದೆಗೆ ಗುರಿಯಿಟ್ಟು ಆತನ ತ್ರಿಶೂಲದಿಂದಲೇ ಆ ಕ್ರೂರನನ್ನು ಹೊಡೆದು ಕೆಡವಿದನು.

೧೦೯. ಆ ಪ್ರಹಾರದಿಂದ ಮಹಾಬಾಹುವಾದ ಆ ರಾಕ್ಷಸನು ನಿಮಿಷ ಮಾತ್ರದಲ್ಲಿಯೇ ಮರಣವನ್ನು ಹೊಂದಿದನು. ರಾಜೇಂದ್ರನು ತ್ರಿಶೂಲವನ್ನು ಕೈಯಲ್ಲಿ ತೂಗಿಸುತ್ತ ಅವನ ಮುಖವನ್ನೇ ನೋಡುತ್ತಿದ್ದನು.

೧೧೦. ಆ ಮಹಾಪರಾಕ್ರಮಿಯು ನೋಡುತ್ತಿದ್ದಂತೆಯೇ ಆ ರಾಕ್ಷಸೇಂದ್ರನು ಪ್ರಾಣಗಳನ್ನು ತ್ಯಜಿಸಿದನು. ಇಂತು ಅಮಿತ್ರಜಿದ್ರಾಜನು ದೇವತೆಗಳಿಗೂ ಭಯವನ್ನುಂಟುಮಾಡುತ್ತಿದ್ದ ಆ ಕಂಕಾಳಕೇತುವನ್ನು ನಿಗ್ರಹಿಸಿದನು.

೧೧೧–೧೧೨. ಮತ್ತು ಆನಂದದಿಂದ ಪುಳಕಿತಶರೀರನಾಗಿ ತನ್ನನ್ನೇ ನೋಡುತ್ತಿದ್ದ ವಿದ್ಯಾಧರಕನ್ಯೆಗೆ ಹೇಳಿದನು. "ಎಲೌ ಸುಂದರಾಂಗಿಯೆ! ನಾರದಮುನಿಯ ಅಪ್ಪಣೆಯಂತೆ ನಿನ್ನ ಅಭೀಷ್ಟವು ನನ್ನಿಂದ ನೆರವೇರಿತು. ಕೃತಜ್ಞಳಾದ ನಿನಗೆ ನಾನು ಮತ್ತೇನನ್ನು ಮಾಡಲಿ? ಹೇಳುವವಳಾಗು." ಆತನ ಈ ಮಾತುಗಳನ್ನು ಕೇಳಿ ಆಕೆಯು ಗಂಭೀರವಾದ ಮನಸ್ಸಿನಿಂದ ಹೇಳಿದಳು.

೧೧೩. ಮಲಯಗಂಧಿನಿಯು ಹೇಳುತ್ತಾಳೆ:—ಅತ್ಯಂತ ಉದಾರವಾದ ಮನಸ್ಸುಳ್ಳ ವೀರನೆ! ನಿನ್ನ ಪ್ರಾಣಗಳನ್ನೇ ಪಣವನ್ನಾಗಿಟ್ಟು ರಕ್ಷಿಸಿರುವ ಯುವತಿಯೂ, ನಿರ್ದುಷ್ಟಳಾದ ಸತ್ಕುಲಪ್ರಸೂತಕನ್ಯೆಯೂ ಆದ ನನ್ನನ್ನು ಕೇಳಬೇಕಾದದ್ದೇನಿರುವುದು?

ಇತಿ ಬ್ರುವಂತ್ಯಾಂ ಕನ್ಯಾಯಾಂ ಪುನಃ ಸ್ವೈರಚರೋ ಮುನಿಃ ।
ಅತರ್ಕಿತಾಗಮಃ ಪ್ರಾಪ್ತೋ ನಾರದೋ ದೇವಲೋಕತಃ ॥ ೧೧೪ ॥
ತತಸ್ತುಷ್ಟುವತುಸ್ತೌ ತು ತಂ ದೃಷ್ಟ್ವಾ ಮುನಿಸತ್ತಮಂ ।
ಕೃತಪ್ರಣಾಮೌ ಮುನಿನಾ ಪ್ರತಿಜ್ಞಾಪ್ರಾಪಿತಾಶಿಷೌ ॥ ೧೧೫ ॥
ಪಾಣಿಗ್ರಹೇಣ ವಿಧಿನಾಽಭಿಷಿಕ್ತೌ ನಾರದೇನ ತು ।
ಜಗ್ಮತುರ್ನಾರದಾದಿಷ್ಟವರ್ತ್ಮನಾ ಕೃತಮಂಗಲೌ ॥ ೧೧೬ ॥
ತಯಾ ಮಲಯಗಂಧಿನ್ಯಾ ವೃತಃ ಸೋಽಮಿತ್ರಜಿನ್ನೃಪಃ ।
ಪುರೀಂ ಚೋಜ್ಜಯಿನೀಂ ಪ್ರಾಪ್ಯ ಪೌರ್ಯೈರ್ವಿಹಿತಮಂಗಲಾಂ ॥ ೧೧೭ ॥
ತದ್ವೀಕ್ಷಣಾದಪಿ ನರೋ ನಾರಕೀಂ ನೈವ ಜಾತುಚಿತ್ ।
ಗತಿಂ ಪ್ರಾಪ್ನೋತಿ ಮೇಧಾವೀ ತಾಂ ಪುರೀಮವಿಶನ್ನೃಪಃ ॥ ೧೧೮ ॥
ಯಸ್ಯಾಂ ಪುರ್ಯಾಂ ಪ್ರವೇಶಂ ನ ಲಭಂತೇ ವಾಸವಾದಯಃ ।
ಕೈವಲ್ಯಜಯಜೈತ್ರ್ಯಾಂ ಹಿ ತಾಂ ಪುರೀಮವಿಶನ್ನೃಪಃ ॥ ೧೧೯ ॥

---

೧೧೪. ಆ ಕನ್ಯೆಯು ಹೀಗೆ ಹೇಳುತ್ತಿರುವಂತೆಯೇ ಸ್ವೇಚ್ಛಾವಿಹಾರಿಯೂ, ಅತರ್ಕಿತಗಮನಾಗಮನಗಳುಳ್ಳವನೂ ಆದ ನಾರದಮುನಿಯು ಪುನಃ ದೇವಲೋಕದಿಂದ ಅಲ್ಲಿ ಪ್ರಾಪ್ತನಾದನು.

೧೧೫. ಆ ಮುನಿಸತ್ತಮನನ್ನು ನೋಡಿ ಅವರಿಬ್ಬರೂ ಆತನನ್ನು ಸ್ತೋತ್ರ ಮಾಡಿದರು. ಪ್ರಣಾಮಗಳನ್ನು ಮಾಡಿದ ಅವರಿಬ್ಬರಿಗೂ ಆ ಮುನಿಯೂ ಪ್ರತಿಜ್ಞಾಪೂರ್ವಕವಾಗಿ ಆಶೀರ್ವಾದಗಳನ್ನು ಮಾಡಿದನು.

೧೧೬. ನಾರದನಿಂದಲೇ ಪಾಣಿಗ್ರಹಣವನ್ನು ವಿಧಿಪೂರ್ವಕವಾಗಿ ಮಾಡಿಸಿಕೊಂಡು ಅಭಿಷಿಕ್ತರಾಗಿ ಇಬ್ಬರೂ ಆತನನ್ನು ಬೀಳ್ಕೊಟ್ಟು, ಮಂಗಳಕಾರ್ಯವಾದ ಮೇಲೆ ತಮ್ಮ ದಾರಿಯಲ್ಲಿ ನಡೆದರು.

೧೧೭. ಅಮಿತ್ರಜನ್ಮಹಾರಾಜನು ಮಲಯಗಂಧಿನಿಯೊಡಗೂಡಿ ಪಟ್ಟಣಿಗರಿಂದ ಸಿಂಗರಿಸಲ್ಪಟ್ಟಿದ್ದ ತನ್ನ ರಾಜಧಾನಿಯಾದ ಉಜ್ಜಯಿನೀನಗರವನ್ನು ಪ್ರವೇಶಿಸಿದನು.

೧೧೮. ಯಾವುದನ್ನು ನೋಡುವುದರಿಂದಲೇ ಮೇಧಾವಿಯಾದ ಮಾನವನು ಎಂದೆಂದಿಗೂ ನರಕವಾಸವನ್ನನುಭವಿಸುವುದಿಲ್ಲವೊ, ಅಂತಹ ನಗರವನ್ನು ಆ ರಾಜೇಂದ್ರನು ಪ್ರವೇಶಿಸಿದನು.

೧೧೯. ಯಾವ ಪಟ್ಟಣದೊಳಗೆ ಮಹೇಂದ್ರಾದಿದೇವತೆಗಳೂ ಪ್ರವೇಶಿಸಲಳವಿಲ್ಲವೊ, ಅಂತಹ ಕೈವಲ್ಯಪ್ರಾಪ್ತಿಗೆ ಸೋಪಾನವೆನಿಸಿದ ಆ ನಗರಿಯನ್ನು ರಾಜನು ಬಂದು ಸೇರಿದನು.

ಸಾಽಪಿ ವಿದ್ಯಾಧರ್ಯವಂತೀಂ ಸಮೃದ್ಧಾಂ ವೀಕ್ಷ್ಯ ದೂರತಃ ।
ನಿನಿಂದ ಸ್ವರ್ಗಲೋಕಂ ಚ ಪಾತಾಲನಗರೀಮಪಿ ॥ ೧೨೦ ॥
ಪ್ರಾಪ್ಯಾಽಮಿತ್ರಜಿತಂ ಕಾಂತಂ ತಥಾ ಹೃಷ್ಟಾ ನ ಸಾ ವಧೂಃ ।
ಯಥಾ ದೃಷ್ಟ್ವಾಽಪ್ಯಹೋಽವಂತೀಂ ಪರಮಾನಂದದಾಯಿನೀಂ ॥೧೨೧॥
ಸಾ ಕೃತಾರ್ಥಾಮಿವಾತ್ಮಾನಂ ಮನ್ಯಮಾನಾ ಮನಸ್ವಿನೀ ।
ತೇನ ಪತ್ಯೋಜ್ಜಯಿನ್ಯಾಂ ಚ ಪರಾಂ ನಿರ್ವೃತಿಮಾಪ ಸಾ ॥ ೧೨೨ ॥
ಸೋಽಪ್ಯಮಿತ್ರಜಿದಾಸಾದ್ಯ ಪತ್ನೀಂ ಮಲಯಗಂಧಿನೀಂ ।
ಧರ್ಮಪ್ರಧಾನಂ ಸಂಸೇವ್ಯ ಕಾಮಂ ಪ್ರಾಪೋತ್ತಮಂ ಸುಖಂ ॥ ೧೨೩ ॥
ಸಾ ಪತಿಂ ವಿಷ್ಣುಭಜನೇ ರತಂ ಪ್ರೋವಾಚ ಭಾಮಿನೀ ॥ ೧೨೪ ॥

ರಾಜ್ಞ್ಯುವಾಚ :—

ಭೂಪಾಽಭೀಷ್ಟತೃತೀಯಾಯಾಂ ಚರಿಷ್ಯಾಮಿ ಮಹಾವ್ರತಂ ।

ರಾಜೋವಾಚ :—

ದೇವ್ಯಭೀಷ್ಟತೃತೀಯಾಯಾಂ ವ್ರತಂ ಕೀದೃಗ್ಭವೇದ್ವದ ॥ ೧೨೫ ॥

---

೧೨೦. ಆ ವಿದ್ಯಾಧರಕನ್ಯೆಯೂ ಸರ್ವಸಮೃದ್ಧವಾಗಿದ್ದ ಅವಂತೀನಗರವನ್ನು ನೋಡಿ ಅದಕ್ಕೆ ಸರಿದೂಗಲಾರದ ಸ್ವರ್ಗಲೋಕವನ್ನೂ ಭೋಗವತಿಯನ್ನೂ ನಿಂದಿಸಿದಳು.

೧೨೧. ಆ ವಧುವು ಅಮಿತ್ರಜಿದ್ರಾಜನನ್ನು ಪತಿಯನ್ನಾಗಿ ಪಡೆದಾಗಲೂ, ಪರಮಾನಂದದಾಯಕವಾದ ಅವಂತೀನಗರವನ್ನು ನೋಡಿದಾಗ ಪಟ್ಟಷ್ಟು ಸಂತೋಷವನ್ನು ತೋರಿಸಲಿಲ್ಲ.

೧೨೨. ತೀಕ್ಷ್ಣಬುದ್ಧಿಯುಳ್ಳ ಆಕೆಯು ತಾನೇ ಕೃತಾರ್ಥಳಾದೆನೆಂದು ಬಗೆದು ತನ್ನ ಗಂಡನೊಡನೆ ಉಜ್ಜಯಿನಿಯಲ್ಲಿ ವಾಸಮಾಡುತ್ತ ಪರಮಸೌಖ್ಯವನ್ನು ಪಡೆದಳು.

೧೨೩. ಮಲಯಗಂಧಿನಿಯನ್ನು ಪತ್ನಿಯಾಗಿ ಪಡೆದ ಅಮಿತ್ರಜಿದ್ರಾಜೇಂದ್ರನೂ ಸಹ ಧರ್ಮವನ್ನೇ ಮುಂದುಮಾಡಿಕೊಂಡು ಕಾಮವನ್ನು ಸೇವಿಸುತ್ತ ಉತ್ತಮಸುಖಿಯಾಗಿದ್ದನು.

೧೨೪. ಒಮ್ಮೆ ಆ ಸುಂದರಿಯು ವಿಷ್ಣುಸೇವೆಯಲ್ಲಿಯೇ ತತ್ಪರನಾಗಿದ್ದ ತನ್ನ ಪತಿಗಿಂತೆಂದಳು.

೧೨೫. ರಾಣಿಯು ಹೇಳುತ್ತಾಳೆ:—ರಾಜೇಂದ್ರನೆ! ಅಭೀಷ್ಟತೃತೀಯೆಯಲ್ಲಿ ಒಂದು ಮಹಾವ್ರತವನ್ನಾಚರಿಸಬೇಕೆಂದಿರುವೆನು. ರಾಜನು ಕೇಳುತ್ತಾನೆ:— ದೇವಿಯೆ! ಅಭೀಷ್ಟತದಿಗೆಯ ವ್ರತವು ಎಂತಹುದೆಂಬುದನ್ನು ನನಗೆ ಹೇಳು.

ಇತಿ ರಾಜ್ಞೋದಿತಾ ರಾಜ್ಞೀ ಪ್ರವಕ್ತುಮುಪಚಕ್ರಮೇ ।
ಇತಿ ಕರ್ತವ್ಯತಾಂ ತಸ್ಯ ವ್ರತಸ್ಯ ಸವಿಧಾನಕಾಂ ॥ ೧೨೬ ॥

ರಾಜ್ಞ್ಯುವಾಚ :—

ಪುರಾ ದೇವರ್ಷಿಣಾ ಚೇದಂ ವ್ರತಂ ಲಕ್ಷ್ಮ್ಯೈ ಪ್ರತಿಶ್ರುತಂ ।
ತಯಾ ಪ್ರಾಪ್ತಾಸ್ತು ಸಕಲಾಃ ಕಾಮಾಃ ಸ್ವರ್ಗಾಽಪವರ್ಗದಾಃ ॥ ೧೨೭ ॥
ಮಾರ್ಗಶೀರ್ಷತೃತೀಯಾಯಾಂ ಶುಕ್ಲಾಯಾಂ ಕಲಶೋಪರಿ ।
ತಾಮ್ರಪಾತ್ರಂ ನಿಧಾಯ್ಯೈವ ತಂಡುಲೈಃ ಪರಿಪೂರಿತಂ ॥ ೧೨೮ ॥
ಅಚ್ಛಿದ್ರಂ ಚ ನವೀನಂ ಚ ರಜನೀರಾಗರಂಜಿತಂ ।
ವಾಸಃ ಪಾತ್ರೋಪರಿ ನ್ಯಸ್ಯ ಸೂಕ್ಷ್ಮಾತ್ಸೂಕ್ಷ್ಮತರಂ ಪರಂ ॥ ೧೨೯ ॥
ತಸ್ಯೋಪರಿ ಶುಭಂ ಪದ್ಮಂ ರವಿರಶ್ಮಿಪ್ರಕಾಶಿತಂ ।
ತತ್ಕರ್ಣಿಕಾಯಾ ಉಪರಿ ಚತುಃಸ್ವರ್ಣವಿನಿರ್ಮಿತಂ ।
ವಿಧಿಂ ಸಂಪೂಜಯೇದ್ಭಕ್ತ್ಯಾ ರಕ್ತಮಾಲ್ಯಾಂಬರಾದಿಭಿಃ ॥ ೧೩೦ ॥
ಪುಷ್ಪೈಃ ಸುಗಂಧೈಃ ಕರ್ಪೂರಕಸ್ತೂರ್ಯಾದಿಭಿರರ್ಚಯೇತ್ ।
ರಾತ್ರೌ ಜಾಗರಣಂ ಕಾರ್ಯಂ ವಿಪ್ರಾಣಾಂ ಪರಮೋತ್ಸವೈಃ ॥ ೧೩೧ ॥

---

೧೨೬. ಇಂತೆಂದು ರಾಜನಿಂದ ಚೋದಿತಳಾದ ಮಲಯಗಂಧಿನಿಯು ಆ ವ್ರತದ ನಿಯಮಗಳನ್ನೂ, ಪೂಜಾವಿಧಾನವನ್ನೂ ಹೇಳಲುಪಕ್ರಮಿಸಿದಳು.

೧೨೭. ರಾಣಿಯು ಹೇಳುತ್ತಾಳೆ:—''ಹಿಂದೆ ದೇವರ್ಷಿಯಾದ ನಾರದನು ಈ ವ್ರತವನ್ನು ಮಹಾಲಕ್ಷ್ಮಿಗೆ ತಿಳಿಸಿದನು. ಆಕೆಯು ಅದರ ಆಚರಣೆಯ ಫಲವಾಗಿ ಸ್ವರ್ಗಮೋಕ್ಷಗಳಿಗೆ ಸಾಧನಗಳಾಗಿರುವ ಸಕಲಾಭೀಷ್ಟಗಳನ್ನೂ ಪಡೆದಳು.

೧೨೮. ಮಾರ್ಗಶಿರಮಾಸದ ಶುಕ್ಲತದಿಗೆಯ ದಿನದಲ್ಲಿ ಒಂದು ಕಳಶದ ಮೇಲೆ ಅಕ್ಕಿಯನ್ನು ತುಂಬಿದ ತಾಮ್ರದ ಪಾತ್ರೆಯೊಂದನ್ನು ಸ್ಥಾಪಿಸಬೇಕು.

೧೨೯. ಆ ಪಾತ್ರೆಯ ಮೇಲೆ ಹರಿಯದಿರುವುದೂ, ನೂತನವಾದುದೂ, ಅರಿಸಿನ ಬಣ್ಣವನ್ನು ತಳೆದುದೂ, ಬಹಳ ಸೂಕ್ಷ್ಮವಾದುದೂ ಆದ ಬಟ್ಟೆಯೊಂದನ್ನು ಹರಡಿರಬೇಕು.

೧೩೦. ಆ ಬಟ್ಟೆಯ ಮೇಲೆ ಸೂರ್ಯರಶ್ಮಿಗಳ ಬಣ್ಣದ ಪದ್ಮವನ್ನು ಉತ್ತಮರೀತಿಯಿಂದ ಬರೆಯಬೇಕು. ಪದ್ಮದ ಕರ್ಣಿಕೆಯ ಮೇಲೆ ನಾಲ್ಕು ತೊಲಗಳ ಚಿನ್ನದಿಂದ ಮಾಡಿದ ಬ್ರಹ್ಮದೇವನ ಪ್ರತಿಮೆಯನ್ನು ನಿಲ್ಲಿಸಿ ಕೆಂಪು ಹೂವುಗಳು, ಹಾರಗಳು, ವಸ್ತ್ರಗಳು ಮುಂತಾದುವುಗಳಿಂದ ಭಕ್ತಿಯುಕ್ತರಾಗಿ ಪೂಜಿಸಬೇಕು.

೧೩೧. ಸುವಾಸನೆಯ ಪುಷ್ಪಗಳು, ಕರ್ಪೂರ, ಕಸ್ತೂರಿ ಮೊದಲಾದುವು

ಹೋಮಃ ಕಾರ್ಯೋ ಮಹಾಭಕ್ತ್ಯಾ ಸಹಸ್ರಪರಿಸಂಖ್ಯಯಾ ।
ನವಪ್ರಸೂತಾಂ ಕಪಿಲಾಂ ದದ್ಯಾಚ್ಚ ಸುಪಯಸ್ವಿನೀಂ ॥ ೧೩೨ ॥
ದದ್ಯಾದಾಚಾರ್ಯವರ್ಯಾಯ ಸಾಽಲಂಕಾರಾಂ ಸದಕ್ಷಿಣಾಂ ।
ಉಪೋಷ್ಯ ದಂಪತೀ ಭಕ್ತ್ಯಾ ನವಾಽಂಬರವಿಭೂಷಿತೌ ॥ ೧೩೩ ॥
ಪ್ರಾತಃ ಸ್ನಾತ್ವಾ ಚತುರ್ಥ್ಯಾಂ ಚ ಸಂಪೂಜ್ಯಾಚಾರ್ಯಮಾದಿತಃ ।
ವಸ್ತ್ರೈರಾಭರಣೈರ್ಮಾಲ್ಯೈರ್ದಕ್ಷಿಣಾಭಿರ್ಮುದಾನ್ವಿತಃ ।
ಸೋಪಸ್ಕರಾಂ ಚ ತಾಂ ಮೂರ್ತಿಮಾಚಾರ್ಯಾಯ ಪ್ರದಾಪಯೇತ್ ॥

॥ ಮಂತ್ರಃ ॥

ನಮೋ ವಿಶ್ವವಿಧಾನಜ್ಞೇ ವಿದ್ಯೇ ವಿವಿಧಕಾರಿಣಿ ।
ಸುತಂ ಚ ಶಂಕರಂ ದೇಹಿ ತುಷ್ಟಾ ಹ್ಯಸ್ಮಾದ್ವ್ರತೋತ್ತಮಾತ್ ॥ ೧೩೫ ॥
ಸಹಸ್ರಂ ಭೋಜಯಿತ್ವಾಽಥ ದ್ವಿಜಾನಾಂ ಭಕ್ತಿಪೂರ್ವಕಂ ।
ಭುಕ್ತಶೇಷೇಣ ಚಾಽನ್ನೇನ ಕುರ್ಯಾದ್ವೈ ಪಾರಣಂ ತತಃ ॥ ೧೩೬ ॥
ಇತ್ಥಮೇತದ್ವ್ರತಂ ನಾಥ ಚಿಕೀರ್ಷಾಮಿ ತ್ವದಾಜ್ಞಯಾ ।
ಕುರು ಚೈತತ್ಪ್ರಿಯಂ ಮಹ್ಯಮಭೀಷ್ಟಫಲಲಬ್ಧಯೇ ॥ ೧೩೭ ॥

---

ಗಳಿಂದಲೂ ಪೂಜಿಸಿ ರಾತ್ರಿಯಲ್ಲಿ ಬ್ರಾಹ್ಮಣರೊಡನೆ ಮಹೋತ್ಸವಗಳನ್ನು ಮಾಡುತ್ತ ಜಾಗರಣೆಯನ್ನು ನಡೆಸಬೇಕು.

೧೩೨. ಅತ್ಯಂತಭಕ್ತಿಯಿಂದ ಒಂದು ಸಾವಿರ ಸಂಖ್ಯೆಯ ಹೋಮವನ್ನೂ ಮಾಡಬೇಕು. ಹೊಸದಾಗಿ ಕರುವನ್ನು ಹಾಕಿ ಹೆಚ್ಚು ಹಾಲನ್ನು ಕೊಡುತ್ತಿರುವ ಕಪಿಲೆಯಾಕಳನ್ನು ದಾನಮಾಡಬೇಕು.

೧೩೩. ಆ ಗೋವಿಗೆ ಅಲಂಕಾರವನ್ನುಮಾಡಿ ದಕ್ಷಿಣೆಯೊಡನೆ ಆಚಾರ್ಯನಿಗೆ ಕೊಟ್ಟು ವ್ರತವನ್ನು ಕೈಕೊಂಡ ಆ ದಂಪತಿಗಳು ನೂತನವಸ್ತ್ರಗಳನ್ನು ಧರಿಸಿ ಭಕ್ತಿಯಿಂದ ಅಂದು ಉಪವಾಸವನ್ನುಮಾಡಬೇಕು.

೧೩೪. ಮಾರನೆಯ ಚತುರ್ಥಿಯ ದಿನದ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಮೊದಲು ಆಚಾರ್ಯನನ್ನು ವಸ್ತ್ರಗಳು, ಆಭರಣಗಳು, ಪುಷ್ಪಹಾರಗಳು, ದಕ್ಷಿಣೆ ಮುಂತಾದುವುಗಳಿಂದ ಅರ್ಚಿಸಿ ಸಂತೋಷದಿಂದ ಸರ್ವವೈಭವಗಳಿಂದೊಡಗೂಡಿದ ಆ ಪ್ರತಿಮೆಯನ್ನು ಆಚಾರ್ಯನಿಗೆ ಕೊಡಿಸಬೇಕು.

೧೩೫. ದಾನಮಂತ್ರವು :—ಸಮಸ್ತವಿಧಾನಗಳನ್ನರಿತ ವಿದ್ಯಾದೇವಿಯೆ! ಸಕಲಾಭೀಷ್ಟಪ್ರದೆಯೆ! ಈ ಉತ್ತಮವ್ರತವನ್ನಾಚರಿಸಿದುದರ ಫಲವಾಗಿ ನನಗೆ ಸುಖಪ್ರದನಾದ ಪುತ್ರನನ್ನನುಗ್ರಹಿಸು.

೧೩೬. ಪ್ರತಿಮಾದಾನವಾದ ಮೇಲೆ ಒಂದು ಸಾವಿರ ಬ್ರಾಹ್ಮಣರಿಗೆ ಭಕ್ತಿಪೂರ್ವಕವಾಗಿ ಭೋಜನವನ್ನುಮಾಡಿಸಿ ಬಳಿಕ ಅನ್ನಶೇಷದಿಂದ ತಾನೂ ಪಾರಣೆಯನ್ನು ಮಾಡಬೇಕು.

೧೩೭. ನಾಥನೆ! ಈ ರೀತಿಯಾದ ವ್ರತವನ್ನು ನಾನು ನಿನ್ನ ಅಪ್ಪಣೆ

ಇತಿ ಭೂಪಾಲವರ್ಯೇಣ ಶ್ರುತ್ವಾ ಸಂಹೃಷ್ಟಚೇತಸಾ ।
ತದಾ ವ್ರತಂ ಸಮಾಚೀರ್ಣಂ ಸಾಽಂತರ್ವತ್ನೀ ಬಭೂವ ಹ ॥ ೧೩೮ ॥
ತಯಾಽಥ ಪ್ರಾರ್ಥಿತಾ ಗೌರೀ ಗರ್ಭಿಣ್ಯಾ ಭಕ್ತಿತೋಷಿತಾ ।
ಪುತ್ರಂ ದೇಹಿ ಮಹಾಮಾಯೇ ಸಾಕ್ಷಾದ್ವಿಷ್ಣ್ವಂಶಸಂಭವಂ ॥ ೧೩೯ ॥
ಜಾತಮಾತ್ರೋ ವ್ರಜೇತ್ಸ್ವರ್ಗಂ ಪುನರಾಯಾತಿ ಚಾಽತ್ರ ವೈ ।
ಭಕ್ತಃ ಸದಾಶಿವೇಽತ್ಯರ್ಥಂ ಪ್ರಸಿದ್ಧಃ ಸರ್ವಭೂತಲೇ ।
ವಿನೈವ ಸ್ತನ್ಯಪಾನೇನ ಷೋಡಶಾಬ್ದಾಕೃತಿಃ ಕ್ಷಣಾತ್ ॥ ೧೪೦ ॥
ಏವಂಭೂತಃ ಸುತೋ ಗೌರಿ ಯಥಾ ಸ್ಯಾನ್ಮೇ ತಥಾ ಕುರು ।
ಮೃಡಾನ್ಯಾಽಪಿ ತಥೇತ್ಯುಕ್ತಾ ರಾಜ್ಞೀ ಭಕ್ತ್ಯಾಽತಿತುಷ್ಟಯಾ ॥ ೧೪೧ ॥
ಅಥ ಕಾಲೇನ ತನಯಂ ಮೂಲರ್ಕ್ಷೇ ಸಾಽಪ್ಯಜೀಜನತ್ ।
ಹಿತೈರಮಾತ್ಯೈರಥ ಸಾ ವಿಜ್ಞಪ್ತಾಽರಿಷ್ಟಸಂಸ್ಥಿತಾ ॥ ೧೪೨ ॥

---

ಯಿಂದ ಆಚರಿಸಬೇಕೆಂದಿರುವೆನು" ಎಂದು ಹೇಳಿದ ಸತಿಗೆ ರಾಜೇಂದ್ರನೆಂದನು. "ಇದು ನನಗೂ ಪ್ರಿಯವಾಗಿರುವುದು. ನಮ್ಮ ಇಷ್ಟಾರ್ಥಪ್ರಾಪ್ತಿಗಾಗಿ ವ್ರತವನ್ನು ಅವಶ್ಯವಾಗಿ ಮಾಡು."

೧೩೮. ಇಂತೆಂದು ಮಹಾರಾಜನಿಂದ ಅನುಜ್ಞೆಯನ್ನು ಪಡೆದು ಆನಂದ ಭರಿತಹೃದಯಳಾಗಿ ಮಲಯಗಂಧಿನಿಯು ವ್ರತವನ್ನು ಸಾಂಗವಾಗಿ ನೆರವೇರಿಸಿದ ಕೆಲವು ದಿನಗಳಲ್ಲಿಯೇ ಗರ್ಭಿಣಿಯಾದಳು.

೧೩೯. ಗರ್ಭಿಣಿಯು ಪಾರ್ವತೀದೇವಿಯನ್ನು ಭಕ್ತಿಯಿಂದ ಸಂತೋಷ ಗೊಳಿಸಿ ಪ್ರಾರ್ಥಿಸಿಕೊಂಡಳು. "ಮಹಾಮಾಯೆಯೆ! ಮಹಾವಿಷ್ಣುವಿನ ಅಂಶ ದಿಂದ ಕೂಡಿರುವ ಪುತ್ರನನ್ನು ನನಗೆ ಅನುಗ್ರಹಿಸು.

೧೪೦. ಹುಟ್ಟಿದ ಕೂಡಲೇ ಅವನು ಸ್ವರ್ಗಕ್ಕೆ ಹೋಗಿ ಪುನಃ ಇಲ್ಲಿಗೆ ಬರಬೇಕು. ಮಹಾದೇವನಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿ ಭೂಮಂಡಲ ದಲ್ಲೆಲ್ಲ ಪ್ರಖ್ಯಾತನಾಗಬೇಕು, ತಾಯಿಯ ಸ್ತನ್ಯವನ್ನು ಪಾನಮಾಡದೆ ಹುಟ್ಟುತ್ತಲೇ ಹದಿನಾರು ವರ್ಷದವನಂತಾಗಬೇಕು.

೧೪೧. ಗೌರಿದೇವಿಯೆ! ಇಂತಹ ಮಗನು ನನಗೆ ಹುಟ್ಟುವಂತೆ ಅನುಗ್ರಹಿಸು." ರಾಣಿಯ ಭಕ್ತ್ಯತಿಶಯದಿಂದ ಸಂತುಷ್ಟಳಾದ ಪಾರ್ವತಿಯೂ ಹಾಗೆಯೇ ಆಗಲೆಂದು ಹೇಳಿದಳು.

೧೪೨. ಬಳಿಕ ಯಥಾಕಾಲದಲ್ಲಿ ಮೂಲಾನಕ್ಷತ್ರದಲ್ಲಿ ಆಕೆಯು ಪುತ್ರ ರತ್ನವನ್ನು ಪಡೆದಳು. ರಾಜಹಿತದಲ್ಲಿ ನಿರತರಾಗಿದ್ದ ಮಂತ್ರಿಮುಖ್ಯರು ಆಕೆಗೆ ಈ ಅರಿಷ್ಟದ ಜನನವನ್ನು ತಿಳಿಸಿದರು.

ದೇವಿ ರಾಜಾರ್ಥಿನೀ ತ್ವಂ ತು ತ್ಯಜ ದುಷ್ಟರ್ಕ್ಷಜಂ ಸುತಂ ।
ಸಾ ಮಂತ್ರಿವಾಕ್ಯಮಾಕರ್ಣ್ಯ ಕೇವಲಂ ಪತಿದೇವತಾ ॥ ೧೪೩ ॥
ಅತ್ಯಾಕ್ಷೀತ್ತಂ ತಥಾ ಪ್ರಾಪ್ತಂ ತನಯಂ ನಯಕೋವಿದಾ ।
ಧಾತ್ರಿಕಾಂ ತು ಸಮಾಹೂಯ ಪ್ರಾಹೇದಂ ಸಾ ನೃಪಾಂಗನಾ ॥ ೧೪೪ ॥
ಪಂಚಮುದ್ರೇ ಮಹಾಪೀಠೇ ವಿಕಟಾನಾಮ ಮಾತೃಕಾ ।
ತದಗ್ರೇ ಸ್ಥಾಪಯಿತ್ವಾಽಮುಂ ಬಾಲಂ ಧಾತ್ರಿ ತ್ವಿದಂ ವದ ॥ ೧೪೫ ॥
ಗೌರಿದತ್ತಃ ಶಿಶುರಸೌ ತವಾಽಗ್ರೇ ವಿನಿವೇದಿತಃ ।
ರಾಜ್ಞ್ಯಾ ಪತ್ಯುಃ ಪ್ರಿಯೈಷಿಣ್ಯಾ ಮಂತ್ರಿವಿಜ್ಞಪ್ತಿನುನ್ನಯಾ ॥ ೧೪೬ ॥
ಸಾಽಪಿ ರಾಜ್ಞ್ಯುದಿತಂ ಶ್ರುತ್ವಾ ಬಾಲಂ ಶಿಶುಶಶಿಪ್ರಭಂ ।
ವಿಕಟಾಯಾಃ ಪುರೋಭಾಗೇ ಸಂಸ್ಥಾಪ್ಯ ಗೃಹಮಾಗತಾ ॥ ೧೪೭ ॥
ಅಥ ಸಾ ವಿಕಟಾ ದೇವೀ ಸಮಾಹೂಯ ಚ ಯೋಗಿನೀಃ ।
ಉವಾಚ ನಯತ ಕ್ಷಿಪ್ರಂ ಶಿಶುಂ ಮಾತೃಗಣಾಗ್ರತಃ ।
ತಾಸಾಮಾಜ್ಞಾಂ ಚ ಕುರುತ ರಕ್ಷತಾಽಮುಂ ಪ್ರಯತ್ನತಃ ॥ ೧೪೮ ॥

---

೧೪೩. "ದೇವಿಯೆ! ರಾಜನ ಹಿತದಲ್ಲಿ ದೃಷ್ಟಿಯುಳ್ಳ ನೀನು ದುಷ್ಟನಕ್ಷತ್ರದಲ್ಲಿ ಹುಟ್ಟಿರುವ ಈ ಮಗುವನ್ನು ಬಿಟ್ಟುಬಿಡು." ಪತಿಯನ್ನೇ ಪರದೈವವೆಂದು ತಿಳಿದಿದ್ದ ಆಕೆಯು ಮಂತ್ರಿಗಳ ಮಾತನ್ನು ಕೇಳಿದಳು.

೧೪೪. ಪತಿವ್ರತಾಧರ್ಮಗಳಲ್ಲಿ ಕೋವಿದಳಾದ ಆಕೆಯು ಅವರ ಮಾತಿನಂತೆ ಆ ಬಾಲಕನನ್ನು ತ್ಯಜಿಸಿದಳು. ಆ ರಾಜಪತ್ನಿಯು ಒಬ್ಬ ದೂತಿಕೆಯನ್ನು ಬಳಿಗೆ ಕರೆದು ಇಂತೆಂದಳು.

೧೪೫. "ಪಂಚಮುದ್ರವೆಂಬ ಮಹಾಪೀಠಪ್ರದೇಶದಲ್ಲಿ ವಿಕಟಾನಾಮಕಳಾದ ಮಾತೆಯೊಬ್ಬಳಿರುವಳು. ದಾದಿಯೆ! ಆಕೆಯ ಮುಂದೆ ಈ ಮಗುವನ್ನು ಇಟ್ಟು ಹೀಗೆ ಹೇಳಬೇಕು.

೧೪೬. "ಗೌರಿಯಿಂದ ಕೊಡಲ್ಪಟ್ಟ ಈ ಮಗುವನ್ನು ಪತಿಯ ಪ್ರಿಯವನ್ನು ಕೋರಿದ ರಾಣಿಯು ಮಂತ್ರಿಗಳ ವಾಕ್ಯದಿಂದ ಚೋದಿತಳಾಗಿ ನಿನ್ನ ಸನ್ನಿಧಿಯಲ್ಲಿ ನಿವೇದಿಸಿರುವಳು."

೧೪೭. ಆ ದಾದಿಯು ರಾಣಿಯ ಅಪ್ಪಣೆಯನ್ನು ಕೇಳಿ ಬಾಲಚಂದ್ರನ ಕಾಂತಿಯಿಂದ ಯುಕ್ತವಾದ ಆ ಮಗುವನ್ನು ತೆಗೆದುಕೊಂಡು ಹೋಗಿ ವಿಕಟಾದೇವಿಯ ಮುಂದೆ ಮಗುವನ್ನೊಪ್ಪಿಸಿ ಮನೆಗೆ ಹಿಂದಿರುಗಿದಳು.

೧೪೮. ವಿಕಟಾದೇವಿಯು ತನ್ನ ಸೇವಕಿಯರಾದ ಯೋಗಿನಿಯರನ್ನು ಕರೆದು ಅಪ್ಪಣೆ ಮಾಡಿದಳು. ಈ ಶಿಶುವನ್ನು ಸಪ್ತಮಾತೃಗಳ ಬಳಿಗೆ ಶೀಘ್ರವಾಗಿ ಕರೆದುಕೊಂಡು ಹೋಗಿ ಅವರು ಹೇಳಿದಂತೆ ನಡೆದುಕೊಳ್ಳಿರಿ. ಇದನ್ನು ಪ್ರಯತ್ನದಿಂದ ಕಾಪಾಡಿಕೊಂಡಿರಿ.

ಯೋಗಿನ್ಯೋ ವಿಕಟಾವಾಕ್ಯಾತ್ಪ್ರೇಚರ್ಯಸ್ತತ್ಕ್ಷಣೇನ ತಂ ।
ನಿನ್ಯುರ್ಗಗನಮಾರ್ಗೇಣ ಬ್ರಾಹ್ಮ್ಯಾದ್ಯಾ ಯತ್ರ ಮಾತರಃ ॥ ೧೪೯ ॥
ಪ್ರಣಮ್ಯ ಯೋಗಿನೀವೃಂದಂ ತಂ ಶಿಶುಂ ಸೂರ್ಯವರ್ಚಸಂ ।
ಪುರೋ ನಿಧಾಯ ಮಾತೄಣಾಂ ಪ್ರೋಚುಷ್ಟ ವಿಕಟೋದಿತಂ ॥ ೧೫೦ ॥
ಬ್ರಹ್ಮಾಣೀ ವೈಷ್ಣವೀ ರೌದ್ರೀ ವಾರಾಹೀ ನಾರಸಿಂಹಿಕಾ ।
ಕೌಮಾರೀ ಚಾಽಪಿ ಮಾಹೇಂದ್ರೀ ಚಾಮುಂಡಾ ಚೈವ ಚಂಡಿಕಾ ॥ ೧೫೧ ॥
ದೃಷ್ಟ್ವಾ ತಂ ಬಾಲಕಂ ರಮ್ಯಂ ವಿಕಟಾಪ್ರೇಷಿತಂ ತತಃ ।
ಪಪ್ರಚ್ಛುರ್ಯುಗಪದ್ವಾಕ್ಯಂ ಕಸ್ತೇ ಬಾಲ ಪ್ರಮುಖ್ಯಕಃ ॥ ೧೫೨ ॥
ಮಾತೃಭಿಶ್ಚೇತಿ ಪೃಷ್ಟಸ್ತು ಯದಾ ಕಿಂಚಿನ್ನ ವಕ್ತಿ ಸಃ ।
ತದಾ ಚ ಯೋಗಿನೀಚಕ್ರಂ ಪ್ರಾಹ ಮಾತೃಗಣಸ್ತ್ವಿತಿ ॥ ೧೫೩ ॥
ರಾಜ್ಯಯೋಗ್ಯೋ ಭವತ್ಯೇಷ ಮಹಾಲಕ್ಷಣಲಕ್ಷಿತಃ ।
ಪುನಸ್ತತ್ರೈವ ನೇತವ್ಯೋ ಯೋಗಿನ್ಯಸ್ತ್ವವಿಲಂಬಿತಂ ॥ ೧೫೪ ॥

---

೧೪೯. ವಿಕಟಾದೇವಿಯ ಮಾತಿನಂತೆ ಯೋಗಿನಿಯರು ಆ ಕ್ಷಣದಲ್ಲಿಯೇ ಮಗುವನ್ನೆತ್ತಿಕೊಂಡು ಆಕಾಶದಲ್ಲಿ ಹಾರಿಹೋಗಿ ಬ್ರಾಹ್ಮಿಯೇ ಮೊದಲಾದ ಮಾತೃಗಳಿದ್ದಲ್ಲಿಗೆ ತೆಗೆದುಕೊಂಡುಹೋದರು.

೧೫೦. ಯೋಗಿನಿಯರ ಗಡಣವು ಅವರಿಗೆ ನಮಸ್ಕರಿಸಿ ಸೂರ್ಯನಂತೆ ಹೊಳೆಯುತ್ತಿರುವ ಆ ಬಾಲಕನನ್ನು ಅವರ ಮುಂದಿಟ್ಟು ವಿಕಟಾದೇವಿಯು ಹೇಳಿದುದನ್ನೆಲ್ಲ ವಿಜ್ಞಾಪಿಸಿಕೊಂಡರು.

೧೫೧. ಬ್ರಾಹ್ಮೀ, ವೈಷ್ಣವಿ, ಮಾಹೇಶ್ವರಿ, ವಾರಾಹಿ, ನಾರಸಿಂಹಿ, ಕೌಮಾರಿ, ಇಂದ್ರಾಣಿ, ಚಾಮುಂಡಾ ಮತ್ತು ಚಂಡಿಕೆಯರೆಂಬುವರೇ ಆ ಮಾತೃಕೆಯರು.

೧೫೨. ವಿಕಟೆಯು ಕಳುಹಿಸಿದ ಆ ಬಾಲಕನನ್ನು ಕಂಡು ಅವರೆಲ್ಲರೂ ಒಟ್ಟಿಗೆ, "ಎಲೈ ಬಾಲಕನೆ! ನಿನಗೆ ನಮ್ಮಲ್ಲಿ ಯಾರು ಮುಖ್ಯರಾಗಿ ಕಾಣುತ್ತಿರುವರು?" ಎಂದು ಪ್ರಶ್ನೆಮಾಡಿದರು.

೧೫೩. ಮಾತೃಗಳ ಈ ಪ್ರಶ್ನೆಗೆ ಹುಡುಗನು ಯಾವ ಪ್ರತ್ಯುತ್ತರವನ್ನೂ ಕೊಡದಿರಲು ಮಾತೃಗಣವು ಯೋಗಿನೀಮಂಡಲವನ್ನು ಕುರಿತು ಇಂತೆಂದಿತು.

೧೫೪. "ಸಕಲಶುಭಲಕ್ಷಣಗಳಿಂದ ಕೂಡಿರುವ ಈ ಬಾಲಕನು ಮುಂದೆ ರಾಜ್ಯಾಧಿಕಾರವನ್ನು ಮಾಡಲು ಯೋಗ್ಯನಾಗಿರುವನು. ಯೋಗಿನಿಯರಿರಾ! ಇವನನ್ನು ತಡಮಾಡದೆ ಮತ್ತೆ ಅಲ್ಲಿಗೇ ಕರೆದುಕೊಂಡು ಹೋಗಿರಿ.

ಪಂಚಮುದ್ರಾಮಹಾದೇವೀ ತಿಷ್ಠತೇ ಯತ್ರ ಕಾಮದಾ ।
ಯಸ್ಯಾಃ ಸಂಸೇವನಾನ್ನೄಣಾಂ ನಿರ್ವಾಣಶ್ರೀರದೂರತಃ ॥ ೧೫೫ ॥
ತತ್ಪೀಠಸೇವನಾದಸ್ಯ ಷೋಡಶಾಬ್ದಾಕೃತೇಃ ಶಿಶೋಃ ।
ಸಿದ್ಧಿರ್ಭವಿತ್ರೀ ಪರಮಾ ರುದ್ರಸ್ಯಾಽನುಗ್ರಹಾತ್ಪರಾ ॥ ೧೫೬ ॥
ಏವಂ ಮಾತೃಗಣಾತ್ಸದ್ಯೋ ಯೋಗಿನೀಭಿಃ ಕ್ಷಣೇನ ತು ।
ಪ್ರಾಪಿತೋ ಮಾತೃವಾಕ್ಯೇನ ಪಂಚಮುದ್ರಾಂತಿಕಂ ಪುನಃ ॥ ೧೫೭ ॥
ಸಂಪ್ರಾಪ್ಯ ತನ್ಮಹಾಪೀಠಂ ಸ್ವರ್ಗಲೋಕಾದಿಹಾಗತಃ ।
ಮಹಾಕಾಲವನೇ ಪುಣ್ಯೇ ತತಾಪ ವಿಪುಲಂ ತಪಃ ॥ ೧೫೮ ॥
ತಪಸಾಽತೀವ ತೀವ್ರೇಣ ನಿಶ್ಚಲೇಂದ್ರಿಯಮಾನಸಃ ।
ತಸ್ಯ ರಾಜಕುಮಾರಸ್ಯ ಪ್ರಸನ್ನೋಽಭೂದುಮಾಧವಃ ॥ ೧೫೯ ॥
ಆವಿರ್ಬಭೂವ ಪುರತೋ ಲಿಂಗರೂಪೇಣ ಶಂಕರಃ ।
ಉವಾಚ ಚ ಪ್ರಸನ್ನೋಽಸ್ಮಿ ವರಂ ಬ್ರೂಹಿ ನೃಪಾಂಗಜ ॥ ೧೬೦ ॥

---

೧೫೫. ಪಂಚಮುದ್ರಾಮಹಾದೇವಿಯು ಭಕ್ತರ ಸಕಲಾಭೀಷ್ಟಗಳನ್ನೂ ಕೊಡುತ್ತಿರುವ ಆ ಸ್ಥಳವನ್ನು ಸೇವಿಸುತ್ತಿರುವ ಮಾನವರಿಗೆ ಮೋಕ್ಷಲಕ್ಷ್ಮಿಯ ಲಾಭವು ಶೀಘ್ರದಲ್ಲಿಯೇ ಆಗುವುದು.

೧೫೬. ಆ ಪೀಠವನ್ನು ಸೇವಿಸುವುದರಿಂದ ಈ ಶಿಶುವು ಹದಿನಾರು ವರ್ಷದವನಾಗಿ ಮಹೇಶ್ವರನ ಅನುಗ್ರಹದಿಂದ ಸಕಲ ಸಿದ್ಧಿಗಳನ್ನೂ ಪಡೆಯುವನು.

೧೫೭. ಇಂತು ಮಾತೃಗಣಗಳ ಬಳಿಯಿಂದ ಆ ಕ್ಷಣದಲ್ಲಿಯೇ ಯೋಗಿನೀದೇವಿಯರು ಮಗುವನ್ನು ಪುನಃ ಪಂಚಮುದ್ರಾದೇವಿಯ ಬಳಿಗೆ ಕರೆದು ತಂದು ಬಿಟ್ಟರು.

೧೫೮. ಸ್ವರ್ಗಲೋಕದಿಂದ ಕೆಳಕ್ಕೆ ಬಂದು ಆ ಮಹಾಪೀಠದಲ್ಲಿ ನೆಲಸಿ ಆ ಮಗುವು ಪುಣ್ಯಪ್ರದವಾದ ಮಹಾಕಾಲವನದಲ್ಲಿಯೇ ಅಪಾರವಾದ ತಪಸ್ಸನ್ನಾಚರಿಸಿದನು.

೧೫೯. ಇಂದ್ರಿಯಗಳನ್ನೂ ಮನಸ್ಸನ್ನೂ ಸ್ವಾಧೀನಗೊಳಿಸಿಕೊಂಡು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದ ಆ ರಾಜಪುತ್ರನನ್ನು ಕಂಡು ಮಹಾದೇವನೂ ಪ್ರಸನ್ನನಾದನು.

೧೬೦. ಶಂಕರನು ಲಿಂಗದ ರೂಪದಿಂದ ಆತನ ಮುಂದೆ ಕಾಣಿಸಿಕೊಂಡು "ರಾಜಕುಮಾರನೆ! ನಾನು ಪ್ರಸನ್ನನಾಗಿರುವೆನು; ನಿನಗೆ ಬೇಕಾದ ವರವನ್ನು ಬೇಡಿಕೊ" ಎಂದು ಹೇಳಿದನು.

ಸರ್ವಜ್ಯೋತಿರ್ಮಯಂ ಲಿಂಗಂ ಪುರತೋ ದೃಷ್ಟವಾನ್ ಸ್ವಯಂ ।
ಸಪ್ತಪಾತಾಲಮುದ್ಭಿದ್ಯೋತ್ಥಿತಂ ಬೃಹದಸುಗ್ರಹಾತ್ ॥ ೧೬೧ ॥
ಪ್ರಣಮ್ಯ ದಂಡವದ್ಭೂತೌ ಪರಿತುಷ್ಟಾವ ಧೂರ್ಜಟಿಂ ।
ಸೂಕ್ತೈರ್ಜನ್ಮಾಂತರಾಭ್ಯಾಸಾತ್ಸುಹೃಷ್ಟೋ ರುದ್ರದೈವತ್ಯೈಃ ।
ವರಂ ಚ ಪ್ರಾರ್ಥಯಾಂಚಕ್ರೇ ಪರಿಹೃಷ್ಟತನೂರುಹಃ ॥ ೧೬೨ ॥
ದೇವದೇವ ಮಹಾದೇವ ಯದಿ ದೇಯೋ ವರೋ ಮಮ ।
ತದತ್ರ ಭವತಾ ಸ್ಥೇಯಂ ಭವತಾಪಹೃತಾ ಸದಾ ॥ ೧೬೩ ॥
ಅಸ್ಮಿಂಲ್ಲಿಂಗೇ ಸ್ಥಿತಃ ಶಂಭೋ ಕುರು ಭಕ್ತಸಮೀಹಿತಂ ।
ವಿನಾ ಮುದ್ರಾದಿಕರಣಂ ಮಂತ್ರೇಣಾಽಪಿ ವಿನಾ ವಿಭೋ ॥ ೧೬೪ ॥
ಅಸ್ಯ ಲಿಂಗಸ್ಯ ಯೇ ಭಕ್ತಾ ಮನೋವಾಕ್ಕಾಯಕರ್ಮಭಿಃ ।
ಸದೈವಾಽನುಗ್ರಹಸ್ತೇಷು ಕರ್ತವ್ಯೋ ವರ ಏಷ ಮೇ ॥ ೧೬೫ ॥
ಇತಿ ತದ್ವರಮಾಕರ್ಣ್ಯ ಲಿಂಗರೂಪೋಽವದತ್ಪ್ರಭುಃ ।
ಏವಮಸ್ತು ಯದುಕ್ತಂ ತೇ ವೀರ ವೈಷ್ಣವಸೂನುನಾ ॥ ೧೬೬ ॥

---

೧೬೧. ಆಗಲಾ ರಾಜಪುತ್ರನು ಏಳು ಪಾತಾಳಗಳನ್ನು ಭೇದಿಸಿಕೊಂಡು ಮೇಲಕ್ಕೆದ್ದು ಸಮಸ್ತ ಜ್ಯೋತಿಗಳ ರಾಶಿಯೆನಿಸಿದ ಆ ಮಹಾಲಿಂಗವನ್ನು ಪರಮೇಶ್ವರಾನುಗ್ರಹದಿಂದ ಕಂಡನು.

೧೬೨. ಮತ್ತು ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಜನ್ಮಾಂತರಗಳಲ್ಲಿಅಭ್ಯಾಸಮಾಡಿದ್ದ ರುದ್ರದೇವತಾಕಗಳಾದ ವೇದಸೂಕ್ತಗಳಿಂದ ಮಹೇಶ್ವರನನ್ನು ಆನಂದಭರಿತನಾಗಿ ಹೊಗಳಿದನು.

೧೬೩. "ದೇವದೇವನೆ! ಮಹಾದೇವನೆ! ನನಗೆ ವರವನ್ನು ಕೊಡುವೆ ಯಾದರೆ ಬೇಡುವೆನು. ಸಂಸಾರತಾಪನಿವಾರಕನಾದ ನೀನು ಇಲ್ಲಿಯೇ ಶಾಶ್ವತ ವಾಗಿ ನೆಲಸಿರಬೇಕು.

೧೬೪. ಶಂಭುವೆ! ಈ ಲಿಂಗದಲ್ಲಿಯೇ ಸನ್ನಿಹಿತನಾಗಿ ಭಕ್ತರ ಅಭೀಷ್ಟ ಗಳನ್ನೆಲ್ಲ ನೀನು ಕೈಗೂಡಿಸುತ್ತಿರಬೇಕು. ಅವರಿಗೆ ಇಲ್ಲಿ ಯಾವ ಮುದ್ರಾದಿ ಸಾಧನಗಳಾಗಲಿ, ಮಂತ್ರಜಪಗಳಾಗಲಿ ಬೇಕಾಗಿಲ್ಲ.

೧೬೫. ಯಾರು ಮನಸ್ಸು, ಮಾತು, ದೇಹಗಳಿಂದ ಈ ಲಿಂಗದಲ್ಲಿ ಭಕ್ತಿ ಯನ್ನು ಮಾಡುವರೊ, ಅವರಲ್ಲಿ ನೀನು ಯಾವಾಗಲೂ ಅನುಗ್ರಹವನ್ನು ಮಾಡುತ್ತಿರಬೇಕು. ಇದೇ ನನಗೆ ಬೇಕಾದ ವರವು."

೧೬೬. ಇಂತೆಂದು ಅವನು ಬೇಡಿದ ವರವನ್ನು ಕೇಳಿ ಲಿಂಗರೂಪಿಯಾದ ಪರಮೇಶ್ವರನೆಂದನು. "ವೀರನೆ! ಪರಮವೈಷ್ಣವನ ಮಗನಾದ ನೀನು ಕೇಳಿ ಕೊಂಡಂತೆಯೇ ನಡೆಯಲಿ.

ವೀರ ವೀರೇಶ್ವರಂ ನಾಮ ಲಿಂಗಮೇತತ್ತ್ವದಾಖ್ಯಯಾ ।
ಅವಂತ್ಯಾಂ ಸಂಪ್ರದಾಸ್ಯಾಮಿ ಭಕ್ತಾನಾಂ ಚಿಂತಿತಾನ್ಯಹೋ ॥ ೧೬೭ ॥
ಅತ್ರ ದತ್ತಂ ಹುತಂ ಜಪ್ತಂ ಸ್ತುತಮರ್ಚಿತಮೇವ ಚ ।
ತದಕ್ಷಯಂ ಭವೇದತ್ರ ಭಕ್ತಾನಾಂ ನಾಽತ್ರ ಸಂಶಯಃ ॥ ೧೬೮ ॥
ತ್ವಂ ತು ರಾಜ್ಯಂ ಪರಂ ಪ್ರಾಪ್ಯ ಸರ್ವಭೂಪಾಲದುರ್ಲಭಂ ।
ಭುಕ್ತ್ವಾ ಭೋಗಾಂಶ್ಚ ವಿಪುಲಾನಂತೇ ಸಿದ್ಧಿಮವಾಪ್ಸ್ಯಸಿ ॥ ೧೬೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ವೀರೇಶ್ವರಸ್ಯ ದೇವಸ್ಯ ನೂಪುರೇಶಮಥೋ ಶೃಣು ॥ ೧೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ವೀರೇಶ್ವರಮಾಹಾತ್ಮ್ಯವರ್ಣನಂ" ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

೧೬೭. ವೀರನೆ! ಈ ಲಿಂಗವು ನಿನ್ನ ಹೆಸರಿನಿಂದ ವೀರೇಶ್ವರವೆಂಬ ಹೆಸರಿನಿಂದಲೇ ಕರೆಯಲ್ಪಡುವುದು. ಅವಂತೀಕ್ಷೇತ್ರದಲ್ಲಿ ನಾನು ನೆಲಸಿ ಭಕ್ತರ ಮನೋಭೀಷ್ಟಗಳನ್ನೆಲ್ಲ ಕೊಡುತ್ತಿರುವೆನು.

೧೬೮. ಇಲ್ಲಿ ನನ್ನ ಭಕ್ತರು ಮಾಡಿದ ದಾನ, ಹೋಮ, ಜಪ, ಸ್ತೋತ್ರ, ಪೂಜೆಗಳೇ ಮೊದಲಾದ ಸಮಸ್ತ ಕಾರ್ಯಗಳೂ ಅಕ್ಷಯಫಲದಾಯಕಗಳಾಗುವುದರಲ್ಲಿ ಸಂದೇಹವಿಲ್ಲ.

೧೬೯. ನೀನೂ ಯಾವ ರಾಜರಿಗೂ ದುರ್ಲಭವಾದ ಸರ್ವೋತ್ತಮವಾದ ರಾಜ್ಯವನ್ನು ಪಡೆದು ಅನೇಕ ಭೋಗಗಳನ್ನು ಯಥೇಚ್ಛೆಯಿಂದ ಅನುಭವಿಸಿ ಕೊನೆಯಲ್ಲಿ ಸಿದ್ಧಿಯನ್ನು ಪಡೆಯುವೆ."

೧೭೦. ದೇವಿಯೆ! ಇಂತು ನಿನಗೆ ವೀರೇಶ್ವರಮಹಾದೇವನ ಪಾಪಪರಿಹಾರಕವಾದ ಚರಿತ್ರೆಯನ್ನು ಹೇಳಿರುವೆನು. ಇನ್ನು ನೂಪುರೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ವೀರೇಶ್ವರಮಾಹಾತ್ಮ್ಯವರ್ಣನ" ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶೋಽಧ್ಯಾಯಃ

### ನೂಪುರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ದೇವದೇವ ಉವಾಚ:—

ಸಪ್ತಾಽಧಿಕಂ ವಿಜಾನೀಹಿ ನೂಪುರೇಶ್ವರಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ಪ್ರಾಪ್ಯಂತೇ ಸರ್ವಸಿದ್ಧಯಃ ॥ ೧ ॥
ಪುರಾ ರಾಥಂತರೇ ಕಲ್ಪೇ ನೂಪುರೋ ನಾಮ ವೈ ಗಣಃ ।
ರುದ್ರಭಕ್ತಿಪರೋ ನಿತ್ಯಂ ಪಂಚಮುದ್ರಾವಿಭೂಷಿತಃ ॥ ೨ ॥
ಸ ಏಕದಾ ಕುಬೇರಸ್ಯ ಸಭಾಯಾಂ ಪ್ರಾಪ್ಯ ಸಂಸ್ಥಿತಃ ।
ದ್ರಷ್ಟುಂ ಮಹೋತ್ಸವಂ ತತ್ರ ಅಪ್ಸರೋಭಿಃ ಕೃತಂ ತದಾ ॥ ೩ ॥
ನನೃತುಶ್ಚಾಽಪ್ಸರಾಸ್ತತ್ರ ಹ್ಯುರ್ವಶೀ ಯೋಷಿತಾಂ ವರಾ ।
ರಂಭಾ ತಿಲೋತ್ತಮಾ ಮೇನಾ ನನೃತುರ್ಹರ್ಷಸಂಯುತಾಃ ॥ ೪ ॥
ತಾಸಾಂ ನೃತ್ಯಂ ತದಾ ವೀಕ್ಷ್ಯ ನೂಪುರೋ ಗಣಪಸ್ತದಾ ।
ಕಾಮಬಾಣಾರ್ದಿತೋ ನೂನಂ ತಾಸಾಂ ಮಧ್ಯೇ ನನರ್ತ ಹ ॥ ೫ ॥

---

## ಕನ್ನಡದ ಅನುವಾದ

### ನೂಪುರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ನಲವತ್ತೇಳನೆಯ ಮಹೇಶ್ವರಲಿಂಗವೆ ನೂಪುರೇಶ್ವರ ನಾಮಕವಾದುದೆಂದು ತಿಳಿ. ಈ ಲಿಂಗವನ್ನು ಸಂದರ್ಶಿಸುವುದರಿಂದ ಸಮಸ್ತ ಸಿದ್ಧಿಗಳೂ ಕರಗತಗಳಾಗುವುವು.

೨. ಹಿಂದೆ ರಥಂತರಕಲ್ಪದಲ್ಲಿ ನೂಪುರನೆಂಬ ಗಣನಾಯಕನೊಬ್ಬನಿದ್ದನು. ಆತನು ಯಾವಾಗಲೂ ಮಹೇಶ್ವರಭಕ್ತನೂ, ಪಂಚಮುದ್ರೆಗಳಲ್ಲಿ ನಿಷ್ಣಾತನೂ ಆಗಿರುತ್ತಿದ್ದನು.

೩. ಆತನೊಮ್ಮೆ ಕುಬೇರನ ಸಭಾಮಂಟಪಕ್ಕೆ ಬಂದು ಅಲ್ಲಿ ಅಪ್ಸರೆಯರು ನಡೆಸುತ್ತಿದ್ದ ಮಹೋತ್ಸವವೊಂದನ್ನು ನೋಡುತ್ತ ಕುಳಿತಿದ್ದನು.

೪. ಅಲ್ಲಿ ಸ್ತ್ರೀಯರಲ್ಲಿ ಉತ್ತಮೆಯೆನಿಸಿದ ಊರ್ವಶಿಯೂ, ರಂಭೆ, ತಿಲೋತ್ತಮೆ, ಮೇನಕೆ ಮುಂತಾದ ಅಪ್ಸರಸ್ತ್ರೀಯರೂ ಆನಂದದಿಂದ ನರ್ತನ ಮಾಡುತ್ತಿದ್ದರು.

೫. ಅವರ ನೃತ್ಯವನ್ನು ನೋಡಿ ನೂಪುರನೆಂಬ ಗಣನಾಯಕನೂ ಮನ್ಮಥ ಬಾಣಪೀಡಿತನಾಗಿ ಅವರ ಮಧ್ಯದಲ್ಲಿ ಹೋಗಿ ನರ್ತನವನ್ನು ಮಾಡಲುಪಕ್ರಮಿಸಿದನು.

ನೃತ್ಯಮಾನಸ್ತತೋ ಹೃಷ್ಟಃ ಪುಷ್ಪಗುಚ್ಛೇನ ವಕ್ಷಸಿ ।
ಉರ್ವಶೀಂ ತಾಡಯಾಮಾಸ ಕಾಮಬಾಣಪ್ರಪೀಡಿತಃ ॥ ೬ ॥
ಉರ್ವಶೀ ತು ತತಃ ಕ್ರುದ್ಧಾ ಪುಷ್ಪಗುಚ್ಛೇನ ತಾಡಿತಾ ।
ಜಗಾಮ ಶರಣಂ ದೇವಂ ಧನದಂ ಸರ್ವಕಾಮದಂ ॥ ೭ ॥
ಉವಾಚ ಧನದಸ್ತತ್ರ ಕ್ರೋಧೇನಾಕುಲಮಾನಸಃ ॥ ೮ ॥
ಯಸ್ಮಾತ್ತ್ವಯಾ ರಂಗಭಂಗಃ ಕೃತಃ ಕಾಮಾರ್ದಿತೇನ ವೈ ।
ತಸ್ಮಾತ್ತ್ವಂ ಮಾನುಷೇ ಲೋಕೇ ಪತಸ್ವ ಪಾಪಪೂರುಷ ॥ ೯ ॥
ಕುಬೇರಸ್ಯ ಚ ಶಾಪಾತ್ತು ಜಗಾಮ ಧರಣೀತಲಂ ।
ವಿಲಲಾಪ ಸುದುಃಖಾರ್ತಃ ಕಿಂ ಕೃತಂ ಪಾಪಿನಾ ಮಯಾ ॥ ೧೦ ॥
ವಿಲಪ್ಯ ಸುಭೃಶಂ ಸೋಽಥ ಶರಣಂ ಪರಮೇಶ್ವರೀಂ ।
ಜಗಾಮ ಮನಸಾ ದೇವಿ ತ್ವಾಂ ಸ ವೈ ವರದಾಯಿನೀಂ ॥ ೧೧ ॥
ತ್ವಂ ತುಷ್ಟಾ ತು ತದಾ ಜಾತಾ ಪ್ರತ್ಯಕ್ಷಾ ಪರಮೇಶ್ವರೀ ।
ಉವಾಚ ಗಣಪಂ ಪ್ರೀತ್ಯಾ ಭಕ್ತಿನಮ್ರಂ ತದಾ ಭುವಿ ॥ ೧೨ ॥
ಗಚ್ಛ ಪುತ್ರ ಮಮಾದೇಶಾನ್ಮಹಾಕಾಲವನಂ ಶುಭಂ ।
ಪ್ರಾಚೀ ಸರಸ್ವತೀ ತತ್ರ ವಾಪ್ಯಾಕಾರಾ ಚ ವಿದ್ಯತೇ ॥ ೧೩ ॥

---

೬. ಮನ್ಮಥಾವಿಷ್ಟನಾದ ಆ ನೂಪುರನು ಕುಣಿಯುತ್ತಿದ್ದಂತೆಯೇ ಊರ್ವಶಿಯ ವಕ್ಷಸ್ಥಳಕ್ಕೆ ಗುರಿಯಿಟ್ಟು ಒಂದು ಹೂಗೊಂಚಲಿನಿಂದ ಹೊಡೆದನು.

೭. ಪುಷ್ಪಗುಚ್ಛದಿಂದ ತಾಡಿತಳಾಗಿ ಊರ್ವಶಿಯು ಕೋಪಗೊಂಡು ಸರ್ವಕಾಮಪ್ರದನಾದ ಕುಬೇರನನ್ನು ಶರಣುಹೊಕ್ಕಳು.

೮–೯. ಆಗ ಕುಬೇರನು ಕೋಪದಿಂದ ವ್ಯಾಕುಲಿತವಾದ ಮನಸ್ಸುಳ್ಳವನಾಗಿಹೇಳಿದನು :—"ಎಲೈ ಪಾಪಿಯೇ! ನೀನು ಕಾಮಪೀಡಿತನಾಗಿ ನಾಟ್ಯರಂಗದ ಉತ್ಸವಕ್ಕೆ ಭಂಗವನ್ನುಂಟುಮಾಡಿದುದರಿಂದ ಮನುಷ್ಯಲೋಕಕ್ಕೆ ಹೋಗಿಬೀಳು.

೧೦. ಕುಬೇರನ ಶಾಪದಿಂದ ಅವನು ಆ ಕ್ಷಣದಲ್ಲಿಯೇ ಭೂಲೋಕಕ್ಕೆ ಬಿದ್ದು ಅತ್ಯಂತ ದುಃಖಗೊಂಡವನಾಗಿ "ಪಾಪಿಯಾದ ನಾನು ಎಂತಹ ಕೆಲಸವನ್ನು ಮಾಡಿದೆ!" ಎಂದು ಪ್ರಲಪಿಸಿದನು.

೧೧. ದೇವಿಯೆ! ಇಂತು ಬಹಳಕಾಲ ವಿಲಪಿಸಿ ಕಡೆಗೆ ಮನಸ್ಸಿನಿಂದಲೇ ಸರ್ವೇಶ್ವರಿಯೂ, ವರದಾಯಕಿಯೂ ಆದ ನಿನ್ನನ್ನು ಶರಣು ಹೊಕ್ಕವನಾದನು.

೧೨. ಆಗ ನೀನು ಸಂತೋಷಗೊಂಡು ಭೂಲೋಕದಲ್ಲಿ ಆ ಗಣಪತಿಗೆ ಪ್ರತ್ಯಕ್ಷಳಾಗಿ ಕಾಣಿಸಿಕೊಂಡು ಪ್ರೀತಿಯಿಂದ ಭಕ್ತಿಭರಿತನಾದ ಆತನಿಗೆ ಹೇಳಿದೆ.

೧೩. "ಪುತ್ರನೆ! ಹೊರಡು. ನನ್ನ ಅಪ್ಪಣೆಯನ್ನು ಮನ್ನಿಸಿ ಮಹಾ

ಸರ್ವಜ್ಯೋತಿರ್ಮಯಂ ಲಿಂಗಂ ಪುರತೋ ದೃಷ್ಟವಾನ್ ಸ್ವಯಂ ।
ಸಪ್ತಪಾತಾಲಮುದ್ಭಿದ್ಯೋತ್ಥಿತಂ ಬೃಹದನುಗ್ರಹಾತ್ ॥ ೧೬೧ ॥
ಪ್ರಣಮ್ಯ ದಂಡವದ್ಭೂತೌ ಪರಿತುಷ್ಟಾವ ಧೂರ್ಜಟಿಂ ।
ಸೂಕ್ತೈರ್ಜನ್ಮಾಂತರಾಽಭ್ಯಾಸಾತ್ಸುಹೃಷ್ಟೋ ರುದ್ರದೈವತ್ಯೈಃ ।
ವರಂ ಚ ಪ್ರಾರ್ಥಯಾಂಚಕ್ರೇ ಪರಿಹೃಷ್ಟತನೂರುಹಃ ॥ ೧೬೨ ॥
ದೇವದೇವ ಮಹಾದೇವ ಯದಿ ದೇಯೋ ವರೋ ಮಮ ।
ತದತ್ರ ಭವತಾ ಸ್ಥೇಯಂ ಭವತಾಪಹೃತಾ ಸದಾ ॥ ೧೬೩ ॥
ಅಸ್ಮಿಂಲ್ಲಿಂಗೇ ಸ್ಥಿತಃ ಶಂಭೋ ಕುರು ಭಕ್ತಸಮೀಹಿತಂ ।
ವಿನಾ ಮುದ್ರಾದಿಕರಣಂ ಮಂತ್ರೇಣಾಽಪಿ ವಿನಾ ವಿಭೋ ॥ ೧೬೪ ॥
ಅಸ್ಯ ಲಿಂಗಸ್ಯ ಯೇ ಭಕ್ತಾ ಮನೋವಾಕ್ಕಾಯಕರ್ಮಭಿಃ ।
ಸದೈವಾಽನುಗ್ರಹಸ್ತೇಷು ಕರ್ತವ್ಯೋ ವರ ಏಷ ಮೇ ॥ ೧೬೫ ॥
ಇತಿ ತದ್ವರಮಾಕರ್ಣ್ಯ ಲಿಂಗರೂಪೋಽವದತ್ಪ್ರಭುಃ ।
ಏವಮಸ್ತು ಯದುಕ್ತಂ ತೇ ವೀರ ವೈಷ್ಣವಸೂನುನಾ ॥ ೧೬೬ ॥

---

೧೬೧. ಆಗಲಾ ರಾಜಪುತ್ರನು ಏಳು ಪಾತಾಳಗಳನ್ನು ಭೇದಿಸಿಕೊಂಡು ಮೇಲಕ್ಕೆದ್ದು ಸಮಸ್ತ ಜ್ಯೋತಿಗಳ ರಾಶಿಯೆನಿಸಿದ ಆ ಮಹಾಲಿಂಗವನ್ನು ಪರಮೇಶ್ವರಾನುಗ್ರಹದಿಂದ ಕಂಡನು.

೧೬೨. ಮತ್ತು ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಜನ್ಮಾಂತರಗಳಲ್ಲಿಅಭ್ಯಾಸಮಾಡಿದ್ದ ರುದ್ರದೇವತಾಕಗಳಾದ ವೇದಸೂಕ್ತಗಳಿಂದ ಮಹೇಶ್ವರನನ್ನು ಆನಂದಭರಿತನಾಗಿ ಹೊಗಳಿದನು.

೧೬೩. "ದೇವದೇವನೆ! ಮಹಾದೇವನೆ! ನನಗೆ ವರವನ್ನು ಕೊಡುವೆಯಾದರೆ ಬೇಡುವೆನು. ಸಂಸಾರತಾಪನಿವಾರಕನಾದ ನೀನು ಇಲ್ಲಿಯೇ ಶಾಶ್ವತವಾಗಿ ನೆಲಸಿರಬೇಕು.

೧೬೪. ಶಂಭುವೆ! ಈ ಲಿಂಗದಲ್ಲಿಯೇ ಸನ್ನಿಹಿತನಾಗಿ ಭಕ್ತರ ಅಭೀಷ್ಟಗಳನ್ನೆಲ್ಲ ನೀನು ಕೈಗೂಡಿಸುತ್ತಿರಬೇಕು. ಅವರಿಗೆ ಇಲ್ಲಿ ಯಾವ ಮುದ್ರಾದಿ ಸಾಧನಗಳಾಗಲಿ, ಮಂತ್ರಜಪಗಳಾಗಲಿ ಬೇಕಾಗಿಲ್ಲ.

೧೬೫. ಯಾರು ಮನಸ್ಸು, ಮಾತು, ದೇಹಗಳಿಂದ ಈ ಲಿಂಗದಲ್ಲಿ ಭಕ್ತಿಯನ್ನು ಮಾಡುವರೊ, ಅವರಲ್ಲಿ ನೀನು ಯಾವಾಗಲೂ ಅನುಗ್ರಹವನ್ನು ಮಾಡುತ್ತಿರಬೇಕು. ಇದೇ ನನಗೆ ಬೇಕಾದ ವರವು."

೧೬೬. ಇಂತೆಂದು ಅವನು ಬೇಡಿದ ವರವನ್ನು ಕೇಳಿ ಲಿಂಗರೂಪಿಯಾದ ಪರಮೇಶ್ವರನೆಂದನು. "ವೀರನೆ! ಪರಮವೈಷ್ಣವನ ಮಗನಾದ ನೀನು ಕೇಳಿಕೊಂಡಂತೆಯೇ ನಡೆಯಲಿ.

ವೀರ ವೀರೇಶ್ವರಂ ನಾಮ ಲಿಂಗಮೇತತ್ತ್ವದಾಖ್ಯಯಾ ।
ಅವಂತ್ಯಾಂ ಸಂಪ್ರದಾಸ್ಯಾಮಿ ಭಕ್ತಾನಾಂ ಚಿಂತಿತಾನ್ಯಹೋ ॥ ೧೬೭ ॥
ಅತ್ರ ದತ್ತಂ ಹುತಂ ಜಪ್ತಂ ಸ್ತುತಮರ್ಚಿತಮೇವ ಚ ।
ತದಕ್ಷಯಂ ಭವೇದತ್ರ ಭಕ್ತಾನಾಂ ನಾತ್ರ ಸಂಶಯಃ ॥ ೧೬೮ ॥
ತ್ವಂ ತು ರಾಜ್ಯಂ ಪರಂ ಪ್ರಾಪ್ಯ ಸರ್ವಭೂಪಾಲದುರ್ಲಭಂ ।
ಭುಕ್ತ್ವಾ ಭೋಗಾಂಶ್ಚ ವಿಪುಲಾನಂತೇ ಸಿದ್ಧಿಮವಾಪ್ಸ್ಯಸಿ ॥ ೧೬೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ವೀರೇಶ್ವರಸ್ಯ ದೇವಸ್ಯ ನೂಪುರೇಶಮಥೋ ಶೃಣು ॥ ೧೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ವೀರೇಶ್ವರಮಾಹಾತ್ಮ್ಯವರ್ಣನಂ" ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

೧೬೭. ವೀರನೆ! ಈ ಲಿಂಗವು ನಿನ್ನ ಹೆಸರಿನಿಂದ ವೀರೇಶ್ವರವೆಂಬ ಹೆಸರಿನಿಂದಲೇ ಕರೆಯಲ್ಪಡುವುದು. ಅವಂತೀಕ್ಷೇತ್ರದಲ್ಲಿ ನಾನು ನೆಲಸಿ ಭಕ್ತರ ಮನೋಭೀಷ್ಟಗಳನ್ನೆಲ್ಲ ಕೊಡುತ್ತಿರುವೆನು.

೧೬೮. ಇಲ್ಲಿ ನನ್ನ ಭಕ್ತರು ಮಾಡಿದ ದಾನ, ಹೋಮ, ಜಪ, ಸ್ತೋತ್ರ, ಪೂಜೆಗಳೇ ಮೊದಲಾದ ಸಮಸ್ತ ಕಾರ್ಯಗಳೂ ಅಕ್ಷಯಫಲದಾಯಕಗಳಾಗುವುದರಲ್ಲಿ ಸಂದೇಹವಿಲ್ಲ.

೧೬೯. ನೀನೂ ಯಾವ ರಾಜರಿಗೂ ದುರ್ಲಭವಾದ ಸರ್ವೋತ್ತಮವಾದ ರಾಜ್ಯವನ್ನು ಪಡೆದು ಅನೇಕ ಭೋಗಗಳನ್ನು ಯಥೇಚ್ಛೆಯಿಂದ ಅನುಭವಿಸಿ ಕೊನೆಯಲ್ಲಿ ಸಿದ್ಧಿಯನ್ನು ಪಡೆಯುವೆ."

೧೭೦. ದೇವಿಯೆ! ಇಂತು ನಿನಗೆ ವೀರೇಶ್ವರಮಹಾದೇವನ ಪಾಪಪರಿಹಾರಕವಾದ ಚರಿತ್ರೆಯನ್ನು ಹೇಳಿರುವೆನು. ಇನ್ನು ನೂಪುರೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ವೀರೇಶ್ವರಮಾಹಾತ್ಮ್ಯವರ್ಣನ" ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಚತ್ವಾರಿಂಶೋಽಧ್ಯಾಯಃ

## ನೂಪುರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ದೇವದೇವ ಉವಾಚ:—

ಸಪ್ತಾಽಧಿಕಂ ವಿಜಾನೀಹಿ ನೂಪುರೇಶ್ವರಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ಪ್ರಾಪ್ಯಂತೇ ಸರ್ವಸಿದ್ಧಯಃ ॥ ೧ ॥
ಪುರಾ ರಾಥಂತರೇ ಕಲ್ಪೇ ನೂಪುರೋ ನಾಮ ವೈ ಗಣಃ ।
ರುದ್ರಭಕ್ತಿಪರೋ ನಿತ್ಯಂ ಪಂಚಮುದ್ರಾವಿಭೂಷಿತಃ ॥ ೨ ॥
ಸ ಏಕದಾ ಕುಬೇರಸ್ಯ ಸಭಾಯಾಂ ಪ್ರಾಪ್ಯ ಸಂಸ್ಥಿತಃ ।
ದ್ರಷ್ಟುಂ ಮಹೋತ್ಸವಂ ತತ್ರ ಅಪ್ಸರೋಭಿಃ ಕೃತಂ ತದಾ ॥ ೩ ॥
ನನೃತುಶ್ಚಾಽಪ್ಸರಾಸ್ತತ್ರ ಹ್ಯುರ್ವಶೀ ಯೋಷಿತಾಂ ವರಾ ।
ರಂಭಾ ತಿಲೋತ್ತಮಾ ಮೇನಾ ನನೃತುರ್ಹರ್ಷಸಂಯುತಾಃ ॥ ೪ ॥
ತಾಸಾಂ ನೃತ್ಯಂ ತದಾ ವೀಕ್ಷ್ಯ ನೂಪುರೋ ಗಣಪಸ್ತದಾ ।
ಕಾಮಬಾಣಾರ್ದಿತೋ ನೂನಂ ತಾಸಾಂ ಮಧ್ಯೇ ನನರ್ತ ಹ ॥ ೫ ॥

---

## ಕನ್ನಡದ ಅನುವಾದ

### ನೂಪುರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ನಲವತ್ತೇಳನೆಯ ಮಹೇಶ್ವರಲಿಂಗವೆ ನೂಪುರೇಶ್ವರ ನಾಮಕವಾದುದೆಂದು ತಿಳಿ. ಈ ಲಿಂಗವನ್ನು ಸಂದರ್ಶಿಸುವುದರಿಂದ ಸಮಸ್ತ ಸಿದ್ಧಿಗಳೂ ಕರಗತಗಳಾಗುವುವು.

೨. ಹಿಂದೆ ರಥಂತರಕಲ್ಪದಲ್ಲಿ ನೂಪುರನೆಂಬ ಗಣನಾಯಕನೊಬ್ಬನಿದ್ದನು. ಆತನು ಯಾವಾಗಲೂ ಮಹೇಶ್ವರಭಕ್ತನೂ, ಪಂಚಮುದ್ರೆಗಳಲ್ಲಿ ನಿಷ್ಣಾತನೂ ಆಗಿರುತ್ತಿದ್ದನು.

೩. ಆತನೊಮ್ಮೆ ಕುಬೇರನ ಸಭಾಮಂಟಪಕ್ಕೆ ಬಂದು ಅಲ್ಲಿ ಅಪ್ಸರೆಯರು ನಡೆಸುತ್ತಿದ್ದ ಮಹೋತ್ಸವವೊಂದನ್ನು ನೋಡುತ್ತ ಕುಳಿತಿದ್ದನು.

೪. ಅಲ್ಲಿ ಸ್ತ್ರೀಯರಲ್ಲಿ ಉತ್ತಮೆಯೆನಿಸಿದ ಊರ್ವಶಿಯೂ, ರಂಭೆ, ತಿಲೋತ್ತಮೆ, ಮೇನಕೆ ಮುಂತಾದ ಅಪ್ಸರಸ್ತ್ರೀಯರೂ ಆನಂದದಿಂದ ನರ್ತನ ಮಾಡುತ್ತಿದ್ದರು.

೫. ಅವರ ನೃತ್ಯವನ್ನು ನೋಡಿ ನೂಪುರನೆಂಬ ಗಣನಾಯಕನೂ ಮನ್ಮಥ ಬಾಣಪೀಡಿತನಾಗಿ ಅವರ ಮಧ್ಯದಲ್ಲಿ ಹೋಗಿ ನರ್ತನವನ್ನು ಮಾಡಲುಪಕ್ರಮಿಸಿದನು.

ನೃತ್ಯಮಾನಸ್ತತೋ ಹೃಷ್ಟಃ ಪುಷ್ಪಗುಚ್ಛೇನ ವಕ್ಷಸಿ ।
ಉರ್ವಶೀಂ ತಾಡಯಾಮಾಸ ಕಾಮಬಾಣಪ್ರಪೀಡಿತಃ ॥ ೬ ॥
ಉರ್ವಶೀ ತು ತತಃ ಕ್ರುದ್ಧಾ ಪುಷ್ಪಗುಚ್ಛೇನ ತಾಡಿತಾ ।
ಜಗಾಮ ಶರಣಂ ದೇವಂ ಧನದಂ ಸರ್ವಕಾಮದಂ ॥ ೭ ॥
ಉವಾಚ ಧನದಸ್ತತ್ರ ಕ್ರೋಧೇನಾಕುಲಮಾನಸಃ ॥ ೮ ॥
ಯಸ್ಮಾತ್ತ್ವಯಾ ರಂಗಭಂಗಃ ಕೃತಃ ಕಾಮಾರ್ದಿತೇನ ವೈ ।
ತಸ್ಮಾತ್ತ್ವಂ ಮಾನುಷೇ ಲೋಕೇ ಪತಸ್ವ ಪಾಪಪೂರುಷ ॥ ೯ ॥
ಕುಬೇರಸ್ಯ ಚ ಶಾಪಾತ್ತು ಜಗಾಮ ಧರಣೀತಲಂ ।
ವಿಲಲಾಪ ಸುದುಃಖಾರ್ತಃ ಕಿಂ ಕೃತಂ ಪಾಪಿನಾ ಮಯಾ ॥ ೧೦ ॥
ವಿಲಪ್ಯ ಸುಭೃಶಂ ಸೋಽಥ ಶರಣಂ ಪರಮೇಶ್ವರೀಂ ।
ಜಗಾಮ ಮನಸಾ ದೇವಿ ತ್ವಾಂ ಸ ವೈ ವರದಾಯಿನೀಂ ॥ ೧೧ ॥
ತ್ವಂ ತುಷ್ಟಾ ತು ತದಾ ಜಾತಾ ಪ್ರತ್ಯಕ್ಷಾ ಪರಮೇಶ್ವರೀ ।
ಉವಾಚ ಗಣಪಂ ಪ್ರೀತ್ಯಾ ಭಕ್ತಿನಮ್ರಂ ತದಾ ಭುವಿ ॥ ೧೨ ॥
ಗಚ್ಛ ಪುತ್ರ ಮಮಾದೇಶಾನ್ಮಹಾಕಾಲವನಂ ಶುಭಂ ।
ಪ್ರಾಚೀ ಸರಸ್ವತೀ ತತ್ರ ವಾಪ್ಯಾಕಾರಾ ಚ ವಿದ್ಯತೇ ॥ ೧೩ ॥

---

೬. ಮನ್ಮಥಾವಿಷ್ಟನಾದ ಆ ನೂಪುರನು ಕುಣಿಯುತ್ತಿದ್ದಂತೆಯೇ ಊರ್ವಶಿಯ ವಕ್ಷಸ್ಥಳಕ್ಕೆ ಗುರಿಯಿಟ್ಟು ಒಂದು ಹೂಗೊಂಚಲಿನಿಂದ ಹೊಡೆದನು.

೭. ಪುಷ್ಪಗುಚ್ಛದಿಂದ ತಾಡಿತಳಾಗಿ ಊರ್ವಶಿಯು ಕೋಪಗೊಂಡು ಸರ್ವಕಾಮಪ್ರದನಾದ ಕುಬೇರನನ್ನು ಶರಣುಹೊಕ್ಕಳು.

೮–೯. ಆಗ ಕುಬೇರನು ಕೋಪದಿಂದ ವ್ಯಾಕುಲಿತವಾದ ಮನಸ್ಸುಳ್ಳವನಾಗಿಹೇಳಿದನು:—"ಎಲೈ ಪಾಪಿಯೇ! ನೀನು ಕಾಮಪೀಡಿತನಾಗಿ ನಾಟ್ಯರಂಗದ ಉತ್ಸವಕ್ಕೆ ಭಂಗವನ್ನುಂಟುಮಾಡಿದುದರಿಂದ ಮನುಷ್ಯಲೋಕಕ್ಕೆ ಹೋಗಿಬೀಳು.

೧೦. ಕುಬೇರನ ಶಾಪದಿಂದ ಅವನು ಆ ಕ್ಷಣದಲ್ಲಿಯೇ ಭೂಲೋಕಕ್ಕೆ ಬಿದ್ದು ಅತ್ಯಂತದುಃಖಗೊಂಡವನಾಗಿ "ಪಾಪಿಯಾದ ನಾನು ಎಂತಹ ಕೆಲಸವನ್ನು ಮಾಡಿದೆ!" ಎಂದು ಪ್ರಲಪಿಸಿದನು.

೧೧. ದೇವಿಯೆ! ಇಂತು ಬಹಳಕಾಲ ವಿಲಪಿಸಿ ಕಡೆಗೆ ಮನಸ್ಸಿನಿಂದಲೇ ಸರ್ವೇಶ್ವರಿಯೂ, ವರದಾಯಕಿಯೂ ಆದ ನಿನ್ನನ್ನು ಶರಣು ಹೊಕ್ಕವನಾದನು.

೧೨. ಆಗ ನೀನು ಸಂತೋಷಗೊಂಡು ಭೂಲೋಕದಲ್ಲಿ ಆ ಗಣಪತಿಗೆ ಪ್ರತ್ಯಕ್ಷಳಾಗಿ ಕಾಣಿಸಿಕೊಂಡು ಪ್ರೀತಿಯಿಂದ ಭಕ್ತಿಭರಿತನಾದ ಆತನಿಗೆ ಹೇಳಿದೆ.

೧೩. "ಪುತ್ರನೆ! ಹೊರಡು. ನನ್ನ ಅಪ್ಪಣೆಯನ್ನು ಮನ್ನಿಸಿ ಮಹಾ

ತಸ್ಯಾ ದಕ್ಷಿಣತೋ ವತ್ಸ ವಿದ್ಯತೇ ಲಿಂಗಮುತ್ತಮಂ ।
ವಾಪ್ಯಾಂ ಸ್ನಾತ್ವಾ ಚ ತಲ್ಲಿಂಗಂ ಸಮಾರಾಧಯ ಭಕ್ತಿತಃ ॥ ೧೪ ॥
ಸಾ ಪ್ರಾಚೀ ಸ ಚ ದೇವೇಶಸ್ತ್ವನ್ನಾಮ್ನಾ ಖ್ಯಾತಿಮೇಷ್ಯತಿ ।
ಇತ್ಯುಕ್ತೋ ನೂಪುರೋ ದೇವಿ ಮಹಾಕಾಲವನಂ ಗತಃ ॥ ೧೫ ॥
ತ್ವಯಾ ಚ ಪ್ರೇರಿತೋ ದೇವಿ ಕೀರ್ತ್ಯರ್ಥಂ ತತ್ರ ಗಮ್ಯತಾಂ ।
ಇತ್ಯುಕ್ತೋ ನೂಪುರೋ ದಿವ್ಯೋ ಗಣೋ ಹೃಷ್ಟಃ ಕೃತಾಂಜಲಿಃ ॥ ೧೬ ॥
ಮಹಾಕಾಲವನಂ ರಮ್ಯಂ ದೇವಗಂಧರ್ವಸೇವಿತಂ ।
ದದರ್ಶ ತತ್ರ ತಲ್ಲಿಂಗಂ ಸುರಗಂಧರ್ವಸೇವಿತಂ ॥ ೧೭ ॥
ಪ್ರಾಚೀ ಸರಸ್ವತೀ ತತ್ರ ವಾಪ್ಯಾಕಾರಾ ಚ ಸಂಸ್ಥಿತಾ ।
ತಸ್ಯಾಂ ಸ್ನಾತ್ವಾ ತತೋ ದೇವಂ ಪೂಜಯಾಮಾಸ ನೂಪುರಃ ॥ ೧೮ ॥
ತತೋ ದೇವಃ ಪ್ರಸನ್ನಾತ್ಮಾ ಪ್ರತ್ಯುವಾಚಾಽಥ ನೂಪುರಂ ।
ಸಾಧು ನೂಪುರ ಭದ್ರಂ ತೇ ಸ್ವಸ್ತಿ ಪ್ರಾಪ್ನುಹಿ ಸರ್ವದಾ ॥ ೧೯ ॥

---

ಕಾಲವನವನ್ನು ಹೋಗಿ ಸೇರು. ಆ ಶುಭಕ್ಷೇತ್ರದಲ್ಲಿ ಪೂರ್ವವಾಹಿನಿಯಾದ ಸರಸ್ವತಿಯೇ ತೀರ್ಥದ ರೂಪದಿಂದಿರುವುದು.

೧೪. ವತ್ಸ! ಆ ವಾಪಿಗೆ ದಕ್ಷಿಣದಿಕ್ಕಿನಲ್ಲಿ ಉತ್ತಮವಾದ ಲಿಂಗ ವೊಂದಿರುವುದು. ಆ ಕೊಳದಲ್ಲಿ ಸ್ನಾನವನ್ನು ಮಾಡಿಕೊಂಡು ಆ ಲಿಂಗದ ಪೂಜೆ ಯನ್ನು ಭಕ್ತಿಯಿಂದ ಮಾಡು.

೧೫. ಆ ಪ್ರಾಚೀನದಿಯೂ ಆ ಮಹಾಲಿಂಗವೂ ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವುವು.'' ದೇವಿಯೆ! ಇಂತು ನೀನು ಹೇಳಲು ನೂಪುರನು ಮಹಾಕಾಲವನವನ್ನು ಸೇರಿದನು.

೧೬. ಪಾರ್ವತಿಯೆ! ''ಕೀರ್ತಿಯನ್ನು ಪಡೆಯಲು ನೀನು ಅಲ್ಲಿಗೆ ಹೋಗು'' ಎಂದು ನಿನ್ನಿಂದ ಪ್ರೇರಿತನಾಗಿ ನೂಪುರಗಣನಾಯಕನು ಆನಂದ ದಿಂದ ನಿನಗೆ ಕೈಗಳನ್ನು ಮುಗಿದನು.

೧೭. ಮನೋಹರವೂ ದೇವಗಂಧರ್ವಾದಿಗಳಿಂದ ಸೇವಿತವೂ ಆದ ಮಹಾ ಕಾಲವನಕ್ಷೇತ್ರಕ್ಕೆ ಬಂದು ಸುರರು ಮತ್ತು ಗಂಧರ್ವರಿಂದ ಸೇವಿತವೆನಿಸಿದ ಆ ಮಹಾಲಿಂಗವನ್ನು ಕಂಡನು.

೧೮-೧೯. ಪ್ರಾಚೀಸರಸ್ವತಿಯು ಅಲ್ಲಿ ಕೊಳದ ರೂಪಿನಿಂದ ನೆಲಸಿರುವುದಷ್ಟೆ! ನೂಪುರನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ ಬಳಿಕ ದೇವದೇವನನ್ನು ಪೂಜಿಸಿದನು. ಆಗ ದೇವನು ಪ್ರಸನ್ನನಾಗಿ ನೂಪುರನಿಗೆ ಅಭಯವನ್ನಿತ್ತನು. ''ನೂಪುರನೆ! ನಿನ್ನ ಪೂಜೆಯು ಸಫಲವಾಯಿತು. ನಿನಗೆ ಮಂಗಳವಾಗಲಿ. ಯಾವಾಗಲೂ ನೀನು ಸೌಖ್ಯವನ್ನು ಪಡೆದಿರು.

ಭವಿತಾ ವಲ್ಲಭೋ ದೇವ್ಯಾಃ ಪಾರ್ವತ್ಯಾಃ ಶಂಕರಸ್ಯ ಚ ।
ಇತ್ಯುಕ್ತಸ್ತೇನ ಲಿಂಗೇನ ತತ್ಕ್ಷಣಾನ್ನೂಪುರಃ ಪ್ರಿಯೇ ॥ ೨೦ ॥
ಉದಿತಾದಿತ್ಯಸಂಕಾಶೋ ವಿಭಾವಸುಸಮದ್ಯುತಿಃ ।
ತೇಜೋರಾಶಿಶ್ಚ ಸಂಜಾತೋ ದುರ್ನಿರೀಕ್ಷ್ಯಸ್ತ್ರಿವಿಷ್ಟಪೈಃ ॥ ೨೧ ॥
ಪ್ರಭಾವಂ ತಾದೃಶಂ ದೃಷ್ಟ್ವಾ ದೇವೈರುಕ್ತಂ ವರಾನನೇ ।
ಅಹೋ ಲಿಂಗಸ್ಯ ಮಾಹಾತ್ಮ್ಯಂ ದೃಶ್ಯತೇಽತ್ಯದ್ಭುತಂ ಭುವಿ ॥ ೨೨ ॥
ಪ್ರಾಪ್ತಾ ಚ ಕಾಮಿಕೀ ಸಿದ್ಧಿರ್ನೂಪುರೇಣ ಚ ದರ್ಶನಾತ್ ।
ಅತೋ ದೇವೋಽದ್ಯ ಪ್ರಭೃತಿ ವಿಖ್ಯಾತೋ ಭೂತಲೇಽಭವತ್ ।
ಸರ್ವಕಾಮಪ್ರದೋ ನಿತ್ಯಂ ನೂಪುರೇಶ್ವರನಾಮತಃ ॥ ೨೩ ॥
ದರ್ಶನಂ ಯೇ ಕರಿಷ್ಯಂತಿ ಸ್ನಾತ್ವಾ ವಾಪ್ಯಾಂ ಸಮಾಹಿತಾಃ ।
ನೂಪುರೇಶ್ವರರುದ್ರಸ್ಯ ತೇ ಯಾಂತಿ ಪರಮಂ ಪದಂ ॥ ೨೪ ॥
ಯೇ ಚ ಪೂಜಾಂ ಕರಿಷ್ಯಂತಿ ಭಕ್ತಿಭಾವಸಮನ್ವಿತಾಃ ।
ವಸಂತಿ ಮುದಿತಾಃ ಸರ್ವೇ ಯಾವದಾಭೂತಸಂಪ್ಲವಂ ॥ ೨೫ ॥

---

೨೦. ದೇವಿಯಾದ ಪಾರ್ವತಿಗೂ ಮಹೇಶ್ವರನಿಗೂ ನೀನು ಅತ್ಯಂತ ಪ್ರೀತಿಪಾತ್ರನಾಗುವೆ.'' ಪ್ರಿಯಳೆ! ಇಂತು ಆ ಲಿಂಗವು ನುಡಿಯಲು ಆ ಕ್ಷಣದಲ್ಲಿಯೇ ನೂಪುರನು ಮೂಡುತ್ತಿರುವ ಸೂರ್ಯನ ಕಾಂತಿಯ ದೇಹವುಳ್ಳವನಾಗಿ ಅಗ್ನಿಯಂತೆ ತೇಜಸ್ಸನ್ನು ಬೀರುತ್ತಿದ್ದನು.

೨೧. ಓ ಸುಂದರಮುಖಿಯೆ ! ಇಂತಹ ತೇಜೋರಾಶಿಯಾಗಿ ನಿಂತ ಆ ಗಣನಾಯಕನನ್ನು ಮೂರು ಲೋಕಗಳ ನಿವಾಸಿಗಳೂ ನೋಡಲಸದಳವಾದರೂ ಆತನ ಮಹಿಮೆಯನ್ನು ಕಂಡು ದೇವತೆಗಳು ಹೇಳಿದರು.

೨೨–೨೩. "ಆಹಾ! ಈ ಲಿಂಗದ ಮಾಹಾತ್ಮ್ಯವು ಭೂಲೋಕದಲ್ಲಿ ಅತ್ಯದ್ಭುತವಾಗಿ ತೋರುತ್ತಿರುವುದು. ನೂಪುರನಿಗೆ ದರ್ಶನಮಾತ್ರದಿಂದಲೇ ಅವನ ಅಭೀಷ್ಟಸಿದ್ಧಿಯು ಪ್ರಾಪ್ತವಾಯಿತು. ಆದುದರಿಂದ ಇಂದು ಮೊದಲುಗೊಂಡು ಸರ್ವಾಭೀಷ್ಟದಾಯಕನಾದ ಈ ದೇವನು ನೂಪುರೇಶ್ವರನೆಂಬ ಹೆಸರಿನಿಂದಲೇ ಭೂಲೋಕದಲ್ಲಿ ಶಾಶ್ವತವಾದ ಪ್ರಖ್ಯಾತಿಯನ್ನು ಪಡೆಯುವನು.

೨೪. ಯಾರು ಸಮಾಧಾನಚಿತ್ತದಿಂದ ಈ ವಾಪಿಯಲ್ಲಿ ಸ್ನಾನವನ್ನು ಮಾಡಿ ನೂಪುರೇಶ್ವರಮಹಾದೇವನ ದರ್ಶನವನ್ನು ಮಾಡುವರೊ, ಅವರು ಪರಮಪದವನ್ನು ಸೇರುವರು.

೨೫. ಯಾರು ಭಕ್ತಿಭರಿತವಾದ ಅಂತಃಕರಣದಿಂದ ಈ ಮಹಾಲಿಂಗದ ಪೂಜೆಯನ್ನು ಮಾಡುವರೊ, ಅವರು ಪಂಚಭೂತಗಳು ನಾಶವಾಗುವ ಮಹಾಪ್ರಳಯದವರೆಗೂ ನನ್ನ ಲೋಕದಲ್ಲಿ ಆನಂದದಿಂದ ವಾಸಮಾಡುವರು.

ಜನ್ಮಮೃತ್ಯುಜರಾರೋಗದುಃಖಾನಿ ವಿವಿಧಾನಿ ಚ ।
ಪ್ರಯಾಂತಿ ವಿಲಯಂ ಸದ್ಯಃ ಪೂಜಿತೇ ನೂಪುರೇಶ್ವರೇ ॥ ೨೬ ॥
ವಾಪೀ ಗಂಗಾಸಮಾ ಸಾ ತು ಸ್ವಯಮೇವ ಶುಭೇಕ್ಷಣೇ ।
ಸಂಗಮಸ್ತು ವಿತಸ್ತಾಯಾಂ ಯಮುನಾಯಾಸ್ತು ಸುವ್ರತೇ ।
ಪ್ರಯಾಗಮೇತಜ್ಜಾನೀಹಿ ಭೂಧರೇಂದ್ರಾಂಗಸಂಭವೇ ॥ ೨೭ ॥
ಸೋಮತೀರ್ಥಂ ತದಾ ದೇವಿ ಸರ್ವಪಾತಕನಾಶನಂ ।
ತತ್ರ ಸ್ನಾತ್ವಾ ಪುಮಾನ್ದೇವಿ ವಾಜಪೇಯಫಲಂ ಲಭೇತ್ ॥ ೨೮ ॥
ಕೃಷ್ಣಾಽಷ್ಟಮ್ಯಾಂ ಚ ಯಃ ಸ್ನಾತ್ವಾ ಪೂಜಯೇನ್ನೂಪುರೇಶ್ವರಂ ।
ಕುಲಂ ವೈ ತಾರಯೇತ್ಸೋಽಪಿ ಮಾತೃಕಂ ಪಿತೃಕಂ ಶತಂ ॥ ೨೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ನೂಪುರೇಶ್ವರದೇವಸ್ಯ ಶ್ರೂಯತಾಮಭಯೇಶ್ವರಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ನೂಪುರೇಶ್ವರಮಾಹಾತ್ಮ್ಯವರ್ಣನಂ" ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

೨೬. ಈ ನೂಪುರೇಶ್ವರನ ಪೂಜೆಯನ್ನು ಮಾಡಿದವರ ಜನನ, ಮರಣ, ಮುಪ್ಪು, ರೋಗಗಳೇ ಮೊದಲಾದ ಬಹುವಿಧ ದುಃಖಗಳೂ ನಿಮಿಷಮಾತ್ರದಲ್ಲಿಯೇ ನಾಶವಾಗುವುವು."

೨೭. ಕಮಲನೇತ್ರೆಯೆ ! ಈ ವಾಪಿಯು ಸ್ವತಃ ಗಂಗಾತೀರ್ಥಕ್ಕೆ ಸಮಾನವಾಗಿರುವುದು. ಪರ್ವತರಾಜಪುತ್ರಿಯೆ ! ಯಮುನಾ ಮತ್ತು ವಿತಸ್ತಾ ನದಿಗಳ ಈ ಸಂಗಮತೀರ್ಥವು ಪ್ರಯಾಗಕ್ಕೆ ಸಮನಾದುದೆಂದು ತಿಳಿ.

೨೮. ದೇವಿಯೆ ! ಸೋಮತೀರ್ಥವೆಂಬ ಹೆಸರಿನ ಆ ತೀರ್ಥವು ಸಕಲ ಪಾತಕಗಳನ್ನೂ ಕಳೆಯುವುದು. ಅದರಲ್ಲಿ ಸ್ನಾನಮಾಡಿದ ನರನು ವಾಜಪೇಯ ಯಜ್ಞವನ್ನು ಮಾಡಿದ ಫಲವನ್ನು ಪಡೆಯುವನು.

೨೯. ಪ್ರತಿಯೊಂದು ಮಾಸದ ಕೃಷ್ಣಪಕ್ಷದ ಅಷ್ಟಮಿತಿಥಿಯ ದಿನದಲ್ಲಿ ಯಾವನು ಈ ತೀರ್ಥದಲ್ಲಿ ಮಿಂದು ನೂಪುರೇಶ್ವರನನ್ನು ಪೂಜಿಸುವನೊ, ಅವನು ತಾಯಿತಂದೆಗಳ ಎರಡು ವಂಶಗಳಲ್ಲಿಯೂ ನೂರು ತಲೆಗಳವರನ್ನು ಉದ್ಧರಿಸುವನು.

೩೦. ದೇವಿಯೆ ! ಇಂತು ನಿನಗೆ ನೂಪುರೇಶ್ವರಮಹಾದೇವನ ಪ್ರಭಾವವು ಹೇಳಲ್ಪಟ್ಟಿತು. ಈ ಕಥೆಯು ಪಾಪನಾಶಕವಾದುದು. ಇನ್ನು ಮುಂದೆ ಅಭಯೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ನೂಪುರೇಶ್ವರಮಾಹಾತ್ಮ್ಯವರ್ಣನ"ವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟಚತ್ವಾರಿಂಶೋಽಧ್ಯಾಯಃ

### ಅಭಯೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ :—

ಅಷ್ಟಾಽಧಿಕಂ ವಿಜಾನೀಹಿ ಚತ್ವಾರಿಂಶತ್ತಮಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ನ ಭವಸ್ಯ ಭಯಂ ಭವೇತ್ ॥ ೧ ॥
ಕಲ್ಪಾಽವಸಾನೇ ಪ್ರಥಮೇ ಪಾದ್ಮೇ ಪದ್ಮನಿಭೇಕ್ಷಣೇ ।
ನಷ್ಟಚಂದ್ರಾಽರ್ಕನಕ್ಷತ್ರೇ ನಷ್ಟಭೂಮಿತ್ರಿವಿಷ್ಟಪೇ ।
ಬ್ರಹ್ಮಾ ವೈ ಚಿಂತಯಾಮಾಸ ಕಥಂ ಸೃಷ್ಟಿರ್ಭವೇದಿತಿ ॥ ೨ ॥
ಇತ್ಯಾಕುಲಿತರೂಪಸ್ಯ ತಸ್ಯ ನೇತ್ರದ್ವಯಾತ್ತದಾ ।
ಪಪಾತಾಶ್ರುಕಣಃ ಸ್ಥೂಲೋ ನೇತ್ರಾದ್ವಾಮಾನ್ಮಹಾತ್ಮನಃ ॥ ೩ ॥
ತಸ್ಮಾದಶ್ರುಕಣಾಜ್ಜಾತೋ ಹಾರವೋ ನಾಮ ದಾನವಃ ।
ತೀಕ್ಷ್ಣದಂಷ್ಟ್ರೋ ಮಹಾಕಾಯೋ ಭಿನ್ನಾಂಜನಚಯಪ್ರಭಃ ॥ ೪ ॥
ದಕ್ಷಿಣಾನ್ನಯನಾಜ್ಜಾತಃ ಕಾಲಕೇಲೀತಿ ವಿಶ್ರುತಃ ।
ಕೃಷ್ಣದೇಹೋಽತಿದೀರ್ಘಶ್ಚ ಮಹಾದಂಷ್ಟ್ರೋರ್ಧ್ವರೋಮಕಃ ॥ ೫ ॥

---

### ಕನ್ನಡದ ಅನುವಾದ

#### ಅಭಯೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ನಲವತ್ತೆಂಟನೆಯದೇ ಅಭಯೇಶ್ವರನೆಂದು ತಿಳಿ. ಅದನ್ನು ನೋಡಿದವರಿಗೆ ಸಂಸಾರದ ಭಯವೇ ಸಂಭವಿಸಲಾರದು.

೨. ಓ ಕಮಲನೇತ್ರೆಯೆ! ಮೊದಲು ಪದ್ಮಕಲ್ಪವು ಕೊನೆಗೊಳ್ಳಲು ಚಂದ್ರ, ಸೂರ್ಯ, ನಕ್ಷತ್ರಗಳು ಕಾಣದಂತೆ ಭೂಮ್ಯಾಕಾಶಗಳೂ ನಷ್ಟಗಳಾದುವು. ಆಗ ಚತುರ್ಮುಖನು ಮುಂದಿನ ಸೃಷ್ಟಿಯು ಹೇಗಾಗಬೇಕೆಂದೇ ಆಲೋಚಿಸುತ್ತಿದ್ದನು.

೩–೪. ಇಂತು ಮನೋವ್ಯಾಕುಲದಿಂದ ಕೂಡಿದ ಆತನ ಎರಡು ಕಣ್ಣುಗಳಿಂದಲೂ ಎರಡು ತೊಟ್ಟು ಕಣ್ಣೀರು ಬಿದ್ದಿತು. ಅವುಗಳಲ್ಲಿ ಎಡಗಣ್ಣಿನಲ್ಲಿ ಬಿದ್ದ ನೀರಿನಿಂದ ಹಾರವನೆಂಬ ರಾಕ್ಷಸನೊಬ್ಬನು ಹುಟ್ಟಿದನು. ಅವನು ಮೊನಚಾದ ಕೋರೆದಾಡೆಗಳವನೂ, ದೊಡ್ಡ ದೇಹದಿಂದ ಹೆಪ್ಪುಗಟ್ಟಿರುವ ಕಾಡಿಗೆಯ ಪರ್ವತವನ್ನು ಹೋಲುವವನೂ ಆಗಿದ್ದನು.

೫. ಚತುರ್ಮುಖನ ಬಲಗಣ್ಣಿನ ಅಶ್ರುಕಣದಿಂದ ಕಾಲಕೇಲಿಯೆಂಬ ಪ್ರಖ್ಯಾತನಾದ ಮತ್ತೊಬ್ಬ ರಾಕ್ಷಸನುದ್ಭವಿಸಿದನು. ಅವನೂ ಕಪ್ಪಾದ ದೇಹ

ಕರಾಲವದನೋ ದುಷ್ಟೋ ಯಮರೂಪೋ ದುರಾಸದಃ ।
ಕೃಷ್ಣಾಂಜನಚಯಾಕಾರಃ ಪಾಶಪಾಣಿರ್ವಿಭೀಷಣಃ ॥ ೬ ॥
ತೌ ತು ದೈತ್ಯೌ ಸಮಾಗತ್ಯ ಕೃತಸಂಕೇತಕೌ ತದಾ ।
ಬ್ರಹ್ಮಾಣಂ ಹಂತುಮಿಚ್ಛಂತೌ ಪ್ರಮತ್ತಾವಭಿಧಾವಿತೌ ॥ ೭ ॥
ತತೋ ಬ್ರಹ್ಮಾ ಭಯಾವಿಷ್ಟಃ ಕಾಂದಿಶೀಕಶ್ಚಚಾರ ಹ ।
ತತೋ ಜಲೇಽತಿಗಂಭೀರೇ ಸೋಽಪಶ್ಯದಮಿತದ್ಯುತಿಂ ॥ ೮ ॥
ಪುರುಷಂ ಪೀತವಸನಂ ಶಂಖಚಕ್ರಗದಾಧರಂ ।
ತಮಾಲೋಕ್ಯ ತತೋ ಬ್ರಹ್ಮಾ ಸಂತ್ರಾಸಂ ಪರಮಂ ಗತಃ ।
ಉವಾಚ ಕೋ ಭವಾಂಛೇತೇ ನಿಃಶೇಷೇಽಸ್ಮಿಂಶ್ಚರಾಽಚರೇ ॥ ೯ ॥
ತಮುವಾಚ ತತೋ ವಿಷ್ಣುರಹಮೇವ ಜಗತ್ಪಿತಾ ।
ಲೋಕಕೃಲ್ಲೋಕಸಂಹರ್ತಾ ಲೋಕಸ್ಥಿತಿವಿಧಾಯಕಃ ॥ ೧೦ ॥
ಇತ್ಯುಕ್ತಃ ಪದ್ಮಜಸ್ತೇನ ಕೃಷ್ಣೇನಾಕ್ಲಿಷ್ಟಕರ್ಮಣಾ ।
ಪ್ರತ್ಯುವಾಚ ತದಾ ಬ್ರಹ್ಮಾ ಸ್ರಷ್ಟಾಽಹಂ ಭುವನತ್ರಯೇ ॥ ೧೧ ॥

---

ದವನೂ, ಬಹಳ ಎತ್ತರದವನೂ, ಉದ್ದವಾದ ಕೋರೆದಾಡೆಗಳವನೂ, ನಿಮಿರಿ ನಿಂತ ಮೈಗೂದಲಿನವನೂ ಆಗಿದ್ದನು.

೬. ಉಗ್ರಮುಖದವನೂ, ದುಷ್ಟನೂ, ಕಾಲಯಮನಂತಿರುವವನೂ, ದುರ್ಜಯನೂ, ಕಪ್ಪಾದ ಅಂಜನವನ್ನು ಹೋಲುವ ಮೈಬಣ್ಣದವನೂ, ಪಾಶವನ್ನು ಕೈಯಲ್ಲಿ ಹಿಡಿದು ಭಯಂಕರಸ್ವರೂಪನೂ ಆಗಿದ್ದನು.

೭-೮. ಆ ಇಬ್ಬರು ರಾಕ್ಷಸರೂ ತಮ್ಮತಮ್ಮಲ್ಲಿಯೇ ಸಂಕೇತವನ್ನು ಮಾಡಿಕೊಂಡು ಉನ್ಮತ್ತರಾಗಿ ಬ್ರಹ್ಮದೇವನನ್ನೇ ಕೊಲ್ಲಲುದ್ಯುಕ್ತರಾಗಿ ಬಳಿಗೆ ಓಡಿಬಂದರು. ಆಗ ಬ್ರಹ್ಮದೇವನು ಭಯಗೊಂಡವನಾಗಿ ಮುಂದುಗಾಣದೆ ತಿರುಗುತ್ತಿರಲು ಅಗಾಧವಾದ ಕ್ಷೀರಸಮುದ್ರದ ಮಧ್ಯದಲ್ಲಿ ಅಪರಿಮಿತತೇಜಸ್ಸಂಪನ್ನನಾದ ಒಬ್ಬ ಪುರುಷನನ್ನು ಕಂಡನು.

೯. ಪೀತಾಂಬರಧಾರಿಯೂ, ಶಂಖಚಕ್ರಗದಾಧರನೂ ಆದ ಆ ಪುರುಷನನ್ನು ಕಂಡು ಬ್ರಹ್ಮನು ಬಹಳವಾಗಿ ನಡುಗಿಹೋದನು. ಅಲ್ಲದೆ "ಚರಾಚರಾದಿ ವಿಶೇಷಗಳೇ ಇಲ್ಲದಿರುವ ಈ ಸಮುದ್ರದಲ್ಲಿ ಮಲಗಿಕೊಂಡಿರುವ ನೀನು ಯಾರು?" ಎಂದು ಪ್ರಶ್ನೆಮಾಡಿದನು.

೧೦. ಆಗ ಮಹಾವಿಷ್ಣುವು ಅವನಿಗೆಂದನು. "ನಾನೇ ಲೋಕಗಳಿಗೆ ಈಶ್ವರನು. ಲೋಕಗಳನ್ನು ಸೃಜಿಸುವೆನು. ಸಂಹರಿಸುವೆನು. ಅವುಗಳ ಸ್ಥಿತಿಯನ್ನೂ ನಿಯಮಿಸುವೆನು."

೧೧. ಇಂತು ಲೀಲಾಮಾತ್ರದಿಂದ ಸೃಷ್ಟ್ಯಾದಿಗಳನ್ನು ಮಾಡುವ

ಮಯಾ ಸೃಷ್ಟಂ ಜಗತ್ಸರ್ವಂ ಸದೇವಾಸುರಮಾನುಷಂ ।
ಅತ್ರಾಂತರೇ ಚ ತೌ ದೈತ್ಯಾವಾಯಾತೌ ಬಲದರ್ಪಿತೌ ॥ ೧೨ ॥
ಭೋಕ್ತುಕಾಮೌ ಕ್ಷುಧಾವಿಷ್ಟೌ ದೃಷ್ಟ್ವಾ ಬ್ರಹ್ಮಾಽಬ್ರವೀದಿದಂ ।
ಕೃಷ್ಣಂ ಕಮಲಪತ್ರಾಕ್ಷಂ ಕಂಪಿತಾಽಧರಪಲ್ಲವಃ ॥ ೧೩ ॥
ಯದಿ ತ್ವಂ ಕಾರಣಂ ಕಿಂಚಿದಸ್ಯ ಲೋಕಸ್ಯ ಕಥ್ಯಸೇ ।
ತದಾ ತಾವಸುರೌ ಭೀಮೌ ಹಂತುಮರ್ಹಸಿ ಸಾಂಪ್ರತಂ ॥ ೧೪ ॥
ತಚ್ಛ್ರುತ್ವಾ ತು ತದಾ ವಿಷ್ಣುರ್ಜ್ಞಾತ್ವಾ ದುಃಖಂ ಪರಸ್ಪರಂ ।
ಕ್ಷಣಂ ವಿಶ್ರಮ್ಯತಾಂ ತಾವತ್ಪಶ್ಚಾದ್ದ್ವಂದ್ವಂ ಭವಿಷ್ಯತಿ ॥ ೧೫ ॥
ಇತ್ಯುಕ್ತ್ವಾ ಕೃತಸಂಕೇತೌ ತೌ ದೈತ್ಯೌ ಬಲಗರ್ವಿತೌ ।
ಬ್ರಹ್ಮನಾರಾಯಣೌ ಹಂತುಂ ಧಾವಿತೌ ತು ತ್ವರಾನ್ವಿತೌ ॥ ೧೬ ॥
ಬ್ರಹ್ಮಾವಿಷ್ಣೂ ತದಾ ದೃಷ್ಟ್ವಾ ದಾನವೌ ದುರ್ಜಯೌ ರಣೇ ।
ಸಂತ್ರಾಸಂ ಜಗ್ಮತುಸ್ತತ್ರ ಸ್ವೇದಕಂಪಪರಿಪ್ಲುತೌ ॥ ೧೭ ॥

---

ನಾರಾಯಣನ ಮಾತುಗಳನ್ನು ಕೇಳಿ ಬ್ರಹ್ಮನು ಹೇಳಿದನು. "ನಾನೇ ಮೂರು ಲೋಕಗಳಿಗೂ ಸೃಷ್ಟಿಕರ್ತನು.

೧೨. ದೇವತೆಗಳು, ಮನುಷ್ಯರು, ರಾಕ್ಷಸರು ಮುಂತಾದವರನ್ನೊಳಕೊಂಡ ಸಕಲ ಬ್ರಹ್ಮಾಂಡವೂ ನನ್ನಿಂದಲೇ ಮಾಡಲ್ಪಟ್ಟಿರುವುದು." ಹೀಗೆನ್ನುತ್ತಿರುವಾಗಲೇ ಮಹಾಬಲದಿಂದ ಗರ್ವಿತರಾದ ಆ ರಾಕ್ಷಸರಿಬ್ಬರೂ ಅಲ್ಲಿಗೆ ಬಂದು ಸೇರಿದರು.

೧೩. ಹಸಿವಿನಿಂದ ಪೀಡಿತರಾಗಿ ತನ್ನನ್ನು ತಿನ್ನಲು ಬರುತ್ತಿರುವ ಅವರನ್ನು ಕಂಡು ಭಯದಿಂದ ತುಟಿಗಳು ಅದರುತ್ತಿರಲು ಆ ಬ್ರಹ್ಮನು ಕಮಲನೇತ್ರನಾದ ವಿಷ್ಣುವಿಗೆ ಹೇಳಿದನು.

೧೪. "ನೀನು ಹೇಳಿದಂತೆ ಈ ಬ್ರಹ್ಮಾಂಡಕ್ಕೆ ನೀನೇ ಏಕಕಾರಣನಾಗಿದ್ದರೆ ಮಹಾಭಯಂಕರರಾದ ಈ ಇಬ್ಬರು ರಾಕ್ಷಸರನ್ನೂ ಈಗಲೇ ಸಂಹರಿಸಬೇಕು."

೧೫. ಇದನ್ನು ಕೇಳಿ ವಿಷ್ಣುವು ತಮ್ಮಿಬ್ಬರಿಗೂ ಒದಗಿರುವ ಸಂಕಟವನ್ನು ತಿಳಿದುಕೊಂಡು ಹೇಳಿದನು. "ಒಂದು ಕ್ಷಣಕಾಲ ವಿಶ್ರಾಂತಿಯನ್ನು ತೆಗೆದುಕೊ. ಬಳಿಕ ಯುದ್ಧವು ನಡೆಯುವುದು."

೧೬. ಇಂತೆನ್ನುತ್ತಿದ್ದಂತೆಯೇ ಬಲದರ್ಪಿತರಾದ ಆ ದೈತ್ಯರೀರ್ವರೂ ಸಂಕೇತವನ್ನು ಮಾಡಿಕೊಂಡು ಬ್ರಹ್ಮವಿಷ್ಣುಗಳಿಬ್ಬರನ್ನೂ ಕೊಲ್ಲಲು ಸಂಭ್ರಮದಿಂದ ಓಡಿಬಂದರು.

೧೭. ಬ್ರಹ್ಮನಾರಾಯಣರು ಯುದ್ಧದಲ್ಲಿ ಅವರಿಬ್ಬರೂ ಅಜೇಯರಾದವರೆಂಬುದನ್ನು ತಿಳಿದುಕೊಂಡು ಭಯದಿಂದ ಮೈಗಳು ಬೆವರಿ ನಡುಗುತ್ತ ಬಹಳ ಸಂಕಟಗೊಂಡರು.

ಅನ್ಯೋನ್ಯಮೂಚತುಸ್ತೌ ಹಿ ದೇಶಕಾಲೋಚಿತಂ ವಚಃ ।
ಕರ್ತವ್ಯಂ ಕಿಂ ನು ವಾ ಕಾರ್ಯಂ ಮಮ ವಾ ತವ ವಾ ಭವೇತ್ ॥ ೧೮ ॥
ಉಪಸ್ಥಿತಂ ಭಯಂ ಘೋರಂ ತತ್ರ ಕಿಂ ಕಾರ್ಯಮಸ್ತಿ ನೌ ।
ಆಸನ್ನಂ ಮರಣಂ ದೃಷ್ಟ್ವಾ ಬ್ರಹ್ಮಾ ಪ್ರೋವಾಚ ಕೇಶವಂ ॥ ೧೯ ॥
ಗಮ್ಯತಾಂ ಕೃಷ್ಣ ಶೀಘ್ರಂ ವೈ ಮಹಾಕಾಲವನೋತ್ತಮಂ ।
ಪ್ರಲಯೇಽಪ್ಯಕ್ಷಯಂ ಪ್ರೋಕ್ತಂ ತತ್ರ ರಕ್ಷಾ ಭವಿಷ್ಯತಿ ।
ಅಹಂ ತತ್ರ ಗಮಿಷ್ಯಾಮಿ ವ್ರಜ ತ್ವಂ ತತ್ರ ಕೇಶವ ॥ ೨೦ ॥
ಇತ್ಯುಕ್ತೋ ಬ್ರಹ್ಮಣಾ ಕೃಷ್ಣೋ ಜಗಾಮ ಸಹ ತೇನ ವೈ ।
ಮಹಾಕಾಲವನಂ ಪ್ರಾಪ್ತೌ ನ ಚ ದೃಷ್ಟೋ ಮಹೇಶ್ವರಃ ।
ತತ್ರಾಽಪಿ ದಶಸಾಹಸ್ರಂ ಕಾಲಂ ಪರ್ಯಟಿತೋಸ್ತಯೋಃ ॥ ೨೧ ॥
ತತೋ ಜ್ವಾಲಾಮಯಂ ದಿವ್ಯಂ ನೂಪುರೇಶ್ವರದಕ್ಷಿಣೇ ।
ದೃಷ್ಟ್ವಾ ತಲ್ಲಿಂಗಮಾಹಾತ್ಮ್ಯಂ ಬ್ರಹ್ಮವಿಷ್ಣೂ ತತಃ ಸ್ವಯಂ ।
ಪ್ರಾರ್ಥಯಾಂಚಕ್ರತುರ್ದೇವಮಭಯಂ ದೇಹಿ ನೌ ಪ್ರಭೋ ॥ ೨೨ ॥

---

೧೮. ಆಗಲವರು ದೇಶಕಾಲಗಳಿಗೆ ಉಚಿತವಾದ ಮಾತನ್ನು ತಮ್ಮ ತಮ್ಮಲ್ಲಿಯೇ ಆಡತೊಡಗಿದರು. "ಈಗ ನನಗಾಗಲಿ ನಿನಗಾಗಲಿ ಮಾಡ ಬೇಕಾದುದೇನಿರುವುದು ?

೧೯. ನಮಗೆ ಪ್ರಾಪ್ತವಾಗಿರುವ ಈ ಮಹಾಭಯದ ವೇಳೆಯಲ್ಲಿ ನಮಗೆ ಕಾರ್ಯವು ಯಾವುದು ?" ಮೃತ್ಯುವು ಸನ್ನಿಹಿತವಾಗಿರುವುದನ್ನು ಕಂಡು ಬ್ರಹ್ಮನು ವಿಷ್ಣುವಿಗೆ ಹೇಳಿದನು.

೨೦. "ಎಲೈ ನಾರಾಯಣನೆ! ಈಗ ನಾವು ಉತ್ತಮ ಕ್ಷೇತ್ರವಾದ ಮಹಾ ಕಾಲವನಕ್ಕೆ ಹೋಗೋಣ. ಅದು ಪ್ರಳಯಕಾಲದಲ್ಲಿಯೂ ನಾಶವಿಲ್ಲದುದಾಗಿರು ವುದು. ಅಲ್ಲಿ ನಮ್ಮ ಸಂರಕ್ಷಣೆಯಾಗುವುದು. ನಾನಲ್ಲಿಗೇ ಹೋಗುತ್ತಿರುವೆನು. ನೀನೂ ಅಲ್ಲಿಗೆ ಹೊರಡುವವನಾಗು."

೨೧. ಇಂತೆಂದು ಬ್ರಹ್ಮನು ಹೇಳಲು ಮಹಾವಿಷ್ಣುವು ಆತನೊಡನೆ ಹೊರಟು ಮಹಾಕಾಲವನವನ್ನು ಸೇರಿದನು. ಅಲ್ಲಿ ಹತ್ತು ಸಾವಿರ ವರ್ಷಗಳ ವರೆಗೂ ಸುತ್ತಾಡಿದರೂ ಒಬ್ಬರಿಗಾದರೂ ಪರಮೇಶ್ವರನು ಕಾಣಿಸಿಕೊಳ್ಳಲೇ ಇಲ್ಲ.

೨೨. ಬಳಿಕ ನೂಪುರೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ತೇಜಸ್ಸಿನಿಂದ ಉರಿಯು ತ್ತಿರುವ ಒಂದು ದಿವ್ಯಲಿಂಗವನ್ನು ನೋಡಿ ಅದು ಮಹಾಮಹಿಮೆಯುಳ್ಳ ದ್ದೆಂದು ತಿಳಿದು ಅದನ್ನು ಪ್ರಾರ್ಥಿಸಿಕೊಂಡರು. "ಸ್ವಾಮಿಯೆ! ನಮಗೆ ಅಭಯ ವನ್ನು ಕೊಡು.

ಶರಣಂ ಭವ ದೇವೇಶ ದಾನವಾಭ್ಯಾಂ ಪ್ರಪೀಡಿತೌ ।
ಅಭಯಂ ಚ ತತೋ ದತ್ತಂ ತೇನ ಲಿಂಗೇನ ಪಾರ್ವತಿ ॥ ೨೩ ॥
ಶುಶ್ರಾವ ಗರ್ಜಿತಂ ತಾಭ್ಯಾಂ ದಾನವಾಭ್ಯಾಂ ಪಿತಾಮಹಃ ।
ಪ್ರತ್ಯುವಾಚ ಭಯಗ್ರಸ್ತೋ ಲಿಂಗಂ ಕಂಪಿತಕಂಧರಃ ॥ ೨೪ ॥
ಸ ಏಷ ಮೃತ್ಯುರಸ್ಮಾಕಮೇತಿ ಶೀಘ್ರಂ ಭಯಾವಹಃ ।
ದೀಯತಾಮಭಯಂ ದೇವ ಕೃಷ್ಣೇನೋಕ್ತಂ ತದಾ ಪ್ರಿಯೇ ॥ ೨೫ ॥
ಭಯಾರ್ತವಚನಂ ಶ್ರುತ್ವಾ ಬ್ರಹ್ಮಣಃ ಕೇಶವಸ್ಯ ಚ ।
ತೌ ದೇವೌ ತೇನ ಲಿಂಗೇನ ಜಠರೇ ಸನ್ನಿವೇಶಿತೌ ॥ ೨೬ ॥
ದೃಷ್ಟಂ ತಾಭ್ಯಾಂ ಜಗತ್ಸರ್ವಂ ಸಾರ್ಕಚಂದ್ರಮಹೀಧರಂ ।
ಸಸಿದ್ಧಗಂಧರ್ವಕುಲಂ ಶೈಲತಾಲಲತಾಕುಲಂ ॥ ೨೭ ॥
ಸಮುದ್ರಪೀಠಸಂಯುಕ್ತಂ ನಾನಾವರ್ಣಾಶ್ರಮೋಜ್ಜ್ವಲಂ ।
ಸಪಾತಾಲತಲಂ ದೇವಿ ಸಭುಜಂಗಮಹೀರುಹಂ ॥ ೨೮ ॥
ಸಸಪ್ತಲೋಕವಿನ್ಯಾಸಂ ಸದೇವಾಽಸುರರಾಕ್ಷಸಂ ।
ಪುನಸ್ತೌ ನಿಃಸೃತೌ ತಸ್ಮಾಜ್ಜಠರಾದ್ವಿಸ್ಮಯಾನ್ವಿತೌ ॥ ೨೯ ॥

---

೨೩. ದೇವಾಧಿದೇವನೆ! ದಾನವರಿಂದ ಪೀಡಿತರಾಗಿರುವ ನಮಗೆ ಶರಣ್ಯನಾಗು.'' ಪಾರ್ವತಿಯೆ! ಆಗ ಆ ಲಿಂಗವು ಅವರಿಗೆ ಅಭಯವನ್ನು ಕೊಟ್ಟಿತು.

೨೪. ಚತುರ್ಮುಖನು ಆ ದಾನವರಿಬ್ಬರೂ ಮಾಡುತ್ತಿದ್ದ ಸಿಂಹನಾದವನ್ನು ಕೇಳಿ ಭಯದಿಂದ ನಡುಗುತ್ತ ಗದ್ಗದಿತ ಧ್ವನಿಯಲ್ಲಿ ಲಿಂಗಕ್ಕೆ ಈರೀತಿ ಬಿನ್ನವಿಸಿಕೊಂಡನು.

೨೫. ''ಭಯಂಕರಸ್ವರೂಪನೂ ನಮಗೆ ಮೃತ್ಯುವೂ ಆಗಿರುವ ಈ ರಾಕ್ಷಸನು ಬೇಗನೆ ಇಲ್ಲಿಗೇ ಬರುತ್ತಿರುವನು.'' ಎಲೌ ಪಾರ್ವತಿಯೆ! ನಾರಾಯಣನೂ ಸಹ ''ದೇವದೇವನೆ! ನಮಗೆ ಅಭಯವನ್ನು ಕೊಡು'' ಎಂದು ಬೇಡಿಕೊಂಡನು.

೨೬. ಬ್ರಹ್ಮ ನಾರಾಯಣರ ಭಯಭರಿತಗಳಾದ ಮಾತುಗಳನ್ನು ಕೇಳಿ ಆ ಲಿಂಗವು ಇಬ್ಬರನ್ನೂ ತನ್ನಲ್ಲಿಯೇ ಅಡಗಿಸಿಕೊಂಡಿತು.

೨೭. ಅವರಿಗೆ ಲಿಂಗಮಧ್ಯದಲ್ಲಿಯೇ ಸೂರ್ಯ, ಚಂದ್ರ, ಪರ್ವತಗಳು, ಸಿದ್ಧರು, ಗಂಧರ್ವನಾಯಕರು, ಬೆಟ್ಟಗಳು, ಗಿಡಗಳು, ಬಳ್ಳಿಗಳ ಸಾಲುಗಳು ಮುಂತಾದುವುಗಳನ್ನೊಳಕೊಂಡ ಸಕಲ ಬ್ರಹ್ಮಾಂಡವೂ ಗೋಚರವಾಯಿತು.

೨೮. ಸಮುದ್ರಗಳೂ, ಅವುಗಳ ತಳಗಳೂ, ಅನೇಕ ವರ್ಣಾಶ್ರಮಗಳಿಂದ ಕೂಡಿದ ಭೂಮಂಡಲವೂ, ಪಾತಾಳ ಲೋಕಗಳೂ, ನಾಗಲೋಕಗಳೂ ಕಂಡುವು.

೨೯. ದೇವತೆಗಳು, ಮನುಷ್ಯರು, ರಾಕ್ಷಸರೇ ಮುಂತಾದವರನ್ನೊಳಗೊಂಡ ಏಳು ಲೋಕಗಳ ವಿಸ್ತಾರವೂ ಕಂಡುಬರಲು ಅವರು ಆಶ್ಚರ್ಯಾನ್ವಿತರಾಗಿ ಆ ಲಿಂಗದ ಮಧ್ಯದಿಂದ ಹೊರಟುಬಂದರು.

ದೃಷ್ಟ್ವಾ ಭಸ್ಮೀಕೃತೌ ದೈತ್ಯೌ ತೇನ ಲಿಂಗೇನ ಪಾರ್ವತಿ ।
ತುಷ್ಟುವಾತೇ ಪರಂ ಲಿಂಗಂ ಭಕ್ತ್ಯಾ ಪರಮಯಾ ಯುತೌ ॥ ೩೦ ॥
ಲಿಂಗೇನೋಕ್ತಂ ಪ್ರಸನ್ನೇನ ಭವದ್ಭ್ಯಾಂ ಕಿಂ ದದಾಮ್ಯಹಂ ।
ಮಮಾಽಮೋಘಮಿದಂ ದೇವೌ ದರ್ಶನಂ ಚಾಽತಿದುರ್ಲಭಂ ॥ ೩೧ ॥
ತತೋ ಬ್ರಹ್ಮಾ ಚ ವಿಷ್ಣುಶ್ಚ ವರಯಾಮಾಸತುರ್ವರಂ ।
ಯದಿ ದೇಯೋ ವರೋಽಸ್ಮಾಕಂ ನೃಣಾಮಭಯದೋ ಭವ ॥ ೩೨ ॥
ಯೇ ಚ ತ್ವಾಂ ಪೂಜಯಿಷ್ಯಂತಿ ಯಕ್ಷ್ಯಂತಿ ಚ ಸಮಾಹಿತಾಃ ।
ಸಂಸ್ಮರಿಷ್ಯಂತಿ ಸತತಂ ತೇಷಾಮಭಯದೋ ಭವ ॥ ೩೩ ॥
ಅಭಯೇಶ್ವರಸಂಜ್ಞಸ್ತ್ವಂ ಖ್ಯಾತೋ ಭುವಿ ಭವಿಷ್ಯಸಿ ।
ತೇ ಕೃತಾರ್ಥಾ ಭವಿಷ್ಯಂತಿ ಯೇ ತ್ವಾಂ ಪಶ್ಯಂತಿ ಭಕ್ತಿತಃ ॥ ೩೪ ॥
ಭವಿಷ್ಯತಿ ಭಯಂ ನೈವ ಸಂಸಾರಪತನಂ ತಥಾ ।
ಧನಪುತ್ರಕಲತ್ರಾಣಾಂ ವಿಯೋಗೋ ನ ಭವಿಷ್ಯತಿ ॥ ೩೫ ॥

---

೩೦. ಎಲೌ ಪಾರ್ವತಿಯೆ! ಆ ಲಿಂಗವು ಒಮ್ಮೆ ದೃಷ್ಟಿಸಿ ನೋಡಿದ ಮಾತ್ರದಿಂದಲೇ ರಾಕ್ಷಸರಿಬ್ಬರೂ ಭಸ್ಮವಾದರು. ಆಗ ಬ್ರಹ್ಮವಿಷ್ಣುಗಳು ಅತ್ಯಂತ ಭಕ್ತಿಭರಿತರಾಗಿ ಲಿಂಗವನ್ನು ಸ್ತೋತ್ರಮಾಡಿದರು.

೩೧. ತರುವಾಯ ಲಿಂಗವು ಪ್ರಸನ್ನವಾಗಿ ಹೇಳಿತು. "ನಿಮ್ಮಿಬ್ಬರಿಗೆ ಯಾವ ವರವನ್ನು ಕೊಡಲಿ? ದೇವತೆಗಳಿರಾ! ನನ್ನ ದರ್ಶನವು ಅತ್ಯಂತ ದುರ್ಲಭವೂ, ಅಮೋಘವೂ ಆದುದಷ್ಟೆ."

೩೨. ಆಗ ಬ್ರಹ್ಮನೂ, ವಿಷ್ಣುವೂ ವರವನ್ನು ಕೇಳಿಕೊಂಡರು. "ನೀನು ನಮಗೆ ವರವನ್ನು ಕೊಡುವೆಯಾದರೆ ಇಲ್ಲಿಗೆ ಬರುವ ಸಕಲ ಮಾನವರಿಗೂ ಅಭಯವನ್ನು ಕೊಡುತ್ತಿರು.

೩೩. ಯಾರು ನಿನ್ನನ್ನು ಪೂಜಿಸುವರೊ, ಯಾರು ಇಲ್ಲಿ ಯಜ್ಞಾದಿಗಳನ್ನು ಮಾಡುವರೊ, ನಿತ್ಯವೂ ಸಮಾಧಾನಚಿತ್ತದಿಂದ ಯಾರು ನಿನ್ನನ್ನು ಸ್ಮರಿಸುತ್ತಿರುವರೊ, ಅವರೆಲ್ಲರಿಗೂ ನೀನು ಅಭಯಪ್ರದನಾಗಿರು.

೩೪. ನೀನು ಅಭಯೇಶ್ವರನೆಂಬ ಹೆಸರಿನಿಂದಲೇ ಭೂಲೋಕದಲ್ಲಿ ಪ್ರಖ್ಯಾತನಾಗುವೆ. ಯಾರು ನಿನ್ನನ್ನು ಭಕ್ತಿಯಿಂದ ದರ್ಶನಮಾಡುವರೊ, ಅವರು ಕೃತಕೃತ್ಯರಾಗುವರು.

೩೫. ಅವರಿಗೆಂದಿಗೂ ಭಯವಾಗಲಿ, ಸಂಸಾರದಲ್ಲಿ ಪತನವಾಗಲಿ ಉಂಟಾಗುವುದಿಲ್ಲ. ಧನ, ಪುತ್ರ, ಪತ್ನಿಗಳ ವಿಯೋಗವೂ ಸಂಭವಿಸುವುದಿಲ್ಲ.

ದುಃಖಿತಾ ದುರ್ಭಗಾ ನಾರೀ ದರ್ಶನಂ ಯಾ ಕರಿಷ್ಯತಿ ।
ಸೌಭಾಗ್ಯಸುಖಸಂಯುಕ್ತಾ ಭವಿಷ್ಯತಿ ನ ಸಂಶಯಃ ॥ ೩೬ ॥
ಯಂ ಯಂ ಕಾಮಮಭಿಧ್ಯಾಯ ಯೇ ತ್ವಾಂ ಪಶ್ಯಂತಿ ಮಾನವಾಃ ।
ತಂ ತಂ ಮನೋರಥಂ ಸರ್ವಂ ಗಮಿಷ್ಯಂತಿ ನ ಸಂಶಯಃ ॥ ೩೭ ॥
ಏವಂ ಭವಿಷ್ಯತೀತ್ಯುಕ್ತ್ವಾ ಲಿಂಗೇನ ಪರಮೇಶ್ವರಿ ।
ವಿಸರ್ಜಿತೌ ಗತೌ ದೇವೌ ಬ್ರಹ್ಮವಿಷ್ಣೂ ಸ್ವಮಾಲಯಂ ॥ ೩೮ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಅಭಯೇಶ್ವರದೇವಸ್ಯ ಶ್ರೂಯತಾಂ ಪೃಥುಕೇಶ್ವರಂ ॥ ೩೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಅಭಯೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಚತ್ವಾರಿಂಶೋಽಧ್ಯಾಯಃ

---

೩೬. ದುಃಖಿತೆಯೂ ದರಿದ್ರಳೂ ಆದ ಯಾವ ಸ್ತ್ರೀಯು ನಿನ್ನ ದರ್ಶನವನ್ನು ಮಾಡುವಳೊ, ಅವಳು ಸೌಭಾಗ್ಯದಿಂದಲೂ ಸೌಖ್ಯದಿಂದಲೂ ಕೂಡಿದವಳಾಗುವುದರಲ್ಲಿ ಸಂದೇಹವಿಲ್ಲ.

೩೭. ಯಾವ ಯಾವ ಮಾನವನು ಯಾವ ಯಾವ ಮನೋರಥಗಳನ್ನು ಕೋರಿ, ನಿನ್ನ ದರ್ಶನವನ್ನು ಮಾಡುತ್ತಾನೆಯೊ, ಅವುಗಳನ್ನು ಸಂಪೂರ್ಣವಾಗಿ ಪಡೆಯುವುದರಲ್ಲಿ ಸಂದೇಹವಿಲ್ಲ."

೩೮. ಪರಮೇಶ್ವರಿಯೆ! ಆ ಲಿಂಗಮೂರ್ತಿಯು ಮುಂದೆ ಇದೆಲ್ಲವೂ ನಡೆಯುವುದೆಂದು ಹೇಳಿ ಬೀಳ್ಕೊಡಲು ಬ್ರಹ್ಮವಿಷ್ಣುಗಳಿಬ್ಬರೂ ತಮ್ಮ ತಮ್ಮ ಲೋಕಗಳಿಗೆ ಹೊರಟುಹೋದರು.

೩೯. ದೇವಿಯೆ! ಇಂತು ನಿನಗೆ ಅಭಯೇಶ್ವರ ಮಹಾದೇವನ ಪಾಪನಾಶಕವಾದ ಚರಿತ್ರೆಯನ್ನು ಹೇಳಿರುವೆನು. ಇನ್ನು ಪೃಥುಕೇಶ್ವರದೇವನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಅಭಯೇಶ್ವರಮಾಹಾತ್ಮ್ಯವರ್ಣನ"ವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ಪೃಥುಕೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಶೃಣು ಪಂಚಾಶದೇಕೋನಂ ದೇವೇಶಂ ಪೃಥುಕೇಶ್ವರಂ ।
ಯಸ್ಯ ದರ್ಶನಮಾತ್ರೇಣ ಸಾರ್ವಭೌಮೋ ನರೋ ಭವೇತ್ ॥ ೧ ॥
ವಂಶೇ ಸ್ವಾಯಂಭುವೇ ದೇವಿ ಹ್ಯಂಗೋ ರಾಜಾ ಬಭೂವ ಹ ।
ಮೃತ್ಯೋಸ್ತು ದುಹಿತಾ ತೇನ ಪರಿಣೀತಾ ಸುದುರ್ಮುಖಾ ॥ ೨ ॥
ವೇನ ನಾಮಾ ಸುತೋ ಜಾತೋ ನಾಸ್ತಿಕೋ ಧರ್ಮದೂಷಕಃ ।
ದೇವಬ್ರಹ್ಮಸ್ವಹಾರೀ ಚ ಪರಭಾರ್ಯಾಽಪಹಾರಕಃ ॥ ೩ ॥
ಸ ಚ ಶಪ್ತೋ ದ್ವಿಜೈರ್ದೇವಿ ತತ್ಕ್ಷಣಾನ್ನಿಧನಂ ಗತಃ ।
ತದೂರೋರ್ಮಥ್ಯಮಾನಾತ್ತು ನಿಪೇತುರ್ಮ್ಲೇಚ್ಛಜಾತಯಃ ॥ ೪ ॥
ಶರೀರೇ ಮಾತುರಂಶೇನ ಕೃಷ್ಣಾಂಜನಚಯಪ್ರಭಾಃ ।
ಪಿತುರಂಶಾತ್ಸಮುತ್ಪನ್ನೋ ಧಾರ್ಮಿಕೋ ದ್ವಿಜಸತ್ತಮೈಃ ।
ಮಥಿತಾದ್ದಕ್ಷಿಣಾದ್ಧಸ್ತಾತ್ಪೃಥುಃ ಪ್ರಥಿತವಿಕ್ರಮಃ ॥ ೫ ॥

---

### ಕನ್ನಡದ ಅನುವಾದ

#### ಪೃಥುಕೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಇನ್ನು ನಲವತ್ತೊಂಬತ್ತನೆಯದಾದ ಪೃಥುಕೇಶ್ವರ ಲಿಂಗದ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ನರನು ಸಾರ್ವಭೌಮಪದವಿಗೆ ಅರ್ಹನಾಗುವನು.

೨. ದೇವಿಯೆ! ಸ್ವಯಂಭುಮನುವಿನ ವಂಶದಲ್ಲಿ ಅಂಗನೆಂಬ ಒಬ್ಬ ಮಹಾರಾಜನು ಹುಟ್ಟಿದನು. ಆತನು ಯಮಧರ್ಮರಾಜನ ಮಗಳಾದ ದುರ್ಮುಖಿಯೆಂಬುವಳನ್ನು ಮದುವೆಯಾದನು.

೩. ಆತನಿಗೆ ವೇನನೆಂಬ ಮಗನಾದನು. ಅವನು ನಾಸ್ತಿಕನೂ, ಧರ್ಮವನ್ನು ನಿಂದಿಸುವವನೂ, ದೇವಬ್ರಾಹ್ಮಣರ ಸ್ವತ್ತುಗಳನ್ನಪಹರಿಸುವವನೂ, ಪರಸ್ತ್ರೀಲಂಪಟನೂ ಆಗಿದ್ದನು.

೪. ಪಾರ್ವತಿಯೆ! ಆತನು ಬ್ರಾಹ್ಮಣರ ಶಾಪವನ್ನು ಹೊಂದಿ ಕ್ಷಣದಲ್ಲಿಯೇ ಮೃತನಾದನು. ಆತನ ತೊಡೆಯನ್ನು ಮಥನಮಾಡಲು ಮ್ಲೇಚ್ಛಜಾತಿಗಳು ಹುಟ್ಟಿದರು.

೫. ತಾಯಿಯ ಅಂಶದಿಂದ ಹುಟ್ಟಿದ ಇವರು ಕಪ್ಪಾದ ಕಾಡಿಗೆಯ ಬಣ್ಣದ ಮೈಗಳುಳ್ಳವರಾಗಿದ್ದರು. ಬಳಿಕ ಆ ಬ್ರಾಹ್ಮಣೋತ್ತಮರು ಅವನ ಬಲಗೈಯನ್ನು

ಸ ವಿಪ್ರೈರಭಿಷಿಕ್ತಶ್ಚ ತಪಃ ಕೃತ್ವಾ ಸುದುಷ್ಕರಂ ।
ವಿಷ್ಣೋರ್ವರೇಣ ಮಹತಾ ಪ್ರಭುತ್ವಮಗಮನ್ನೃಪಃ ॥ ೬ ॥
ಸ ಚ ಸ್ವಾಧ್ಯಾಯರಹಿತಾ ನಿರ್ವಷಟ್ಕಾರನಿರ್ಧನಾಃ ।
ಹಾಹಾಭೂತಾಃ ಪ್ರಜಾ ದೃಷ್ಟ್ವಾ ತತೋಽಭೂದ್ದುಃಖಿತೋ ನೃಪಃ॥ ೭ ॥
ಸ ದೋಗ್ಧುಮೈಚ್ಛತ್ತ್ರೈಲೋಕ್ಯಂ ಸದೇವಾಸುರಮಾನುಷಂ ॥ ೮ ॥
ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ಮುನಿಸತ್ತಮಃ ।
ಕ್ರೋಧಾವಿಷ್ಟಂ ಪೃಥುಂ ದೃಷ್ಟ್ವಾ ವಾಕ್ಯಂ ಚೇದಮುವಾಚ ಹ ॥ ೯ ॥
ಲೋಕತ್ರಯವಿನಾಶಾಯ ಮಾ ಕೋಪಂ ಕುರು ಭೂಪತೇ ।
ಪೃಥ್ವ್ಯಾಽನಯಾ ಗ್ರಾಸಿತಾನಿ ಸಸ್ಯಾನಿ ವಿವಿಧಾನಿ ಚ ।
ಗಿಲಿತಾನಿ ಚ ಅನ್ನಾನಿ ವಿದ್ಧ್ಯೇವೈತನ್ಮತಂ ಮಮ ॥ ೧೦ ॥
ನಾರದಸ್ಯ ಚ ವಾಕ್ಯೇನ ಕ್ರೋಧಂ ಚಕ್ರೇ ಪೃಥುಸ್ತದಾ ।
ನಿರ್ದಗ್ಧುಮೈಚ್ಛತ್ಪೃಥಿವೀಂ ಸಶೈಲವನಕಾನನಂ ॥ ೧೧ ॥

---

ಮಥಿಸಲು ತಂದೆಯ ಶುಕ್ರಾಂಶದಿಂದ ಧರ್ಮೈಕತತ್ಪರನೂ, ಪ್ರಖ್ಯಾತಪೌರುಷವಂತನೂ ಆದ ಪೃಥುಮಹಾರಾಜನು ಹುಟ್ಟಿದನು.

೬. ಆ ರಾಜನು ಬ್ರಾಹ್ಮಣರಿಂದ ಪಟ್ಟಾಭಿಷಿಕ್ತನಾಗಿದ್ದರೂ ಅತ್ಯಂತ ದುಸ್ತರವಾದ ತಪಸ್ಸನ್ನಾಚರಿಸಿ ಅಮೋಘವಾದ ಮಹಾವಿಷ್ಣುವಿನ ವರದಾನದ ಬಲದಿಂದ ಸಾರ್ವಭೌಮಪದವಿಯನ್ನು ಪಡೆದನು.

೭. ವೇದಾಧ್ಯಯನರಹಿತರೂ, ಯಜ್ಞಹೀನರೂ, ದರಿದ್ರರೂ, ಹಾಹಾಕಾರವನ್ನು ಮಾಡುತ್ತಿರುವವರೂ ಆದ ಜನರನ್ನು ಕಂಡು ಬಹಳ ದುಃಖಸಂತಪ್ತನಾದನು.

೮. ದೇವ, ದಾನವ, ಮನುಷ್ಯರ ಏಳಿಗೆಗಾಗಿ ಆತನು ಬ್ರಹ್ಮಾಂಡವನ್ನೇ ಹಿಂಡಿ ಕರೆಯಲಿಚ್ಛಿಸಿದನು.

೯. ಇಷ್ಟರಲ್ಲಿಯೇ ಮುನಿವರ್ಯನಾದ ನಾರದನು ಅಲ್ಲಿಗೆ ಪ್ರಾಪ್ತನಾಗಿ ಕೋಪದಿಂದ ಉರಿಯುತ್ತಿರುವ ಪೃಥುರಾಜನನ್ನು ಕಂಡು ಇಂತೆಂದನು.

೧೦. ರಾಜೇಂದ್ರನೆ! ಮೂರು ಲೋಕಗಳನ್ನೂ ನಾಶಮಾಡುವಂತಹ ಕೋಪವನ್ನು ತಾಳಬೇಡ. ಈ ಭೂಮಿಯಿಂದಲೇ ಸಕಲ ವಿಧಗಳಾದ ಸಸ್ಯಗಳೂ ನುಂಗಲ್ಪಟ್ಟಿರುವುವು. ಹಾಗೆಯೇ ಸಮಸ್ತ ಪ್ರಾಣಿಗಳ ಆಹಾರಪದಾರ್ಥಗಳೂ ಅಡಗಿರುವುವೆಂದೇ ನನ್ನ ಅಭಿಪ್ರಾಯವಾಗಿರುವುದು.

೧೧. ನಾರದನ ಮಾತನ್ನು ಕೇಳಿ ಪೃಥುವು ಇನ್ನೂ ಹೆಚ್ಚಿನ ಕೋಪವನ್ನು ತಾಳಿ ಪರ್ವತ, ವನ, ಅರಣ್ಯಗಳನ್ನೊಳಗೊಂಡ ಸಕಲ ಭೂಮಂಡಲವನ್ನೂ ಸುಡುವ ಮನಸ್ಸನ್ನು ಮಾಡಿದನು.

ಮುಮೋಚ ಶಸ್ತ್ರಮಾಗ್ನೇಯಂ ತೇನ ಸಾ ಧರಣೀ ತದಾ ।
ದಹ್ಯಮಾನಾ ಭಯಾರ್ತಾ ಚ ಗೌರ್ಭೂತ್ವಾ ಪೃಥುಮಭ್ಯಗಾತ್ ॥ ೧೨ ॥
ಸಾ ವಧ್ಯಮಾನಾ ತೇನೈವ ನೃಪಂ ವಚನಮಬ್ರವೀತ್ ।
ಶರಣಂ ಸಮನುಪ್ರಾಪ್ತಾ ಗೌರಹಂ ನೃಪಸತ್ತಮ ॥ ೧೩ ॥
ಗೌರವಧ್ಯಾ ಮಹೀಪಾಲ ವತ್ಸಂ ಕೃತ್ವಾ ಚ ದುಗ್ಧಿ ಮಾಂ ॥ ೧೪ ॥
ತಸ್ಯಾಸ್ತದ್ವಚನಂ ಶ್ರುತ್ವಾ ದುದೋಹ ನೃಪಸತ್ತಮಃ ।
ಭಾಸ್ವದ್ರತ್ನಾನಿ ಸಸ್ಯಾನಿ ಕೃತ್ವಾ ವತ್ಸಂ ಹಿಮಾಲಯಂ ॥ ೧೫ ॥
ಜಾತಾಃ ಪ್ರಜಾಶ್ಚ ಸುಮುಖಾಃ ಪ್ರವೃತ್ತಶ್ಚ ಮಹೋತ್ಸವಃ ।
ಪ್ರವೃತ್ತಾ ಯಾಗದಾನಾದಿಕ್ರಿಯಾ ಮಂಗಲಪೂರ್ವಿಕಾಃ ॥ ೧೬ ॥
ರಾಜಾಽಥ ಚಿಂತಯಾಮಾಸ ಮಯಾ ಪಾಪಮಿದಂ ಕೃತಂ ।
ಅವಧ್ಯಾಶ್ಚ ಸ್ತ್ರಿಯಃ ಪ್ರೋಕ್ತಾ ಗೌರವಧ್ಯಾ ದ್ವಿಜಸ್ತಥಾ ॥ ೧೭ ॥
ಸ್ತ್ರೀರೂಪಧಾರಿಣೀ ಪೃಥ್ವೀ ಮೋಹಾದೇಷಾ ಮಯಾ ಹತಾ ।
ಗೋವಧೇ ಚ ಕೃತಾ ಬುದ್ಧಿರಹೋ ಪಾಪಪರಂಪರಾ ।
ತಸ್ಮಾದ್ವಹ್ನಿಂ ಪ್ರವೇಕ್ಷ್ಯಾಮಿ ಚಿತಾಂ ಕೃತ್ವಾ ನ ಸಂಶಯಃ ॥ ೧೮ ॥

---

೧೨. ಮತ್ತು ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ಬಿಡಲು ಅದರಿಂದ ಸುಡಲಾರಂಭಿಸಿದ ಭೂಮಿಯು ಆಕಳಿನ ರೂಪವನ್ನು ತಾಳಿ ಪೃಥುಮಹಾರಾಜನ ಬಳಿಗೆ ಬಂದಿತು.

೧೩. ಆತನಿಂದಲೇ ಪೀಡಿತಳಾದ ಭೂದೇವಿಯು ಆತನಿಗೇ ಹೇಳಿಕೊಂಡಿತು. "ಮಹಾರಾಜನೆ! ಗೋವಾದ ನಾನು ನಿನ್ನನ್ನು ಶರಣುಹೋಕ್ಕಿರುತ್ತೇನೆ.

೧೪. ಭೂಪಾಲನೆ! ಗೋವು ಅವಧ್ಯ ಜಂತುವು. ಒಂದು ಕರುವನ್ನು ಮಾಡಿಕೊಂಡು ನನ್ನಿಂದ ಕರೆದುಕೊ".

೧೫–೧೭. ಆ ಗೋವಿನ ಮಾತನ್ನು ಕೇಳಿ ರಾಜೇಂದ್ರನು ಹಿಮಾಚಲವನ್ನೇ ಕರುವನ್ನಾಗಿ ಮಾಡಿಕೊಂಡು ಪ್ರಕಾಶಿಸುವ ಅನೇಕ ರತ್ನಗಳನ್ನೂ ಸಸ್ಯಗಳನ್ನೂ ಕರೆದನು. ಆಗ ಪ್ರಜೆಗಳೆಲ್ಲರೂ ಸೌಖ್ಯವನ್ನು ಪಡೆದವರಾದರು. ಎಲ್ಲೆಲ್ಲಿಯೂ ಮಹೋತ್ಸವಗಳು ನಡೆದುವು. ಮಂಗಳವರ್ಧಕಗಳಾದ ಯಜ್ಞದಾನಗಳೇ ಮೊದಲಾದ ಕಾರ್ಯಗಳು ನಡೆಯಲಾರಂಭಿಸಿದುವು. ಬಳಿಕ ರಾಜನು ತನ್ನಲ್ಲಿಯೇ ಚಿಂತಿಸಿದನು. ನಾನೆಂತಹ ಪಾಪವನ್ನು ಮಾಡಿದೆ! ಹೆಂಗಸರನ್ನು ವಧಿಸಲಾಗದು. ಹಸುವಾದರೊ ಅವಧ್ಯವು, ಬ್ರಾಹ್ಮಣನೂ ವಧಾರ್ಹನಲ್ಲ.

೧೮. ಭೂಮಿಯು ಸ್ತ್ರೀರೂಪವನ್ನು ಧರಿಸಿರುವಳು. ಬುದ್ಧಿಭ್ರಮಣೆಯಿಂದ ನಾನು ಇವಳನ್ನು ಹಿಂಸಿಸಿದೆ. ಗೋವನ್ನು ವಧಿಸುವುದರಲ್ಲಿಯೂ ಮನಸ್ಸು ಮಾಡಿದೆನು. ಆಹಾ! ಇದರಿಂದ ಪಾಪಪರಂಪರೆಯನ್ನೇ ಮಾಡಿದಂತಾ

ಏವಂ ಚಿಂತಯತಸ್ತಸ್ಯ ಪೃಥೋರಮಿತತೇಜಸಃ ।
ಆಜಗಾಮ ಪುನಸ್ತತ್ರ ನಾರದೋ ಭಗವಾನೃಷಿಃ ॥ ೧೯ ॥
ದೃಷ್ಟ್ವಾ ತಥಾವಿಧಂ ದೀನಂ ಚಿಂತಯಾನಂ ಪೃಥುಂ ಪ್ರಿಯೇ ।
ಉವಾಚ ನಾರದೋ ಧೀಮಾನ್ಕಿಮೇತದಿತಿ ಪಾರ್ಥಿವ ॥ ೨೦ ॥
ತತಃ ಸ ಕಥಯಾಮಾಸ ಮಯಾ ಪಾಪಮಿದಂ ಕೃತಂ ।
ಅವಧ್ಯಾ ಸ್ತ್ರೀ ಹತಾ ವಿಪ್ರ ಕೃತಾ ಬುದ್ಧಿಶ್ಚ ಗೋವಧೇ ॥ ೨೧ ॥
ಕಾಂಲ್ಲೋಕಾನ್ನು ಗಮಿಷ್ಯಾಮಿ ಕೃತ್ವಾ ಕರ್ಮ ಸುದಾರುಣಂ ।
ಮರಿಷ್ಯಾಮಿ ಸ ಸಂದೇಹೋ ಬ್ರಹ್ಮಹಾ ಪಾಪಪೂರುಷಃ ॥ ೨೨ ॥
ಅಥ ಚೇಷ್ಟೋಪದೇಶೇನ ದುಃಖಾದುದ್ಧರ ಮಾಂ ದ್ವಿಜ ।
ತಸ್ಯ ತದ್ವಚನಂ ಶ್ರುತ್ವಾ ಕಥಯಾಮಾಸ ನಾರದಃ ।
ಮಹಾಪಾಪಪ್ರಶಮನಂ ಲಿಂಗಮಾಹಾತ್ಮ್ಯಮುತ್ತಮಂ ॥ ೨೩ ॥
ಮಹಾಕಾಲವನೇ ಲಿಂಗಮಭಯೇಶ್ವರಪಶ್ಚಿಮೇ ।
ಮಹಾಪಾಪಕ್ಷಯಕರಂ ವಿದ್ಯತೇ ತತ್ರ ಭೂಪತೇ ।
ಗಚ್ಛ ತ್ವಂ ಸಹಸಾ ರಾಜಂಸ್ತತ್ರ ಪೂತೋ ಭವಿಷ್ಯಸಿ ॥ ೨೪ ॥

---

ಯಿತು. ಆದುದರಿಂದ ಚಿತೆಯನ್ನೊಡ್ಡಿ ಅಗ್ನಿಪ್ರವೇಶವನ್ನು ಮಾಡುವೆನು. ಇದರಲ್ಲಿ ಸಂದೇಹವಿಲ್ಲ.

೧೯. ಇಂತು ಅಪಾರಮಹಿಮನಾದ ಪೃಥುಚಕ್ರವರ್ತಿಯು ಚಿಂತಿಸುತ್ತಿರುವಂತೆಯೇ ಮಹರ್ಷಿಯಾದ ನಾರದನು ಅಲ್ಲಿಗೆ ಬಂದನು.

೨೦. ಪ್ರಿಯಳೆ! ಆ ನಾರದನು ಈ ವಿಧವಾಗಿ ದೈನ್ಯದಿಂದ ಚಿಂತಾಕ್ರಾಂತನಾಗಿದ್ದ ಆ ಪೃಥುವನ್ನು ಕಂಡು "ಪಾರ್ಥಿವನೆ! ನೀನು ಚಿಂತಿಸುತ್ತಿರುವುದೇನು?" ಎಂದು ಪ್ರಶ್ನೆಮಾಡಿದನು.

೨೧. ಆಗ ರಾಜನು ಹೇಳುತ್ತಾನೆ:—ನಾನು ಮಾಡಿದ ಪಾಪವನ್ನು ಹೇಳುತ್ತೇನೆ. ಅವಧ್ಯಳಾದ ಸ್ತ್ರೀಯನ್ನು ಪೀಡಿಸಿರುವೆನು. ಗೋವಧೆಯನ್ನು ಮಾಡುವ ಬುದ್ಧಿಯಲ್ಲಿಯೂ ತೊಡಗಿದೆನು.

೨೨. ಇಂತಹ ಅತಿ ಭಯಂಕರವಾದ ಕಾರ್ಯವನ್ನು ಮಾಡಿದ ನಾನು ಯಾವ ಲೋಕಗಳಿಗೆ ಹೋಗುವೆನೊ! ಬ್ರಹ್ಮಘಾತಕನೂ ಮಹಾಪಾತಕಿಯೂ ಆದ ನಾನು ಸಾಯಲಿರುವೆನು. ಇದರಲ್ಲಿ ಸಂದೇಹವಿಲ್ಲ.

೨೩. ಬ್ರಾಹ್ಮಣೋತ್ತಮನೆ! ಇಂತಹ ನನಗೆ ಪ್ರಿಯವಾದ ಉಪದೇಶವನ್ನು ಮಾಡಿ ನನ್ನನ್ನು ಈ ದುಃಖದಿಂದ ಉದ್ಧರಿಸು. ಆ ರಾಜೇಂದ್ರನ ಮಾತನ್ನು ಕೇಳಿ ನಾರದನು ಮಹಾಪಾತಕಗಳೆಲ್ಲವನ್ನೂ ಕಳೆಯುವ ಉತ್ತಮ ಲಿಂಗದ ಮಾಹಾತ್ಮ್ಯವನ್ನು ಹೇಳಿದನು.

೨೪. ಭೂಪಾಲಕನೆ! ಮಹಾಕಾಲವನಕ್ಷೇತ್ರದಲ್ಲಿ ಅಭಯೇಶ್ವರಲಿಂಗದ ಪಶ್ಚಿಮದಿಕ್ಕಿನಲ್ಲಿ ಮಹಾಪಾಪಗಳನ್ನೂ ನಾಶಮಾಡುವ ಲಿಂಗವೊಂದು ನೆಲಸಿ

ನಾರದಸ್ಯ ವಚಃ ಶ್ರುತ್ವಾ ಪೃಥುಸ್ತತ್ರ ಜಗಾಮ ಸಃ ।
ದೃಷ್ಟ್ವಾ ಲಿಂಗಂ ಚ ವೈ ರಮ್ಯಂ ವಿಪಾಪಸ್ತತ್ಕ್ಷಣಾದಭೂತ್ ॥ ೨೫ ॥
ದ್ವಾದಶಾದಿತ್ಯಸಂಕಾಶೋ ಬಭೂವ ಪೃಥಿವೀಪತಿಃ ॥ ೨೬ ॥
ತತೋಽಂತರಿಕ್ಷೆಗೈರ್ದೇವಿ ಕೃತಂ ನಾಮ ವರಾನನೇ ।
ಪೃಥುನಾ ಪೂಜಿತೋ ಯಸ್ಮಾದ್ಭವಿಷ್ಯತಿ ಮಹೀತಲೇ ।
ಅದ್ಯಪ್ರಭೃತಿ ವಿಖ್ಯಾತೋ ದೇವೋಽಯಂ ಪೃಥುಕೇಶ್ವರಃ ॥ ೨೭ ॥
ಯೇ ಚ ದ್ರಕ್ಷ್ಯಂತಿ ದೇವೇಶಂ ಪೃಥುಕೇಶ್ವರಮೀಶ್ವರಂ ।
ತೇ ಸರ್ವಕಾಮಸಂಪೂರ್ಣಾ ಭವಿಷ್ಯಂತಿ ಮಹೀತಲೇ ॥ ೨೮ ॥
ಅಜ್ಞಾನಾದ್ಜ್ಞಾನತೋ ವಾಽಪಿ ಯತ್ಪಾಪಂ ಜಾಯತೇ ನೃಣಾಂ ।
ತತ್ಪಾಪಂ ಯಾಸ್ಯತಿ ಕ್ಷಿಪ್ರಂ ಪೃಥುಕೇಶ್ವರದರ್ಶನಾತ್ ॥ ೨೯ ॥
ವಾಚಿಕಂ ಮಾನಸಂ ವಾಽಪಿ ಕಾಯಿಕಂ ಗುಹ್ಯಸಂಭವಂ ।
ಪ್ರಕಾಶಂ ವಾ ಕೃತಂ ಪಾಪಂ ಪ್ರಸಂಗಾದಪಿ ಯತ್ಕೃತಂ ।
ತತ್ಸರ್ವಂ ಯಾಸ್ಯತಿ ಕ್ಷಿಪ್ರಂ ಪೃಥುಕೇಶ್ವರದರ್ಶನಾತ್ ॥ ೩೦ ॥

---

ರುವುದು. ರಾಜೇಂದ್ರನೆ! ನೀನು ಶೀಘ್ರವಾಗಿ ಅಲ್ಲಿಗೆ ಹೋದರೆ ಪರಿಶುದ್ಧನಾಗುವೆ.

೨೫. ನಾರದನ ಈ ಮಾತನ್ನು ಕೇಳಿ ಪೃಥುಚಕ್ರವರ್ತಿಯು ಕೂಡಲೆ ಅಲ್ಲಿಗೆ ಹೋಗಿ ಆ ರಮ್ಯಲಿಂಗವನ್ನು ನೋಡಿದೊಡನೆಯೇ ಪಾಪರಹಿತನಾದನು.

೨೬. ಆ ಮಹಾರಾಜನು ಒಡನೆಯೆ ಹನ್ನೆರಡು ಆದಿತ್ಯರ ತೇಜಸ್ಸಿನೊಡನೆ ಕೂಡಿದವನಾಗಿ ಕಾಣುತ್ತಿದ್ದನು.

೨೭. ಎಲೌ ಪಾರ್ವತಿಯೆ! ಆಗ ಅಂತರಿಕ್ಷದಲ್ಲಿ ದೇವತೆಗಳು ಆ ಲಿಂಗಕ್ಕೆ ಹೆಸರನ್ನಿಟ್ಟರು. ಪೃಥುಮಹಾರಾಜನಿಂದ ಪೂಜಿತವಾದ ಈ ಲಿಂಗವು ಇಂದಿನಿಂದ ಪೃಥುಕೇಶ್ವರನೆಂದೇ ಭೂಲೋಕದಲ್ಲಿ ಪ್ರಖ್ಯಾತವಾಗುವುದು.

೨೮. ಯಾರು ಈ ಪೃಥುಕೇಶ್ವರಮಹಾದೇವನನ್ನು ನೋಡುವರೊ, ಅವರು ಈ ಲೋಕದಲ್ಲಿ ಸಮಸ್ತ ವಾಂಛಿತಗಳನ್ನೂ ಪಡೆದು ಸುಖಿಸುವರು.

೨೯. ಅಜ್ಞಾನದಿಂದಲಾಗಲಿ, ಬುದ್ಧಿಪೂರ್ವಕವಾದ ಕರ್ಮದಿಂದಾಗಲಿ, ನರರಿಗೆ ಯಾವ ಪಾತಕಗಳು ಅಂಟಿಕೊಂಡಿರುವುವೊ, ಅವುಗಳೆಲ್ಲವೂ ಈ ಪೃಥುಕೇಶ್ವರನನ್ನು ನೋಡಿದ ಕ್ಷಣದಲ್ಲಿಯೇ ನಾಶವಾಗುವುವು.

೩೦. ಮಾತಿನಿಂದಾಗಲಿ, ಮನಸ್ಸಿನಿಂದಾಗಲಿ, ದೇಹದಿಂದಾಗಲಿ, ಏಕಾಂತದಲ್ಲಾಗಲಿ, ಪ್ರಕಾಶವಾಗಿಯಾಗಲಿ, ಪ್ರಸಂಗವಶದಿಂದಾಗಲಿ ಮಾಡಿದ ಯಾವುದೇ ಪಾತಕವಾದರೂ ಪೃಥುಕೇಶ್ವರನ ದರ್ಶನದಿಂದ ಕ್ಷಿಪ್ರವಲ್ಲಿಯೇ ಸರ್ವವೂ ನಾಶವಾಗುವುದು.

ಪೂಜಯಿಷ್ಯಂತಿ ಯೇ ಭಕ್ತ್ಯಾ ದೇವಂ ವೈ ಪೃಥುಕೇಶ್ವರಂ ।
ರಾಜ್ಯಂ ಪ್ರಾಪ್ಸ್ಯಂತಿ ತೇ ಸಮ್ಯಕ್ ನೃಲೋಕೇ ಚ ತ್ರಿವಿಷ್ಟಪೇ ॥ ೩೧ ॥
ಭುಕ್ತ್ವಾ ರಾಜ್ಯಂ ಮನುಷ್ಯಾಣಾಂ ದೇವಾನಾಂ ಚ ಮಹೀತಲೇ ।
ಯಾಸ್ಯಂತಿ ಪರಮಂ ಸ್ಥಾನಂ ಬ್ರಹ್ಮಣಃ ಪರಮೇಷ್ಠಿನಃ ॥ ೩೨ ॥
ಇತ್ಯುಕ್ತ್ವಾ ದೇವಸಂಘೈಶ್ಚ ಪೂಜಿತಃ ಪೃಥುಕೇಶ್ವರಃ ।
ಪೃಥುಃ ಶಶಾಸ ಪೃಥಿವೀಂ ಸಪತ್ತನಾಂ ಸಪರ್ವತಾಂ ॥ ೩೩ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪೃಥುಕೇಶ್ವರದೇವಸ್ಯ ಶೃಣು ವೈ ಸ್ಥಾವರೇಶ್ವರಂ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪೃಥುಕೇಶ್ವರಮಾಹಾತ್ಮ್ಯವರ್ಣನಂ" ನಾಮೈಕೋನಪಂಚಾಶತ್ತಮೋಽಧ್ಯಾಯಃ

---

೩೧. ಯಾರು ಭಕ್ತಿಯಿಂದ ಪೃಥುಕೇಶ್ವರದೇವನನ್ನು ಪೂಜಿಸುವರೊ, ಅವರು ಇಹಲೋಕದಲ್ಲಿಯೂ, ಸ್ವರ್ಗದಲ್ಲಿಯೂ ರಾಜ್ಯಾಧಿಕಾರವನ್ನು ಪಡೆಯುವರು.

೩೨. ಮನುಷ್ಯ ಮತ್ತು ದೇವಲೋಕಗಳಲ್ಲಿ ಅವರು ರಾಜ್ಯಸೌಖ್ಯವನ್ನನುಭವಿಸಿದ ಮೇಲೆ ಪರಮೇಷ್ಠಿಯಾದ ಬ್ರಹ್ಮದೇವನ ಸರ್ವೋತ್ತಮವಾದ ಸ್ಥಾನವನ್ನು ಸೇರುವರು.

೩೩. ಇಂತೆಂದು ನುಡಿದು ದೇವತಾಗಣಗಳು ಪೃಥುಕೇಶ್ವರನನ್ನು ಪೂಜಿಸಿದರು. ಬಳಿಕ ಪೃಥುಚಕ್ರವರ್ತಿಯೂ ಪಟ್ಟಣಗಳು, ಪರ್ವತಗಳಿಂದ ಕೂಡಿರುವ ಈ ಭೂಮಂಡಲವನ್ನೆಲ್ಲ ಬಹುಕಾಲ ಆಳುತ್ತಿದ್ದನು.

೩೪. ದೇವಿಯೆ! ಇಂತು ಪೃಥುಕೇಶ್ವರಮಹಾದೇವನ ಪರಮಪಾವನವಾದ ಮಾಹಾತ್ಮ್ಯವನ್ನು ಹೇಳಿರುವೆನು. ಇನ್ನು ಸ್ಥಾವರೇಶ್ವರ ಮಹಾಲಿಂಗದ ಮಾಹಾತ್ಮ್ಯೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪೃಥುಕೇಶ್ವರಮಾಹಾತ್ಮ್ಯವರ್ಣನ" ವೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶತ್ತಮೋಽಧ್ಯಾಯಃ

### ಸ್ಥಾವರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಶೃಣು ದೇವಿ ಪ್ರಯತ್ನೇನ ಪಂಚಾಶತ್ತಮನಿಶ್ವರಂ ।
ಯಸ್ಯ ದರ್ಶನಮಾತ್ರೇಣ ಗ್ರಹಬಾಧಾ ನ ಜಾಯತೇ ॥ ೧ ॥
ಸಂಜ್ಞಾ ನಾಮ ರವೇರ್ಭಾರ್ಯಾ ಸಾ ಸುತಾ ವಿಶ್ವಕರ್ಮಣಃ ।
ಭರ್ತುಸ್ತೇಜೋಽಸಹಂತ್ಯಾಽಥ ಕದಾಚಿಚ್ಚೈವ ಸಂಜ್ಞಯಾ ।
ಛಾಯಾಮಯೀ ಚಾತ್ಮನಸ್ತು ನಿರ್ಮಿತಾ ತರಸಾ ತಯಾ ॥ ೨ ॥
ಸಾ ಪ್ರೋಕ್ತಾ ಸಾದರೇಣೈವ ಸ್ಥೀಯತಾಂ ಸೂರ್ಯಸನ್ನಿಧೌ ।
ಪೃಷ್ಟಯಾಽಪಿ ನ ವಾಚ್ಯಂ ತೇ ಮದೀಯಂ ಗಮನಂ ರವೇಃ ॥ ೩ ॥
ಇತ್ಯುಕ್ತ್ವಾ ಸಾ ತದಾ ಸಂಜ್ಞಾ ಜಗಾಮ ಭವನಂ ಪಿತುಃ ।
ಸಂಜ್ಞೇಯಮಿತಿ ಮನ್ವಾನೋ ದ್ವಿತೀಯಾಯಾಂ ದಿವಸ್ಪತಿಃ ।
ಜನಯಾಮಾಸ ತನಯಂ ನಾಮತೋ ಯಃ ಶನೈಶ್ಚರಃ ॥ ೪ ॥

---

### ಕನ್ನಡದ ಅನುವಾದ

#### ಸ್ಥಾವರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಐವತ್ತನೆಯ ಮಹಾಲಿಂಗವಾದ ಸ್ಥಾವರೇಶ್ವರನ ಕಥೆಯನ್ನು ಕೇಳು. ಅದನ್ನು ನೋಡಿದ ಮಾನವರಿಗೆ ನವಗ್ರಹಗಳ ಬಾಧೆಗಳುಂಟಾಗುವುದಿಲ್ಲ.

೨. ಸೂರ್ಯದೇವನಿಗೆ ವಿಶ್ವಕರ್ಮನ ಮಗಳಾದ ಸಂಜ್ಞಾದೇವಿಯೆಂಬ ಹೆಂಡತಿಯಿರುವಳು. ಗಂಡನ ತೇಜಸ್ಸನ್ನು ಸಹಿಸಲಾರದೆ ಆಕೆಯೊಮ್ಮೆ ಸಂಭ್ರಮಗೊಂಡು ತನ್ನ ಛಾಯೆಯಿಂದ ತನ್ನನ್ನೇ ಸರ್ವಾವಯವಗಳಲ್ಲಿಯೂ ಹೋಲುವ ಸ್ತ್ರೀರೂಪವನ್ನು ನಿರ್ಮಿಸಿದಳು.

೩. ಮತ್ತು ಆಕೆಗೆ ಆದರದಿಂದ "ನೀನು ಸೂರ್ಯನ ಸನ್ನಿಧಿಯಲ್ಲಿಯೇ ವಾಸಿಸುತ್ತಿರು; ಆತನು ಕೇಳಿದರೂ ನಾನು ಹೊರಟುಹೋಗಿರುವೆನೆಂಬುದನ್ನು ತಿಳಿಸಬೇಡ" ಎಂದು ಅಪ್ಪಣೆಯನ್ನಿತ್ತಳು.

೪. ಇಂತೆಂದು ಹೇಳಿ ಸಂಜ್ಞಾದೇವಿಯು ತನ್ನ ತಂದೆಯ ಮನೆಗೆ ಹೊರಟುಹೋದಳು. ಎರಡನೆಯ ಛಾಯಾದೇವಿಯನ್ನೇ ಸಂಜ್ಞೆಯೆಂದು ತಿಳಿದು ಸೂರ್ಯನು ಆಕೆಯಲ್ಲಿ ಕೂಡಿ ಶನೈಶ್ಚರನೆಂಬ ಹೆಸರಿನ ಮಗನೊಬ್ಬನನ್ನು ಪಡೆದನು.

ತಸ್ಮಿಂಜಾತೇ ಭಯಂ ಜಗ್ಮುಃ ಸದೇವಾಸುರಮಾನುಷಾಃ ।
ತ್ರೈಲೋಕ್ಯಂ ಜಾತಮಾತ್ರೇಣ ಆಕ್ರಾಂತಂ ಸಚರಾಚರಂ ॥ ೫ ॥
ಇಂದ್ರೋಽಪಿ ಭಯಸಂತ್ರಸ್ತೋ ಬ್ರಹ್ಮಾಣಂ ಶರಣಂ ಗತಃ ।
ಸೂರ್ಯಪುತ್ರಸ್ಯ ವೃತ್ತಾಂತಂ ಕಥಯಾಮಾಸ ಗದ್ಗದಂ ॥ ೬ ॥
ಭಿನ್ನಂ ತು ರೋಹಿಣೀಚಕ್ರಂ ವ್ಯಾಪ್ತಂ ನಕ್ಷತ್ರಮಂಡಲಂ ।
ಜಾತಮಾತ್ರೇಣ ಚಾಕ್ರಾಂತಂ ತ್ರೈಲೋಕ್ಯಂ ರವಿಸೂನುನಾ ॥ ೭ ॥
ವಾಸವಸ್ಯ ವಚಃ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಆಹೂಯ ಸಹಸಾ ಸೂರ್ಯಂ ವಚನಂ ಚೇದಮಬ್ರವೀತ್ ॥ ೮ ॥
ಮರ್ಯಾದಾ ಕ್ರಿಯತಾಂ ಭಾನೋ ವಾರ್ಯತಾಂ ಪುತ್ರ ಔರಸಃ ।
ಆಕ್ರಾಂತಂ ತೇಜಸಾ ತೇನ ತ್ರೈಲೋಕ್ಯಂ ಭೂರ್ಭುವಾದಿಕಂ ॥ ೯ ॥
ಬ್ರಹ್ಮಣೋ ವಚನಂ ಶ್ರುತ್ವಾ ರವಿಣಾ ಪ್ರೋಕ್ತಮೀದೃಶಃ ।
ಅಸಾಧ್ಯೋಽಯಂ ಮಮ ಸುತೋ ವಾರ್ಯತಾಂ ಸ್ವಯಮೇವ ತಂ॥೧೦॥

---

೫. ಅವನು ಹುಟ್ಟುತ್ತಲೇ ದೇವತೆಗಳೂ, ರಾಕ್ಷಸರೂ, ಮಾನವರೂ ಭಯಗೊಂಡರು. ಜನಿಸಿದ ಮಾತ್ರದಿಂದಲೇ ಅವನು ಚರಾಚರಪ್ರಾಣಿಗಳನ್ನೊಳಗೊಂಡ ಮೂರು ಲೋಕಗಳನ್ನೂ ಆಕ್ರಮಿಸಿಕೊಂಡನು.

೬. ಇಂದ್ರನೂ ಭಯದಿಂದ ನಡುಗುತ್ತ ಬ್ರಹ್ಮದೇವನಿಗೆ ಶರಣಾಗತನಾದನು. ಮತ್ತು ಗದ್ಗದಿತವಾದ ಧ್ವನಿಯಿಂದ ಆ ಸೂರ್ಯಪುತ್ರನ ವೃತ್ತಾಂತವನ್ನು ಬಿನ್ನವಿಸಿದನು.

೭. "ಎಲೌ ಚತುರ್ಮುಖನೆ! ಈ ಸೂರ್ಯಪುತ್ರನು ರೋಹಿಣೀಚಕ್ರವನ್ನು ಭೇದಿಸಿರುವನು. ನಕ್ಷತ್ರಮಂಡಲವನ್ನೆಲ್ಲ ಆವರಿಸಿರುವನು. ಹುಟ್ಟಿದ ಕ್ಷಣದಲ್ಲಿಯೆ ಮೂರು ಲೋಕಗಳನ್ನೂ ಆಕ್ರಮಿಸಿರುವನು."

೮. ಮಹೇಂದ್ರನ ಈ ಮಾತನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮದೇವನು ಆ ಕ್ಷಣದಲ್ಲಿಯೇ ಸೂರ್ಯನನ್ನು ಕರೆಯಿಸಿ ಈ ಮಾತುಗಳನ್ನು ಹೇಳಿದನು.

೯. "ಅಯ್ಯಾ ಸೂರ್ಯನೆ! ಲೋಕಗಳ ಮರ್ಯಾದೆಗಳನ್ನು ನಡೆಸಿಕೊಂಡು ಬಾ. ನಿನ್ನ ಮಗನನ್ನು ತಡೆಯಲ್ಲಿಟ್ಟಿರು. ಅವನು ತನ್ನ ತೇಜಸ್ಸಿನಿಂದ ಭೂಲೋಕ, ಭುವರ್ಲೋಕಗಳಾದಿಯಾಗಿ ಸಕಲ ಬ್ರಹ್ಮಾಂಡವನ್ನೂ ಆಕ್ರಮಿಸಿರುವನು."

೧೦. ಬ್ರಹ್ಮನ ಮಾತನ್ನು ಕೇಳಿ ಸೂರ್ಯನೂ ಇಂತೆಂದನು. "ನನ್ನ ಮಗನನ್ನು ತಡೆಯಲು ನನಗೂ ಅಸಾಧ್ಯವಾಗಿರುವುದು. ಅವನನ್ನು ನೀನೇ ಮಿತಿಯಲ್ಲಿಟ್ಟಿರು.

ಪಶ್ಯ ಮೇ ಚರಣೌ ದಗ್ಧೌ ದೃಷ್ಟಿಮಾತ್ರೇಣ ಲೀಲಯಾ ।
ಬ್ರಹ್ಮಾಽಪಿ ಭಯಸಂತ್ರಸ್ತೋ ಜಗಾಮ ಮನಸಾ ಹರಿಂ ॥ ೧೧ ॥
ಸೂರ್ಯಸ್ಯ ವಚನಂ ಶ್ರುತ್ವಾ ಹರಿಃ ಪ್ರಾಪ್ತಸ್ತು ತತ್ಕ್ಷಣಾತ್ ।
ಬ್ರಹ್ಮಣೋ ವಚನಂ ಶ್ರುತ್ವಾ ಭೀತಃ ಕೃಷ್ಣೋಽಬ್ರವೀದಿದಂ ॥ ೧೨ ॥
ಗಮ್ಯತಾಂ ತತ್ರ ಯತ್ರಾಸ್ತೇ ದೇವದೇವೋ ಮಹೇಶ್ವರಃ ।
ಕೃಷ್ಣಸ್ಯ ವಚನಾತ್ಸರ್ವೇ ಮಮಾಂತಿಕಮುಪಾಗತಾಃ ॥ ೧೩ ॥
ವೃತ್ತಾಂತಃ ಕಥಿತಃ ಸರ್ವೋ ರವಿಪುತ್ರಸ್ಯ ಪಾರ್ವತಿ ।
ಮಯಾ ಸ್ಮೃತಸ್ತು ಸಂಪ್ರಾಪ್ತಃ ಸೂರ್ಯಪುತ್ರಸ್ತು ತತ್ಕ್ಷಣಾತ್ ॥ ೧೪ ॥
ಅಧೋದೃಷ್ಟಿರ್ಮಯಾ ದೃಷ್ಟೋ ವಕ್ರಾಂಗೋ ರೂಪತೋಽಸಿತಃ ।
ಸ್ಥೈರ್ಯಂ ಕೃತ್ವಾ ನಮಸ್ಕೃತ್ಯ ವಿಜ್ಞಪ್ತೋಽಹಂ ಶನೈಃ ಶನೈಃ ॥ ೧೫ ॥
ಕಿಮರ್ಥಂ ವೈ ಸ್ಮೃತೋ ದೇವ ದೇಹ್ಯಾಜ್ಞಾಂ ಮಮ ಶಂಕರ ।
ಆದೇಶೇ ತವ ತಿಷ್ಠಾಮಿ ಕಿಂ ಕರೋಮಿ ಪ್ರಶಾಧಿ ಮಾಂ ॥ ೧೬ ॥

---

೧೧. ಇಲ್ಲಿ ನೋಡು. ಅವನು ಲೀಲೆಯಿಂದ ನೋಡಿದ ಮಾತ್ರಕ್ಕೇ ನನ್ನ ಕಾಲುಗಳೆರಡೂ ಸುಟ್ಟುಹೋದುವು.'' ಇದನ್ನು ಕೇಳಿ ಬ್ರಹ್ಮನೂ ಭಯಗೊಂಡು ಮನಸ್ಸಿನಲ್ಲಿಯೇ ಶ್ರೀಮನ್ನಾರಾಯಣನನ್ನು ಸ್ಮರಿಸಿದನು.

೧೨. ಸೂರ್ಯನ ಮಾತನ್ನು ಕೇಳಿ ಶ್ರೀಹರಿಯೂ ಕ್ಷಣಮಾತ್ರದಲ್ಲಿ ಅಲ್ಲಿಗೆ ಪ್ರಾಪ್ತನಾದನು. ಬ್ರಹ್ಮನ ಮಾತನ್ನು ಕೇಳಿ ಆತನೂ ಭಯಗೊಂಡು ಇಂತೆಂದನು.

೧೩. ದೇವಾಧಿದೇವನಾದ ಮಹೇಶ್ವರನು ಇರುವಲ್ಲಿಗೆ ನಾವೆಲ್ಲರೂ ಹೋಗೋಣವೆಂದ ನಾರಾಯಣನ ಮಾತಿನಂತೆ ಅವರೆಲ್ಲರೂ ನನ್ನ ಸಮೀಪಕ್ಕೆ ಬಂದರು.

೧೪. ಪಾರ್ವತಿಯೆ! ನನಗೆ ಸೂರ್ಯಪುತ್ರನ ವೃತ್ತಾಂತವೆಲ್ಲವನ್ನೂ ಹೇಳಿದರು. ನಾನು ಸ್ಮರಿಸಿದ ನಿಮಿಷದಲ್ಲಿಯೇ ಸೂರ್ಯನ ಮಗನೂ ಅಲ್ಲಿಗೆ ಬಂದು ಸೇರಿದನು.

೧೫. ಎದುರಿನಲ್ಲಿ ತಲೆಯನ್ನು ಬಾಗಿಸಿ ನಿಂತು ವಕ್ರಶರೀರಿಯೂ ಕಪ್ಪು ಬಣ್ಣದವನೂ ಆದ ಅವನನ್ನು ನೋಡಿದೆನು. ಅವನು ಧೈರ್ಯವನ್ನು ಮಾಡಿಕೊಂಡು ನನಗೆ ನಮಸ್ಕರಿಸಿ ಮೆಲ್ಲಮೆಲ್ಲಗೆ ವಿಜ್ಞಾಪಿಸಿಕೊಂಡನು.

೧೬. "ದೇವದೇವನಾದ ಶಂಕರನೆ! ಎತಕ್ಕಾಗಿ ನನ್ನನ್ನು ಸ್ಮರಿಸಿದೆ? ನನಗೆ ಅಪ್ಪಣೆಯನ್ನುಮಾಡು. ನಾನು ನಿನ್ನ ಅಧೀನದಲ್ಲಿರುವವನು. ಈಗೇನು ಮಾಡಬೇಕೆಂಬುದನ್ನು ಅನುಜ್ಞೆಮಾಡು.''

ಇತ್ಯುಕ್ತೋಽಹಂ ತದಾ ತೇನ ರವಿಪುತ್ರೇಣ ಪಾರ್ವತಿ ।
ಮಯಾ ಸ ವಾರಿತೋಽತ್ಯರ್ಥಂ ಮಾ ಪೀಡಯ ಜಗತ್ತ್ರಯಂ ॥ ೧೭ ॥
ತೇನೋಕ್ತಂ ದೇಹಿ ಮೇ ಸ್ಥಾನಂ ಪಾನಮಾಹಾರಮೇವ ಚ ।
ಮಯಾ ದತ್ತಂ ವಿಶಾಲಾಕ್ಷಿ ಪೂಜಾರ್ಥಂ ಸ್ಥಾನಮುತ್ತಮಂ ॥ ೧೮ ॥
ಮೇಷಾದಿರಾಶಿಸಂಸ್ಥಃ ಸಂಸ್ತ್ರಿಂಶನ್ಮಾಸಾನ್ಪ್ರಪೀಡಯ ।
ಮಾನುಷಾನ್ಕ್ರಮಶೋ ವತ್ಸ ತತ್ರ ತೃಪ್ತಿಮವಾಪ್ಸ್ಯಸಿ ॥ ೧೯ ॥
ಅಷ್ಟಮಶ್ಚ ಚತುರ್ಥಶ್ಚ ದ್ವಿತೀಯೋ ಜನ್ಮಸಂಸ್ಥಿತಃ ।
ದ್ವಾದಶರಾಶಿಸಂಸ್ಥೋಽಪಿ ವಿರುದ್ಧೋ ಭವ ಸರ್ವದಾ ॥ ೨೦ ॥
ಏಕಾದಶೋ ವಾ ಷಷ್ಠೋ ವಾ ತೃತೀಯಸ್ಥಾನಗೋಽಥ ವಾ ।
ಭವ ಭವ್ಯತರೋ ನೄಣಾಮತಃ ಪೂಜಾ ಭವಿಷ್ಯತಿ ॥ ೨೧ ॥
ಪಂಚಮೋ ನವಮಶ್ಚೈವ ಉದಾಸೀನಸ್ತು ಸಪ್ತಮಃ ।
ಭವರಾಶಿಗತೋ ನಿತ್ಯಂ ಮಾನುಷೇ ಕರ್ಮಭಿರ್ಯುತೇ ॥ ೨೨ ॥

---

೧೭. ದೇವಿಯೆ! ಸೂರ್ಯಪುತ್ರನು ಇಂತೆನ್ನಲು ನಾನು ಆತನಿಗೆ "ಇನ್ನು ಮೇಲೆ ಮೂರು ಲೋಕಗಳನ್ನೂ ವಿಶೇಷವಾಗಿ ಪೀಡಿಸಬೇಡ" ಎಂದು ಆದೇಶವನ್ನು ಮಾಡಿದೆನು.

೧೮. ಅವನು "ಹಾಗಾದರೆ ನನಗೊಂದು ಸ್ಥಾನವನ್ನೂ, ಪಾನವನ್ನೂ, ಆಹಾರವನ್ನೂ ಕೊಡು" ಎಂದು ಬೇಡಲು ನಾನು ಅವನಿಗೆ ಪೂಜೆಯು ನಡೆಯಲು ಉತ್ತಮವಾದ ಸ್ಥಾನವೊಂದನ್ನು ಕೊಟ್ಟೆನು.

೧೯. ಮತ್ತು ಹೇಳಿದೆನು. "ಮೇಷವೇ ಮೊದಲಾದ ಹನ್ನೆರಡು ರಾಶಿಗಳಲ್ಲಿ ಒಂದೊಂದರಲ್ಲಿಯೂ ಮುವ್ವತ್ತು ತಿಂಗಳು ವಾಸಮಾಡುತ್ತ ಜನಗಳನ್ನು ಪೀಡಿಸುತ್ತಿರು. ವತ್ಸನೆ! ಕ್ರಮವಾಗಿ ಮನುಷ್ಯರನ್ನು ಪೀಡಿಸುವುದರಿಂದ ನಿನಗೆ ತೃಪ್ತಿಯುಂಟಾಗುವುದು.

೨೦. ಜನ್ಮಲಗ್ನದಲ್ಲಿಯೂ, ಎರಡು, ನಾಲ್ಕು, ಎಂಟು, ಹನ್ನೆರಡನೆಯ ಮನೆಗಳಲ್ಲಿಯೂ ನೆಲಸಿರುವಾಗ ಸರ್ವಕಾಲದಲ್ಲಿಯೂ ಅಶುಭಗಳನ್ನೇ ಮಾಡುತ್ತಿರು.

೨೧. ಆದರೆ ಮೂರು, ಆರು, ಹನ್ನೊಂದನೆಯ ಮನೆಗಳಲ್ಲಿರುವಾಗ ಮನುಷ್ಯರಿಗೆ ಮಂಗಳವನ್ನುಂಟುಮಾಡು. ಆದರಿಂದ ನಿನಗೆ ಪೂಜೆಯು ಸಲ್ಲುತ್ತಿರುವುದು.

೨೨. ಐದು, ಏಳು ಮತ್ತು ಒಂಬತ್ತನೆಯ ಮನೆಗಳಲ್ಲಿದ್ದಾಗ ಯಾವಾಗಲೂ ಸ್ವಕರ್ತವ್ಯನಿಷ್ಠರಾದ ಮನುಷ್ಯರ ವಿಷಯದಲ್ಲಿ ಉದಾಸೀನನಾಗಿರು.

ಪೂಜಾಂ ಪ್ರಾಪ್ಸ್ಯಸಿ ಚಾತ್ಯರ್ಥಂ ಗ್ರಹಾಣಾಮಧಿಕಂ ಸದಾ ।
ಗತಿಃ ಸ್ಥಿರಾ ಭವಿತ್ರೀ ತೇ ವರಃ ಶ್ರೇಷ್ಠೋಽಭಿಧೀಯತೇ ॥ ೨೩ ॥
ಅತಸ್ತೇ ಸ್ಥಾವರಂ ನಾಮ ಭವಿಷ್ಯತಿ ಮಹೀತಲೇ ।
ಶನೈಶ್ಚರತ್ವಂ ರಾಶಿಸ್ಥೋ ಗ್ರಹಾಣಾಮಧಿಕೋ ಯತಃ ॥ ೨೪ ॥
ಅತಃ ಶನೈಶ್ಚರೋ ನಾಮ ಭವಿಷ್ಯಸಿ ಸದಾ ಭುವಿ ।
ಗಜಗಂಡನಿಭಾಕಾರೋ ಮಮ ಕಂಠಸಮೋಽಪಿ ಚ ॥ ೨೫ ॥
ವರ್ಣತೋ ಹ್ಯಸಿತೋ ನಾಮ ಭವಿಷ್ಯಸಿ ಮಹೀತಲೇ ।
ಗ್ರಹಮಧ್ಯೇ ಹ್ಯಧೋದೃಷ್ಟಿರ್ಗತಿರ್ಮಂದಾ ಭವಿಷ್ಯತಿ ।
ತುಷ್ಟೋ ದದಾಸಿ ರಾಜ್ಯಂ ಚ ರುಷ್ಟೋ ವೈ ಹರಸಿ ಕ್ಷಣಾತ್ ॥ ೨೬ ॥
ದೇವಾಸುರಮನುಷ್ಯಾಶ್ಚ ಸಿದ್ಧವಿದ್ಯಾಧರೋರಗಾಃ ।
ತ್ವತ್ಕ್ರೂರದೃಷ್ಟಿನಿಹತಾ ನಾಶಂ ಯಾಸ್ಯಂತಿ ನಾಽನ್ಯಥಾ ॥ ೨೭ ॥
ತವ ಪ್ರಸಾದಾತ್ಪ್ರಾಪ್ಸ್ಯಂತಿ ಮನೋಽಭೀಷ್ಟಂ ಸುದುರ್ಲಭಂ ।
ಅನ್ಯಚ್ಚ ತೇ ಪ್ರದಾಸ್ಯಾಮಿ ಸ್ಥಾನಂ ಗುಹ್ಯಂ ಮನೋಹರಂ ॥ ೨೮ ॥

---

೨೩. ಸಮಸ್ತಗ್ರಹಗಳಲ್ಲಿಯೂ ಯಾವಾಗಲೂ ನಿನಗೇ ವಿಶೇಷವಾದ ಪೂಜೆಯು ಸಲ್ಲುತ್ತಿರುವುದು. ಅಲ್ಲದೆ ಒಂದೊಂದು ರಾಶಿಯಲ್ಲಿಯೂ ನಿನ್ನ ಗತಿಯು ಮಂದವಾಗಿರುವುದು. ಇಂತಹ ಉತ್ತಮ ವರವನ್ನು ನಿನಗೆ ಕೊಟ್ಟಿರುವೆನು.

೨೪. ಆದುದರಿಂದ ನಿನಗೆ ಭೂಲೋಕದಲ್ಲಿ ಸ್ಥಿರನೆಂದೇ ಹೆಸರಾಗಿರುವುದು. ನಿನ್ನ ರಾಶಿಯಲ್ಲಿರುವ ಗ್ರಹಗಳಿಗೆಲ್ಲ ನೀನೇ ಉತ್ತಮನಾದುದರಿಂದ ನೀನು ಮಂದಗತಿಯುಳ್ಳವನಾಗಿರುವೆ.

೨೫. ಈ ಕಾರಣದಿಂದ ನಿನಗೆ ಶನೈಶ್ಚರನೆಂದೇ ಹೆಸರೂ ಬರುವುದು. ಆನೆಯ ಗಂಡಸ್ಥಳದಂತೆ ಆಕಾರವುಳ್ಳವನೂ, ನನ್ನ ಕಂಠವನ್ನು ಹೋಲುವ ಬಣ್ಣದವನೂ ಆಗಿರುವೆ.

೨೬. ವೈ ಬಣ್ಣದಿಂದ ನಿನಗೆ ಅಸಿತನೆಂಬ ಹೆಸರೂ ಪ್ರಖ್ಯಾತವಾಗಿರುವುದು. ಗ್ರಹಗಳಲ್ಲೆಲ್ಲ ನಿನಗೆ ಅಧೋದೃಷ್ಟಿಯೂ, ಅತ್ಯಂತ ಮಂದಗಮನವೂ ಇರುವುವು. ಸಂತುಷ್ಟನಾದರೆ ನೀನು ರಾಜ್ಯವನ್ನೂ ಕೊಡುವೆ. ಕೋಪಗೊಂಡರೆ ನಿಮಿಷದಲ್ಲಿಯೇ ಕಿತ್ತುಕೊಳ್ಳುವೆ.

೨೭. ದೇವತೆಗಳು, ರಾಕ್ಷಸರು, ಮನುಷ್ಯರು, ಸಿದ್ಧರು, ವಿದ್ಯಾಧರರು, ಉರಗರು ಮುಂತಾದವರಲ್ಲಿ ಯಾರೇ ಆಗಲಿ, ನಿನ್ನ ಕ್ರೂರದೃಷ್ಟಿಪಾತಕ್ಕೆ ಗುರಿಯಾದರೆ ನಾಶವನ್ನು ಹೊಂದುವರು. ಇದರಲ್ಲಿ ಸಂದೇಹವಿಲ್ಲ.

೨೮. ನಿನ್ನ ಅನುಗ್ರಹದಿಂದ ಅತಿದುರ್ಲಭಗಳಾದ ವಾಂಛಿತಗಳನ್ನೂ ಪಡೆ

ಮನೋಽಭೀಷ್ಟಕರಂ ಪುಣ್ಯಂ ದೇವದಾನವದುರ್ಲಭಂ ।
ಪ್ರಲಯೇಽಪ್ಯಕ್ಷಯಂ ಪ್ರೋಕ್ತಂ ಮಹಾಕಾಲವನಂ ಪರಂ ॥ ೨೯ ॥
ತತ್ರ ಗಚ್ಛ ಮಮಾದೇಶಾತ್ಪೃಥುಕೇಶ್ವರಪಶ್ಚಿಮೇ ।
ವಿದ್ಯತೇ ತತ್ರ ಯಲ್ಲಿಂಗಂ ತತ್ತೇ ನಾಮ್ನಾ ಭವಿಷ್ಯತಿ ॥ ೩೦ ॥
ಕೀರ್ತಿರೇಷಾ ತ್ವದೀಯಾಽಪಿ ತ್ರೈಲೋಕ್ಯೇ ಭವಿತಾ ಧ್ರುವಂ ॥ ೩೧ ॥
ಇತ್ಯುಕ್ತಃ ಸ್ಥಾವರೋ ದೇವಿ ಮಮಾಜ್ಞಾಪಾಲಕಸ್ತದಾ ।
ಜಗಾಮ ತ್ವರಿತೋ ರಮ್ಯಂ ಮಹಾಕಾಲವನಂ ಶುಭಂ ॥ ೩೨ ॥
ದೃಷ್ಟ್ವಾ ತತ್ರೈವ ತಲ್ಲಿಂಗಂ ಸ್ಥಾನಂ ಲಬ್ಧಂ ಸುಶೋಭನಂ ।
ತಲ್ಲಿಂಗಂ ಭುವನೇ ಖ್ಯಾತಂ ನಾಮತಃ ಸ್ಥಾವರೇಶ್ವರಂ ॥ ೩೩ ॥
ಶನಿನೋಕ್ತಂ ತದಾ ದೇವಿ ಯೇಽತ್ರ ದ್ರಕ್ಷ್ಯಂತಿ ಭಕ್ತಿತಃ ।
ಮಯಾ ಪ್ರಪೂಜಿತಂ ಲಿಂಗಂ ವಿಖ್ಯಾತಂ ಸ್ಥಾವರೇಶ್ವರಂ ।
ತೇಷಾಂ ಪೀಡಾ ಮದೀಯಾ ತು ನ ಭವಿಷ್ಯತಿ ಕರ್ಹಿಚಿತ್ ॥ ೩೪ ॥

---

ಯುವರು. ಅಲ್ಲದೆ ನಿನಗೆ ಏಕಾಂತವೂ, ಮನೋಹರವೂ ಆದ ಮತ್ತೊಂದು ಸ್ಥಾನವನ್ನು ಕೊಡುವೆನು.

೨೯. ಮನೋಭೀಷ್ಟಪ್ರದವೂ, ಪುಣ್ಯಭರಿತವೂ ಆದ ಆ ಪ್ರದೇಶವು ದೇವ ದಾನವರಿಗೂ ಅಲಭ್ಯವಾಗಿರುವುದು. ಉತ್ತಮವಾದ ಮಹಾಕಾಲವನವು ಪ್ರಳಯದಲ್ಲಿಯೂ ನಾಶವನ್ನು ಹೊಂದುವುದಿಲ್ಲವೆಂದು ಹೇಳಿದೆ.

೩೦. ನನ್ನ ಅನುಜ್ಞೆಯಂತೆ ನೀನು ಅಲ್ಲಿಗೆ ಹೋಗು. ಪೃಥುಕೇಶ್ವರನಿಗೆ ಪಶ್ಚಿಮದಲ್ಲಿ ಒಂದು ಲಿಂಗವಿರುವುದು. ಅದು ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವುದು.

೩೧. ನಿನ್ನ ಕೀರ್ತಿಯೂ ಮೂರು ಲೋಕಗಳಲ್ಲಿಯೂ ಶಾಶ್ವತವಾಗಿ ವಿಸ್ತರಿಸಿರುವುದು.''

೩೨. ಇಂತೆಂದ ನನ್ನ ಅಪ್ಪಣೆಯನ್ನು ಪಾಲಿಸತಕ್ಕವನಾಗಿ ಶನಿಯು ತ್ವರಿತವಾಗಿ ರಮ್ಯವೂ ಶುಭಪ್ರದವೂ ಆದ ಮಹಾಕಾಲವನಕ್ಕೆ ಬಂದು ಸೇರಿದನು.

೩೩. ಅಲ್ಲಿ ಈಶ್ವರನು ಗುರುತುಹೇಳಿದ್ದ ಲಿಂಗವನ್ನು ನೋಡಿ ಅತಿ ಪವಿತ್ರವಾದ ಆ ಸ್ಥಳದಲ್ಲಿಯೇ ನೆಲೆಯನ್ನು ಮಾಡಿಕೊಂಡನು. ಆ ಲಿಂಗವೇ ಭೂಲೋಕದಲ್ಲಿ ಸ್ಥಾವರೇಶ್ವರವೆಂಬ ಹೆಸರಿನಿಂದ ಪ್ರಖ್ಯಾತವಾಯಿತು.

೩೪. ದೇವಿಯೆ! ಆಗ ಶನಿದೇವನು ಹೇಳಿದನು. "ನನ್ನಿಂದ ಪೂಜಿತವಾಗಿ ಸ್ಥಾವರೇಶ್ವರವೆಂದು ವಿಖ್ಯಾತವಾಗಿರುವ ಈ ಲಿಂಗವನ್ನು ಯಾರು ಭಕ್ತಿಭರಿತರಾಗಿ ನೋಡುವರೊ, ಅವರಿಗೆ ನನ್ನಿಂದ ಎಂದಿಗೂ ಪೀಡೆಯುಂಟಾಗಲಾರದು.

ಮದೀಯೇ ಚ ದಿನೇ ಯೋ ವೈ ನಿಯಮೇನ ಪ್ರಪಶ್ಯತಿ ।
ತಸ್ಯಾಽಹಂ ಸಕಲಾಂ ಬಾಧಾಂ ಶಮಯಿಷ್ಯಾಮ್ಯಸಂಶಯಂ ॥ ೩೫ ॥
ಧಕ್ಷ್ಯಾಮಿ ಸತತಂ ಪೀಡಾಮನ್ಯಗ್ರಹಕೃತಾಮಪಿ ।
ಮದೀಯಂ ಚ ಭಯಂ ತಸ್ಯ ಸ್ವಪ್ನೇಽಪಿ ನ ಭವಿಷ್ಯತಿ ॥ ೩೬ ॥
ನ ಗ್ರಹಾ ನ ಪಿಶಾಚಾಶ್ಚ ನ ಯಕ್ಷಾ ನ ಚ ರಾಕ್ಷಸಾಃ ।
ವಿಘ್ನಂ ಕುರ್ವಂತಿ ತಸ್ಯಾಽಪಿ ಮಯಿ ತುಷ್ಟೇ ನ ಸಂಶಯಃ ॥ ೩೭ ॥
ಸಂಕ್ರಾಂತೌ ಶನಿವಾರೇ ಚ ವ್ಯತೀಪಾತೇಽಯನೇ ತಥಾ ।
ಯೇ ಪಶ್ಯಂತಿ ನರಾ ಭಕ್ತ್ಯಾ ಲಿಂಗಂ ವೈ ಸ್ಥಾವರೇಶ್ವರಂ ।
ಭವಿಷ್ಯತ್ಯಕ್ಷಯಸ್ತೇಷಾಂ ಸ್ಥಿರೋ ವಾಸಸ್ತ್ರಿವಿಷ್ಟಪೇ ॥ ೩೮ ॥
ನಿಯಮೇನ ಪ್ರಪಶ್ಯಂತಿ ಮಮ ವಾರೇಽತ್ರ ಯೇ ನರಾಃ ।
ನ ತೇಷಾಂ ದುಷ್ಕೃತಂ ಕಿಂಚಿದ್ದುಷ್ಕೃತೋತ್ಥಾ ನ ಚಾಪದಃ ॥ ೩೯ ॥
ಭವಿಷ್ಯತಿ ನ ದಾರಿದ್ರ್ಯಂ ನ ಚೈವೇಷ್ಟವಿಯೋಜನಂ ।
ದಾಸ್ಯಾಮಿ ಪುತ್ರಕಾಮಸ್ಯ ಫಲಂ ಪುತ್ರಕೃತಂ ಸದಾ ॥ ೪೦ ॥

---

೩೫. ನನ್ನ ವಾರದ ದಿನದಲ್ಲಿ ಯಾವ ಮಾನವನು ನಿಯಮದಿಂದ ಈ ಲಿಂಗವನ್ನು ನೋಡುವನೊ, ಅವನ ಸಕಲಗ್ರಹಪೀಡೆಗಳನ್ನೂ ನಾನು ಪರಿಹರಿಸುವುದರಲ್ಲಿ ಸಂಶಯವಿಲ್ಲವು.

೩೬. ಇತರ ಗ್ರಹಗಳು ಮಾಡುವ ಪೀಡೆಯನ್ನೂ ಸಹ ನಿತ್ಯವೂ ನಾನು ಸುಟ್ಟು ಹಾಕುತ್ತಿರುವೆನು. ನನ್ನ ಭಯವಂತೂ ಅವನಿಗೆ ಸ್ವಪ್ನದಲ್ಲಿಯೂ ಉಂಟಾಗಲಾರದು.

೩೭. ನಾನು ಸಂತುಷ್ಟನಾಗಿರಲು ಮಾನವನಿಗೆ ಗ್ರಹಗಳೂ, ಪಿಶಾಚಗಳೂ, ಯಕ್ಷರೂ, ರಾಕ್ಷಸರೂ ಯಾವ ವಿಘ್ನಗಳನ್ನೂ ಉಂಟುಮಾಡಲಾರರೆಂಬುದರಲ್ಲಿ ಸಂದೇಹವಿಲ್ಲವು.

೩೮. ಸಂಕ್ರಮಣದಿನಗಳು, ಶನಿವಾರಗಳು, ವ್ಯತೀಪಾತದ ದಿನಗಳು, ಉತ್ತರಾಯಣ ದಕ್ಷಿಣಾಯನಗಳು ಇವುಗಳಲ್ಲಿ ಯಾವ ನರರು ಭಕ್ತಿಯಿಂದ ಸ್ಥಾವರೇಶ್ವರ ಮಹಾಲಿಂಗವನ್ನು ನೋಡುವರೊ, ಅವರಿಗೆ ಅಕ್ಷಯವೂ, ಏಕಪ್ರಕಾರವೂ ಆದ ಸ್ವರ್ಗಲೋಕವಾಸವು ಲಭಿಸುವುದು.

೩೯-೪೦. ನನ್ನ ದಿವಸದಲ್ಲಿ ಯಾರು ನಿಯಮಪೂರ್ವಕವಾಗಿ ಈ ಲಿಂಗದ ದರ್ಶನವನ್ನು ಮಾಡುವರೊ, ಅವರಿಗೆ ಪಾತಕಗಳಾಗಲಿ ಪಾಪಗಳ ಫಲಗಳಾದ ಆಪತ್ತುಗಳಾಗಲಿ ಸಂಭವಿಸುವುದಿಲ್ಲ. ಅಂತಹವನಿಗೆ ದಾರಿದ್ರ್ಯವಾಗಲಿ ಇಷ್ಟವಸ್ತುಗಳ ಅಗಲಿಕೆಯಾಗಲಿ ಉಂಟಾಗುವುದಿಲ್ಲ. ಪುತ್ರಾಭಿಲಾಷೆಯುಳ್ಳವನಿಗೆ ಪುತ್ರನಿಂದಾಗುವ ಸೌಖ್ಯವನ್ನು ಕೊಡುವೆನು.

ಅಧನಸ್ಯ ಧನಂ ಚೈವ ಭಯಾರ್ತಸ್ಯಾಽಭಯಂ ತಥಾ ।
ಸ್ವರ್ಗಂ ವೈ ಸ್ವರ್ಗಕಾಮಸ್ಯ ಪ್ರಯಚ್ಛಾಮಿ ಚ ವಾಂಛಿತಂ ॥ ೪೧ ॥
ಇತ್ಯುಕ್ತ್ವಾ ಪೂಜಯಾಮಾಸ ಭೂಯೋ ಲಿಂಗಂ ಶನೈಶ್ಚರಃ ।
ಪೂಜಯಿತ್ವಾ ಶುಭೈಃ ಪುಷ್ಪೈರ್ಭಕ್ತ್ಯಾ ತತ್ರೈವ ಸಂಸ್ಥಿತಃ ॥ ೪೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸ್ಥಾವರೇಶ್ವರದೇವಸ್ಯ ಶೂಲೇಶ್ವರಮಥೋ ಶೃಣು ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸ್ಥಾವರೇಶ್ವರಮಾಹಾತ್ಮ್ಯವರ್ಣನಂ" ನಾಮ
ಪಂಚಾಶತ್ತಮೋಽಧ್ಯಾಯಃ

---

೪೧. ದರಿದ್ರನಿಗೆ ಧನವನ್ನೂ, ಭಯಭ್ರಾಂತನಿಗೆ ಅಭಯವನ್ನೂ, ಸ್ವರ್ಗಾಪೇಕ್ಷಿಯಾದವನಿಗೆ ಸ್ವರ್ಗವಾಸವನ್ನೂ, ಸಮಸ್ತರಿಗೂ ಅವರವರ ಅಭೀಷ್ಟಗಳನ್ನೂ ಕೊಡುತ್ತಿರುವೆನು."

೪೨. ಇಂತು ನುಡಿದ ಬಳಿಕ ಆ ಶನೈಶ್ಚರನು ಮತ್ತೆ ಭಕ್ತಿಯಿಂದ ಉತ್ತಮ ಪುಷ್ಪಗಳನ್ನು ತಂದು ಆ ಲಿಂಗವನ್ನು ಪೂಜಿಸಿ ಅಲ್ಲಿಯೇ ನೆಲಸಿದನು.

೪೩. ದೇವಿಯೆ! ಇಂತು ನಿನಗೆ ಸ್ಥಾವರೇಶ್ವರಮಹಾದೇವನ ಪಾಪನಾಶಕವಾದ ಪ್ರಭಾವವನ್ನು ಹೇಳಿರುವೆನು. ಶೂಲೇಶ್ವರಲಿಂಗದ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸ್ಥಾವರೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಪಂಚಾಶತ್ತಮೋಽಧ್ಯಾಯಃ

### ಶೂಲೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಏಕಾಽಧಿಕಂ ವಿಜಾನೀಹಿ ಪಂಚಾಶತ್ತಮನಿಶ್ವರಂ ।
ದೇವಂ ಶೂಲೇಶ್ವರಂ ದೇವಿ ಸರ್ವವ್ಯಾಧಿವಿನಾಶನಂ ॥ ೧ ॥
ಆದ್ಯೇ ಕಲ್ಪೇ ಪ್ರವೃತ್ತೇ ಚ ರಾಜ್ಯಹೇತೋರ್ವರಾನನೇ ।
ದೇವಾನಾಂ ದಾನವಾನಾಂ ಚ ಯುದ್ಧಮಾಸೀತ್ಸುದಾರುಣಂ ।
ದೈತ್ಯಾನಾಮೀಶ್ವರೇ ಜಂಭೇ ದೇವಾನಾಂ ಚ ಶಚೀಪತೌ ॥ ೨ ॥
ತತೋ ದೇವಾಃ ಪರಾಭೂತಾ ದೈತ್ಯಾ ವಿಜಯಿನೋಽಭವನ್ ।
ಅಂಧಕೋ ಮಂದರಂ ಪ್ರಾಪ್ತೋ ದೂತಂ ಮೇ ಪ್ರಾಹಿಣೋತ್ತದಾ ॥ ೩ ॥
ಸ ದೂತೋ ಮಾಮುವಾಚೋಚ್ಚೈಃ ಸಗರ್ವೋ ದುಷ್ಟಮಾನಸಃ ।
ಅಂಧಕೇನಾಽಹಮಾದಿಷ್ಟಃ ಶೃಣು ಶಂಕರ ಮದ್ವಚಃ ॥ ೪ ॥
ಗೌರೀಂ ಮೇ ದೇಹಿ ಪತ್ನ್ಯರ್ಥಂ ಮಂದರಸ್ತ್ಯಜ್ಯತಾಮಯಂ ।
ಏವಂ ಕೃತೇ ಕೃತಾರ್ಥಸ್ತ್ವಮನ್ಯಥಾ ನಾಽಸ್ತಿ ತೇ ಗತಿಃ ॥ ೫ ॥

---

### ಕನ್ನಡದ ಅನುವಾದ

#### ಶೂಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಐವತ್ತೊಂದನೆಯದೇ ಸರ್ವರೋಗನಿವಾರಕವಾದ ಶೂಲೇಶ್ವರಮಹಾಲಿಂಗವೆಂದು ತಿಳಿದುಕೊ.

೨. ಮಂಗಳಮುಖಿಯೆ! ಮೊದಲನೆಯ ಕಲ್ಪದಲ್ಲಿ ತ್ರೈಲೋಕ್ಯ ರಾಜ್ಯಾಧಿಕಾರಕ್ಕಾಗಿ ದೇವತೆಗಳಿಗೂ, ದಾನವರಿಗೂ ಮಹಾಭಯಂಕರವಾದ ಯುದ್ಧವು ಹವಣಿಸಿತು. ದೈತ್ಯಾಧಿಪತಿಯಾದ ಜಂಭಾಸುರನು ದೇವತೆಗಳ ಸೇನಾಪತಿಯಾದ ಮಹೇಂದ್ರನೊಡನೆ ಹೋರಾಡಿದನು.

೩. ಆ ಯುದ್ಧದಲ್ಲಿ ದೇವತೆಗಳು ಅಪಜಯವನ್ನು ಹೊಂದಿ ದಾನವರಿಗೇ ಜಯವು ಲಭಿಸಿತು. ಅಂಧಕಾಸುರನು ಮಂದರಪರ್ವತಕ್ಕೆ ಬಂದು ನನ್ನ ಬಳಿಗೆ ದೂತನನ್ನು ಕಳುಹಿಸಿದನು.

೪. ದುಷ್ಟಬುದ್ಧಿಯಾದ ಆ ದೂತನು ಗರ್ವದಿಂದ ನನಗೆ ದೊಡ್ಡ ಧ್ವನಿ ಯಲ್ಲಿ ಹೇಳಿದನು. "ನಾನು ಅಂಧಕಾಸುರನಿಂದ ಸಂದೇಶವನ್ನು ತಂದಿರುವೆನು. ಅವನ್ನೀಗ ಹೇಳುವೆನು; ಕೇಳು. ಶಂಕರನೆ! ನನ್ನ ಮಾತನ್ನು ಕೇಳು.

೫. ಗೌರಿಯನ್ನು ನನ್ನ ಪತ್ನಿಯಾಗಿ ಒಪ್ಪಿಸಿ ಈ ಮಂದರಪರ್ವತವನ್ನು

ಉಕ್ತೋಽಹಂ ತೇನ ದೂತೇನ ತ್ವಯಾ ಸಹ ಮಹಾಗಿರೌ ।
ಸ್ಮಿತಾನನಃ ಕ್ಷಣಂ ಭೂತ್ವಾ ಮಯಾ ಪ್ರೋಕ್ತಮಿದಂ ವಚಃ ॥ ೬ ॥
ಗಚ್ಛ ದೂತ ಮಮಾದೇಶಾದಂಧಕಂ ಬ್ರೂಹಿ ಸತ್ವರಂ ।
ಇಹಾಽಭ್ಯೇತ್ಯಾಹವಂ ಕೃತ್ವಾ ಜಿತ್ವೇಮಾಂ ಸುಂದರೀಂ ನಯ ।
ಇತ್ಯುಕ್ತಃ ಪ್ರಯಯೌ ದೂತಸ್ತೇನಾಖ್ಯಾತಂ ವಚೋ ಮಮ ॥ ೭ ॥
ಅಂಧಕೋಽಪಿ ತದಾ ದೈತ್ಯಃ ಸಮರಾರ್ಥೀ ತು ಮಂದರಂ ।
ಸಮಾಯಾತಃ ಸಹಾಽಮಾತ್ಯೋ ಬಲೇನ ಚತುರಂಗಿಣಾ ॥ ೮ ॥
ಮಯಾ ಸಹ ತತಸ್ತಸ್ಯ ಘೋರಂ ಯುದ್ಧಮಭೂಚ್ಚಿರಂ ।
ಅಂಧಕಸ್ಯ ರಥೋ ಘೋರಶ್ಛಿನ್ನೋ ಭಿನ್ನಃ ಸಮಂತತಃ ॥ ೯ ॥
ತತಃ ಕ್ರುದ್ಧೋಽಂಧಕೋ ದೇವಿ ರಥಾತ್ತಸ್ಮಾದವಪ್ಲುತಃ ।
ಮದ್ರಥಂ ಬಲವಾನ್ಗೃಹ್ಯ ಮಯಾ ಸಹ ಬಲೋತ್ಕಟಃ ।
ಯುಯುಧೇ ಸ ಮಹಾದೈತ್ಯಃ ಶೂಲೇನ ತಾಡಿತೋ ಮಯಾ ॥ ೧೦ ॥

---

ಬಿಟ್ಟು ಹೊರಡು. ಹೀಗೆ ಮಾಡಿದರೆ ನಿನಗೆ ಸೌಖ್ಯವುಂಟು. ಇಲ್ಲದಿದ್ದರೆ ನಿನಗೆ ಗತಿಯೇ ಇಲ್ಲ.''

೬. ಆ ಮಹಾಪರ್ವತದಲ್ಲಿ ನಿನ್ನೊಡನಿದ್ದ ನನಗೆ ಆ ದೂತನು ಹೀಗೆ ಹೇಳಲು ನಾನು ಒಂದು ಕ್ಷಣಕಾಲ ನಸುನಗುತ್ತ ಪ್ರತ್ಯುತ್ತರವನ್ನು ಹೇಳಿ ಕಳುಹಿಸಿದೆನು.

೭. ''ದೂತನೆ! ಹೊರಡು. ನನ್ನ ಸಂದೇಶವನ್ನು ಶೀಘ್ರವಾಗಿ ಅಂಧಕಾಸುರನಿಗೆ ತಿಳಿಸು. ಇಲ್ಲಿಗೆ ಬಂದು ಯುದ್ಧವನ್ನು ಮಾಡಿ ಜಯವನ್ನು ಪಡೆದು ಈ ಸುಂದರಿಯನ್ನು ಕರೆದುಕೊಂಡುಹೋಗಲಿ.'' ಇಂತು ನಾನು ಹೇಳಲು ದೂತನು ಹೊರಟು ರಾಕ್ಷಸನಿಗೆ ನನ್ನ ಮಾತೆಲ್ಲವನ್ನೂ ಹೇಳಿದನು.

೮. ಅಂಧಕದೈತ್ಯನೂ ಯುದ್ಧವನ್ನು ಮಾಡಲೆಳಸಿ ಚತುರಂಗಬಲಪರಿವೃತನಾಗಿ ಮಂತ್ರಿಗಳೊಡನೆ ಮಂದರಪರ್ವತಕ್ಕೆ ಬಂದನು. ನನ್ನೊಡನೆ ಅವನ ಯುದ್ಧವು ಭಯಂಕರವಾಗಿ ಬಹಳಕಾಲದವರೆಗೂ ನಡೆಯಿತು.

೯. ಅಂಧಕನ ಮಹಾರಥವು ಎಲ್ಲೆಲ್ಲಿಯೂ ಮುರಿದು ನುಚ್ಚುನುಗ್ಗಾಯಿತು. ದೇವಿಯೆ! ಅದರಿಂದ ಖತಿಗೊಂಡ ಅಂಧಕನು ಅದನ್ನು ಬಿಟ್ಟು ಹಾರಿದನು.

೧೦. ಬಲಶಾಲಿಯೂ ಮದೋತ್ಕಟನೂ ಆದ ಅವನು ನನ್ನ ರಥವನ್ನು ಹಿಡಿದುಕೊಂಡು ಯುದ್ಧಮಾಡುತ್ತಿರಲು ನಾನು ಅವನನ್ನು ನನ್ನ ಶೂಲದಿಂದ ಹೊಡೆದೆನು. ತರುವಾಯ ಅವನನ್ನು ಆಕಾಶದಲ್ಲಿ ಎತ್ತಿ ಹಿಡಿದು ಅವನನ್ನು ಶೂಲಕ್ಕೆ ಸಿಕ್ಕಿಸಿ ಹಿಡಿದುಕೊಂಡೆನು.

ಮಯಾ ಧೃತೋಽಂತರಿಕ್ಷೇ ಸ ಶೂಲಪ್ರೋತೋ ಮಹಾಸುರಃ ।
ಶೂಲಪ್ರೋತೋಽಥ ವೈ ದುಷ್ಟಸ್ತಾವತ್ಸ ಭ್ರಾಮಿತೋ ಮಯಾ ॥ ೧೧ ॥
ಸುಸ್ರಾವ ತಸ್ಯ ಗಾತ್ರೇಭ್ಯಃ ಶೋಣಿತೌಘಸ್ತತೋ ಮಹಾನ್ ।
ಬಿಂದೌ ಬಿಂದೌ ತು ರಕ್ತಸ್ಯ ತತ್ತುಲ್ಯಾ ದಾನವಾಸ್ತಥಾ ॥ ೧೨ ॥
ಸಂಭೂತಾಃ ಕೋಟಿಶೋ ದೇವಿ ತೈರಹಂ ಪುನರರ್ದಿತಃ ।
ಕಿಂ ಕರ್ತವ್ಯಮಿತಿಧ್ಯಾಯನ್ಸ್ಥಿತೋಽಹಂ ತತ್ರ ಭಾಮಿನಿ ॥ ೧೩ ॥
ಮಯಾ ಚೋತ್ಪಾದಿತಾ ದುರ್ಗಾ ರಕ್ತದಂತಾ ಸುಭೀಷಣಾ ।
ಅಂಧಕಸ್ಯ ತದಾ ಪೀತಂ ರಕ್ತಂ ಬಹುವಿಧಂ ತಯಾ ॥ ೧೪ ॥
ತಸ್ಮಿನ್ಪೀತೇ ತತೋ ರಕ್ತೇ ನೋತ್ತಸ್ಥುರ್ದೇವಿ ಚಾಽಪರೇ ।
ಪೂರ್ವೋತ್ಥಿತಾಸ್ತಯೈವಾಶು ನಿಹತಾ ದಾನವಾಧಿಪಾಃ ।
ತೇನ ಶೂಲವರೇಣೈವ ತತ್ಕ್ಷಣಾನ್ನಿಧನಂ ಗತಾಃ ॥ ೧೫ ॥
ಸ ಮಾಮುವಾಚ ಹೃಷ್ಟಾತ್ಮಾ ಕೃತಾಂಜಲಿಪುಟೋಽಂಧಕಃ ।
ತ್ವಯಿ ಭಕ್ತಿಃ ಸದಾ ಮೇಽಸ್ತು ದುರ್ಲಭಂ ತವ ದರ್ಶನಂ ॥ ೧೬ ॥

---

೧೧. ಶೂಲಕ್ಕೇರಿಸಿದ ಆ ರಾಕ್ಷಸನನ್ನು ನಾನು ಗಿರ್ರನೆ ತಿರುಗಿಸುತ್ತಿರಲು ಅವನ ಶರೀರದಿಂದ ಅಪಾರವಾದ ರಕ್ತದ ಪ್ರವಾಹವು ಹೊರಟಿತು.

೧೨. ಆ ರಕ್ತದ ಒಂದೊಂದು ಬಿಂದುವಿನಲ್ಲಿಯೂ ಅವನಿಗೆ ಸಮಾನ ಬಲರಾದ ರಾಕ್ಷಸರು ಹುಟ್ಟಿ ಬರುತ್ತಿದ್ದರು. ದೇವಿಯೆ! ಕೋಟಿಗಟ್ಟಳೆಯಾಗಿ ಬಂದ ಅವರಿಂದ ನಾನು ಪುನಃ ಪೀಡಿತನಾದೆನು.

೧೩. ಅಲ್ಲಿ ನಾನು ಮುಂದೇನು ಮಾಡಬೇಕೆಂಬುದನ್ನೇ ಯೋಚಿಸುತ್ತ ಒಂದು ಮುಹೂರ್ತಮಾತ್ರವಿದ್ದು ಬಳಿಕ ಕೆಂಪು ಹಲ್ಲುಗಳೂ ಭಯಂಕರ ರೂಪವುಳ್ಳವಳೂ ಆದ ದುರ್ಗಾದೇವಿಯನ್ನುಂಟುಮಾಡಿದೆನು.

೧೪. ಆಕೆಯು ಅನೇಕ ಪ್ರವಾಹಗಳಾಗಿ ಬಂದ ಅಂಧಕಾಸುರನ ರಕ್ತವನ್ನು ಕುಡಿಯಲುಪಕ್ರಮಿಸಿದಳು. ಪಾರ್ವತಿಯೆ! ಆಕೆಯು ರಕ್ತಪಾನವನ್ನು ಮಾಡುತ್ತಿರಲು ಇತರ ರಾಕ್ಷಸರು ಹುಟ್ಟುವುದು ನಿಂತುಹೋಯಿತು.

೧೫. ಮೊದಲು ಹುಟ್ಟಿದ್ದ ರಾಕ್ಷಸಶ್ರೇಷ್ಠರೆಲ್ಲರೂ ಆಕೆಯಿಂದಲೇ ನಿಹತರಾದರು. ಆ ಶೂಲದ ಆಘಾತಗಳಿಂದಲೇ ಎಲ್ಲರೂ ಪಂಚತ್ವವನ್ನು ಹೊಂದಿದರು.

೧೬. ಅಂಧಕನು ಅಂಜಲಿಬಂಧವನ್ನು ಮಾಡಿಕೊಂಡು ಸಂತೋಷದಿಂದ ನನಗೆ ಬಿನ್ನವಿಸಿಕೊಂಡನು. "ಪರಮೇಶ್ವರ! ನಿನ್ನಲ್ಲಿ ನನಗೆ ಅವಿಚ್ಛಿನ್ನವಾದ ಭಕ್ತಿಯುಂಟಾಗಲಿ. ನಿನ್ನ ದರ್ಶನವೇ ಪರಮದುರ್ಲಭವಾದುದಷ್ಟೆ!

ಸ್ವಾಮಿನಾ ನಿಹತಶ್ಚಾಽಹಂ ಕೋಽನ್ಯೋ ಧನ್ಯತರೋ ಹಿ ಮತ್ ।
ತ್ವಚ್ಛೂಲೇನ ವಿನಿರ್ಭಿನ್ನೋ ಹ್ಯಂತರಿಕ್ಷೇ ತತೋಽಪ್ಯಹಂ ॥ ೧೭ ॥
ಸಂಕಲ್ಪಾಕ್ಷೇಪವಿಕ್ಷೇಪಂ ಕಲ್ಪಕಾರ್ಯಪ್ರವರ್ತಕಂ ।
ಸಹಸ್ರವಕ್ತ್ರಶಿರಸಂ ತ್ವಾಮಹಂ ಶರಣಂ ವ್ರಜೇ ॥ ೧೮ ॥
ಗಿರೀಂದ್ರತನಯಾನಾಥಂ ಗಿರೀಂದ್ರಶಿಖರಾಲಯಂ ।
ಮಹಾಲಯಕೃತಾವಾಸಂ ತ್ವಾಮಹಂ ಶರಣಂ ವ್ರಜೇ ॥ ೧೯ ॥
ಏವಂ ಸ್ತುತೋಽಹಂ ದೈತ್ಯೇನ ಶೂಲಪ್ರೋತೇನ ಸುಂದರಿ ।
ತತೋ ಮೇ ಕರುಣಾ ಜಾತಾ ಕೃತೋಽಂಧಕೋ ಗಣಸ್ತದಾ ।
ಸ ಚ ಶೂಲವರೋ ದೇವಿ ಮಯಾ ಪ್ರೋಕ್ತೋ ಮುದಾ ತದಾ ॥ ೨೦ ॥
ಏಹಿ ಶೂಲ ಹತೋ ದೈತ್ಯಸ್ತ್ವಯಾ ದುಷ್ಟೋಽಂಧಕೋ ಮೃಧೇ ।
ಪರಿತುಷ್ಟಃ ಪ್ರಯಚ್ಛಾಮಿ ಪರಮಂ ಸ್ಥಾನಮುತ್ತಮಂ ॥ ೨೧ ॥
ನ ದೇವೈರ್ನ ಚ ಗಂಧರ್ವೈರ್ನಾಽಪಿ ತತ್ಪರಮರ್ಷಿಭಿಃ ।
ಸಂಪ್ರಾಪ್ಯಂ ಮಾಮನಾರಾಧ್ಯ ತಥಾ ವಿಧ್ವಸ್ತಕಲ್ಮಷೈಃ ॥ ೨೨ ॥

---

೧೭. ಸ್ವಾಮಿಯಿಂದಲೇ ನಾನು ಮೃತನಾದೆನು. ನನಗಿಂತಲೂ ಧನ್ಯತಮನಾರು? ನಿನ್ನ ಶೂಲದಿಂದ ಅಂತರಿಕ್ಷದಲ್ಲಿಯೇ ನಾನು ನಿರ್ಭಿನ್ನಗಾತ್ರನಾದೆನು.

೧೮. ನೀನು ಸಂಕಲ್ಪದಿಂದ ಲೋಕಸೃಷ್ಟಿಯನ್ನೂ, ಕೋಪದಿಂದ ಲಯವನ್ನೂ, ವಿಕ್ಷೇಪಶಕ್ತಿಯಿಂದ ಪ್ರಪಂಚವಿಸ್ತಾರವನ್ನೂ ಮಾಡುವವನಾಗಿರುವೆ. ಅನಂತಮುಖಗಳೂ ಶಿರಸ್ಸುಗಳೂ ಇರುವ ನಿನಗೆ ನಾನು ಶರಣು ಹೊಗುತ್ತಿರುವೆನು.

೧೯. ಪರ್ವತೇಶ್ವರನ ಮಗಳಿಗೆ ಸ್ವಾಮಿಯೂ, ಮಂದರಪರ್ವತಶಿಖರದಲ್ಲಿ ನೆಲಸಿರುವವನೂ, ಮಹಾಕಾಲವನದಲ್ಲಿ ವಾಸಿಸುತ್ತಿರುವವನೂ ಆದ ನಿನಗೆ ನಾನು ಶರಣಾಗತನಾಗಿರುವೆನು.''

೨೦. ಸುಂದರಿಯೆ! ಇಂತು ಶೂಲನಿರ್ಭಿನ್ನನಾದ ಆ ದೈತ್ಯನು ಸ್ತೋತ್ರ ಮಾಡುತ್ತಿರಲು ನನಗೆ ಅವನಲ್ಲಿ ಅನುಕಂಪವುಂಟಾಗಿ ಅವನನ್ನು ಗಣನಾಯಕನನ್ನಾಗಿ ಮಾಡಿದೆನು. ದೇವಿಯೆ! ಬಳಿಕ ಸಂತೋಷದಿಂದ ಆ ಉತ್ತಮ ಶೂಲವನ್ನೂ ಕರೆದು ಹೇಳಿದೆನು.

೨೧. "ಎಲೈ ಶೂಲವೆ! ಇಲ್ಲಿ ಬಾ. ದುಷ್ಟನಾದ ಅಂಧಕಾಸುರನು ಯುದ್ಧದಲ್ಲಿ ನಿನ್ನಿಂದ ಹತನಾದನು. ಸಂತುಷ್ಟನಾದ ನಾನು ನಿನಗೆ ಅದ್ವಿತೀಯವಾದ ಸ್ಥಾನವನ್ನು ಕೊಡುವೆನು.

೨೨. ನನ್ನ ಪೂಜೆಯನ್ನು ಮಾಡಿ ತಮ್ಮ ಸಮಸ್ತ ಪಾತಕಗಳನ್ನೂ ಕಳೆದು

ಪ್ರಾಮುವಾಚ ತತಃ ಶೂಲಃ ಪ್ರಣಮ್ಯಾನತಕಂಧರಃ ।
ಯದಿ ಪ್ರಸನ್ನೋ ಭಗವನ್ಕರುಣಾ ಮಯಿ ತೇ ಯದಿ ॥ ೨೩ ॥
ಕಥಯಸ್ವ ಪರಂ ಸ್ಥಾನಂ ಮನೋ ಮೇ ಯತ್ರ ಶುಧ್ಯತಿ ।
ದುಷ್ಟಸಂಪರ್ಕಸಂಜಾತಮನ್ಯತ್ಪಾತಕಮಾತ್ಮನಃ ॥ ೨೪ ॥
ತತೋ ಮಯಾ ಸಮಾದಿಷ್ಟಃ ಕರುಣಾಶ್ಲಿಷ್ಟಚೇತಸಾ ।
ಮಹಾಕಾಲವನಂ ಪುಣ್ಯಮತಿಪುಣ್ಯಫಲಪ್ರದಂ ॥ ೨೫ ॥
ತತ್ರಾಽಸ್ಮತ್ಪ್ರಾಪ್ತಿದಂ ಲಿಂಗಂ ಲೋಕಾಽನುಗ್ರಹಕಾರಕಂ ।
ಪೃಥುಕೇಶ್ವರಪೂರ್ವೇಣ ತದಾರಾಧಯ ಯತ್ನತಃ ॥ ೨೬ ॥
ಮದೀಯಂ ವಚನಂ ಶ್ರುತ್ವಾ ಸ ಜಗಾಮ ತ್ವರಾನ್ವಿತಃ ।
ದದರ್ಶ ತತ್ರ ತಲ್ಲಿಂಗಮನೇಕಫಲದಾಯಕಂ ॥ ೨೭ ॥
ಲಿಂಗೇನ ಚ ಪುನರ್ದೃಷ್ಟಃ ಶೂಲಃ ಶಂಕರವಲ್ಲಭಃ ।
ಸಂಭೂತೋಽನೇಕವಕ್ತ್ರಸ್ತು ಹರ್ಷಾದ್ವಿಸ್ಮಿತಮಾನಸಃ ॥ ೨೮ ॥

---

ಕೊಳ್ಳದಿರುವ ದೇವತೆಗಳಿಗೂ, ಗಂಧರ್ವರಿಗೂ, ಮಹರ್ಷಿಗಳಿಗೂ ಸಹ ಆ ಸ್ಥಾನವು ಅಪ್ರಾಪ್ಯವಾಗಿರುವುದು.''

೨೩–೨೪. ಆಗ ಶೂಲವು ನನ್ನನ್ನು ನಮಸ್ಕರಿಸಿ ಭಕ್ತಿಯಿಂದ ನನಗೆ ಹೇಳಿತು. ಸರ್ವೇಶ್ವರನಾದ ನೀನು ಪ್ರಸನ್ನನಾಗಿರುವೆಯಾದರೆ, ನನ್ನಲ್ಲಿ ನಿನಗೆ ಕರುಣೆ ಯಿರುವುದಾದರೆ ನನ್ನ ಮನಸ್ಸು ನಿಷ್ಕಲ್ಮಷವಾಗುವಂತಹ ಉತ್ತಮಸ್ಥಾನ ವೊಂದನ್ನು ನನಗೆ ತಿಳಿಸಿಕೊಡು. ಈ ದುಷ್ಟನ ಸಂಪರ್ಕದಿಂದ ನನಗೆ ಮತ್ತೂ ಹೆಚ್ಚಿನ ಪಾತಕವು ಅಂಟಿಕೊಂಡಿರುವುದು.

೨೫. ಅದನ್ನು ಕೇಳಿ ನಾನು ಕರುಣಾದ್ರ್ರಹೃದಯನಾಗಿ ಆ ಶೂಲಕ್ಕೆ ಆದೇಶವನ್ನಿತ್ತೆನು. ಮನೋಹರವೂ ಅತಿಪುಣ್ಯಫಲವನ್ನು ಕೊಡುವುದೂ ಆದ ಮಹಾಕಾಲವನವೆಂಬ ಕ್ಷೇತ್ರವೊಂದಿರುವುದು.

೨೬. ಅಲ್ಲಿ ನನ್ನನ್ನು ಪಡೆಯಲು ಸಾಧನವೂ, ಲೋಕಾನುಗ್ರಹವನ್ನು ಮಾಡುವುದೂ ಆದ ಒಂದು ಲಿಂಗವು ಪೃಥುಕೇಶ್ವರನಿಗೆ ಪೂರ್ವದಲ್ಲಿರುವುದು. ಅದನ್ನು ಭಕ್ತಿಯಿಂದ ಪೂಜಿಸು.

೨೭. ನನ್ನ ಮಾತನ್ನು ಕೇಳಿ ಶೂಲವು ತ್ವರೆಯಿಂದ ಆ ಕ್ಷೇತ್ರಕ್ಕೆ ಹೋಗಿ ಅಪರಿಮಿತಫಲಗಳನ್ನು ಕೊಡುವ ಆ ಲಿಂಗವನ್ನು ನೋಡಿತು.

೨೮. ಲಿಂಗವು ಸಹ ಪರಮೇಶ್ವರನಿಗೆ ಪ್ರಿಯವಾದ ಶೂಲವು ಅಲ್ಲಿಗೈತಂದು ದನ್ನು ನೋಡಿತು. ಹರ್ಷದಿಂದಲೂ ವಿಸ್ಮಯಾವಿಷ್ಟವಾದ ಮನಸ್ಸಿನಿಂದಲೂ ಅದು ಅನೇಕ ಮುಖಗಳುಳ್ಳದ್ದಾಯಿತು.

ಸ್ನೇಹಾತ್ಸಂಶ್ಲೇಷಿತೋಽತ್ಯರ್ಥಂ ಪೃಷ್ಟಸ್ತು ಕುಶಲಂ ಪುನಃ ।
ಕಥಿತಂ ತೇನ ಶೂಲೇನ ದುಷ್ಟಾಽಂಧಕವಧಂ ತದಾ ॥ ೨೯ ॥
ಪ್ರಭುಣಾ ಪ್ರೇರಿತೋಽತ್ಯರ್ಥಂ ಶುದ್ಧ್ಯರ್ಥಂ ಭವತೋಽಂತಿಕೇ ।
ತ್ವದ್ದರ್ಶನೇನ ಪೂತೋಽಹಂ ಯಾಸ್ಯಾಮಿ ಶಿವಸನ್ನಿಧೌ ।
ಅದ್ಯಪ್ರಭೃತಿ ಭೂಲೋಕೇ ಮನ್ನಾಮ್ನಾ ಖ್ಯಾತಿಮೇಷ್ಯಸಿ ॥ ೩೦ ॥
ತತೋ ಭವಿಷ್ಯತ್ಯಧಿಕಂ ದರ್ಶನಾತ್ತೇ ವೃಣೋಮ್ಯಹಂ ।
ಕಿಂ ತೀರ್ಥೈರ್ವಿವಿಧೈಃ ಸ್ನಾತೈಃ ಕಿಂ ದಾನೈರ್ವಿವಿಧೈಃ ಕೃತೈಃ ॥ ೩೧ ॥
ತೇ ಪ್ರಾಪ್ಸ್ಯಂತಿ ಫಲಂ ಸರ್ವಂ ಯೇ ತ್ವಾಂ ದ್ರಕ್ಷ್ಯಂತಿ ಭಕ್ತಿತಃ ॥ ೩೨ ॥
ಯಃ ಕರಿಷ್ಯತಿ ತೇ ಪೂಜಾಂ ಭಕ್ತಿಯುಕ್ತೋಽಪಿ ಮಾನವಃ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ದಿನೇ ಭೌಮಸ್ಯ ಭಕ್ತಿತಃ ॥ ೩೩ ॥
ವಿಮಾನವರಮಾಸ್ಥಾಯ ಕಾಮಗಂ ರತ್ನಭೂಷಿತಂ ।
ಉದಿತಾದಿತ್ಯಸಂಕಾಶಂ ಸ ಮುದಾ ವಿಚರಿಷ್ಯತಿ ॥ ೩೪ ॥

---

೨೯. ಮತ್ತು ಸ್ನೇಹದಿಂದ ಮತ್ತೆ ಮತ್ತೆ ಆಲಿಂಗನವನ್ನು ಮಾಡಿಕೊಂಡು ಕುಶಲಪ್ರಶ್ನೆಗಳಾಗುತ್ತಿರಲು ಶೂಲವು ದುಷ್ಟನಾದ ಅಂಧಕಾಸುರನು ಸಂಹೃತವಾದ ವೃತ್ತಾಂತವೆಲ್ಲವನ್ನೂ ತಿಳಿಸಿತು.

೩೦. '' ಸ್ವಾಮಿಯಿಂದ ಪ್ರೇರಿತನಾಗಿ ನಾನು ಪರಿಶುದ್ಧನಾಗಲು ನಿನ್ನ ಬಳಿಗೆ ಬಂದಿರುವೆನು. ನಿನ್ನ ದರ್ಶನದಿಂದ ಪವಿತ್ರನಾಗಿರುವ ನಾನು ಶಿವ ಸನ್ನಿಧಾನಕ್ಕೆ ಹೊರಡುವೆನು. ಇಂದು ಮೊದಲಾಗಿ ನೀನು ಭೂಲೋಕದಲ್ಲಿ ನನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವೆ.

೩೧. ನಿನ್ನ ದರ್ಶನದಿಂದ ಮಹತ್ಫಲವು ಲಭಿಸುವುದು. ಈ ವರವನ್ನು ನಾನು ಬೇಡುವೆನು. ವಿವಿಧತೀರ್ಥಗಳಲ್ಲಿ ಸ್ನಾನಗಳನ್ನು ಮಾಡಿದುದರಿಂದೇನು ? ವಿವಿಧ ದಾನಗಳನ್ನು ಮಾಡಿದುದರಿಂದೇನು ಫಲವು?

೩೨. ಯಾರು ನಿನ್ನನ್ನು ಭಕ್ತಿಯಿಂದ ನೋಡುವರೊ, ಅವರು ಇವುಗಳೆಲ್ಲವುಗಳ ಫಲವನ್ನು ಪಡೆಯುವರು.

೩೩–೩೪. ಮಂಗಳವಾರಗಳಲ್ಲಿ ಅಷ್ಟಮಿ, ಚತುರ್ದಶೀ ತಿಥಿಗಳು ಬರಲು ಯಾವ ಮನುಷ್ಯನು ಭಕ್ತಿಯುಕ್ತನಾಗಿ ನಿನ್ನ ಪೂಜೆಯನ್ನು ಮಾಡುವನೊ, ಅವನು ಸ್ವೇಚ್ಛಾಸಂಚಾರವುಳ್ಳುದೂ, ನವರತ್ನಗಳಿಂದಲಂಕೃತವಾದುದೂ, ಹುಟ್ಟುತ್ತಿರುವ ಸೂರ್ಯನ ಕಾಂತಿಯಿಂದ ಕೂಡಿದುದೂ ಆದ ಉತ್ತಮವಿಮಾನವನ್ನೇರಿ ಸಂತೋಷದಿಂದ ಹದಿನಾಲ್ಕು ಲೋಕಗಳಲ್ಲಿಯೂ ಓಡಾಡುತ್ತಿರುವನು.

ತ್ವನ್ನಾಮ ಯೇ ಗ್ರಹಿಷ್ಯಂತಿ ಸರ್ವದಾ ಭಯಪೀಡಿತಾಃ ।
ವ್ಯಾಧಿಭಿಃ ಪೀಡಿತಾ ನಿತ್ಯಂ ದುಃಖೈರ್ವಾ ಕ್ಲೇಶಿತಾ ಭೃಶಂ ।
ನ ಭವಿಷ್ಯತಿ ಭೀಸ್ತೇಷಾಂ ಘೋರಸಂಸಾರಸಾಗರೇ ॥ ೩೫ ॥
ಯೇ ತ್ವಾಂ ದ್ರಕ್ಷ್ಯಂತಿ ಪುರುಷಾ ಭಾವಹೀನಾಃ ಪ್ರಸಂಗತಃ ।
ನ ಪತಿಷ್ಯಂತಿ ಸಂಸಾರೇ ನರಕೇ ಚಾತಿದಾರುಣೇ ॥ ೩೬ ॥
ಇತ್ಯುಕ್ತ್ವಾ ತೇನ ಶೂಲೇನ ಲಿಂಗಮಾಶ್ಲಿಷ್ಯ ಯತ್ನತಃ ॥ ೩೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಶೂಲೇಶ್ವರಸ್ಯ ದೇವಸ್ಯ ಅಥೋಂಕಾರೇಶ್ವರಂ ಶೃಣು ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಶೂಲೇಶ್ವರಮಾಹಾತ್ಮ್ಯವರ್ಣನಂ"ನಾಮೈಕಪಂಚಾಶತ್ತಮೋಽಧ್ಯಾಯಃ

---

೩೫. ಸರ್ವಕಾಲಗಳಲ್ಲಿಯೂ ಭಯಪೀಡಿತರಾಗಲಿ, ಸಂತತ ರೋಗಾಭಿಭೂತರಾಗಲಿ, ದುಃಖಗಳಿಂದ ಬಹಳ ಕ್ಲೇಶಗೊಂಡವರಾಗಲಿ, ಯಾರು ನಿನ್ನ ಹೆಸರನ್ನು ಸ್ಮರಿಸುತ್ತಿರುವರೊ, ಅವರಿಗೆ ಭಯಂಕರವಾದ ಸಂಸಾರಸಮುದ್ರದಲ್ಲಿ ಯಾವ ಭಯವೂ ಉಂಟಾಗುವುದಿಲ್ಲ.

೩೬. ಭಕ್ತಿಹೀನರಾದರೂ ಯಾರು ಪ್ರಸಂಗವಶದಿಂದ ನಿನ್ನನ್ನು ನೋಡುವರೊ, ಅವರೂ ಸಂಸಾರದಲ್ಲಾಗಲಿ, ಮಹಾಘೋರಗಳಾದ ನರಕಗಳಲ್ಲಾಗಲಿ ಬೀಳುವುದಿಲ್ಲ."

೩೭. ಇಂತೆಂದು ಹೇಳಿ ಆ ಶೂಲವು ಆ ಲಿಂಗವನ್ನು ಆದರದಿಂದ ಆಲಿಂಗಿಸಿಕೊಂಡಿತು.

೩೮. ದೇವಿಯೆ! ಇಂತಹ ಶೂಲೇಶ್ವರನ ಮಹಿಮೆಯ ಪಾವನವಾದ ಪ್ರಭಾವವನ್ನು ನಿನಗೆ ಹೇಳಿರುವೆನು. ಇನ್ನು ಓಂಕಾರೇಶ್ವರದೇವನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಶೂಲೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಪಂಚಾಶತ್ತಮೋಽಧ್ಯಾಯಃ

### ಓಂಕಾರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ವಿಶ್ವೇಶ್ವರ ಉವಾಚ :—

ದ್ವ್ಯಧಿಕಂ ದೇವಿ ಜಾನೀಹಿ ಪಂಚಾಶತ್ತಮಮೀಶ್ವರಂ ।
ಓಂಕಾರೇಶ್ವರ ಇತ್ಯಾಖ್ಯಾ ಯಸ್ಯಾಽಸ್ತಿ ಭುವನತ್ರಯೇ ॥ ೧ ॥
ಪ್ರಾಕೃತೇ ಕಲ್ಪಸಂಜ್ಞೇ ತು ಪ್ರಥಮೇ ಪ್ರಥಮಂ ಮಯಾ ।
ವಕ್ತ್ರಾದುತ್ಪಾದಿತೋ ದೇವಿ ಪುರುಷಃ ಕಪಿಲಾಕೃತಿಃ ॥ ೨ ॥
ತತಃ ಸ ಪುರುಷೋ ದಿವ್ಯಃ ಕಿಂ ಕರೋಮೀತ್ಯುಪಸ್ಥಿತಃ ।
ವಿಭಜಾತ್ಮಾನಮಿತ್ಯುಕ್ತೋ ಮಯಾಽಂತರ್ಧಾನಗೋಽಭವತ್ ॥ ೩ ॥
ನಿರ್ವಾಣಸ್ಯೇವ ದೀಪಸ್ಯ ಗತಿಸ್ತಸ್ಯ ನ ಲಕ್ಷಿತಾ ।
ತತಸ್ತಸ್ಯಾಽಭವಚ್ಚಿಂತಾ ಕಥಮಾತ್ಮಾ ವಿಭಜ್ಯತೇ ॥ ೪ ॥
ಏವಂ ಚಿಂತಯತಸ್ತಸ್ಯ ಚತುರ್ಮಾತ್ರೋಽತ್ಥಿತಸ್ತತಃ ।
ತ್ರಿವರ್ಣಸ್ವರರೂಪೀ ಚ ಚತುರ್ವರ್ಗಫಲಪ್ರದಃ ॥ ೫ ॥

---

## ಕನ್ನಡದ ಅನುವಾದ

### ಓಂಕಾರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ದೇವಿಯೆ ! ಮೂರು ಲೋಕಗಳಲ್ಲಿಯೂ ಓಂಕಾರೇಶ್ವರನೆಂಬ ಹೆಸರು ಯಾವ ಲಿಂಗಕ್ಕೆ ಪ್ರಖ್ಯಾತವಾಗಿರುವುದೊ, ಅದೇ ಐವತ್ತೆರಡನೆಯ ಲಿಂಗವೆಂದು ತಿಳಿ.

೨. ಪ್ರಾಕೃತಕಲ್ಪದ ಆದಿಯಲ್ಲಿ ಲೋಕಗಳ ಸೃಷ್ಟಿಯಾಗುವುದಕ್ಕೆ ಮೊದಲು ನಾನು ನನ್ನ ಮುಖದಿಂದ ಕಪಿಲವರ್ಣದ ಒಬ್ಬ ಪುರುಷನನ್ನು ಸೃಷ್ಟಿಸಿದೆನು.

೩. ಆ ದಿವ್ಯಪುರುಷನು "ನಾನು ಮಾಡಬೇಕಾದುದೇನು ?" ಎಂದು ಕೇಳುತ್ತ ಬಳಿಯಲ್ಲಿ ನಿಂತಿರಲು ನಾನು ನಿನ್ನ ದೇಹವನ್ನು ಭಾಗಮಾಡಿಕೊ ಎಂದು ಹೇಳಿದೆನು. ಕೂಡಲೆಯೆ ಅವನು ಅಂತರ್ಧಾನವನ್ನು ಹೊಂದಿದನು.

೪. ಆರಿಹೋದ ದೀಪದ ಗತಿಯಂತೆ ಅವನ ವ್ಯಾಪಾರವು ಕಾಣದಾಯಿತು. ಅಲ್ಲದೆ, "ನನ್ನ ದೇಹವನ್ನು ಹೇಗೆ ವಿಭಜನೆಮಾಡಿಕೊಳ್ಳಲಿ ?" ಎಂಬ ಚಿಂತೆಯು ಅವನಿಗುಂಟಾಯಿತು.

೫. ಇಂತು ಚಿಂತಿಸುತ್ತಿರಲು ಆತನ ದೇಹದಿಂದ ನಾಲ್ಕಡಿಯಾದ ಆಕಾರವುಳ್ಳ ಪುರುಷನೊಬ್ಬನು ಹುಟ್ಟಿದನು. ಮೂರು ಬಣ್ಣಗಳು ಮತ್ತು ಧ್ವನಿಗಳಿಂದ

ಋಗ್ಯಜುಃಸಾಮನಾಮಾ ಚ ಬ್ರಹ್ಮವಿಷ್ಣು ಶಿವಾತ್ಮಕಃ ।
ವ್ಯಾಪ್ನುವನ್ಸಕಲಾಂಲ್ಲೋಕಾನ್ಪ್ರಭಾವೈಃ ಪೃಥುಭಿಸ್ತದಾ ॥ ೬ ॥
ಓಂಕಾರ ಇತಿ ತಸ್ಯಾಖ್ಯಾ ಮಯಾ ದತ್ತಾ ಪ್ರಸಾದತಃ ।
ತದೋಕ್ತಾಭಿರುದಾರಾಭಿರ್ವಾಣೀಭಿಃ ಸಮಲಂಕೃತಃ ॥ ೭ ॥
ಹೃದಯಾತ್ತಸ್ಯ ದೇವಸ್ಯ ವಷಟ್ಕಾರಃ ಸಮುತ್ಥಿತಃ ।
ಛಂದಸಾಂ ಪ್ರವರಾ ದೇವೀ ಚತುರ್ವಿಂಶಾಕ್ಷರಾ ಪರಾ ॥ ೮ ॥
ಷಟ್ಕುಕ್ಷಿಃ ಸಾ ತ್ರಿಪಾದಾ ಚ ಪಂಚಶೀರ್ಷೋಪಲಕ್ಷಿತಾ ।
ಸಮೀಪವರ್ತಿನೀ ದೇವೀ ಪಾರ್ಶ್ವೇ ತತ್ರ ವ್ಯವಸ್ಥಿತಾ ॥ ೯ ॥
ಗಾಯತ್ರೀ ಮಧುರಾಭಾಷಾ ಸಾವಿತ್ರೀ ಲೋಕವಿಶ್ರುತಾ ।
ಸ ಚೋಂಕಾರೋ ಮಯಾ ಪ್ರೋಕ್ತೋ ಗಾಯತ್ರ್ಯಾ ಸಹ ಪಾರ್ವತಿ ।
ಸೃಷ್ಟಿಂ ಕುರು ಮಮಾದೇಶಾದ್ವಿಚಿತ್ರಾಮನಯಾ ಸಹ ॥ ೧೦ ॥

---

ಕೂಡಿದ ಅವನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಫಲಗಳನ್ನೂ ಕೊಡುವವನಾದನು.

೬. ಋಗ್ವೇದ, ಸಾಮವೇದ, ಯಜುರ್ವೇದಗಳೆಲ್ಲವೂ ಅವನ ನಾಮಗಳೇ. ಬ್ರಹ್ಮವಿಷ್ಣುಮಹೇಶ್ವರರು ಅವನ ರೂಪಾಂತರಗಳೇ ಆಗಿರುವರು. ಆತನು ಅಮಿತವಾದ ತನ್ನ ಪ್ರಭಾವದಿಂದ ಸಮಸ್ತಲೋಕಗಳನ್ನೂ ವ್ಯಾಪಿಸಿದ್ದನು.

೭. ನಾನು ಪ್ರಸನ್ನನಾಗಿ ಆತನಿಗೆ ಓಂಕಾರನೆಂದು ಹೆಸರನ್ನಿತ್ತೆನು. ಆಗ ನಾನು ಹೇಳಿದ ಉದಾರಗಳಾದ ಮಾತುಗಳಿಂದ ಆತನು ಸಂತೋಷಗೊಂಡಿದ್ದನು.

೮. ಆ ದೇವತೆಯ ಹೃದಯದಿಂದ ವಷಟ್ಕಾರವುದ್ಭವಿಸಿತು. ವೇದಗಳಲ್ಲಿ ಮೊದಲನೆಯ ಸ್ಥಾನವನ್ನು ಹೊಂದಿ ಪರಾತ್ಪರವೆನಿಸಿದುದೂ, ಇಪ್ಪತ್ತನಾಲ್ಕು ಅಕ್ಷರಗಳ ವಿನ್ಯಾಸವುಳ್ಳುದೂ ಆದ ಮಂತ್ರವಿರುವುದಲ್ಲವೆ.

೯. ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ, ಅಧೋ ದಿಶೆಗಳೆಂಬ ಆರು ಕುಕ್ಷಿಗಳುಳ್ಳವಳೂ, ಋಗ್ಯಜುಸ್ಸಾಮವೇದಗಳೆಂಬ ಮೂರು ಪಾದಗಳುಳ್ಳವಳೂ, ವ್ಯಾಕರಣ, ಶಿಕ್ಷಾ, ಕಲ್ಪ, ನಿರುಕ್ತ, ಜ್ಯೋತಿಷಗಳೆಂಬ ಐದು ತಲೆಗಳುಳ್ಳವಳೂ, ಆವ ದೇವಿಯು ಸಮೀಪವಲ್ಲಿ ಸುಳಿಯುತ್ತ ಪಕ್ಕದಲ್ಲಿಯೇ ಬಂದು ನಿಂತಿದ್ದಳು.

೧೦. ಆಕೆಯೇ ಮಧುರಾಲಾಪದವಳೂ, ಸವಿತೃಶಕ್ತಿಸ್ವರೂಪದವಳೂ ಆದ ಗಾಯತ್ರಿಯು. ಪಾರ್ವತಿಯೆ! ಆಗ ನಾನು ಗಾಯತ್ರೀಸಮೇತನಾದ ಓಂಕಾರೇಶ್ವರನಿಗೆ, "ಅಯ್ಯಾ! ನನ್ನ ಅಪ್ಪಣೆಯಂತೆ ನೀನು ಈಕೆಯ ಸಹಾಯದಿಂದ ವಿಚಿತ್ರವಾದ ಸೃಷ್ಟಿಯನ್ನು ಮಾಡು" ಎಂದು ಆಜ್ಞಾಪಿಸಿದೆನು.

ಇತ್ಯುಕ್ತಸ್ತ್ರಿಶಿಖೋ ಭೂತ್ವಾ ಹಿರಣ್ಯಸದೃಶಾಕೃತಿಃ ।
ಸೃಷ್ಟಿಮುತ್ಪಾದಯಾಮಾಸ ಸ್ವಶರೀರಾನ್ಮಮಾಜ್ಞಯಾ ॥ ೧೧ ॥
ಪೂರ್ವಂ ದೇವಗಣಾಶ್ಚೈವ ತ್ರಯಸ್ತ್ರಿಂಶಚ್ಚ ದೇವತಾಃ ।
ಮನುಷ್ಯಾ ಋಷಯಶ್ಚೈವ ವೇದಪ್ರಾಮಾಣ್ಯತಃ ಕೃತಾಃ ॥ ೧೨ ॥
ತೇಷಾಂ ದೇಹೇ ಪ್ರವಿಷ್ಟಾನಾಂ ಪ್ರಾದುರ್ಭಾವಃ ಪುನರ್ಭವೇತ್ ।
ಯಥಾ ಸೂರ್ಯಸ್ಯ ಸತತಮುದಯಾಽಸ್ತಮನಂ ಭವೇತ್ ॥ ೧೩ ॥
ಸಂಹೃತ್ಯೋಂಕಾರಮಖಿಲಾನ್ಸದೇವಾಽಸುರಪನ್ನಗಾನ್ ।
ಕೃತಾತ್ಮಗರ್ಭೇ ಭಗವಾನೋಂಕಾರೋ ಜಗತಃ ಪ್ರಭುಃ ।
ಸಸರ್ಜ ಸರ್ವಭೂತಾನಿ ಕಲ್ಪಾಂತೇ ಪರ್ವತಾತ್ಮಜೇ ॥ ೧೪ ॥
ಅವ್ಯಕ್ತಃ ಶಾಶ್ವತಶ್ಚೈವ ತಸ್ಯ ಸರ್ವಮಿದಂ ಜಗತ್ ।
ಕರ್ತಾ ಚೈವ ವಿಕರ್ತಾ ಚ ಸಂಹರ್ತಾ ಚ ಮಹಾಂಸ್ತು ಯಃ ॥ ೧೫ ॥
ಓಂಕಾರಪೂರ್ವಕಾ ವೇದಾ ಯಜ್ಞಾಶ್ಚೋಂಕಾರಪೂರ್ವಕಾಃ ।
ಓಂಕಾರಪೂರ್ವಕಂ ಜ್ಞಾನಂ ತಪಶ್ಚೋಂಕಾರಪೂರ್ವಕಂ ॥ ೧೬ ॥

---

೧೧. ಇಂತು ನುಡಿಯಲು ನನ್ನ ಅನುಜ್ಞೆಯನ್ನು ಶಿರಸಾವಹಿಸಿ ಆತನು ಮೂರು ತಲೆಗಳಿಂದೊಪ್ಪುತ್ತ ಚಿನ್ನವನ್ನು ಹೋಲುವ ಮೈಬಣ್ಣದವನಾಗಿ ತನ್ನ ದೇಹದಿಂದಲೇ ಬ್ರಹ್ಮಾಂಡವನ್ನುಂಟುಮಾಡಿದನು.

೧೨. ಮೊದಲಿನಲ್ಲಿ ವೇದವಾಕ್ಯಗಳನ್ನೇ ಪ್ರಮಾಣವಾಗಿಟ್ಟುಕೊಂಡು ದೇವತಾಗಣಗಳೂ, ಅವರ ಅಧಿನಾಯಕರಾದ ಮೂವತ್ತುಮೂರು ದೇವತೆಗಳೂ, ಮನುಷ್ಯರೂ, ಮಹರ್ಷಿಗಳೂ, ಸೃಜಿಸಲ್ಪಟ್ಟರು.

೧೩. ಏಕಪ್ರಕಾರನಾಗಿರುವ ಸೂರ್ಯನಿಗೂ ಹೇಗೆ ಉದಯಾಸ್ತಗಳೆಂಬ ವ್ಯವಹಾರವಿದೆಯೊ, ಹಾಗೆಯೇ ಓಂಕಾರನಲ್ಲಿ ಲೀನರಾದ ದೇವಾದಿ ಸಕಲರಿಗೂ ಪ್ರಳಯದಲ್ಲಿ ನಾಶವೂ ಪುನಃ ಪ್ರಾದುರ್ಭಾವವೂ ಉಂಟಾಗುತ್ತಿರುವುವು.

೧೪. ಓಂಕಾರವು ದೇವತೆಗಳು, ರಾಕ್ಷಸರು, ನಾಗರು ಮುಂತಾದವರನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡಿರುವುದು. ಇಂತು ತನ್ನ ಗರ್ಭದಲ್ಲಿ ಜಗತ್ತನ್ನೆಲ್ಲ ತಾಳಿರುವ ಓಂಕಾರನೇ ಲೋಕಕ್ಕೆ ಒಡೆಯನಾಗಿರುವನು. ಪರ್ವತಪುತ್ರಿಯೆ ! ಪ್ರಳಯಾಂತ್ಯದಲ್ಲಿ ಆತನೇ ಸಕಲ ಪ್ರಾಣಿಗಳನ್ನೂ ಸೃಜಿಸಿದನು.

೧೫. ಆತನು ಅವ್ಯಕ್ತನು. ಶಾಶ್ವತನು. ಸಕಲ ಬ್ರಹ್ಮಾಂಡವೂ ಆವನದೇ ಆಗಿರುವುದು. ಆತನೇ ಇದನ್ನು ಸೃಷ್ಟಿಮಾಡಲು, ವ್ಯತ್ಯಾಸವಾಗಿಸಲು, ಸಂಹರಿಸಲು ಶಕ್ತನಾದ ಮಹಾಮಹಿಮನಾಗಿರುವನು.

೧೬. ವೇದಗಳೆಲ್ಲವೂ ಓಂಕಾರದಿಂದಲೇ ಪ್ರಾರಂಭಿಸಿರುವುವು. ಯಜ್ಞಗಳಿಗೂ ಓಂಕಾರವೇ ಮೊದಲಾಗಿರುವುದು. ಜ್ಞಾನವೂ ಓಂಕಾರಪೂರ್ವಕವಾಗಿರುವುದು. ತಪಸ್ಸೂ ಓಂಕಾರವನ್ನೇ ಆಶ್ರಯಿಸಿರುವುದು.

ಸ್ವಯಂಭೂರಿತಿ ವಿಜ್ಞೇಯಃ ಸ ಬ್ರಹ್ಮಾ ಭುವನಾಧಿಪಃ ।
ಸ ವಾಯುರಿತಿ ವಿಜ್ಞೇಯಃ ಸರ್ವಜ್ಞಃ ಸ ಪ್ರಜಾಕರಃ ॥ ೧೭ ॥
ವಿಶ್ವೇದೇವಾಸ್ತಥಾ ಸಾಧ್ಯಾ ರುದ್ರಾದಿತ್ಯಾಸ್ತಥಾಽಶ್ವಿನೌ ।
ಪ್ರಜಾನಾಂ ಪತಯಶ್ಚೈವ ಸಪ್ತ ಚೈವ ಮಹರ್ಷಯಃ ॥ ೧೮ ॥
ವಸವೋಽಪ್ಸರಸಶ್ಚೈವ ಗಂಧರ್ವಾಶ್ಚೈವ ರಾಕ್ಷಸಾಃ ।
ದೈತ್ಯಾಃ ಪಿಶಾಚಾ ರಕ್ಷಾಂಸಿ ಭೂತಾನಿ ವಿವಿಧಾನಿ ಚ ॥ ೧೯ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಮ್ಲೇಚ್ಛಾದಯೋ ಭುವಿ ।
ಸರ್ವೇ ಚತುಷ್ಪದಾಶ್ಚೈವ ತಿರ್ಯಗ್ಯೋನಿಗತಾಸ್ತಥಾ ॥ ೨೦ ॥
ಜಂಗಮಾನಿ ಚ ಸತ್ವಾನಿ ಯಚ್ಚಾಽನ್ಯಜ್ಜೀವಸಂಜ್ಞಕಂ ।
ಕೃತ್ವಾ ಸರ್ವಮಶೇಷಂ ಚ ಮಮಾಂತಿಕಮುಪಾಗತಃ ॥ ೨೧ ॥
ಪ್ರಣಮ್ಯ ಪ್ರಯತೋ ಭೂತ್ವಾ ವಚನಂ ಚೇದಮಬ್ರವೀತ್ ।
ಕೃತಾ ಸೃಷ್ಟಿರ್ಮಯಾ ದೇವ ತ್ವತ್ಪ್ರಸಾದಾನ್ಮಹೇಶ್ವರ ॥ ೨೨ ॥
ದೇಹಿ ಮೇ ಪರಮಂ ಸ್ಥಾನಂ ಯಥಾ ಕೀರ್ತಿರ್ಧ್ರುವಾ ಭವೇತ್ ।
ಓಂಕಾರಸ್ಯ ವಚಃ ಶ್ರುತ್ವಾ ಮಯಾ ಪ್ರೋಕ್ತಂ ವರಾನನೇ ॥ ೨೩ ॥

---

೧೭. ಹದಿನಾಲ್ಕು ಲೋಕಗಳಿಗೂ ಒಡೆಯನಾದ ಆ ಸ್ವಯಂಭುವೇ ಬ್ರಹ್ಮದೇವನೆಂದು ತಿಳಿಯಬೇಕು. ಆ ಸರ್ವಜ್ಞನೇ ವಾಯುವು. ಪ್ರಜೆಗಳನ್ನು ಅವನೇ ಸೃಜಿಸುವವನು.

೧೮–೨೧. ವಿಶ್ವೇದೇವತೆಗಳು, ಸಾಧ್ಯರು, ಏಕಾದಶರುದ್ರರು, ದ್ವಾದಶಾದಿತ್ಯರು, ಅಶ್ವಿನೀದೇವತೆಗಳು, ಪ್ರಜಾಪತಿಗಳು, ಸಪ್ತಮಹರ್ಷಿಗಳು, ಅಷ್ಟವಸುಗಳು, ಅಪ್ಸರೆಯರು, ಗಂಧರ್ವರು, ರಾಕ್ಷಸರು, ದೈತ್ಯರು, ಪಿಶಾಚರು, ದಾನವರೇ ಮುಂತಾದ ಸಕಲ ಪ್ರಾಣಿಗಳು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಭೂಲೋಕದಲ್ಲಿರುವ ಇತರ ಮ್ಲೇಚ್ಛಜನರು, ಸಕಲ ಚತುಷ್ಪದ ಪ್ರಾಣಿಗಳು, ಇತರ ನೀಚಯೋನಿಯಲ್ಲಿ ಹುಟ್ಟುವ ಪಕ್ಷಿಕ್ರಿಮಿಕೀಟಾದಿಗಳು, ಚಲಿಸುವ ಎಲ್ಲ ಪ್ರಾಣಿಗಳು ಮತ್ತು ಜೀವಿಗಳೆಂದು ಕರೆಯಲ್ಪಡುವ ಸಕಲ ಭೂತರಾಶಿ ಇವೆಲ್ಲವನ್ನೂ ಸಾಗ್ರವಾಗಿ ಸೃಜಿಸಿ ಓಂಕಾರೇಶ್ವರನು ನನ್ನ ಬಳಿಗೆ ಬಂದು ಸೇರಿದನು.

೨೨. ಅಲ್ಲದೆ ವಿನೀತನಾಗಿ ಪ್ರಣಾಮವನ್ನು ಮಾಡಿ ಇಂತೆಂದು ಮಾತನಾಡಿದನು. "ದೇವದೇವನಾದ ಮಹೇಶ್ವರನೆ! ನಿನ್ನ ಅನುಗ್ರಹದಿಂದ ಸಕಲ ಸೃಷ್ಟಿಯನ್ನೂ ಮಾಡಿರುವೆನು.

೨೩. ಈಗ ನನಗೊಂದು ಉತ್ತಮ ಸ್ಥಾನವನ್ನು ಕಲ್ಪಿಸಿಕೊಡು. ಅಲ್ಲಿ

ಮಮಾಽಭೀಷ್ಟಕರಂ ಸ್ಥಾನಂ ನಿತ್ಯಮವ್ಯಯಮಕ್ಷಯಂ ।
ಮಹಾಕಾಲವನಂ ದಿವ್ಯಂ ಸರ್ವಸಂಪತ್ಕರಂ ಶುಭಂ ॥ ೨೪ ॥
ತತ್ರ ತೇ ಭವಿತಾ ಕೀರ್ತಿಃ ಶಾಶ್ವತೀ ನಾಽತ್ರ ಸಂಶಯಃ ।
ಶೂಲೇಶ್ವರಸ್ಯ ದೇವಸ್ಯ ಪೂರ್ವಭಾಗೇ ವ್ಯವಸ್ಥಿತಂ ॥ ೨೫ ॥
ತ್ರಿಕಲ್ಪಪ್ರಭವಂ ಲಿಂಗಂ ತ್ವನ್ನಾಮ್ನಾ ಖ್ಯಾತಿಮೇಷ್ಯತಿ ।
ಓಂಕಾರೇಶ್ವರ ಇತ್ಯಾಖ್ಯಾ ಭವಿಷ್ಯತಿ ಜಗತ್ತ್ರಯೇ ॥ ೨೬ ॥
ಇತ್ಯುಕ್ತೋ ಹಿ ಮಯಾ ದೇವಿ ಓಂಕಾರೋ ಹೃಷ್ಟಮಾನಸಃ ।
ದದರ್ಶ ತತ್ರ ತಲ್ಲಿಂಗಂ ತಸ್ಮಿಂಲ್ಲಿಂಗೇ ಲಯಂ ಗತಃ ॥ ೨೭ ॥
ತತಃ ಪ್ರಭೃತಿ ವೇದೇಷು ಓಂಕಾರಃ ಕ್ರಿಯತೇ ದ್ವಿಜೈಃ ।
ಪುಣ್ಯಾರ್ಥಂ ಮಂಗಲಾರ್ಥಂ ಚ ಪ್ರಥಮಂ ಸರ್ವವಸ್ತುಷು ॥ ೨೮ ॥
ಲಯಂ ಗತೋ ಯದೋಂಕಾರಸ್ತದಾ ಪ್ರಭೃತಿ ಪಾರ್ವತಿ ।
ಮಯೋಚ್ಯಮಾನಂ ಲಿಂಗಸ್ಯ ಪ್ರಭಾವಾಽತಿಶಯಂ ಶೃಣು ॥ ೨೯ ॥

---

ನನ್ನ ಕೀರ್ತಿಯು ಶಾಶ್ವತವಾಗಿ ನಿಂತಿರಬೇಕು.'' ಎಲೌ ಸುಂದರಿಯೆ ! ಓಂಕಾರನ ಮಾತನ್ನು ಕೇಳಿ ನಾನು ಇಂತೆಂದೆನು.

೨೪. ''ನನಗೆ ಬಹಳ ಪ್ರಿಯವಾದುದೂ, ನಿತ್ಯವೂ, ನಾಶರಹಿತವೂ, ಆದ ಸ್ಥಾನವೊಂದಿರುವುದು. ಮಹಾಕಾಲವನವೆಂಬ ಆ ಕ್ಷೇತ್ರವು ದಿವ್ಯವೂ, ಸಕಲ ಸಂಪತ್ಪ್ರದಾಯಕವೂ, ಪವಿತ್ರವೂ ಆಗಿರುವುದು.

೨೫. ಅಲ್ಲಿ ನಿನ್ನ ಕೀರ್ತಿಯು ಶಾಶ್ವತವಾಗುವುದೆಂಬುದರಲ್ಲಿ ಸಂದೇಹ ವಿಲ್ಲ. ಶೂಲೇಶ್ವರಮಹಾಲಿಂಗಕ್ಕೆ ಪೂರ್ವದಲ್ಲಿ ಒಂದು ಲಿಂಗವು ನೆಲಸಿರುವುದು.

೨೬. ಮೂರು ಕಲ್ಪಗಳಿಂದಲೂ ನೆಲಸಿರುವ ಆ ಲಿಂಗವು ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವುದು. ಮೂರು ಲೋಕಗಳಲ್ಲಿಯೂ ಅದಕ್ಕೆ ಓಂಕಾರೇಶ್ವರನೆಂಬ ಹೆಸರೇ ಪ್ರತೀತವಾಗುವುದು.''

೨೭. ದೇವಿಯೆ ! ಇಂತೆಂದು ನಾನು ಅಪ್ಪಣೆಯನ್ನು ಕೊಡಲು ಓಂಕಾರನು ಸಂತುಷ್ಟಮನಸ್ಕನಾಗಿ ಅಲ್ಲಿಗೆ ಹೋಗಿ ಆ ಲಿಂಗವನ್ನು ನೋಡಿ ಅದರಲ್ಲಿಯೇ ಲೀನನಾದನು.

೨೮. ಅಂದು ಮೊದಲಾಗಿ ಬ್ರಾಹ್ಮಣರೆಲ್ಲರೂ ವೇದಾಧ್ಯಯನಗಳಲ್ಲಿಯೂ, ಇತರ ಸಮಸ್ತ ಕಾರ್ಯಗಳಲ್ಲಿಯೂ, ಪುಣ್ಯಪ್ರಾಪ್ತಿಗಾಗಿಯೂ, ಮಂಗಳಕ್ಕಾಗಿಯೂ ಪ್ರಥಮದಲ್ಲಿ ಓಂಕಾರವನ್ನುಚ್ಚರಿಸುತ್ತಿರುವರು.

೨೯. ಪಾರ್ವತಿಯೆ ! ಇಂತು ಓಂಕಾರನು ಆ ಲಿಂಗದಲ್ಲಿ ಲಯವನ್ನು ಹೊಂದಿದ ದಿನ ಮೊದಲಾಗಿ ನಾನು ಆ ಲಿಂಗಕ್ಕೆ ಅನುಗ್ರಹಿಸಿರುವ ಮಹಿಮಾತಿಶಯವನ್ನು ಕೇಳು.

ಯದ್ಯುಗಾದಿಸಹಸ್ರೇಷು ವ್ಯತೀಪಾತಶತೇಷು ಚ ।
ಅಯನಾನಾಂ ಸಹಸ್ರೇಷು ಯತ್ಪುಣ್ಯಂ ಸಮುದಾಹೃತಂ ।
ತತ್ಪುಣ್ಯಮಧಿಕಂ ದೇವಿ ಓಂಕಾರೇಶ್ವರದರ್ಶನಾತ್ ॥ ೩೦ ॥
ಚತುರ್ಷ್ವಪಿ ಚ ವೇದೇಷು ಸಮಧೀತೇಷು ಯತ್ಫಲಂ ।
ತತೋಽಧಿಕಂ ಫಲಂ ಪ್ರೋಕ್ತಮೋಂಕಾರೇಶ್ವರದರ್ಶನಾತ್ ॥ ೩೧ ॥
ಬ್ರಹ್ಮಚರ್ಯೇಣ ಯತ್ಪುಣ್ಯಂ ಯಾವಜ್ಜೀವಂ ಕೃತೇನ ಚ ।
ತತ್ಪುಣ್ಯಮಧಿಕಂ ಪ್ರೋಕ್ತಮೋಂಕಾರೇಶ್ವರದರ್ಶನಾತ್ ॥ ೩೨ ॥
ಕರೀಷಸಾಧನೇ ಪುಣ್ಯಂ ಯಚ್ಚ ಪುಣ್ಯಮನಾಶಕೇ ।
ತತ್ಪುಣ್ಯಮಧಿಕಂ ದೇವಿ ಓಂಕಾರೇಶ್ವರ ದರ್ಶನಾತ್ ॥ ೩೩ ॥
ಪೂಜಾಯಾಂ ಯತ್ಫಲಂ ಪ್ರೋಕ್ತಂ ತಸ್ಯ ಸಂಖ್ಯಾ ನ ವಿದ್ಯತೇ ॥ ೩೪ ॥
ಕಿಂ ಯಜ್ಞೈರ್ಬಹುವಿತ್ತಾಢ್ಯೈಃ ಕಿಂ ತಪೋಭಿಃ ಸುದುಷ್ಕರೈಃ ।
ಓಂಕಾರದರ್ಶನಾದೇವ ತತ್ಫಲಂ ಲಭತೇ ಯತಃ ॥ ೩೫ ॥

---

೩೦. ದೇವಿಯೆ! ಈ ಓಂಕಾರೇಶ್ವರನ ದರ್ಶನವು ಒಂದು ಸಾವಿರ ಯುಗಾದಿಗಳನ್ನೂ, ನೂರು ವ್ಯತೀಪಾತಗಳನ್ನೂ, ಸಾವಿರ ಅಯನ ಪುಣ್ಯಕಾಲಗಳನ್ನೂ ಸಮಗ್ರವಾಗಿ ಆಚರಿಸಿದುದಕ್ಕಿಂತಲೂ ಹೆಚ್ಚಿನದಾದ ಪುಣ್ಯವನ್ನು ಕೊಡುವುದು.

೩೧. ನಾಲ್ಕು ವೇದಗಳನ್ನೂ ಸಾಂಗವಾಗಿ ಓದಿದ ಬ್ರಾಹ್ಮಣನಿಗೆ ಯಾವ ಫಲವು ಹೇಳಲ್ಪಟ್ಟಿರುವುದೊ, ಅದಕ್ಕೂ ಮಿಗಿಲಾದ ಪುಣ್ಯವು ಓಂಕಾರೇಶ್ವರ ದರ್ಶನದಿಂದ ಲಭಿಸುವುದು.

೩೨. ತನ್ನ ಜನ್ಮವನ್ನೆಲ್ಲ ನೈಷ್ಠಿಕಬ್ರಹ್ಮಚರ್ಯದಲ್ಲಿಯೇ ಕಳೆದ ಮಹಾತ್ಮನಿಗೆ ಯಾವ ಫಲವುಂಟೊ, ಅದಕ್ಕೂ ಹೆಚ್ಚಿನ ಫಲವೇ ಓಂಕಾರೇಶ್ವರನನ್ನು ನೋಡಿದವರಿಗೆ ಸಿಕ್ಕುವುದು.

೩೩. ಗೋಮಯಾಗ್ನಿಯ ಸಾಧನೆಯಿಂದಲೂ, ಆಮರಣಾಂತೋಪವಾಸದಿಂದಲೂ ಯಾವ ಪುಣ್ಯವು ಲಭಿಸುವುದೊ, ಅದಕ್ಕಿಂತಲೂ ಅಧಿಕವಾದ ಪುಣ್ಯವು ಓಂಕಾರೇಶ್ವರನ ದರ್ಶನದಿಂದ ಸಿಕ್ಕುವುದು.

೩೪. ಇನ್ನು ಆ ಮಹಾಲಿಂಗದ ಪೂಜೆಯನ್ನು ಮಾಡುವುದರಿಂದ ಲಭಿಸುವ ಪುಣ್ಯದ ಇಯತ್ತೆಯೇ ಯಾರಿಗೂ ತಿಳಿಯದು.

೩೫. ಬಹಳ ಹಣವನ್ನು ವ್ಯಯಮಾಡಿ ಸಾಧಿಸುವ ಯಜ್ಞಗಳಿಂದಲೂ ಅತ್ಯಂತ ದುಸ್ಸಾಧ್ಯಗಳಾದ ತಪಸ್ಸುಗಳನ್ನು ಮಾಡುವುದರಿಂದಲೂ ಪ್ರಯೋಜನವೇನು? ಆ ಫಲವೆಲ್ಲವೂ ಓಂಕಾರೇಶ್ವರನನ್ನು ನೋಡುವ ಮಾತ್ರದಿಂದಲೇ ಪ್ರಾಪ್ತವಾಗುವುದು.

ಪೂಜನಾತ್ ಸ್ಪರ್ಶನಾದ್ವಾಽಪಿ ಕೀರ್ತನಾಚ್ಛ್ರವಣಾತ್ತಥಾ ।
ಓಂಕಾರೇಶ್ವರದೇವಸ್ಯ ನರಾಃ ಸ್ಯುರ್ಮುಕ್ತಿಭಾಜನಾಃ ॥ ೩೬ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಓಂಕಾರೇಶ್ವರದೇವಸ್ಯ ಶೃಣು ವಿಶ್ವೇಶ್ವರಂ ಪರಂ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಓಂಕಾರೇಶ್ವರಮಾಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೩೬. ಈ ಓಂಕಾರೇಶ್ವರನನ್ನು ಪೂಜಿಸುವುದರಿಂದಲೂ, ಸ್ಪರ್ಶಿಸುವುದರಿಂದಲೂ, ಸ್ತೋತ್ರಮಾಡುವುದರಿಂದಲೂ, ಈ ಕಥೆಯನ್ನು ಕೇಳುವುದರಿಂದಲೂ ಮನುಜರು ಮೋಕ್ಷಕ್ಕೆ ಭಾಜನರಾಗುವರು.

೩೭. ದೇವಿಯೆ! ಇಂತು ನಿನಗೆ ಓಂಕಾರೇಶ್ವರನ ಪ್ರಭಾವವುಳ್ಳ ಪಾಪನಾಶಕವಾದ ಚರಿತ್ರೆಯು ಹೇಳಲ್ಪಟ್ಟಿತು. ಇನ್ನು ವಿಶ್ವೇಶ್ವರಮಹಾದೇವನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಓಂಕಾರೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಪಂಚಾಶತ್ತಮೋಽಧ್ಯಾಯಃ

### ವಿಶ್ವೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ:—

ತ್ರಿಪಂಚಾಶತ್ತಮಂ ವಿದ್ಧಿ ಸುಪ್ರಸಿದ್ಧಮಹೇಶ್ವರಂ ।
ಪರಂ ವಿಶ್ವೇಶ್ವರಂ ಖ್ಯಾತಂ ವಿಶ್ವೇಷು ಭುವನೇಷ್ವಪಿ ॥ ೧ ॥
ಬಭೂವ ನೃಪತಿಃ ಪೂರ್ವಂ ವಿದರ್ಭಾಯಾಂ ವಿದೂರಥಃ ।
ಸೋಽಂತಃಪುರಾಽಯುತೋಪೇತಂ ಚಕ್ರೇ ರಾಜ್ಯಮಕಂಟಕಂ ॥ ೨ ॥
ಜಘಾನ ತಾಪಸಂ ಸೋಽಥ ಪ್ರಮಾದಾನ್ಮೃಗಯಾಂ ಗತಃ ।
ಕೃಷ್ಣಾಽಜಿನಧರಂ ಶಾಂತಂ ಧ್ಯಾಯಂತಂ ಬ್ರಹ್ಮ ಶಾಶ್ವತಂ ॥ ೩ ॥
ಮೃಗಂ ಮತ್ವಾ ಮಹಾರಣ್ಯೇ ಬ್ರಾಹ್ಮಣಂ ದೈವಮೋಹಿತಃ ।
ತೇನ ಕರ್ಮವಿಪಾಕೇನ ದೇಹಾಂತೇ ರೌರವಂ ಗತಃ ॥ ೪ ॥
ತತ್ರಾಽಸೌ ಯಾತನಾ ಘೋರಾ ಅನುಭೂಯಾತ್ಮಕಾಲತಃ ।
ತಸ್ಮಾದಿಹಾಗತೋ ಮರ್ತ್ಯೇ ಸರ್ಪೋ ವಿಷಧರೋಽಭವತ್ ॥ ೫ ॥

---

### ಕನ್ನಡದ ಅನುವಾದ

#### ವಿಶ್ವೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಐವತ್ತಮೂರನೆಯ ಮಹೇಶ್ವರ ಲಿಂಗವು ಬಹಳ ಪ್ರಸಿದ್ಧವಾದುದು. ಅದೇ ವಿಶ್ವೇಶ್ವರನೆಂದು ಸಕಲ ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು.

೨. ಹಿಂದೆ ವಿದರ್ಭದೇಶದಲ್ಲಿ ವಿದೂರಥನೆಂಬ ಚಕ್ರವರ್ತಿಯೊಬ್ಬನಿದ್ದನು. ಆತನಿಗೆ ಹತ್ತುಸಾವಿರ ಮಡದಿಯರಿದ್ದರು. ಇವರೆಲ್ಲರೊಡಗೂಡಿ ಸಕಲ ಸುಖಗಳನ್ನನುಭವಿಸುತ್ತ ನಿಷ್ಕಂಟಕವಾದ ರಾಜ್ಯವನ್ನು ಆತನು ಆಳುತ್ತಿದ್ದನು.

೩. ಬೇಟೆಗಾಗಿ ಹೋಗಿದ್ದ ಆತನು ಪ್ರಮಾದವಶದಿಂದ ಕೃಷ್ಣಾಜಿನವನ್ನು ಧರಿಸಿಕೊಂಡು ಶಾಂತನೂ ಪರಬ್ರಹ್ಮಚಿಂತನಪರನೂ ಆದ ತಾಪಸೋತ್ತಮನೊಬ್ಬನನ್ನು ಕೊಂದನು.

೪. ಅದೃಷ್ಟದಿಂದ ಪ್ರೇರಿತನಾಗಿ ಮಹಾರಣ್ಯದಲ್ಲಿ ಸಂಚರಿಸುತ್ತಿದ್ದ ಆ ಬ್ರಾಹ್ಮಣನನ್ನು ಮೃಗವೆಂದೇ ತಿಳಿದನು. ಆ ಪಾಪಕೃತ್ಯದ ಫಲವಾಗಿ ದೇಹಾವಸಾನದಲ್ಲಿ ಅವನು ರೌರವನರಕವನ್ನೂ ಹೊಂದಿದನು.

೫. ಅಲ್ಲಿ ತನ್ನ ಪಾಪಕ್ಕೆ ನಿಯತವಾದ ಕಾಲದವರೆಗೂ ಅನೇಕ ಘೋರ ಯಾತನೆಗಳನ್ನನುಭವಿಸಿ ಪುನಃ ಈ ಮನುಷ್ಯಲೋಕಕ್ಕೆ ಬಂದು ವಿಷಧಾರಿಯಾದ ಒಂದು ಸರ್ಪವಾಗಿ ಹುಟ್ಟಿದನು.

ಅದಶತ್ಸೋಽಪಿ ಕೋಪೇನ ಬ್ರಾಹ್ಮಣಂ ಚರಣೇ ಪ್ರಿಯೇ ।
ಲಕುಟೇನ ಹತಃ ಸೋಽಪಿ ಪಂಚತ್ವಂ ತತ್ಕ್ಷಣಾದ್ಗತಃ ॥ ೬ ॥
ಚ್ಯುತಸ್ತು ನರಕಾತ್ಸಿಂಹೋ ದ್ವಿತೀಯೇಽಭೂತ್ಸುದಾರುಣಃ ।
ರಾಜಾನಂ ಭಕ್ಷಯಾಮಾಸ ರಾಜಲೋಕೈರ್ನಿಪಾತಿತಃ ॥ ೭ ॥
ಪುನರ್ವ್ಯಾಘ್ರೋ ಬಭೂವಾಸೌ ತೃತೀಯೇಽಪಿ ಭವಾಂತರೇ ।
ತೀಕ್ಷ್ಣಪಾದನಖೈರ್ಘೋರೈರ್ಘಾತಯಾಮಾಸ ಸೂಕರಾನ್ ॥ ೮ ॥
ತೇನಾಽಪಿ ವೈಶ್ಯೋ ನಿಧನಂ ನೀತಃ ಕಶ್ಚಿದ್ವನಾಂತರೇ ।
ನಿಷಾದೈರ್ನಿಹತಃ ಸೋಽಪಿ ಬಾಣೈಃ ಪಂಚತ್ವಮಾಗತಃ ॥ ೯ ॥
ಚತುರ್ಥೇಽಪಿ ಗಜೋ ಜಾತಃ ಸಿಂಹಾದ್ವಧಮವಾಪ್ತವಾನ್ ।
ಪಂಚಮೇ ಮಕರೋ ಜಾತಃ ಕ್ಷಾರಾಂಭಸಿ ಮಹೋದಧೌ ॥ ೧೦ ॥
ಸ್ನಾತುಕಾಮಾಮಥೋ ರಾಮಾಮಾಜಘಾನಾಽತಿಪಾಪಕೃತ್ ।
ಧೀವರೈಃ ಕೃತಧಿಕ್ಕಾರೈರ್ಬಡಿಶೈಃ ಸನ್ನಿಪಾತಿತಃ ॥ ೧೧ ॥

---

೬. ಪ್ರಿಯಳೆ! ಒಮ್ಮೆ ಆ ಸರ್ಪವೂ ಕೋಪದಿಂದ ಒಬ್ಬ ಬ್ರಾಹ್ಮಣನ ಕಾಲನ್ನು ಕಚ್ಚಲು ಆತನು ದೊಣ್ಣೆಯಿಂದ ಅದನ್ನು ಹೊಡೆದನು. ಆ ಕ್ಷಣದಲ್ಲಿಯೇ ಅದು ಸತ್ತುಹೋಯಿತು.

೭. ಪುನಃ ನರಕವನ್ನನುಭವಿಸಿ ಎರಡನೆಯ ಜನ್ಮದಲ್ಲಿ ಸಿಂಹವಾಗಿ ಜನಿಸಿತು. ಕ್ರೂರಪ್ರಕೃತಿಯುಳ್ಳ ಆ ಮೃಗವು ಒಬ್ಬ ರಾಜನನ್ನು ತಿಂದುಹಾಕಲು ಆ ರಾಜನ ಪರಿವಾರದವರು ಅದನ್ನು ಕೊಂದುಹಾಕಿದರು.

೮. ಮೂರನೆಯ ಜನ್ಮದಲ್ಲಿ ಆತನು ಒಂದು ವ್ಯಾಘ್ರವಾದನು. ಮೊನಚೂ, ದಾರುಣಗಳೂ ಆದ ಪಾದಗಳ ಉಗುರುಗಳಿಂದ ಕೂಡಿ ಕಾಡುಹಂದಿಗಳೆಲ್ಲವನ್ನೂ ಆ ವ್ಯಾಘ್ರವು ಕೊಲ್ಲುತ್ತಿದ್ದಿತು.

೯. ಅದೂ ಸಹ ಅರಣ್ಯಮಧ್ಯದಲ್ಲಿ ಪ್ರಯಾಣವನ್ನು ಮಾಡುತ್ತಿದ್ದ ಒಬ್ಬ ವೈಶ್ಯನನ್ನು ಮರಣಕ್ಕೆ ಗುರಿಮಾಡಿತು. ಬೇಡರು ಸುತ್ತುವರೆದು ಬಾಣಗಳಿಂದ ಹೊಡೆಯಲು ಅದೂ ಪಂಚತ್ವವನ್ನು ಹೊಂದಿತು.

೧೦. ನಾಲ್ಕನೆಯದಾಗಿ ಆನೆಯಾಗಿ ಹುಟ್ಟಿ ಸಿಂಹದಿಂದ ಸಾವನ್ನು ಪಡೆಯಿತು. ಐದನೆಯ ಜನ್ಮದಲ್ಲಿ ಲವಣಸಮುದ್ರದಲ್ಲಿ ಮೊಸಳೆಯಾಗಿ ಅವತರಿಸಿತು.

೧೧. ಅತಿ ಪಾಪಜೀವಿಯಾದ ಅದು ಸ್ನಾನಮಾಡಲು ಬಂದ ಒಬ್ಬ ಸ್ತ್ರೀಯನ್ನು ಕೊಂದಿತು. ಈ ಕರ್ಮವನ್ನು ನಿಂದಿಸಿದ ಬೆಸ್ತರು ಅನೇಕ ಗಾಳಗಳ ಮಾಂಸಗಳಿಂದ ಅದನ್ನು ಪ್ರಲೋಭಿಸಿ ಕೊಂದುಹಾಕಿದರು.

ಪುನಃ ಷಷ್ಠೇ ಭವೇ ಜಾತಃ ಪಿಶಾಚಃ ಪಿಶಿತಾಶನಃ ।
ಸಿದ್ಧಮಂತ್ರೈರಥೋದಗ್ರೈರಥರ್ವಪ್ರಭವೈರ್ಭೃಶಂ ॥ ೧೨ ॥
ಮಂತ್ರೀ ಮಂತ್ರವಿದಾಂ ಶ್ರೇಷ್ಠೋ ಬ್ರಾಹ್ಮಣಸ್ತಂ ಜಘಾನ ಹ ।
ಸಪ್ತಮೇ ಸ ಪುನರ್ಜಾತೋ ದುರ್ನಿರೀಕ್ಷ್ಯವಪುರ್ಭೃಶಂ ॥ ೧೩ ॥
ತೀಕ್ಷ್ಣದಂಷ್ಟ್ರಃ ಕರಾಲಾಸ್ಯೋ ಮಾಂಸಶೋಣಿತಭೋಜನಃ ।
ಶುಷ್ಕಾಂಗೋ ಮರುಭೂಮಿಷು ಪಾಪಿಷ್ಠೋ ಬ್ರಹ್ಮರಾಕ್ಷಸಃ ॥ ೧೪ ॥
ಆಕ್ರಮ್ಯ ನಿಮಿರಾಜೇನ ರಾಜ್ಞಾ ರಾಕ್ಷಸಶತ್ರುಣಾ ।
ಸಮಾರೋಪ್ಯ ಧನುಃ ಸಂಖ್ಯೇ ಬ್ರಹ್ಮಾಸ್ತ್ರೇಣ ನಿಪಾತಿತಃ ॥ ೧೫ ॥
ದಾರುಣಃ ಸಾರಮೇಯೋಽಭೂದತಿಕೃಷ್ಣೋಽಷ್ಟಮೇ ಭವೇ ।
ಸ ಶೂಕರಖುರಾಘಾತವ್ರಣೈಃ ಪಂಚತ್ವಮಾಗತಃ ॥ ೧೬ ॥
ನವಮೇ ಜಂಬುಕೋ ಜಾತಃ ಶ್ಮಶಾನೇ ಸ ಚ ಮಾಂಸಭುಕ್ ।
ಲೌಲ್ಯಾತ್ಸ ನಿಧನಂ ಪ್ರಾಪ್ತೋ ದುಃಖಾರ್ತೋ ದಾವವಹ್ನಿನಾ ॥ ೧೭ ॥

---

೧೨–೧೩. ಆರನೆಯ ಜನ್ಮದಲ್ಲಿ ಆ ವಿದೂರಥರಾಜನು ಪುನಃ ಮಾಂಸಭೋಜನನಾದ ಪಿಶಾಚನಾದನು. ಮಂತ್ರಜ್ಞರಲ್ಲಿ ಶ್ರೇಷ್ಠನೆನಿಸಿದ ಒಬ್ಬಾನೊಬ್ಬ ಬ್ರಾಹ್ಮಣನು ಅಥರ್ವಣವೇದದಲ್ಲಿರುವ ಕಾರ್ಯಸಾಧಕಗಳಾದ ಅನೇಕ ಮಂತ್ರಗಳಿಂದ ಆ ಪಿಶಾಚವನ್ನು ಕೊನೆಗಾಣಿಸಿದನು. ಏಳನೆಯ ಜನ್ಮದಲ್ಲಿ ಅವನೇ ನೋಡಲಸಾಧ್ಯವಾದ ಅತಿ ದಾರುಣದೇಹವನ್ನು ಪಡೆದನು.

೧೪. ಮೊನಚಾದ ಕೋರೆದಾಡೆಗಳವನೂ, ವಿಕಾರಮುಖದವನೂ, ಮಾಂಸರಕ್ತಗಳನ್ನು ಸೇವಿಸುವವನೂ, ಮರಳುಗಾಡಿನಲ್ಲಿ ಆಹಾರವಿಲ್ಲದೆ ಒಣಗಿದ ದೇಹವುಳ್ಳವನೂ ಆದ ಬ್ರಹ್ಮರಾಕ್ಷಸನಾಗಿ ಆ ಪಾಪಿಯು ಜನ್ಮವನ್ನು ತಾಳಿದನು.

೧೫. ರಾಕ್ಷಸಾಂತಕನೆನಿಸಿದ ನಿಮಿಮಹಾರಾಜನೊಡನೆ ಒಮ್ಮೆ ಯುದ್ಧವೇರ್ಪಡಲು ಆ ಚಕ್ರವರ್ತಿಯು ಬಿಲ್ಲಿಗೆ ಹೆದೆಯನ್ನೇರಿಸಿ ಬ್ರಹ್ಮಾಸ್ತ್ರದಿಂದ ಆ ಬ್ರಹ್ಮರಾಕ್ಷಸನನ್ನು ನಿಗ್ರಹಿಸಿದನು.

೧೬. ಎಂಟನೆಯ ಜನ್ಮದಲ್ಲಿ ಕಪ್ಪುದೇಹದಿಂದ ಭಯಂಕರವಾದ ಬೇಟೆನಾಯಿಯಾದನು. ಆ ನಾಯಿಯೂ ಒಮ್ಮೆ ಕಾಡುಹಂದಿಗಳ ಗೊರಸುಗಳ ಪೆಟ್ಟಿನ ಘಾಯಗಳಿಂದ ಮರಣವನ್ನು ಹೊಂದಿತು.

೧೭. ಒಂಬತ್ತನೆಯದರಲ್ಲಿ ನರಿಯಾಗಿ ಸ್ಮಶಾನದಲ್ಲಿ ಹೆಣಗಳ ಮಾಂಸವನ್ನು ತಿನ್ನುತ್ತ ಜಿಹ್ವಾಚಾಪಲ್ಯದಿಂದ ದಾವಾಗ್ನಿಗೆ ಸಿಲುಕಿ ದುಃಖಗೊಂಡು ನಿಧನವನ್ನು ಹೊಂದಿತು.

ದಶಮೇ ತ್ವಭವದ್ಗೃಧ್ರಸ್ತೀಕ್ಷ್ಣತುಂಡೋ ಭಯಾವಹಃ ।
ಪೂತಿಮಾಂಸವಸಾಹಾರೋ ರೋಗೇಣ ನಿಧನಂ ಗತಃ ॥ ೧೮ ॥
ಏಕಾದಶೇಽಪಿ ಚಂಡಾಲೋ ಗತೋಽವಂತ್ಯಾಂ ವರಾನನೇ ।
ದ್ರವ್ಯಸ್ಯ ಹರಣಾರ್ಥಂ ವೈ ಪ್ರವಿಷ್ಟೋ ದ್ವಿಜವೇಶ್ಮನಿ ॥ ೧೯ ॥
ಸ ದಂಡಪಾಶಿಕೇನೈವ ಪ್ರಾಪ್ತೋ ಬದ್ಧಶ್ಚ ತತ್ಕ್ಷಣಾತ್ ।
ಆನೀತೋ ಹಿ ವಧಾರ್ಥಾಯ ವೃಕ್ಷಾಗ್ರೇ ಹ್ಯವಲಂಬಿತಃ ॥ ೨೦ ॥
ತತ್ರೈವ ಲಿಂಗಮಾಸನ್ನಂ ಸಾಧ್ವಿ ಶೂಲೇಶ್ವರೋತ್ತರೇ ।
ತಸ್ಯ ದೃಷ್ಟಿಪಥಂ ಪ್ರಾಪ್ತಮತಿವಿಕ್ಲವಚೇತಸಃ ॥ ೨೧ ॥
ಕ್ಷಣೇನ ನಿಧನಂ ಪ್ರಾಪ್ತಃ ಸ ಗತಸ್ತ್ರಿದಶಾಲಯಂ ।
ತತ್ರ ಭುಕ್ತ್ವಾ ಪರಾನ್ಭೋಗಾನವತೀರ್ಯ ಚ ಭೂತಲೇ ॥ ೨೨ ॥
ಜಾತಃ ಖ್ಯಾತೋ ವಿದರ್ಭಾಯಾಂ ವಿಶ್ವೇಶೋ ನಾಮ ಪಾರ್ಥಿವಃ ।
ಜಾತಿಸ್ಮರತ್ವಮಾಪನ್ನೋ ಲಿಂಗದರ್ಶನಪುಣ್ಯತಃ ॥ ೨೩ ॥

---

೧೮. ಹತ್ತನೆಯದಾಗಿ ತೀಕ್ಷ್ಣವಾದ ಮೂಗುಳ್ಳ ಭಯಂಕರವಾದ ಹದ್ದಾಗಿ ಹುಟ್ಟಿ ದುರ್ಗಂಧದ ಮಾಂಸವಸಾದಿಗಳನ್ನು ತಿಂದು ರೋಗವನ್ನು ಅನುಭವಿಸುತ್ತ ಸತ್ತುಹೋಯಿತು.

೧೯. ಮಂಗಳಾನನೆಯೆ! ಹನ್ನೊಂದನೆಯ ಜನ್ಮದಲ್ಲಿ ಅವಂತೀಕ್ಷೇತ್ರದಲ್ಲಿ ಚಂಡಾಲನಾಗಿ ಅವತರಿಸಿ ಆ ವಿದೂರಥನು ಧನವನ್ನಪಹರಿಸಲು ಒಬ್ಬ ಬ್ರಾಹ್ಮಣನ ಮನೆಯನ್ನು ಪ್ರವೇಶಿಸಿದನು.

೨೦. ಅವನನ್ನು ದಂಡಧಾರಿಯಾದ ಒಬ್ಬ ಕಾವಲುಗಾರನು ಕಂಡು ನಿಮಿಷದಲ್ಲಿ ಕಟ್ಟಿಹಾಕಿ ವಧೆಗಾಗಿ ಕರೆದುಕೊಂಡು ಬಂದು ಒಂದು ಮರದಿಂದ ತೂಗುಹಾಕಿದನು.

೨೧. ಸಾಧ್ವಿಯೆ! ಅಲ್ಲಿಯೇ ಶೂಲೇಶ್ವರನಿಗೆ ಉತ್ತರದಿಕ್ಕಿನಲ್ಲಿ ಒಂದು ಲಿಂಗವಿದ್ದಿತು. ಮರಣಹಿಂಸೆಯಿಂದ ವ್ಯಾಕುಲಿತವಾದ ಮನಸ್ಸುಳ್ಳ ಆತನ ಕಣ್ಣಿಗೆ ಆ ಲಿಂಗವು ಕಾಣಿಸಿಕೊಂಡಿತು.

೨೨. ಅದನ್ನು ನೋಡುತ್ತ ಕ್ಷಣದಲ್ಲಿಯೆ ಸತ್ತು ಆ ಚಂಡಾಲನು ಸ್ವರ್ಗ ಲೋಕಕ್ಕೆ ಹೋದನು. ಅಲ್ಲಿ ಅನೇಕ ಭೋಗಗಳನ್ನನುಭವಿಸಿ ಪುನಃ ಭೂಲೋಕಕ್ಕೆ ಇಳಿದು ಬಂದನು.

೨೩. ಮತ್ತು ವಿದರ್ಭದೇಶದಲ್ಲಿ ವಿಶ್ವೇಶ್ವರನೆಂಬ ಹೆಸರಿನಿಂದ ಪ್ರಖ್ಯಾತನಾಗಿ ರಾಜ್ಯವನ್ನಾಳುತ್ತಿದ್ದನು. ಉತ್ಕ್ರಮಣಕಾಲದಲ್ಲಿ ಮಾಡಿದ ಶಿವಲಿಂಗ ದರ್ಶನದ ಪುಣ್ಯದ ಫಲವಾಗಿ ಆತನಿಗೆ ಹಿಂದಿನ ಜನ್ಮಗಳ ಸ್ಮರಣೆಯಿದ್ದಿತು.

ದುರ್ಲಭಾನ್ಸುಭುಜೇ ಭೋಗಾನ್ಪ್ರಾಪ್ತಂ ರಾಜ್ಯಂ ಚಕಾರ ಸಃ ।
ಸೋಽಭಿಷಿಚ್ಯ ಸುತಂ ರಾಜ್ಯೇ ವಿನೀತಮತಿಧರ್ಮವಿತ್ ।
ಸಂಸ್ಮರನ್ಪೂರ್ವವೃತ್ತಾಂತಂ ಜಗಾಮಾಽವಂತಿಕಾಂ ಪುರೀಂ ॥ ೨೪ ॥
ತತ್ರ ದೃಷ್ಟ್ವಾ ಮಹಲ್ಲಿಂಗಂ ದುರ್ದರ್ಶಮತಿತೇಜಸಾ ।
ದಿವ್ಯೇನ ಚಕ್ಷುಷಾಽಪಶ್ಯಲ್ಲಿಂಗಮಧ್ಯೇ ಚರಾಚರಂ ॥ ೨೫ ॥
ಲಿಂಗಮಧ್ಯೇ ಸ್ಥಿತಾಃ ಸರ್ವೇ ಸಾಗರಾಃ ಸರಿತಸ್ತಥಾ ।
ದ್ವೀಪಾಶ್ಚ ಪರ್ವತಾಶ್ಚೈವ ತಥಾಽನ್ಯಾ ದಿವ್ಯಭೂತಯಃ ॥ ೨೬ ॥
ಚಂದ್ರಮಾಃ ಸಹನಕ್ಷತ್ರೈರಾದಿತ್ಯಶ್ಚಾಽಗ್ನಿನಾ ಸಹ ।
ಧನದೋ ವರುಣಶ್ಚೈವ ಯಮಃ ಶಕ್ರೋ ಮರುತ್ಪತಿಃ ॥ ೨೭ ॥
ಮರುತೋ ದೇವಗಂಧರ್ವಾ ಋಷಯಶ್ಚ ತಪೋಧನಾಃ ।
ನಾಗಾ ಯಕ್ಷಾಃ ಪಿಶಾಚಾಶ್ಚ ರಾಕ್ಷಸಾ ಭೀಮವಿಕ್ರಮಾಃ ॥ ೨೮ ॥
ಬ್ರಹ್ಮಾದ್ಯಾ ದೇವತಾಶ್ಚಾಽನ್ಯಾಃ ಸ್ಕಂದೋ ಲಂಬೋದರಸ್ತಥಾ ।
ಸರ್ವಂ ತ್ರಿಭುವನಂ ದೇವಿ ಲಿಂಗಮಧ್ಯೇ ವಿಲೋಕಿತಂ ॥ ೨೯ ॥
ಪ್ರಭಾವಂ ತಸ್ಯ ಲಿಂಗಸ್ಯ ಜ್ಞಾತ್ವಾ ಸಮ್ಯಙ್ಮಹೀಪತಿಃ ।
ಸಂಯತಃ ಪೂಜಯಾಮಾಸ ವಿಶ್ವಯೋನಿಂ ಮಹೇಶ್ವರಂ ॥ ೩೦ ॥

---

೨೪. ಇತರರಿಗೆ ದುರ್ಲಭಗಳಾದ ಅನೇಕ ಭೋಗಗಳನ್ನನುಭವಿಸಿ ಆತನು ರಾಜ್ಯವನ್ನಾಳುತ್ತಾ ಸಕಲ ಧರ್ಮಗಳನ್ನೂ ತಿಳಿದವನಾದುದರಿಂದ ವಿನಯ ಸಂಪನ್ನನಾದ ತನ್ನ ಮಗನಿಗೆ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿ ಹಿಂದಿನ ಜನ್ಮದ ವೃತ್ತಾಂತವನ್ನು ಜ್ಞಾಪಿಸಿಕೊಂಡು ಅವಂತೀಕ್ಷೇತ್ರಕ್ಕೆ ಬಂದು ಸೇರಿದನು.

೨೫. ಅಲ್ಲಿ ಅತ್ಯಂತ ತೇಜಸ್ಸಿನಿಂದ ಕೂಡಿ ನೋಡಲಸಾಧ್ಯವಾಗಿರುವ ಮಹಾಲಿಂಗವನ್ನು ಕಂಡು ದಿವ್ಯದೃಷ್ಟಿಯಿಂದ ಆ ಲಿಂಗಮಧ್ಯದಲ್ಲಿಯೇ ಸಕಲ ಚರಾಚರಾತ್ಮಕವಾದ ಜಗತ್ತೂ ಅಡಗಿರುವುದನ್ನು ತಿಳಿದನು.

೨೬–೨೯. ಸಕಲ ಸಮುದ್ರಗಳೂ, ನದಿಗಳೂ, ದ್ವೀಪಗಳೂ, ಪರ್ವತಗಳೂ, ಇತರ ದಿವ್ಯಲೋಕಗಳೂ, ಚಂದ್ರನೂ, ನಕ್ಷತ್ರಮಂಡಲವೂ, ಸೂರ್ಯನೂ, ಅಗ್ನಿಯೂ, ಕುಬೇರನೂ, ವರುಣನೂ, ಯಮನೂ, ಇಂದ್ರನೂ, ವಾಯುವೂ, ಮರುತ್ತುಗಳೂ, ದೇವತೆಗಳೂ, ಗಂಧರ್ವರೂ, ಮಹರ್ಷಿಗಳೂ, ತಪಸ್ವಿಗಳೂ, ನಾಗರೂ, ಯಕ್ಷರೂ, ಪಿಶಾಚರೂ, ಮಹಾಪರಾಕ್ರಮಿಗಳಾದ ರಾಕ್ಷಸರೂ, ಬ್ರಹ್ಮಾದಿ ಸಮಸ್ತ ದೇವತೆಗಳೂ, ಷಣ್ಮುಖಗಣಪತಿಗಳೂ ಆ ಲಿಂಗದ ಮಧ್ಯ ದಲ್ಲಿಯೆ ಕಂಡರು. ಪಾರ್ವತಿಯೆ! ಆ ಲಿಂಗದಲ್ಲಿಯೆ ಸಮಸ್ತ ಬ್ರಹ್ಮಾಂಡವೂ ಆ ರಾಜನಿಗೆ ಕಾಣಿಸಿತು.

೩೦. ಮಹಾರಾಜನು ಆ ಲಿಂಗದ ಪ್ರಭಾವವನ್ನು ಚೆನ್ನಾಗಿ ತಿಳಿದು

ಪ್ರಸನ್ನಶ್ಚಾಽಭವತ್ತಸ್ಯ ವಚನಂ ಚೇದಮಬ್ರವೀತ್ ।
ವರಂ ವರಯ ಭದ್ರಂ ತೇ ಕಿಮಭೀಷ್ಟಂ ದದಾಮಿ ತೇ ॥ ೩೧ ॥
ತೇನೋಕ್ತಂ ವಚನಂ ರಾಜ್ಞಾ ಯದಿ ತುಷ್ಟೋಽಸಿ ಮೇ ಪ್ರಭೋ ।
ಯೇ ತ್ವಾಂ ಪಶ್ಯಂತಿ ಮನುಜಾಃ ಶ್ರಧ್ಧಯಾಽಶ್ರದ್ಧಯಾಽಥ ವಾ ॥ ೩೨ ॥
ಮಾಭೂತ್ತೇಷಾಂ ಪ್ರಪತನಂ ಘೋರೇ ಸಂಸಾರಸಾಗರೇ ।
ವಿಶ್ವೇಶ್ವರೇತಿ ನಾಮ್ನಾ ವೈ ಪ್ರಸಿದ್ಧೋ ಭವ ಭೂತಲೇ ॥ ೩೩ ॥
ಇತ್ಯುಕ್ತೇ ವಚನೇ ಭೂಯೋ ವಿಶ್ವೇಶೋಽಲಂಕೃತೋ ಗಣೈಃ ।
ವಿಮಾನೇನ ಸುದೀಪ್ತೇನ ಗತೋ ಲೋಕಂ ಮದೀಯಕಂ ॥ ೩೪ ॥
ಗಣೈರ್ನಾನಾವಿಧೈಃ ಸಾರ್ಧಂ ಸ್ತೂಯಮಾನೋ ವರಾನನೇ ।
ಕಿರೀಟೀ ಕುಂಡಲೀ ಚೈವ ಮುಕ್ತಾಹಾರವಿಭೂಷಿತಃ ।
ವಿಮಾನಂ ತಸ್ಯ ತದ್ದಿವ್ಯಂ ಪರಿಕ್ರಮ್ಯ ಸಮಂತತಃ ॥ ೩೫ ॥
ಸಮಹೇಂದ್ರಧನಾಧ್ಯಕ್ಷಾ ನಾನಾನಾಕನಿವಾಸಿನಃ ।
ಮುನಯಃ ಸಿದ್ಧಗಂಧರ್ವಾಸ್ತಥಾ ಚಾಪ್ಸರಸಾಂ ಗಣಾಃ ॥ ೩೬ ॥

---

ಕೊಂಡು ಇಂದ್ರಿಯನಿಗ್ರಹಪೂರ್ವಕವಾಗಿ ಜಗದಾದಿಪುರುಷನಾದ ಮಹೇಶ್ವರನನ್ನು ಪೂಜಿಸುತ್ತಿದ್ದನು.

೩೧. ಮಹಾದೇವನು ಆತನಿಗೆ ಪ್ರಸನ್ನನಾಗಿ, "ನೀನು ವರವನ್ನು ಕೇಳು, ನಿನಗೆ ಮಂಗಳವಾಗಲಿ; ನಿನಗೆ ಯಾವ ಅಭೀಷ್ಟವನ್ನು ಕೊಡಲಿ?" ಎಂದು ಮೃದುವಚನವನ್ನಾಡಿದನು.

೩೨-೩೩. ಆ ರಾಜೇಂದ್ರನೆಂದನು. "ಲೋಕೇಶ್ವರನೆ! ನೀನು ಸಂತುಷ್ಟನಾಗಿರುವೆಯಾದರೆ ನನಗೆ ಈ ವರವನ್ನು ಕೊಡು. ಯಾವ ಮನುಜರು ಶ್ರದ್ಧೆಯಿಂದಾಗಲಿ ಅಶ್ರದ್ಧೆಯಿಂದಾಗಲಿ ಇಲ್ಲಿ ನಿನ್ನನ್ನು ನೋಡುವರೊ, ಅವರಿಗೆಂದಿಗೂ ಭಯಂಕರವಾದ ಸಂಸಾರಸಮುದ್ರದಲ್ಲಿ ಪತನವೆಂಬುದಿಲ್ಲದಿರಲಿ. ನೀನೂ ವಿಶ್ವೇಶ್ವರನೆಂಬ ಹೆಸರಿನಿಂದ ಭೂಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದಿರು."

೩೪. ಇಂತೆಂದು ಪ್ರಾರ್ಥಿಸುತ್ತಿದ್ದ ವಿಶ್ವೇಶನನ್ನು ಗಣನಾಯಕರು ಅಲಂಕರಿಸಿದರು. ಆತನು ತೇಜೋಮಯವಾದ ವಿಮಾನದಲ್ಲಿ ಕುಳಿತು ನನ್ನ ಲೋಕಕ್ಕೆ ಹೊರಟುಹೋದನು.

೩೫. ದೇವಿಯೆ! ನಾನಾ ವಿಧಗಳಾದ ಗಣಗಳು ಅವನನ್ನು ಸ್ತೋತ್ರ ಮಾಡುತ್ತಿರಲು ಕಿರೀಟ, ಕುಂಡಲಗಳು, ಮುತ್ತಿನ ಹಾರಗಳು ಮುಂತಾದುವುಗಳಿಂದಲಂಕೃತನಾಗಿದ್ದ ಆತನ ದಿವ್ಯವಿಮಾನವನ್ನು ಸಕಲರೂ ಸುತ್ತುವರೆದಿದ್ದರು.

೩೬. ಮಹೇಂದ್ರ ಕುಬೇರರೇ ಮೊದಲಾದ ಅನೇಕ ದೇವತೆಗಳೂ, ಮುನಿಗಳೂ, ಸಿದ್ಧರೂ, ಗಂಧರ್ವರೂ, ಅಪ್ಸರೆಯರೂ ಅಲ್ಲಿ ನೆರೆದಿದ್ದರು.

ನೃತ್ಯೈರ್ನಾಮರನಾರೀಣಾಂ ವಿಲೋಕಿತವಿನೋದಕಃ ।
ಯುಗಕೋಟಿಸಹಸ್ರಂ ತು ಮತ್ಸಮೀಪೇ ವ್ಯವಸ್ಥಿತಃ ॥ ೩೭ ॥
ಅತೋ ದೇವಿ ಭುವಿ ಖ್ಯಾತೋ ದೇವೋ ವಿಶ್ವೇಶ್ವರೇಶ್ವರಃ ।
ದೃಷ್ಟ್ವಾ ಲಿಂಗಂ ಚ ವಿಶ್ವೇಶಂ ಪಾತಕೈರ್ವಿಪ್ರಮುಚ್ಯತೇ ॥ ೩೮ ॥
ಸಪ್ತಜನ್ಮಕೃತೈರ್ದೇಹೀ ಮನೋವಾಕ್ಕಾಯಕರ್ಮಭಿಃ ।
ದೃಷ್ಟ್ವಾ ವಿಶ್ವೇಶ್ವರಂ ಲಿಂಗಂ ಕೃತಕೃತ್ಯತ್ವಮಾಪ್ಯತೇ ॥ ೩೯ ॥
ತಸ್ಯ ನಶ್ಯತಿ ದೌರ್ಭಾಗ್ಯಮಲಕ್ಷ್ಮೀರ್ನಾಶಮೇತಿ ಚ ।
ಪ್ರಾಪ್ನೋತಿ ದೇಹೀ ಕಾಮಾಂಶ್ಚ ಸಮೃದ್ಧಿಂ ಮಾನಸೀಂ ಸದಾ ॥ ೪೦ ॥
ದುಃಸ್ವಪ್ನೋ ವ್ಯಾಧಯಃ ಕ್ರೂರಾ ಗ್ರಹಾ ಭೂತಾಶ್ಚ ದಾರುಣಾಃ ।
ಪ್ರಣಶ್ಯಂತಿ ವರಾರೋಹೇ ವಿಶ್ವೇಶೇ ಪೂಜಿತೇ ಸದಾ ॥ ೪೧ ॥
ಯೇ ಕೇಚಿಚ್ಛ್ರದ್ಧಯಾ ಯುಕ್ತಾ ಲಿಂಗಮಾರಾಧಯಂತಿ ವೈ ।
ತೇ ಸರ್ವಕಾಮಸಂಪನ್ನಾ ಜಾಯಂತೇ ಚ ಯುಗೇ ಯುಗೇ ॥ ೪೨ ॥

---

೩೭. ಆತನು ವಿನೋದದಿಂದ ದೇವತಾಸ್ತ್ರೀಯರ ನೃತ್ಯಾದಿ ವಿಲಾಸಗಳನ್ನು ನೋಡುತ್ತ ಒಂದುಸಾವಿರ ಕೋಟಿ ಯುಗಗಳವರೆಗೂ ನನ್ನ ಸಮೀಪದಲ್ಲಿಯೇ ನೆಲಸಿದ್ದನು.

೩೮. ದೇವಿಯೆ! ಆದುದರಿಂದಲೇ ಆ ಲಿಂಗವು ಭೂಲೋಕದಲ್ಲಿ ವಿಶ್ವೇಶ್ವರ ಮಹಾಲಿಂಗವೆಂದು ಪ್ರಖ್ಯಾತವಾಗಿರುವುದು. ಈ ವಿಶ್ವೇಶ್ವರಲಿಂಗವನ್ನು ನೋಡಿದವನು ಸಕಲ ಪಾತಕಗಳಿಂದಲೂ ಮುಕ್ತನಾಗುವನು.

೩೯. ಏಳು ಜನ್ಮಗಳಲ್ಲಿ ಮನಸ್ಸು, ಮಾತು, ದೇಹ, ಕರ್ಮಗಳಿಂದ ಮಾಡಿದ ಸಮಸ್ತ ಪಾಪಗಳಿಂದಲೂ ರಹಿತನಾಗಿ ವಿಶ್ವೇಶ್ವರನ ದರ್ಶನವನ್ನು ಮಾಡಿದವನು ಕೃತಕೃತ್ಯತೆಯನ್ನು ಪಡೆಯುವನು.

೪೦. ಅವನ ದೌರ್ಭಾಗ್ಯವೂ, ದಾರಿದ್ರ್ಯವೂ ನಾಶವನ್ನು ಹೊಂದುವುವು. ಪ್ರತಿಯೊಬ್ಬ ಮನುಷ್ಯನೂ ಇಷ್ಟಾರ್ಥಗಳನ್ನೂ ಮನಸ್ಸಿನ ಸಮೃದ್ಧಿಯನ್ನೂ ನಿತ್ಯವೂ ಪಡೆಯುತ್ತಿರುವನು.

೪೧. ಸುಂದರಾಂಗಿಯೆ! ವಿಶ್ವೇಶ್ವರನನ್ನು ನಿತ್ಯವೂ ಪೂಜಿಸುತ್ತಿರಲು ದುಸ್ಸ್ವಪ್ನಗಳೂ, ವ್ಯಾಧಿಗಳೂ, ಕ್ರೂರಗ್ರಹಗಳ ಬಾಧೆಗಳೂ, ಭಯಂಕರಗಳಾದ ಭೂತಪ್ರೇತಾದಿಗಳ ಕೋಟಲೆಗಳೂ ನಾಶವಾಗುವುವು.

೪೨. ಯಾವ ನರರು ಶ್ರದ್ಧಾಭಕ್ತಿಗಳಿಂದ ಕೂಡಿ ಈ ಲಿಂಗವನ್ನು ಪೂಜಿಸುವರೊ, ಅವರು ಯುಗಯುಗಾಂತರಗಳಲ್ಲಿಯೂ ಸರ್ವಸೌಖ್ಯಗಳನ್ನೂ ಪಡೆಯುತ್ತಿರುವರು.

ಅಂತೇ ಗತಿಶ್ಚ ಸಾ ದಿವ್ಯಾ ಜಾಯತೇ ಮತ್ಪ್ರಸಾದತಃ ।
ಯತ್ರ ಸಂಪೂಜ್ಯತೇ ಲಿಂಗಂ ತಸ್ಮಿನ್ದೇಶೇ ಶುಭಾಃ ಕ್ರಿಯಾಃ ॥ ೪೩ ॥
ನ ತತ್ರ ದುರ್ಭಿಕ್ಷಭಯಂ ನಾಽಪಮೃತ್ಯುಭಯಂ ಕ್ವಚಿತ್ ।
ಪ್ರೇತಯೋನೌ ಚ ವೇತಾಲಾ ನ ನಾಗಾ ನ ಚ ದಂಷ್ಟ್ರಿಣಃ ॥ ೪೪ ॥
ಏತೇ ಚ ವಿಷ್ಣುಬ್ರಹ್ಮೇಂದ್ರಕುಬೇರವರುಣಾದಯಃ ।
ಲಿಂಗಾರ್ಚನೇನ ಸಂಪ್ರಾಪ್ತಾಃ ಪರಾಂ ಸಿದ್ಧಿಂ ಮಹೌಜಸಃ ॥ ೪೫ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ವಿಶ್ವೇಶ್ವರಸ್ಯ ದೇವಸ್ಯ ಕಂಠೇಶ್ವರಮತಃ ಶೃಣು ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ವಿಶ್ವೇಶ್ವರಮಾಹಾತ್ಮ್ಯವರ್ಣನಂ"ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

೪೩. ಅಂತ್ಯದಲ್ಲಿ ಅವರಿಗೆ ನನ್ನ ಅನುಗ್ರಹದಿಂದ ದಿವ್ಯಗತಿಯು ಲಭಿಸುವುದು. ಈ ಲಿಂಗವು ಪೂಜೆಗೊಳ್ಳುವ ದೇಶದಲ್ಲಿ ಸಮಸ್ತ ಕರ್ಮಗಳೂ ಸಫಲಗಳಾಗುವುವು.

೪೪. ಅಲ್ಲಿ ಎಂದಿಗೂ ದುರ್ಭಿಕ್ಷದ ಭಯವಾಗಲಿ, ಅಕಾಲಮೃತ್ಯುವಾಗಲಿ ಉಂಟಾಗುವುದಿಲ್ಲ. ಜೀವರಿಗೆ ಪ್ರೇತಜನ್ಮವಿಲ್ಲ. ಆ ದೇಶದಲ್ಲಿ ಬೇತಾಳಗಳಾಗಲಿ, ವಿಷದಂಷ್ಟ್ರಗಳುಳ್ಳ ಸರ್ಪಗಳಾಗಲಿ ಇರುವುದಿಲ್ಲ.

೪೫. ಮಹಾವಿಷ್ಣು, ಬ್ರಹ್ಮ, ಮಹೇಂದ್ರ, ಕುಬೇರ, ವರುಣ, ಮುಂತಾದವರೆಲ್ಲರೂ ಈ ಲಿಂಗದ ಪೂಜೆಯಿಂದಲೇ ಮಹಾ ತೇಜಸ್ಸಿನಿಂದ ಕೂಡಿದವರಾಗಿ ಉತ್ತಮ ಸಿದ್ಧಿಗಳನ್ನು ಪಡೆದರು.

೪೬. ದೇವಿಯೆ! ಇಂತು ವಿಶ್ವೇಶ್ವರಮಹಾಲಿಂಗದ ಪ್ರಭಾವದ ಪಾಪನಾಶಕವಾದ ಚರಿತ್ರೆಯನ್ನು ಹೇಳಿರುವೆನು. ಇನ್ನು ಕಂಠೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ವಿಶ್ವೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶತ್ತಮೋಽಧ್ಯಾಯಃ

### ಕಂಠೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಚತುಃಪಂಚಾಶತಂ ವಿದ್ಧಿ ದೇವಂ ಕಂಠೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೧ ॥
ಆದ್ಯಕಲ್ಪೇ ಪುರಾ ದೇವಿ ರಾಜಾಽಭೂತ್ಸತ್ಯವಿಕ್ರಮಃ ।
ಸ ಶತ್ರುಭಿರ್ಜಿತಃ ಸಂಖ್ಯೇ ಹೃತಕೋಶೋಽತಿದುಃಖಿತಃ ॥ ೨ ॥
ವನಂ ಜಗಾಮ ಗಹನಮೇಕಾಕೀ ಶ್ರಮಕರ್ಶಿತಃ ।
ತತ್ರಾಶ್ರಮಂ ದದರ್ಶಾಽಥ ವಸಿಷ್ಠಸ್ಯ ಮಹಾತ್ಮನಃ ॥ ೩ ॥
ತೇನರ್ಷಿಣಾ ವಸಿಷ್ಠೇನ ದೃಷ್ಟಮಾತ್ರಃ ಸ ಭೂಪತಿಃ ।
ಪೂಜಿತೋ ವಿಷ್ಟರಾದ್ಯೇನ ರಾಜಾರ್ಹೇಣ ಚ ಸಾದರಂ ॥ ೪ ॥
ಜ್ಞಾತ್ವಾ ತಪಃಪ್ರಭಾವೇನ ಸೂರ್ಯವಂಶೋದ್ಭವಂ ನೃಪಂ ।
ಪಪ್ರಚ್ಛಾಗಮನಂ ದೇವಿ ಕುಶಲಂ ಚ ಪುನಃ ಪುನಃ ॥ ೫ ॥

---

### ಕನ್ನಡದ ಅನುವಾದ

#### ಕಂಠೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಐವತ್ತನಾಲ್ಕನೆಯ ಮಹಾಲಿಂಗವೇ ಕಂಠೇಶ್ವರವೆಂದು ತಿಳಿ. ಅದನ್ನು ನೋಡುವ ಮಾತ್ರದಿಂದಲೇ ಮಾನವನು ಕೃತಕೃತ್ಯನಾಗುವನು.

೨. ದೇವಿಯೆ! ಮೊದಲನೆಯ ಕಲ್ಪದಲ್ಲಿ ಸತ್ಯಶೀಲನಾದ ಮಹಾರಾಜನೊಬ್ಬನಿದ್ದನು. ಆತನನ್ನು ಶತ್ರುಗಳು ಯುದ್ಧದಲ್ಲಿ ಸೋಲಿಸಲು ಸಕಲೈಶ್ವರ್ಯವನ್ನೂ ಕಳೆದುಕೊಂಡು ಅತಿ ದುಃಖಕ್ಕೊಳಗಾದನು.

೩. ಆತನು ಏಕಾಕಿಯಾಗಿ ಅರಣ್ಯವನ್ನು ಪ್ರವೇಶಿಸಿ ತಿರುಗುತ್ತ ಆಯಾಸಗೊಂಡು ವನಮಧ್ಯದಲ್ಲಿ ಮಹಾತ್ಮನಾದ ವಸಿಷ್ಠಮುನಿಯ ಆಶ್ರಮವನ್ನು ಕಂಡನು.

೪. ಆ ರಾಜೇಂದ್ರನನ್ನು ಕಂಡ ಕೂಡಲೆ ವಸಿಷ್ಠಮಹರ್ಷಿಯು ಆತನಿಗೆ ರಾಜಯೋಗ್ಯಗಳಾದ ಆಸನಾದಿಗಳನ್ನಿತ್ತು ಆದರದಿಂದ ಸತ್ಕಾರವನ್ನು ಮಾಡಿ ಪೂಜಿಸಿದನು.

೫. ತಪಸ್ಸಿನ ಮಹಿಮೆಯಿಂದ ಆತನು ಸೂರ್ಯವಂಶದಲ್ಲಿ ಹುಟ್ಟಿದವನೆಂದು ತಿಳಿದು ಆ ಮುನಿಪುಂಗವನು ಆತನ ಕುಶಲವಾರ್ತೆಯನ್ನೂ ಆಗಮನಕ್ಕೆ ಕಾರಣವನ್ನೂ ಮತ್ತೆ ಮತ್ತೆ ಪ್ರಶ್ನಿಸಿದನು.

ಸ ನೃಪಃ ಕಥಯಾಮಾಸ ವಸಿಷ್ಠಾಯ ಸುದುಃಖಿತಃ ।
ರಾಜ್ಯಂ ಚ ಸಕಲಂ ಬ್ರಹ್ಮನ್ ಹೃತಂ ವಿದ್ವೇಷಿಭಿರ್ಮಮ ॥ ೬ ॥
ತ್ವಾಮಹಂ ಶರಣಂ ಪ್ರಾಪ್ತೋ ದುಃಖೈಕಾಯತನೋ ಯತಃ ।
ನಿಷ್ಕಂಟಕಂ ಕಥಂ ರಾಜ್ಯಂ ಭವಿಷ್ಯತಿ ಪುನಃ ಪ್ರಭೋ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೭ ॥
ತಸ್ಯ ತದ್ವಚನಂ ಶ್ರುತ್ವಾ ವಸಿಷ್ಠೋ ಭಗವಾನೃಷಿಃ ।
ಧ್ಯಾತ್ವಾ ಚ ಕಥಯಾಮಾಸ ಬಹು ಕೌತೂಹಲಾನ್ವಿತಃ ॥ ೮ ॥
ಮಹಾಕಾಲವನಂ ಭೂಪ ವ್ರಜ ತ್ವಂ ಕಾರ್ಯಸಿದ್ಧಯೇ ।
ದಿವ್ಯಾ ನದೀ ವನೇ ತತ್ರ ವಿಶ್ರುತಾ ಭುವನತ್ರಯೇ ॥ ೯ ॥
ತಸ್ಯಾಸ್ತೀರೇ ಶುಭಂ ಲಿಂಗಂ ಪೃಥುಕೇಶ್ವರದಕ್ಷಿಣೇ ।
ದ್ರಕ್ಷ್ಯಸೇ ನೃಪಶಾರ್ದೂಲ ತಪಸ್ಯಂತಂ ಚ ತಾಪಸಂ ।
ಅಸ್ಥಿಚರ್ಮಾಽವಶೇಷಂ ತು ಚೀರವಲ್ಕಲಧಾರಿಣಂ ॥ ೧೦ ॥
ವಚನಾತ್ತಸ್ಯ ವಿಪ್ರಸ್ಯ ವಸಿಷ್ಠಸ್ಯ ಮಹಾತ್ಮನಃ ।
ಜಗಾಮ ಸಹಸಾ ರಾಜಾ ಮಹಾಕಾಲವನಂ ಶುಭಂ ॥ ೧೧ ॥

---

೬. ಆ ರಾಜನಿಗೆ ದುಃಖವು ಉಕ್ಕಿಬರಲು ವಸಿಷ್ಠನಿಗೆ ಹೇಳಿಕೊಂಡನು. ಬ್ರಾಹ್ಮಣಶ್ರೇಷ್ಠನೆ! ನನ್ನ ಶತ್ರುಗಳಿಂದ ಸಮಸ್ತ ರಾಜ್ಯವೂ ಅಪಹರಿಸಲ್ಪಟ್ಟಿತು.

೭–೮. ಆದುದರಿಂದ ದುಃಖಗಳಿಗೆಲ್ಲ ಈಡಾಗಿರುವ ನಾನು ನಿನ್ನನ್ನು ಶರಣು ಹೊಕ್ಕಿರುವೆನು. ಸ್ವಾಮಿಯೆ! ನಿಷ್ಕಂಟಕವಾದ ರಾಜ್ಯವು ಪುನಃ ಎಂದಿಗೆ ನನ್ನ ಕೈ ಸೇರುವುದು? ನನಗೆ ಉಪದೇಶವನ್ನಿತ್ತು ಅನುಗ್ರಹಿಸಲು ನೀನೇ ತಕ್ಕವನಾಗಿರುವೆ. ಆತನ ಚರಿತ್ರೆಯನ್ನು ಕೇಳಿ ಬಹಳ ಕುತೂಹಲಾವಿಷ್ಟನಾಗಿ ಮಹಾತ್ಮನಾದ ವಸಿಷ್ಠಋಷಿಯು ಸ್ವಲ್ಪಕಾಲ ಧ್ಯಾನಾಸಕ್ತನಾಗಿದ್ದು ಹೇಳತೊಡಗಿದನು.

೯. "ಮಹಾರಾಜನೆ! ನೀನು ನಿನ್ನ ಇಷ್ಟಾರ್ಥಸಿದ್ಧಿಗಾಗಿ ಮಹಾಕಾಲವನ ಕ್ಷೇತ್ರವನ್ನು ಹೋಗಿ ಸೇರು. ಅಲ್ಲಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಪಡೆದಿರುವ ದಿವ್ಯ ನದಿಯೊಂದಿರುವುದು.

೧೦. ಅದರ ತೀರದಲ್ಲಿ ಪೃಥುಕೇಶ್ವರಲಿಂಗದ ದಕ್ಷಿಣಕ್ಕೆ ಉತ್ತಮ ಲಿಂಗವಿರುವುದು. ರಾಜೇಂದ್ರನೆ! ಅದರ ಬಳಿಯಲ್ಲಿ ನೀನು ತಪೋನಿರತನೂ, ಮೂಳೆ ಚರ್ಮಗಳ ಮೈಯುಳ್ಳವನೂ, ನಾರುಡೆಗಳನ್ನುಟ್ಟವನೂ ಆದ ಮಹಾ ಮುನಿಯೊಬ್ಬನನ್ನು ನೋಡುವೆ."

೧೧. ಮಹಾತ್ಮನಾದ ವಸಿಷ್ಠನ ಈ ಮಾತುಗಳನ್ನು ಕೇಳಿ ರಾಜನು ಆ ಕ್ಷಣದಲ್ಲಿಯೇ ಸಂಭ್ರಮದಿಂದ ಪವಿತ್ರವಾದ ಮಹಾಕಾಲವನವನ್ನು ಕುರಿತು ಪ್ರಯಾಣಮಾಡಿದನು.

ದದರ್ಶ ತಾಪಸಂ ತತ್ರ ಚಿರಂಜೀವಿನಮವ್ಯಯಂ ।
ಉಪವಾಸಕೃತಕ್ಷಾಮಂ ದ್ವಾದಶಾದಿತ್ಯವರ್ಚಸಂ ॥ ೧೨ ॥
ತಾಪಸೇನ ನೃಪೋ ದೃಷ್ಟೋ ಮಿತ್ರೋಽಯಂ ಮಮ ವಲ್ಲಭಃ ।
ಪ್ರಾಪ್ತೋ ರಾಜ್ಯಪರಿಭ್ರಷ್ಟೋ ಜ್ಞಾತ್ವಾ ವಚನಮಬ್ರವೀತ್ ॥ ೧೩ ॥
ಏಹ್ಯೇಹಿ ನೃಪಶಾರ್ದೂಲ ದಿಷ್ಟ್ಯಾ ಪ್ರಾಪ್ತೋಽಸಿ ಮೇಽಂತಿಕೇ ।
ಇತ್ಯುಕ್ತ್ವಾ ತಾಪಸೇನೈವ ಹುಂಕಾರಶ್ಚ ಕೃತಸ್ತದಾ ॥ ೧೪ ॥
ತದ್ಧುಂಕಾರಾತ್ತು ಪಾತಾಲಂ ಭಿತ್ವಾ ಪಂಚ ಚ ಕನ್ಯಕಾಃ ।
ನಿರ್ಯಯುಃ ಕಾಂಚನಂ ಪೀಠಮೇಕಾ ತಾಸಾಂ ಪ್ರಗೃಹ್ಯ ವೈ ॥ ೧೫ ॥
ಭೃಂಗಾರಂ ತು ಗೃಹೀತ್ವಾಽನ್ಯಾ ನಿಃಸೃತಾ ಜಲಸಂಭೃತಂ ।
ಪಾದಪ್ರಕ್ಷಾಲನಾರ್ಥಾಯ ತೃತೀಯಾ ಸಮುಪಸ್ಥಿತಾ ॥ ೧೬ ॥
ಅನ್ಯೇ ದ್ವೇ ವ್ಯಜನೇ ಗೃಹ್ಯ ಪಾರ್ಶ್ವಾಭ್ಯಾಂ ಚ ವ್ಯವಸ್ಥಿತೇ ।
ತತೋ ಹುಂಕಾರಮಕರೋತ್ಪುನರೇವ ಮಹಾತಪಾಃ ॥ ೧೭ ॥

---

೧೨. ಅಲ್ಲಿ ಚಿರಂಜೀವಿಯೂ, ನಾಶರಹಿತನೂ, ಉಪವಾಸಗಳಿಂದ ಕೃಶವಾದ ಮೈಯುಳ್ಳವನೂ, ಹನ್ನೆರಡು ಆದಿತ್ಯರ ತೇಜಸ್ಸಿನಿಂದ ಹೊಳೆಯುತ್ತಿರುವವನೂ ಆದ ತಾಪಸನೊಬ್ಬನನ್ನು ಕಂಡನು.

೧೩. ಆ ತಪಸ್ವಿಯು ನೃಪನನ್ನು ನೋಡಿದ ಕೂಡಲೇ, "ಈತನು ನನಗೆ ಮಿತ್ರನೂ ಪ್ರೀತ್ಯಾಸ್ಪದನೂ ಆದವನು; ರಾಜ್ಯದಿಂದ ಭ್ರಷ್ಟನಾಗಿ ಇಲ್ಲಿಗೆ ಬಂದಿರುವನು" ಎಂದು ತಿಳಿದು ಹೇಳಿದನು.

೧೪. "ರಾಜೇಂದ್ರನೆ! ಇಲ್ಲಿ ಬಾ. ಅದೃಷ್ಟವಶದಿಂದಲೇ ನೀನು ನನ್ನ ಬಳಿಗೆ ಬಂದಿರುವೆ." ಇಂತೆಂದು ಹೇಳಿ ಆ ತಾಪಸನು ಹುಂಕಾರವನ್ನು ಮಾಡಿದನು.

೧೫. ಆ ಹುಂಕಾರದಿಂದ ಪಾತಾಳಲೋಕವೂ ಬಿರಿದು ಹೋಗಿ ಅದರೊಳಗಿನಿಂದ ಐವರು ಕನ್ಯೆಯರು ಹೊರಬಿದ್ದರು. ಅವರಲ್ಲಿ ಒಬ್ಬಳು ಚಿನ್ನದ ಸಿಂಹಾಸನವನ್ನು ಕೈಗಳಲ್ಲಿ ಹಿಡಿದಿದ್ದಳು.

೧೬. ಮತ್ತೊಬ್ಬಳು ಜಲಭರಿತವಾದ ಕಳಶವನ್ನು ಹಿಡಿದು ಮೇಲಕ್ಕೆದ್ದು ಬಂದಳು. ಮೂರನೆಯವಳು ರಾಜನ ಪಾದಗಳನ್ನು ತೊಳೆಯಲು ಸಮೀಪದಲ್ಲಿ ಬಂದು ನಿಂತಳು.

೧೭. ಇನ್ನಿಬ್ಬರು ಬೀಸಣಿಗೆಗಳನ್ನು ಹಿಡಿದುಕೊಂಡು ರಾಜನ ಎರಡು ಪಾರ್ಶ್ವಗಳಲ್ಲಿಯೂ ನಿಂತಿದ್ದರು. ಆಗ ಆ ಮಹಾತಪಸ್ವಿಯು ಪುನಃ ಹುಂಕಾರವನ್ನು ಮಾಡಿದನು.

ತೇನ ಹುಂಕಾರಶಬ್ದೇನ ದೇವಲೋಕಾತ್ಸಮಾಗತಂ ।
ದೃಷ್ಟ್ವಾ ಚಾಽಪ್ಸರಸಾಂ ಸಂಘಂ ನೃತ್ಯಗೀತಮನೋಹರಂ ॥ ೧೮ ॥
ಅನಂತರಂ ದದರ್ಶಾಽಥ ಲಿಂಗಂ ಜ್ಯೋತಿಷ್ಕರಂ ಪರಂ ।
ಉತ್ಪನ್ನಂ ಚ ಜಗದ್ಯಸ್ಮಿಂಲ್ಲೀಯತೇ ಸಚರಾಚರಂ ॥ ೧೯ ॥
ತದ್ದೃಷ್ಟ್ವಾ ವಿಸ್ಮಯಾವಿಷ್ಟೋ ಬಭೂವ ನೃಪಸತ್ತಮಃ ।
ಪ್ರಣಮ್ಯ ಶಿರಸಾ ವಿಪ್ರಂ ಕಿಮಿದಂ ದ್ವಿಜಸತ್ತಮ ॥ ೨೦ ॥
ಏವಂ ಪೃಷ್ಟೋ ನೃಪೇಣಾಽಥ ಸ ವಿಪ್ರೋ ವಾಕ್ಯಮಬ್ರವೀತ್ ।
ಸಪ್ತಜನ್ಮಾನಿ ರಾಜೇಂದ್ರ ತ್ವಯಾಽಹಂ ಪರಿತೋಷಿತಃ ॥ ೨೧ ॥
ಅತಸ್ತೇ ದರ್ಶಿತಾ ಮಾಯಾ ತಪಸಾ ದುಷ್ಕರೇಣ ತು ।
ಲಿಂಗಸ್ಯಾಽಸ್ಯ ಪ್ರಭಾವೇಣ ಪಶ್ಯ ಮೇ ತಪಸೋ ಬಲಂ ॥ ೨೨ ॥
ಹುಂಕಾರೇಣ ಕೃತಾ ಪೃಥ್ವೀ ಜಲಪೂರ್ಣಾ ತು ತತ್ಕ್ಷಣಾತ್ ।
ಹುಂಕಾರಾಚ್ಚ ಜಲಂ ಗ್ರಸ್ತಂ ಮುಖಾದಗ್ನಿರಜಾಯತ ॥ ೨೩ ॥

---

೧೮. ಆ ಹುಂಕಾರದ ಶಬ್ದದಿಂದ ದೇವಲೋಕವು ವ್ಯಾಪ್ತವಾಗಿ ಅಲ್ಲಿದ್ದ ಅಪ್ಸರೋಗಣವು ಕಂಡುಬಂದು ನೃತ್ಯಗೀತಗಳಿಂದ ಮನೋಹರವಾಗಿ ಬಳಿಗೆ ಬಂದು ನಿಂತಿತು.

೧೯. ಬಳಿಕ ಅಲ್ಲಿ ಮಹಾ ಕಾಂತಿಯುಕ್ತವೂ, ಸರ್ವೋತ್ತಮವೂ ಆದ ಲಿಂಗವೊಂದಿರುವುದನ್ನೂ, ಅದರಿಂದ ಬ್ರಹ್ಮಾಂಡವೆಲ್ಲವೂ ಚರಸ್ಥಾವರಗಳೊಡನೆ ಹುಟ್ಟಿ ಅದರಲ್ಲಿಯೇ ಲೀನವಾಗುತ್ತಿರುವುದನ್ನೂ ರಾಜನು ಕಂಡನು.

೨೦. ಇದನ್ನೆಲ್ಲ ಕಂಡು ಆ ಮಹಾರಾಜನು ವಿಸ್ಮಯದಿಂದ ಕೂಡಿದವನಾಗಿ ತಲೆಬಾಗಿ ಪ್ರಣಾಮವನ್ನು ಮಾಡಿ, "ಬ್ರಾಹ್ಮಣೋತ್ತಮನೆ! ನಾನು ನೋಡುತ್ತಿರುವುದೇನು?" ಎಂದು ಪ್ರಶ್ನೆಮಾಡಿದನು.

೨೧. ಇಂತು ಕೇಳಿದ ನೃಪತಿಗೆ ಬ್ರಾಹ್ಮಣನು ಹೇಳತೊಡಗಿದನು. "ಎಲೈ ರಾಜೇಂದ್ರನೆ! ನೀನು ಹಿಂದಿನ ಏಳು ಜನ್ಮಗಳಿಂದ ನನಗೆ ಸೇವೆಯನ್ನು ಮಾಡಿ ಸಂತೋಷಗೊಳಿಸಿರುವೆ.

೨೨. ಆದುದರಿಂದಲೇ ಅತ್ಯಂತ ದುಸ್ಸಾಧ್ಯವಾದ ನನ್ನ ಮಾಯೆಯನ್ನು ನಿನಗೆ ತೋರಿಸಿದೆನು. ಈ ಮಹಾಲಿಂಗದ ಪ್ರಭಾವದಿಂದ ನನ್ನ ತಪಸ್ಸಿನ ಶಕ್ತಿ ಯೆಷ್ಟಿರುವುದೆಂಬುದನ್ನು ನೋಡು."

೨೩. ಹುಂಕಾರಮಾತ್ರದಿಂದ ನಿಮಿಷದಲ್ಲಿಯೇ ಭೂಮಿಯೆಲ್ಲವೂ ಜಲದಲ್ಲಿ ಮುಳುಗಿಹೋಯಿತು. ಹುಂಕಾರದಿಂದಲೇ ಮುಖದಿಂದ ಅಗ್ನಿಯುದ್ಭವಿಸಿ ಆ ಜಲವನ್ನು ಶೋಷಿಸಿತು.

ಹುಂಕಾರಾತ್ಪೃಥಿವೀ ಸರ್ವಾ ಜಾತಾ ವಹ್ನಿಮಯೀ ತದಾ ।
ಸಂಹೃತ್ಯ ತತ್ಕ್ಷಣಾದ್ವಹ್ನಿಂ ಮುಖಾದ್ವಾಯುರ್ವಿನಿರ್ಯಯೌ ॥ ೨೪ ॥
ಹುಂಕಾರೇಣ ಕೃತಂ ಸರ್ವಂ ತತ್ಕ್ಷಣಾದೇವ ಪಾರ್ವತಿ ।
ನ ದಿಶಃ ಪ್ರದಿಶೋ ವಾಽಪಿ ನ ನಕ್ಷತ್ರಗ್ರಹಾಸ್ತದಾ ॥ ೨೫ ॥
ತತೋ ಬಭ್ರಾಮ ತನ್ನಾಸ್ತಿ ಸ ನೃಪೋ ವಿಸ್ಮಯಾನ್ವಿತಃ ।
ಚಿಂತಯಾಮಾಸ ಸಹಸಾ ಕ್ವ ಲಿಂಗಂ ಕ್ವ ಚ ತಾಪಸಃ ॥ ೨೬ ॥
ಏವಂ ಚಿಂತಯತಸ್ತಸ್ಯ ತತಃ ಶಬ್ದೋ ಮಹಾನಭೂತ್ ।
ತಸ್ಮಾಚ್ಛಬ್ದಾಚ್ಚ ಸಂಜಾತಂ ಪುರಂ ಪ್ರಾಕಾರಸಂವೃತಂ ॥ ೨೭ ॥
ಸುಹರ್ಮ್ಯಕಕ್ಷ್ಯಾರಚಿತಂ ವಿಶಾಲಂ
ವಿಶುದ್ಧಜಾಂಬೂನದಭೂಷಿತಂ ಚ ।
ದಿವ್ಯೈರ್ಜನೈಃ ಸೇವಿತಮಾತ್ಮವಿದ್ಭಿ
ರ್ದದರ್ಶ ರಾಜಾ ಸಹಸಾ ಪುರಂ ತತ್ ॥ ೨೮ ॥
ಭೂಯೋಽಭವನ್ಮಹಾಶಬ್ದಸ್ತಸ್ಮಾತ್ ಸ್ತ್ರೀಯುಗಲಂ ಬಭೌ ।
ಸಿತವಸ್ತ್ರಧರಾಚೈಕಾ ಕೃಷ್ಣವಸ್ತ್ರಧರಾ ಸಿತಾ ॥ ೨೯ ॥

---

೨೪. ಹುಂಕಾರದಿಂದಲೇ ಭೂಮಂಡಲವೆಲ್ಲವೂ ಅಗ್ನಿಮಯವಾಯಿತು. ಪುನಃ ಆ ಅಗ್ನಿಯನ್ನು ಶಮನಮಾಡುವ ವಾಯುವು ಮುಖದಿಂದ ಹೊರಟು ಬಂದಿತು.

೨೫–೨೬. ಪಾರ್ವತಿಯೆ! ಹುಂಕಾರದಿಂದಲೇ ಇದೆಲ್ಲವೂ ನಡೆಯಿತು. ಕ್ಷಣಮಾತ್ರದಲ್ಲಿ ದಿಕ್ಕುಗಳಾಗಲಿ, ಮೂಲೆಗಳಾಗಲಿ, ನಕ್ಷತ್ರಗಳಾಗಲಿ, ಗ್ರಹಗಳಾಗಲಿ ಕಾಣದಂತಾಯಿತು. ಆ ಸರ್ವಶೂನ್ಯಸ್ಥಿತಿಯನ್ನು ಕಂಡು ರಾಜನು ಭ್ರಾಂತನಾಗಿ ಆಶ್ಚರ್ಯವನ್ನೂ ತಾಳಿ ತನ್ನಲ್ಲಿಯೇ, "ಆ ಲಿಂಗವೆಲ್ಲಿ? ಆ ತಪಸ್ವಿಯೆಲ್ಲಿ?" ಎಂದು ಚಿಂತಿಸುತ್ತಿದ್ದನು.

೨೭. ಇಂತು ಚಿಂತಿಸುತ್ತಿರುವ ಆತನ ಎದುರಿನಲ್ಲಿ ಒಂದು ಮಹಾ ಶಬ್ದವುಂಟಾಯಿತು. ಆ ಶಬ್ದದಿಂದ ಕೋಟೆಕೊತ್ತಳಗಳನ್ನು ಹೊಂದಿದ್ದ ಒಂದು ಸುಂದರ ನಗರವು ಕಾಣಬಂದಿತು.

೨೮–೨೯. ಉತ್ತಮ ಸೌಧಗಳಿಂದಲೂ, ಅಂತಃಪುರಗಳಿಂದಲೂ ರಂಜಿಸುವ ಆ ನಗರವು ಶುದ್ಧವಾದ ಚಿನ್ನದ ಅಲಂಕಾರಗಳನ್ನು ಹೊಂದಿ ಅತ್ಮಜ್ಞಾನಿಗಳಾದ ಮಹಾಜನಗಳಿಂದ ತುಂಬಿದ್ದುದನ್ನು ಆ ಮಹಾರಾಜನು ನಿಮಿಷಮಾತ್ರದಲ್ಲಿ ಕಂಡನು. ಪುನಃ ಮಹಾ ಶಬ್ದವುಂಟಾಗಲು ಆ ನಗರವು ಹೋಗಿ ಇಬ್ಬರು ಸ್ತ್ರೀಯರು ಬಂದರು. ಒಬ್ಬಳು ಬಿಳಿಯ ಬಟ್ಟೆಯನ್ನೂ ಮತ್ತೊಬ್ಬಳು ಕರಿಯ ವಸ್ತ್ರವನ್ನೂ ಉಟ್ಟಿದ್ದರು.

ಪುನಃ ಶಬ್ದೋ ಬಭೂವಾಽಥ ತಸ್ಮಾತ್ಪುರುಷಸತ್ತಮಃ ।
ದ್ವಿಶಿರಾಃ ಷಣ್ಮುಖಶ್ಚೈವ ಪಾದೈರ್ದ್ವಾದಶಭಿರ್ಯುತಃ ॥ ೩೦ ॥
ಪುನಃ ಶಬ್ದಾಚ್ಚ ಸಂಜಜ್ಞೇ ಪುರುಷಃ ಸಪ್ತಧಾ ಗತಃ ।
ಸಂಹೃತಂ ಹಿ ಪುನಸ್ತಚ್ಚ ದರ್ಶಯಿತ್ವಾ ದ್ವಿಜೇನ ತು ।
ಪ್ರೋಕ್ತಮಿತ್ಥಂ ವಿಶಾಲಾಕ್ಷಿ ಜಾತಂ ಕಂಟಕಿತಂ ನೃಪಂ ॥ ೩೧ ॥
ಪಶ್ಯ ಲೋಕಮಿಮಂ ಮಹ್ಯಂ ತಪಸಾ ನಿರ್ಮಿತಂ ನೃಪ ।
ತ್ವತ್ಪ್ರಿಯಾರ್ಥಮಯಂ ಲೋಕೋ ದರ್ಶಿತಸ್ತೇ ನೃಪೋತ್ತಮ ॥ ೩೨ ॥
ಏವಮುಕ್ತಸ್ತದಾ ತೇನ ತಾಪಸೇನ ನರಾಧಿಪಃ ।
ವಿಸ್ಮಯಾಪನ್ನಹೃದಯಃ ಪಪ್ರಚ್ಛ ಪ್ರಯತಃ ಸುಧೀಃ ॥ ೩೩ ॥
ಭಗವನ್ಸಿತಕೃಷ್ಣೇ ದ್ವೇ ಕೇ ಸ್ತ್ರಿಯೌ ದ್ವಿಜಸತ್ತಮ ।
ಕೋಽಸೌ ದ್ವಾದಶಪಾದ್ವಿಪ್ರ ದ್ವಿಶಿರಾಃ ಷಣ್ಮುಖಃ ಪುನಃ ॥ ೩೪ ॥
ಕಶ್ಚಾಽಸೌ ಪುರುಷೋ ಬ್ರಹ್ಮನ್ಯ ಏಕಃ ಸಪ್ತಧಾಽಭವತ್ ।
ತಸ್ಯ ತದ್ವಚನಂ ಶ್ರುತ್ವಾ ಕಥಯಾಮಾಸ ತಾಪಸಃ ॥ ೩೫ ॥

---

೩೦. ಮತ್ತೆ ಹುಂಕಾರ ಶಬ್ದವುಂಟಾಗಲು ಅವರೂ ಹೋಗಿ ಒಬ್ಬ ಮಹಾ ಪುರುಷನು ಕಾಣಿಸಿದನು. ಆತನಿಗೆ ಎರಡು ತಲೆಗಳೂ, ಆರು ಮುಖಗಳೂ, ಹನ್ನೆರಡು ಕಾಲುಗಳೂ ಶೋಭಿಸುತ್ತಿದ್ದುವು.

೩೧. ಪುನಃ ಉಂಟಾದ ಶಬ್ದದಿಂದ ಒಬ್ಬ ಪುರುಷನು ಹುಟ್ಟಿ ತನ್ನ ಶರೀರ ವನ್ನೇ ಏಳುಭಾಗವಾಗಿ ಮಾಡಿಕೊಂಡನು. ಆ ಬ್ರಾಹ್ಮಣನು ಇದೆಲ್ಲವನ್ನೂ ತೋರಿಸಿ ಪುನಃ ಎಲ್ಲವನ್ನೂ ಉಪಸಂಹರಿಸಿದನು. ಓ ವಿಶಾಲಾಕ್ಷಿಯೆ! ಎಲ್ಲವನ್ನೂ ಕಂಡು ಪುಲಕಾಂಕಿತಗಾತ್ರನಾಗಿದ್ದ ಆ ಮಹಾರಾಜನಿಗೆ ಆ ವಿಪ್ರನಿಂತೆಂದನು.

೩೨. "ರಾಜೇಂದ್ರ! ನನ್ನ ತಪಸ್ಸಿನಿಂದ ಸೃಜಿಸಿರುವ ಈ ಲೋಕವನ್ನು ನೋಡು. ನಾನು ನಿನಗೆ ಸಂತೋಷವನ್ನುಂಟುಮಾಡುವುದಕ್ಕಾಗಿಯೇ ಈ ಲೋಕ ವನ್ನು ತೋರಿಸಿರುವೆನು."

೩೩. ಆ ತಾಪಸೋತ್ತಮನು ಇಂತು ನುಡಿಯಲು ವಿಸ್ಮಯವನ್ನು ಹೊಂದಿದವನೂ, ವಿನಯಾನ್ವಿತನೂ, ತೀಕ್ಷ್ಣಬುದ್ಧಿಯೂ ಆದ ಆ ಮಹಾರಾಜನು ಆತನನ್ನು ಕೇಳಿದನು.

೩೪. "ಎಲೈ ಬ್ರಾಹ್ಮಣಶ್ರೇಷ್ಠನೆ! ನಾನು ನೋಡಿದ ಬಿಳಿಯ ಮತ್ತು ಕರಿಯ ವಸ್ತ್ರಗಳನ್ನುಟ್ಟಿದ್ದ ಆ ಸ್ತ್ರೀಯರು ಯಾರು? ಹನ್ನೆರಡು ಕಾಲುಗಳೂ, ಎರಡು ತಲೆಗಳೂ, ಆರು ಮುಖಗಳೂ ಇದ್ದ ಆ ಪುರುಷನು ಯಾರು?

೩೫. ಓ ತಾಪಸನೆ! ಪುನಃ ಒಬ್ಬನೇ ಕಾಣಿಸಿಕೊಂಡು ಏಳು ಭಾಗಗಳಾಗಿ ಮಾರ್ಪಟ್ಟ ಆ ಪುರುಷನಾದರೂ ಯಾರು?" ರಾಜನ ಈ ಪ್ರಶ್ನೆಗಳನ್ನು ಕೇಳಿ ಆ ತಾಪಸನು ಎಲ್ಲವನ್ನೂ ಹೇಳಲುಪಕ್ರಮಿಸಿದನು.

ಏತೇ ಸ್ತ್ರಿಯೌ ತ್ವಯಾ ದೃಷ್ಟೇ ಸಿತಕೃಷ್ಣೇ ನೃಪೋತ್ತಮ ।
ತೇ ಚ ರಾತ್ರ್ಯಹನೀ ಪ್ರೋಕ್ತೇ ಬ್ರಹ್ಮಣಾ ನಿರ್ಮಿತೇ ಪುರಾ ॥ ೩೬ ॥
ಶೀರ್ಷದ್ವಯಂ ಚ ಯದ್ದೃಷ್ಟಂ ತೇಽಯನೇ ದ್ವೇ ಪ್ರಕೀರ್ತಿತೇ ।
ಮುಖಾನಿ ಯಾನಿ ದೃಷ್ಟಾನಿ ಷಟ್ ಚ ತೇ ಹ್ಯೃತವಃ ಸ್ಮೃತಾಃ ।
ಪಾದಾ ದ್ವಾದಶ ಯೇ ದೃಷ್ಟಾ ಮಾಸಾ ದ್ವಾದಶ ತೇ ಸ್ಮೃತಾಃ ॥ ೩೭ ॥
ಯಃ ಪುಮಾನ್ಸಪ್ತಧಾ ಜಾತ ಏಕೀ ಭೂತೋ ನರೇಶ್ವರ ।
ಸ ಸಮುದ್ರಸ್ತು ವಿಜ್ಞೇಯಃ ಸಪ್ತಧೈಕೋ ವ್ಯವಸ್ಥಿತಃ ॥ ೩೮ ॥
ಏತತ್ಸಂವತ್ಸರಂ ಚಕ್ರಂ ತ್ವತ್ಪ್ರಿಯಾರ್ಥಂ ನಿದರ್ಶಿತಂ ।
ಏವಂ ವಿದಿತ್ವಾ ರಾಜೇಂದ್ರ ನ ಶೋಕಂ ಕರ್ತುಮರ್ಹಸಿ ॥ ೩೯ ॥
ಸರ್ವೋ ವಿನಶ್ವರೋ ಲೋಕಃ ಸದೇವಾಸುರಮಾನುಷಃ ।
ಮಯಾ ದೃಷ್ಟೋ ಹಿ ಬಹುಶೋ ಲಿಂಗಸ್ಯಾಽಸ್ಯ ಪ್ರಭಾವತಃ ॥ ೪೦ ॥
ಕುರು ಶತ್ರುವಿನಾಶಾಯ ಲಿಂಗಸ್ಯಾಸ್ಯ ಚ ದರ್ಶನಂ ।
ರಾಜ್ಯಂ ನಿಷ್ಕಂಟಕಂ ರಾಜನ್ಭವಿಷ್ಯತಿ ನ ಸಂಶಯಃ ॥ ೪೧ ॥

---

೩೬. "ಎಲೈ ರಾಜೋತ್ತಮನೆ! ನೀನು ನೋಡಿದ ಬಿಳಿಯ ಮತ್ತು ಕರಿಯ ಉಡಿಗೆಗಳನ್ನುಟ್ಟಿದ್ದ ಆ ಇಬ್ಬರು ಸ್ತ್ರೀಯರೇ ಬ್ರಹ್ಮದೇವನು ಮೊದಲು ನಿರ್ಮಿಸಿದ ಹಗಲು ರಾತ್ರಿಗಳೆಂಬವರು.

೩೭. ಆ ಪುರುಷನ ಎರಡು ತಲೆಗಳೇ ಎರಡು ಅಯನಗಳೆಂದು ಕರೆಯಲ್ಪಡುವುವು. ಆರು ಮುಖಗಳೇ ವರ್ಷದ ಆರು ಋತುಗಳಾಗಿರುವುವು. ನೀನು ನೋಡಿದ ಆತನ ಹನ್ನೆರಡು ಕಾಲುಗಳೇ ಹನ್ನೆರಡು ಮಾಸಗಳಾಗಿರುವುವು.

೩೮. ನರೇಂದ್ರ! ಇನ್ನು ಏಳು ಭಾಗವಾಗಿ ತನ್ನ ದೇಹವನ್ನು ಮಾರ್ಪಡಿಸಿಕೊಂಡ ಆ ಪುರುಷನೇ ಏಕೀಭೂತವಾದ ಸಮುದ್ರನು. ಒಂದೇ ಸಮುದ್ರವೇ ಏಳು ಭಾಗಗಳಾಗಿ ನೆಲಸಿರುವುದು.

೩೯. ಈ ಸಂವತ್ಸರ ಚಕ್ರವನ್ನು ನಿನ್ನ ಪ್ರೀತಿಗಾಗಿಯೇ ತೋರಿಸಿಕೊಟ್ಟೆರುವೆನು. ರಾಜೇಂದ್ರನೆ! ಇಂತಹ ಕಾಲಗತಿಯನ್ನು ತಿಳಿದು ತಿಳಿದೂ ಶೋಕ ಮಾಡುವುದು ನಿನಗೆ ಉಚಿತವಲ್ಲ.

೪೦. ದೇವತೆಗಳು; ಮನುಷ್ಯರು, ರಾಕ್ಷಸರು ಮುಂತಾದವರನ್ನೊಳಗೊಂಡಿರುವ ಸಮಸ್ತ ಬ್ರಹ್ಮಾಂಡವೂ ನಶ್ವರವಾದುದೆಂದು ನಾನು ಅನೇಕವೇಳೆ ಈ ಮಹಾಲಿಂಗದ ಪ್ರಭಾವದಿಂದ ಕಂಡಿರುವೆನು.

೪೧. ಮಹಾರಾಜನೆ! ನಿನ್ನ ಶತ್ರುಗಳ ವಿನಾಶವನ್ನಪೇಕ್ಷಿಸುವೆಯಾದರೆ ಈ ಮಹಾಲಿಂಗದ ದರ್ಶನವನ್ನು ಮಾಡು. ನಿನ್ನ ರಾಜ್ಯವು ನಿಷ್ಕಂಟಕವಾಗಿ ನಿನ್ನ ವಶವಾಗುವುದರಲ್ಲಿ ಸಂದೇಹವಿಲ್ಲ."

ಏವಮುಕ್ತಸ್ತದಾ ರಾಜಾ ದೃಷ್ಟವಾಂಲ್ಲಿಂಗಮುತ್ತಮಂ ।
ದರ್ಶನಾತ್ತಸ್ಯ ಲಿಂಗಸ್ಯ ಕಂಟಕಾ ಯೇ ಮಹೀಭೃತಃ ।
ವಿದ್ವೇಷಿಣೋ ಮೃತಾಸ್ತೇಽಪಿ ಶ್ರುತಾಸ್ತೇನ ಮಹೀಭೃತಾ ॥ ೪೨ ॥
ಗತಸ್ತಂ ವಿಷಯಂ ರಾಜಾ ಚಕ್ರವರ್ತೀ ಬಭೂವ ಹ ।
ಲಿಂಗಸ್ಯಾಽಸ್ಯ ಪ್ರಭಾವೇಣ ರಾಜ್ಯಂ ಕೃತ್ವಾ ಮಹಾಧನೈಃ ॥ ೪೩ ॥
ಯಜ್ಞೈಶ್ಚ ವಿವಿಧೈರಿಷ್ಟ್ವಾ ಪರಂ ನಿರ್ವಾಣಮಾಪ್ತವಾನ್ ।
ತಾಪಸೇನ ಶ್ರುತಂ ಸರ್ವಂ ದೃಷ್ಟಂ ಧ್ಯಾನೇನ ತೇನ ವೈ ॥ ೪೪ ॥
ಲಬ್ಧಂ ನಿಷ್ಕಂಟಕಂ ರಾಜ್ಯಂ ಲಿಂಗಸ್ಯಾಸ್ಯ ಚ ದರ್ಶನಾತ್ ।
ಮಮ ಮಿತ್ರೇಣ ಸಹಸಾ ರಾಜ್ಯಭ್ರಷ್ಟೇನ ತೇನ ವೈ ॥ ೪೫ ॥
ಅತೋ ನಾಮ ಸುವಿಖ್ಯಾತಂ ಕಂಟೇಶ್ವರ ಇತಿ ಕ್ಷಿತೌ ।
ಭವಿಷ್ಯತಿ ನ ಸಂದೇಹೋ ದರ್ಶನಾದ್ರಾಜ್ಯದಾಯಕಃ ॥ ೪೬ ॥
ಅದ್ಯ ಪ್ರಭೃತಿ ಪಶ್ಯಂತಿ ದೇವಂ ಕಂಟೇಶ್ವರಂ ಶಿವಂ ।
ತೇಷಾಂ ಚ ಕಂಟಕಾಃ ಸದ್ಯೋ ವಿನಶ್ಯಂತಿ ನ ಸಂಶಯಃ ॥ ೪೭ ॥

---

೪೨. ಇಂತೆಂದು ಆ ತಾಪಸನು ಹೇಳಲು ಮಹಾರಾಜನು ಆ ಲಿಂಗವನ್ನು ಸಂದರ್ಶಿಸಿ ಸೇವಿಸಿದನು. ಆ ಲಿಂಗದರ್ಶನದ ಪ್ರಭಾವದಿಂದ ಆತನಿಗೆ ಕಂಟಕಪ್ರಾಯರಾಗಿದ್ದ ಸಕಲರಾಜರೂ ಮಡಿದುಹೋದರೆಂಬ ಸಮಾಚಾರವು ಶೀಘ್ರದಲ್ಲಿಯೇ ತಲುಪಿತು.

೪೩-೪೪. ಬಳಿಕ ರಾಜನು ತನ್ನ ದೇಶಕ್ಕೆ ತೆರಳಿ ಚಕ್ರವರ್ತಿಯಾಗಿ ಬಾಳಿದನು. ಆ ಲಿಂಗದ ಪ್ರಭಾವದಿಂದಲೇ ರಾಜ್ಯವನ್ನಾಳುತ್ತ ಬಹು ದ್ರವ್ಯವನ್ನು ವ್ಯಯಮಾಡಿ ಅನೇಕ ವಿಧಗಳಾದ ಯಜ್ಞಗಳಿಂದ ಪರಮೇಶ್ವರನನ್ನು ಪೂಜಿಸಿ ಅತ್ಯಂತ ಸೌಖ್ಯವನ್ನು ಪಡೆದನು. ತಾಪಸನಿಗೆ ಇದೆಲ್ಲವೂ ಧ್ಯಾನಾಸಕ್ತನಾಗಿದ್ದ ಸಮಯದಲ್ಲಿ ಪ್ರತ್ಯಕ್ಷವಾಗಿ ಕಾಣತೊಡಗಿತು.

೪೫. ಆಗ ಆತನಿಂತೆಂದನು. "ಈ ಲಿಂಗದ ದರ್ಶನದಿಂದ ಈ ರಾಜನಿಗೆ ನಿಷ್ಕಂಟಕವಾದ ರಾಜ್ಯವು ಪ್ರಾಪ್ತವಾಯಿತು. ಹಿಂದೆ ನನ್ನ ಮಿತ್ರನಾದ ಈತನು ರಾಜ್ಯಭ್ರಷ್ಟನಾಗಿದ್ದು ಈಗ ಸೌಖ್ಯವನ್ನು ಪಡೆದನಷ್ಟೆ.

೪೬. ಆದುದರಿಂದ ಈ ಲಿಂಗವು ಕಂಟೇಶ್ವರನೆಂಬ ಹೆಸರಿನಿಂದಲೇ ಭೂಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದಿರುವುದರಲ್ಲಿ ಸಂದೇಹವಿಲ್ಲವು. ಇದರ ದರ್ಶನವೇ ರಾಜ್ಯಪದವಿಯನ್ನು ಕೊಡುವುದು.

೪೭. ಇಂದು ಮೊದಲು ಕಂಟೇಶ್ವರಮಹಾದೇವನನ್ನು ಯಾರು ನೋಡುವರೊ, ಅವರ ಕಂಟಕಗಳೆಲ್ಲವೂ ನಿಸ್ಸಂಶಯವಾಗಿಯೂ ಕ್ಷಣಮಾತ್ರದಲ್ಲಿಯೇ ನಾಶವಾಗುವುವು.

ನೈಮಿಷೇಽಥ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ।
ಸ್ನಾನಾತ್ಸಂಸೇವನಾದ್ವಾಽಪಿ ಯತ್ಪುಣ್ಯಂ ಚ ಭವಿಷ್ಯತಿ ।
ತತ್ಪುಣ್ಯಂ ಭವಿತಾ ಸಮ್ಯಕ್ಛ್ರೀಕಂಟೇಶ್ವರದರ್ಶನಾತ್ ॥ ೪೮ ॥
ಗೃಹಿಣೋ ಲಿಂಗನೋವಾಽಪಿ ಯೇ ಪಶ್ಯಂತಿ ಯತವ್ರತಾಃ ।
ದೇವಂ ಕಂಟೇಶ್ವರಂ ಭಕ್ತ್ಯಾ ತೇಷಾಂ ಸಿದ್ಧಿರ್ಭವಿಷ್ಯತಿ ॥ ೪೯ ॥
ಜನ್ಮಾಂತರಸಹಸ್ರೇಣ ಯತ್ಪಾಪಂ ಪೂರ್ವಸಂಚಿತಂ ।
ತತ್ಸರ್ವಂ ಯಾಸ್ಯತಿ ಕ್ಷಿಪ್ರಂ ಶ್ರೀಕಂಟೇಶ್ವರದರ್ಶನಾತ್ ॥ ೫೦ ॥
ದತ್ತಂ ಜಪ್ತಂ ಹುತಂ ಚೇಷ್ಟಂ ತಪಸ್ತಪ್ತಂ ಕೃತಂ ಚ ಯತ್ ।
ಧ್ಯಾನಮಧ್ಯಯನಂ ಚೈವ ಸರ್ವಂ ಭವತಿ ಚಾಽಕ್ಷಯಂ ॥ ೫೧ ॥
ಏವಂ ಬ್ರುವಾಣಂ ತಂ ವಿಪ್ರಂ ತಾಪಸಂ ಸಂಶಿತವ್ರತಂ ।
ಲಿಂಗೇನೋಕ್ತಂ ವಿಶಾಲಾಕ್ಷಿ ತುಷ್ಟೇನ ವರಪೂರ್ವಕಂ ॥ ೫೨ ॥
ಜರಾರೋಗವಿನಿರ್ಮುಕ್ತಃ ಸರ್ವಶೋಕವಿವರ್ಜಿತಃ ।
ಭವಿಷ್ಯತಿ ಗಣಾಧ್ಯಕ್ಷೋ ವರದಃ ಸರ್ವಪೂಜಿತಃ ।
ಅವಧ್ಯಶ್ಚಾಽಪಿ ಸರ್ವೇಷಾಂ ಯೋಗೈಶ್ವರ್ಯಸಮನ್ವಿತಃ ॥ ೫೩ ॥

---

೪೮. ನೈಮಿಷ, ಕುರುಕ್ಷೇತ್ರ, ಗಂಗಾದ್ವಾರ, ಪುಷ್ಕರಕ್ಷೇತ್ರಗಳಲ್ಲಿ ಸ್ನಾನಗಳನ್ನೂ ಸೇವೆಗಳನ್ನೂ ಮಾಡಲು ಯಾವ ಪುಣ್ಯಫಲವುಂಟೊ, ಆ ಪುಣ್ಯಫಲವೇ ಶ್ರೀಕಂಟೇಶ್ವರನನ್ನು ನೋಡಿ ವಿಧ್ಯುಕ್ತರೀತಿಯಲ್ಲಿ ಸೇವಿಸಲು ಪ್ರಾಪ್ತವಾಗುವುದು.

೪೯. ಗೃಹಸ್ಥರೇ ಆಗಲಿ, ಸನ್ಯಾಸಿಗಳೇ ಆಗಲಿ, ಯಾರು ಭಕ್ತಿಯುಕ್ತರಾಗಿ ನಿಯಮದಿಂದ ಈ ಕಂಟೇಶ್ವರನ ದರ್ಶನವನ್ನು ಪಡೆದುಕೊಳ್ಳುವರೊ, ಅವರಿಗೆ ಅಭೀಷ್ಟಸಿದ್ಧಿಯುಂಟಾಗುವುದು.

೫೦. ಹಿಂದಿನ ಸಾವಿರಾರು ಜನ್ಮಗಳಲ್ಲಿ ಸಂಚಿತಗಳಾದ ಪಾಪಗಳೂ ನಿಶ್ಶೇಷವಾಗಿ ಕಂಟೇಶ್ವರನ ದರ್ಶನದ ಪುಣ್ಯದಿಂದ ನಾಶವಾಗುವುವು.

೫೧. ಈ ಸ್ವಾಮಿಯ ಸನ್ನಿಧಿಯಲ್ಲಿ ಮಾಡಿದ ದಾನ, ಜಪ, ಹೋಮ, ಯಜ್ಞ, ತಪಸ್ಸು, ಸತ್ಕಾರ್ಯ, ಧ್ಯಾನ, ಅಧ್ಯಯನ ಮುಂತಾದ ಸರ್ವಕಾರ್ಯಗಳೂ ಅಕ್ಷಯಫಲದಾಯಕಗಳಾಗುವುವು.''

೫೨. ಇಂತು ಹೇಳುತ್ತಿರುವ ಬ್ರಾಹ್ಮಣನೂ, ನಿಯಮಪರನೂ ಆದ ಆ ತಾಪಸೋತ್ತಮನಿಗೆ ಆ ಮಹಾಲಿಂಗವು ವರವನ್ನು ಅನುಗ್ರಹಿಸಿ ಪುನಃ ಹೇಳತೊಡಗಿತು.

೫೩. ''ನೀನು ಮುಪ್ಪು ರೋಗಗಳಿಲ್ಲದೆ, ಸಮಸ್ತ ದುಃಖಗಳಿಗೂ ದೂರನಾಗಿದ್ದು, ವರಪ್ರದನೂ, ಸಕಲರ ಪೂಜೆಯನ್ನು ಕೈಕೊಳ್ಳುವ ಗಣನಾಯಕನೂ ಆಗುವೆ. ಯಾರಿಂದಲೂ ನಿನಗೆ ವಧೆಯು ಸಂಭವಿಸುವುದಿಲ್ಲ. ನೀನು ಸಕಲ ಯೋಗೈಶ್ವರ್ಯಗಳಿಂದಲೂ ಕೂಡಿರುವೆ.''

ಏವಮುಕ್ತ್ವೋಽಥ ಲಿಂಗೇನ ತಾಪಸೋ ಗಣತಾಂ ಗತಃ ।
ಗಣೈಃ ಪರಿವೃತೋ ದೇವಿ ಮಮ ಪಾರ್ಶ್ವಮುಪಾಗತಃ ॥ ೫೪ ॥
ಅಂಧಕೇನ ಪುರಾ ಯುದ್ಧೇ ಸಿಂಹನಾದೋ ಯದಾ ಕೃತಃ ।
ತದಾ ದೇವಿ ಮದೀಯಂ ತು ಜಾತಂ ಕಂಟಕಿತಂ ವಪುಃ ॥ ೫೫ ॥
ಉತ್ಪನ್ನಂ ಚ ತದಾ ಲಿಂಗಮಶೇಷಾಽರಿವಿನಾಶನಂ ।
ದೇವಾನಾಂ ಕಂಟಕಾ ಯೇ ಚ ದಗ್ಧಾ ಲಿಂಗಾಗ್ನಿನಾ ಯತಃ ।
ಅತಃ ಕಂಟೇಶ್ವರೋ ದೇವೋ ವಿಖ್ಯಾತೋ ಭುವನತ್ರಯೇ ॥ ೫೬ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕಂಟೇಶ್ವರಸ್ಯ ದೇವಸ್ಯ ಶೃಣು ಸಿಂಹೇಶ್ವರಂ ಪರಂ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಕಂಟೇಶ್ವರಮಾಹಾತ್ಮ್ಯವರ್ಣನಂ" ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

೫೪. ದೇವಿ! ಆ ಲಿಂಗವು ಇಂತು ಹೇಳುತ್ತಿರುವಂತೆಯೇ ಆ ಮಹಾಮುನಿಯು ಗಣಾಧಿಪತ್ಯವನ್ನು ಪಡೆದ ಇತರ ಗಣಗಳಿಂದ ಪರಿವಾರಿತನಾಗಿ ನನ್ನ ಬಳಿಗೂ ಬಂದು ಸೇರಿದನು.

೫೫. ಪಾರ್ವತಿಯೆ! ಹಿಂದೆ ನಾನು ಅಂಧಕಾಸುರನೊಡನೆ ಯುದ್ಧವನ್ನು ಮಾಡಿದ ಕಾಲದಲ್ಲಿ ಸಿಂಹನಾದವನ್ನು ಗೈಯಲು ನನ್ನ ಶರೀರವೆಲ್ಲವೂ ಕಂಟಕಿತವಾಯಿತು.

೫೬. ಆಗಲೇ ಸಕಲಶತ್ರುವಿನಾಶಕವಾದ ಈ ಮಹಾಲಿಂಗವುದ್ಭವಿಸಿತು. ಅದರಿಂದ ಹೊರಟ ಅಗ್ನಿಯಿಂದಲೇ ದೇವತೆಗಳಿಗೆ ಕಂಟಕರಾಗಿದ್ದ ಸಕಲ ರಾಕ್ಷಸರೂ ಸುಟ್ಟುಹೋದರು. ಆದುದರಿಂದಲೂ ಇದಕ್ಕೆ ಮೂರು ಲೋಕಗಳಲ್ಲಿಯೂ ಕಂಟೇಶ್ವರವೆಂಬ ನಾಮವೇ ವಿಖ್ಯಾತವಾಗಿರುವುದು.

೫೭. ದೇವಿಯೆ! ಇಂತು ನಿನಗೆ ಕಂಟೇಶ್ವರನ ಚರಿತ್ರೆಯನ್ನೂ, ಆ ಲಿಂಗದ ಪಾಪಪರಿಹಾರಕವಾದ ಪ್ರಭಾವವನ್ನೂ ಹೇಳಿರುವೆನು. ಇನ್ನು ಸಿಂಹೇಶ್ವರನ ಕಥೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಕಂಟೇಶ್ವರಮಾಹಾತ್ಮ್ಯವರ್ಣನ"ವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶತ್ತಮೋಽಧ್ಯಾಯಃ

### ಸಿಂಹೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಈಶ್ವರ ಉವಾಚ:—

ಪಂಚಾಽಧಿಕಂ ವಿಜಾನೀಹಿ ಪಂಚಾಶತ್ತಮಮೀಶ್ವರಂ ।
ಸಿಂಹೇಶ್ವರಂ ವರಾರೋಹೇ ಮಹಾಭಯವಿನಾಶನಂ ॥ ೧ ॥
ಸದ್ಯಃ ಕಲ್ಪೇ ತ್ವಯಾ ದೇವಿ ಮದರ್ಥಂ ಹಿ ಮಹತ್ತಪಃ ।
ಕೃತಂ ನೀಲೋತ್ಪಲಾಪಾಂಗಿ ಭೀಷಣಂ ಸಂಶಿತವ್ರತಂ ।
ತಪಸಾ ತವ ರೌದ್ರೇಣ ದಗ್ಧಂ ಹಿ ಭುವನತ್ರಯಂ ॥ ೨ ॥
ದುಷ್ಕರಂ ಹಿ ತಪೋ ಜ್ಞಾತ್ವಾ ಭಗವಾಂಶ್ಚತುರಾನನಃ ।
ಆಗತ್ಯೋವಾಚ ದೇವೇಶೋ ದೇವಿ ತ್ವಾಂ ಶುಭಯಾ ಗಿರಾ ॥ ೩ ॥
ಕಿಂ ಪುತ್ರಿ ಪ್ರಾಪ್ತುಕಾಮಾಸಿ ಕಿಮಲಭ್ಯಂ ದದಾಮಿ ತೇ ।
ವಿರಮ್ಯತಾಮತಿಕ್ಲೇಶಾತ್ತಪಸೋಽಸ್ಮಾನ್ಮಮಾಜ್ಞಯಾ ॥ ೪ ॥
ತ್ವಯಾ ಚ ವಚನಂ ಶ್ರುತ್ವಾ ಗುರೋರ್ಗೌರವಗರ್ಭಿತಂ ।
ಪ್ರಿಯಂ ತಥ್ಯಂ ಹಿತಂ ತತ್ರ ವರ್ಣನಿರ್ಣೀತವಾಂಛಿತಂ ॥ ೫ ॥

---

### ಕನ್ನಡದ ಅನುವಾದ

### ಸಿಂಹೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಸುಂದರಿಯೆ! ಐವತ್ತೈದನೆಯ ಮಹಾಲಿಂಗವೇ ಸಕಲಭಯಗಳನ್ನೂ ನಿವಾರಿಸುವಂತಹುದಾದ ಸಿಂಹೇಶ್ವರನೆಂದು ತಿಳಿ.

೨. ದೇವಿಯೆ! ಈ ಕಲ್ಪದಲ್ಲಿ ನೀನು ನನ್ನನ್ನು ಪಡೆಯಲು ಭಯಂಕರವೂ ಮಹಾನಿಯಮಸಹಿತವೂ ಆದ ಉಗ್ರತಪಸ್ಸನ್ನು ಮಾಡುವವಳಾದೆ. ಆ ತೀಕ್ಷ್ಣ ತಪಸ್ಸಿನಿಂದ ಮೂರು ಲೋಕಗಳೂ ಸುಟ್ಟುಹೋಗುತ್ತಿದ್ದುವು.

೩. ಎಲೌ ಪಾರ್ವತಿಯೆ! ನಿನ್ನ ಈ ತಪಸ್ಸು ಅತ್ಯಂತ ದುಸ್ಸಹವಾದುದೆಂದು ತಿಳಿದು ಲೋಕಸೃಷ್ಟಿಕರ್ತನೂ, ದೇವೇಶ್ವರನೂ ಆದ ಬ್ರಹ್ಮದೇವನು ನಿನಗೆ ಮಧುರವಾಣಿಯಿಂದ ಹೀಗೆ ಹೇಳಿದನು.

೪. "ಮಗಳೆ! ನೀನೇನನ್ನು ಹೊಂದಲೆಳಸಿರುವೆ? ಅಲಭ್ಯವಾದ ಯಾವುದನ್ನು ನಿನಗೆ ಕೊಡಲಿ? ನನ್ನ ಅಪ್ಪಣೆಯಂತೆ ಅತಿಕ್ಲೇಶದಾಯಕವಾದ ಈ ತಪಸ್ಸನ್ನು ಸಾಕುಮಾಡು."

೫. ನೀನೂ ಗೌರವಸಹಿತವೂ, ಪ್ರಿಯವೂ, ಹಿತವೂ, ಯಥಾರ್ಥವೂ, ವಾಂಛಿತಪ್ರದವೂ ಆದ ಆ ಲೋಕಗುರುವಿನ ಮಾತುಗಳನ್ನು ಕೇಳುವವಳಾದೆ.

ಪ್ರತ್ಯುಕ್ತಃ ಸ ತದಾ ಬ್ರಹ್ಮಾ ಪ್ರಣಾಮನಮ್ರಯಾ ತ್ವಯಾ ।
ತಪಸಾ ದುಷ್ಕರೇಣಾಪ್ತಃ ಪತಿಶ್ಶೇ ಶಂಕರೋ ಮಯಾ ॥ ೬ ॥
ಸ ಮಾಂ ಶ್ಯಾಮಲವರ್ಣೇತಿ ಬಹುಶಃ ಪ್ರೋಕ್ತವಾನ್ಭವಃ ।
ಶ್ಯಾಮಾಽಹಂ ಕಾಂಚನಾಕಾರಾ ವಲ್ಲಭೇನ ಚ ಸಂಯುತಾ ।
ಭರ್ತಾ ಭೂತಪತಿರ್ವಶ್ಯಃ ಕಥಂ ಸ್ಯಾದಿತಿ ಮೇ ತಪಃ ॥ ೭ ॥
ತ್ವದೀಯಂ ವಚನಂ ಶ್ರುತ್ವಾ ವರಾರ್ಹೋ ವರದಃ ಪ್ರಭುಃ ।
ಏವಂ ಭವಿಷ್ಯತೀತ್ಯಾಹ ಬ್ರಹ್ಮಾ ಲೋಕಪಿತಾಮಹಃ ॥ ೮ ॥
ಕಿಯತಾ ಚೈವ ಕಾಲೇನ ವಾಂಛಾಸಿದ್ಧಿರ್ಭವಿಷ್ಯತಿ ।
ಗೌರೀ ನಾಮ್ನಾ ತು ತೇ ಮೂರ್ತಿಃ ಕಾಂತ್ಯಾ ದೀಪ್ತಾ ಭವಿಷ್ಯತಿ ॥ ೯ ॥
ಏತಚ್ಛ್ರುತ್ವಾ ತ್ವಯಾ ವಾಕ್ಯಂ ಬ್ರಹ್ಮಣಃ ಪರಮೇಷ್ಠಿನಃ ।
ಕ್ರುದ್ಧಾ ತ್ವಂ ಗಿರಿಜೇತ್ಯರ್ಥಂ ಕಾಲೇಽಭೀಷ್ಟಂ ಭವಿಷ್ಯತಿ ॥ ೧೦ ॥
ಕ್ರೋಧಾತ್ಸಿಂಹಃ ಸಮುದ್ಭೂತೋ ವದನಾತ್ತೇ ಭಯಾವಹಃ ।
ವಿವೃತಾಸ್ಯೋ ಮಹಾರೌದ್ರೋ ಜಟಾಜಟಿಲಕಂಧರಃ ॥ ೧೧ ॥

---

೬. ಮತ್ತು ಪ್ರಣಾಮವನ್ನು ಮಾಡಿ ವಿನೀತಭಾವದಿಂದ ನೀನು ಬ್ರಹ್ಮದೇವನಿಗೆ ಹೇಳಿದೆ. "ದುಷ್ಕರವಾದ ತಪಸ್ಸನ್ನು ಮಾಡಿ ನಾನು ಪರಮೇಶ್ವರನನ್ನು ಪತಿಯನ್ನಾಗಿ ಪಡೆದೆನು.

೭. ಆ ಶಿವನು ನನ್ನನ್ನು ಕಾಳಿಯೆಂದು ಅನೇಕವೇಳೆ ಹಂಗಿಸುತ್ತಿರುವನು. ಶ್ಯಾಮಲಳಾದ ನಾನು ಚಿನ್ನದ ಬಣ್ಣದ ದೇಹದೊಡಗೂಡಿ ಭೂತನಾಥನಾದ ಆ ನನ್ನ ಪತಿದೇವನನ್ನು ಸೇರಿ ಆತನನ್ನು ಹೇಗೆ ವಶಪಡಿಸಿಕೊಳ್ಳುವೆನೆಂಬುದಕ್ಕಾಗಿಯೇ ಈ ತಪಸ್ಸನ್ನು ಮಾಡುತ್ತಿರುವೆನು."

೮. ನಿನ್ನ ಮಾತುಗಳನ್ನು ಕೇಳಿ ಲೋಕಪಿತಾಮಹನಾದ ಚತುರ್ಮುಖನು ವರಪ್ರದನಾಗಿ, "ನಿನ್ನ ಇಷ್ಟದಂತೆಯೇ ನಡೆಯುವುದು" ಎಂದು ಅಭಯವನ್ನಿತ್ತು ಮತ್ತೆ ನುಡಿದನು.

೯. "ಅಲ್ಪಕಾಲದಲ್ಲಿಯೇ ನಿನ್ನ ಇಷ್ಟಾರ್ಥಸಿದ್ಧಿಯುಂಟಾಗುವುದು. ನಿನ್ನ ಶರೀರವು ಗೌರಕಾಂತಿಯಿಂದ ಬೆಳಗುತ್ತ ನೀನು ಗೌರಿಯೆಂಬ ಹೆಸರಿನಿಂದ ಕರೆಯಲ್ಪಡುವುದು."

೧೦. ದೇವಿಯೆ! ಚತುರ್ಮುಖನ ಈ ಮಾತನ್ನು ಕೇಳಿ ಕಾಲಾಂತರದಲ್ಲಿ ಮನೋಭೀಷ್ಟವು ಪೂರ್ತಿಯಾಗುವುದೆಂದು ನೀನು ಬಹಳ ಕೋಪಗೊಳ್ಳುವವಳಾದೆ.

೧೧. ನಿನ್ನ ಕೋಪಪೂರಿತವಾದ ಮುಖದಿಂದ ಭಯವನ್ನುಂಟುಮಾಡುವ

ಪ್ರೋದ್ಧೂತವಲ್ಗುಲಾಂಗೂಲೋ ದಂಷ್ಟ್ರೋತ್ಕಟಮುಖೋತ್ಕಟಃ ।
ತಸ್ಯಾಸ್ಯೇ ಪತಿತುಂ ದೇವಿ ವ್ಯವಸಾಯಃ ಕೃತಸ್ತ್ವಯಾ ॥ ೧೨ ॥
ಸೋಽಪಿ ಸಿಂಹಃ ಕ್ಷುಧಾವಿಷ್ಟಸ್ತ್ವಾಂ ಭಕ್ಷಯಿತುಮುದ್ಯತಃ ।
ನ ಚೈವಾಽಸೌ ಸಮರ್ಥೋಽಭೂದ್ವೀಕ್ಷಿತುಂ ವಾ ತಪೋಽಧಿಕಾಂ ॥ ೧೩ ॥
ಸ ದಹ್ಯಮಾನಃ ಸಹಸಾ ತೇಜಸಾ ತಪಸಾ ತವ ।
ಪರಾಙ್ಮುಖಃ ಸಮಭವತ್ಪ್ರಾಣತ್ರಾಣಪರಾಯಣಃ ॥ ೧೪ ॥
ತತಸ್ತ್ವಾಽಭೂತ್ಕರುಣಾ ಸಿಂಹಂ ಪ್ರತಿ ಯತವ್ರತೇ ।
ಕ್ಷುಧಿತಸ್ಯ ತ್ವಯಾ ತಸ್ಯ ಕ್ಷೀರಂ ಹ್ಯಮೃತಸನ್ನಿಭಂ ॥ ೧೫ ॥
ಉತ್ಪಾದಿತಂ ಸ್ತನಾಭ್ಯಾಂತು ತಸ್ಯ ಸಿಂಹಸ್ಯ ಕಾರಣಾತ್ ।
ತಥಾಽಪಿ ದಹ್ಯತೇಽತ್ಯರ್ಥಂ ದುಷ್ಟಭಾವಂ ಯತೋ ಗತಃ ॥ ೧೬ ॥
ತೇನೋಕ್ತಂ ದಹ್ಯಮಾನೇನ ಮಾತರ್ದಗ್ಧೋಽಸ್ಮಿ ತೇಜಸಾ ।
ತ್ವದೀಯೇನ ದುರಾಚಾರೋ ದುಷ್ಟೋಽಹಂ ಪಾಪವಿಗ್ರಹಃ ॥ ೧೭ ॥

---

ಸಿಂಹವೊಂದು ಬಾಯನ್ನು ತೆರೆದುಕೊಂಡು, ಕತ್ತಿನಲ್ಲಿ ಕೇಸರಗಳ ಭಾರವನ್ನು ಹೊತ್ತು ಮಹಾಭಯದಾಯಕವಾಗಿ ಹೊರಬಿದ್ದಿತು.

೧೨. ಪ್ರಿಯಳೆ! ನಿಮಿರಿನಿಂತಿರುವ ಉದ್ದವಾದ ಬಾಲವೂ, ಕೋರೆದಾಡೆಗಳಿಂದ ಭಯಂಕರವಾದ ಮುಖವೂ ಉಳ್ಳ ಅದರ ಬಾಯಿಯಲ್ಲಿ ನೀನು ಬೀಳುವ ಪ್ರಯತ್ನವನ್ನು ಮಾಡಿದೆ.

೧೩. ಹಸಿವಿನಿಂದ ಆರ್ತವಾದ ಆ ಸಿಂಹವೂ ನಿನ್ನನ್ನು ತಿನ್ನಲುಜ್ಜುಗಿಸಿತು. ಆದರೆ ಅತ್ಯಂತ ತಪಸ್ಸಿನಿಂದ ಉರಿಯುತ್ತಿದ್ದ ನಿನ್ನನ್ನು ನೋಡುವುದಕ್ಕೂ ಆ ಸಿಂಹಕ್ಕೆ ಸಾಧ್ಯವಾಗಲಿಲ್ಲ.

೧೪. ಅದು ನಿನ್ನ ತೇಜಸ್ಸಿನಿಂದಲೂ, ತಪಸ್ಸಿನಿಂದಲೂ ಸುಡಲ್ಪಟ್ಟು ಹಿಂದಿರುಗಿ ತನ್ನ ಪ್ರಾಣವನ್ನು ಸಂರಕ್ಷಿಸಿಕೊಳ್ಳುವುದರಲ್ಲಿಯೇ ಉದ್ಯುಕ್ತವಾಯಿತು.

೧೫–೧೬. ಆಗ ನಿಯತಾತ್ಮಳಾದ ನಿನಗೆ ಅದರ ವಿಷಯದಲ್ಲಿ ಕರುಣೆಯು ಉಂಟಾಯಿತು. ಹಸಿವುಗೊಂಡ ಅದನ್ನು ತೃಪ್ತಿಗೊಳಿಸಲು ನೀನು ಸ್ತನಗಳಿಂದ ಅಮೃತಸಮಾನವಾದ ಕ್ಷೀರವನ್ನು ಕೊಡುವವಳಾದೆ. ಆದರೂ ತನ್ನ ದುರ್ಬುದ್ಧಿಯ ಪರಿಣಾಮವಾಗಿ ಆ ಸಿಂಹವು ಬಹುವಾಗಿ ಪರಿತಪಿಸುತ್ತಿದ್ದಿತು.

೧೭. ಸುಡುತ್ತಿರುವ ಅದು ನಿನ್ನನ್ನು ಕುರಿತು ಇಂತೆಂದಿತು: "ತಾಯೆ! ನಿನ್ನ ತೇಜಸ್ಸಿನಿಂದ ದಗ್ಧನಾಗಿರುವೆನು. ನಾನು ದುರಾಚಾರಿಯು; ದುಷ್ಟನು; ಪಾಪದೇಹವುಳ್ಳವನು.

ತ್ವಾಮತ್ತುಕಾಮೋ ದುಷ್ಟಾತ್ಮಾ ತ್ವಯಾಽಹಂ ಜನಿತೋಽಧುನಾ ।
ತಸ್ಮಾದ್ಯಾಸ್ಯಾಮಿ ನರಕಂ ಮಾತೃಹಾ ಗುರುಘಾತಕಃ ॥ ೧೮ ॥
ತಸ್ಯ ತದ್ವಚನಂ ಶ್ರುತ್ವಾ ದುಃಖಿತಸ್ಯ ಸುತಸ್ಯ ತು ।
ಮಮತ್ವೇನ ವಿಶಾಲಾಕ್ಷಿ ಸಿಂಹಸ್ಯ ಕಥಿತಂ ತ್ವಯಾ ॥ ೧೯ ॥
ಅಘಘ್ನಂ ವಿದ್ಯತೇ ಕ್ಷೇತ್ರಂ ಮಹಾಕಾಲವನಂ ಸುತ ।
ತತ್ರ ಗಚ್ಛ ಮಮಾದೇಶಾಚ್ಛೀಘ್ರಂ ದೇವವಿನಿರ್ಮಿತಂ ॥ ೨೦ ॥
ಕಂಟೇಶ್ವರಸ್ಯ ದೇವಸ್ಯ ಸಮೀಽಪೇ ಲಿಂಗಮುತ್ತಮಂ ।
ಸಿಂಹನಾದಾತ್ಸಮುತ್ಪನ್ನಂ ಶಂಕರಸ್ಯ ಮಹಾತ್ಮನಃ ।
ಅಂಧಕಾಽಸುರಯುದ್ಧೇ ವೈ ಪೀಡಿತೇ ವಾಸವೇ ಪುರಾ ॥ ೨೧ ॥
ತ್ವದೀಯಂ ವಚನಂ ಶ್ರುತ್ವಾ ಸಿಂಹಸ್ತ್ವರಿತವಿಕ್ರಮಃ ।
ಗತೋ ಮಹಾಕಾಲವನಂ ದೃಷ್ಟೋ ದೇವೋಽಥ ತತ್ಕ್ಷಣಾತ್ ॥ ೨೨ ॥
ದಿವ್ಯದೇಹೋ ಮೃಗಾಽರಿಸ್ತು ಜಾತೋ ಲಿಂಗಸ್ಯ ದರ್ಶನಾತ್ ।
ಮಮತ್ವಾತ್ತಸ್ಯ ಲಿಂಗಸ್ಯ ತ್ವಂ ಗತಾ ತತ್ರ ಪಾರ್ವತಿ ॥ ೨೩ ॥

---

೧೮. ನಿನ್ನಿಂದ ಜನ್ಮವನ್ನು ತಾಳಿದ ನಾನು ನಿನ್ನನ್ನೇ ತಿನ್ನಲುಪಕ್ರಮಿಸಿದೆನಷ್ಟೆ. ಆದುದರಿಂದ ನಾನು ಮಾತೃಘ್ನನೂ, ಗುರುಘಾತಕನೂ ಆಗಿ ನರಕವನ್ನು ಸೇರುವುದು ನಿಶ್ಚಯವು.''

೧೯. ವಿಶಾಲಾಕ್ಷಿಯೆ! ನಿನ್ನಿಂದ ಜನಿಸಿ ದುಃಖಗೊಂಡ ಆ ಸಿಂಹದ ಮಾತನ್ನು ಕೇಳಿ ನೀನು ಅಭಿಮಾನದಿಂದ ಅದಕ್ಕೆ ಉಪಾಯವನ್ನು ಹೇಳಿದೆ.

೨೦. ''ಪುತ್ರನೆ! ಮಹಾಕಾಲವನವೆಂಬ ಸರ್ವಪಾಪಕ್ಷಯಕರವಾದ ಕ್ಷೇತ್ರವೊಂದಿರುವುದು. ದೇವತೆಗಳಿಂದ ನಿರ್ಮಿತವಾಗಿರುವ ಆ ಪ್ರದೇಶಕ್ಕೆ ನನ್ನ ಅಪ್ಪಣೆಯಂತೆ ಬೇಗನೆ ಹೊರಡು.

೨೧. ಕಂಟೇಶ್ವರನಿಗೆ ಸಮೀಪದಲ್ಲಿಯೇ ಒಂದು ಉತ್ತಮಲಿಂಗವಿರುವುದು. ಅಂಧಕಾಸುರನೊಡನೆ ಯುದ್ಧಮಾಡುವ ಕಾಲದಲ್ಲಿ ಮಹೇಂದ್ರನಿಗೆ ಬಹಳ ಸಂಕಟವೊದಗಲು ಮಹಾದೇವನು ಮಾಡಿದ ಸಿಂಹನಾದದಿಂದ ಆ ಲಿಂಗವುದ್ಭವಿಸಿತು.''

೨೨. ದೇವಿಯೆ! ನಿನ್ನ ಮಾತನ್ನು ಕೇಳಿ ಬಹು ಪರಾಕ್ರಮಿಯಾದ ಆ ಸಿಂಹವು ಮಹಾಕಾಲವನಕ್ಕೆ ಆ ಕ್ಷಣದಲ್ಲಿಯೇ ಹೊರಟು ಆ ಮಹಾಲಿಂಗವನ್ನು ಕಂಡಿತು.

೨೩. ಆ ಲಿಂಗದರ್ಶನದ ಫಲವಾಗಿ ಒಡನೆಯೆ ಅದು ದಿವ್ಯದೇಹವನ್ನು ಪಡೆಯಿತು. ಪಾರ್ವತಿಯೆ! ನೀನೂ ಆದರಲ್ಲಿನ ಮಮತೆಯಿಂದ ಅಲ್ಲಿಗೆ ಹೋದೆ.

ಸಿಂಹಿಕಾರೂಪಮಾಸ್ಥಾಯ ಶೀಘ್ರಂ ಸಿಂಹಸ್ತ್ವಯಾ ಪ್ರಿಯೇ ।
ದೃಷ್ಟೋ ದಿವ್ಯಶರೀರಸ್ತು ಲಿಂಗಸ್ಯಾಸ್ಯ ಪ್ರಭಾವತಃ ॥ ೨೪ ॥
ತವ ತುಷ್ಟಿಃ ಪರಾ ಜಾತಾ ದೃಷ್ಟ್ವಾ ಸಿಂಹಂ ಮಹಾದ್ಯುತಿಂ ।
ಕೃತಂ ನಾಮ ತ್ವಯಾ ದೇವಿ ಲಿಂಗಸ್ಯಾಸ್ಯ ವರಾನನೇ ॥ ೨೫ ॥
ದಿವ್ಯದೇಹಸ್ತು ಸಿಂಹೋಽಯಂ ಜಾತೋ ಲಿಂಗಸ್ಯ ದರ್ಶನಾತ್ ।
ಅತಃ ಸಿಂಹೇಶ್ವರೋ ದೇವೋ ಭುವಿ ಖ್ಯಾತೋ ಭವಿಷ್ಯತಿ ॥ ೨೬ ॥
ಏತಸ್ಮಿನ್ನಂತರೇ ಬ್ರಹ್ಮಾ ಸಂಪ್ರಾಪ್ತಸ್ತತ್ರ ಸುವ್ರತೇ ।
ಉವಾಚ ತ್ವಾಂ ವರಾರೋಹೇ ದೇವೈಃ ಪರಿವೃತಸ್ತದಾ ॥ ೨೭ ॥
ಯ ಏಷ ಸಿಂಹಃ ಸಂಭೂತಸ್ತವ ಕ್ರೋಧಾತ್ಸುತೋ ಯತಃ ।
ತತೋಽಸೌ ವಾಹನೋ ದೇವಿ ಭವಿಷ್ಯತಿ ನ ಸಂಶಯಃ ॥ ೨೮ ॥
ಲಿಂಗಂ ಸಿಂಹೇಶ್ವರಂ ಭಕ್ತ್ಯಾ ಯಃ ಪಶ್ಯತಿ ಸಮಾಹಿತಃ ।
ತಸ್ಯ ವಾಸೋಽಕ್ಷಯೋ ದಿವ್ಯೋ ಭವಿಷ್ಯತಿ ತ್ರಿವಿಷ್ಟಪೇ ॥ ೨೯ ॥

---

೨೪. ಪ್ರಿಯಳೆ! ನೀನೂ ಹೆಣ್ಣುಸಿಂಹದ ರೂಪವನ್ನು ತಾಳಿ ಬೇಗನೆ ಅಲ್ಲಿಗೆ ಹೋಗಿ ಆ ಲಿಂಗದ ಪ್ರಭಾವದಿಂದ ದಿವ್ಯಶರೀರದಿಂದೊಡಗೂಡಿರುವ ಆ ಸಿಂಹವನ್ನು ನೋಡಿದೆ.

೨೫. ಆ ಲಿಂಗದ ಮಹಿಮೆಯಿಂದ ದಿವ್ಯವೂ, ಕಾಂತಿಯುಕ್ತವೂ ಆಗಿದ್ದ ಸಿಂಹವನ್ನು ಕಂಡು ನಿನಗೆ ಅತ್ಯಂತ ಸಂತೋಷವಾಯಿತು.

೨೬. ಸುಂದರಮುಖಿಯೆ! ನೀನೇ ಆ ಲಿಂಗಕ್ಕೆ ಈ ಹೆಸರನ್ನಿಡುವವಳಾದೆ. "ಇದರ ದರ್ಶನದಿಂದ ಈ ಸಿಂಹವು ದಿವ್ಯದೇಹವನ್ನು ಪಡೆಯಿತು. ಆದುದರಿಂದ ಈ ಮಹೇಶ್ವರನು ಭೂಲೋಕದಲ್ಲಿ ಸಿಂಹೇಶ್ವರನೆಂದೇ ಪ್ರಖ್ಯಾತಿಯನ್ನು ಹೊಂದುವನು."

೨೭. ದೇವಿಯೆ! ಇಷ್ಟರಲ್ಲಿಯೇ ದೇವತೆಗಳಿಂದ ಪರಿವಾರಿತನಾದ ಚತುರ್ಮುಖನೂ ಅಲ್ಲಿಗೆ ಪ್ರಾಪ್ತನಾಗಿ ನಿನಗೆ ಹೇಳಿದನು.

೨೮. "ಈ ಸಿಂಹವು ನಿನ್ನ ಕೋಪದಿಂದ ಹುಟ್ಟಿಬಂದಿರುವುದರಿಂದ ನಿನ್ನ ಮಗನೆಂದೇ ತಿಳಿ. ಇದೇ ನಿನಗೆ ವಾಹನವಾಗಿರಲಿ. ದೇವಿಯೆ! ಇದರಲ್ಲಿ ಸಂದೇಹವು ಬೇಡ.

೨೯. ಯಾವನು ಈ ಸಿಂಹೇಶ್ವರಲಿಂಗವನ್ನು ಭಕ್ತಿಯಿಂದಲೂ ಸಮಾಧಾನ ಮನಸ್ಸಿನಿಂದಲೂ ದರ್ಶನಮಾಡುವನೊ, ಆವನಿಗೆ ಸ್ವರ್ಗಲೋಕದಲ್ಲಿ ಬಹು ಕಾಲದವರೆಗೂ ಸರ್ವಭೋಗಸಮನ್ವಿತವಾದ ವಾಸವು ಲಭಿಸುವುದು.

ಕೀರ್ತನಾನ್ಮುಚ್ಯತೇ ಪಾಪಾದ್ದೃಷ್ಟ್ವಾ ಭದ್ರಾಣಿ ಪಶ್ಯತಿ ।
ಸ್ಪರ್ಶನಾದಸ್ಯ ಲಿಂಗಸ್ಯ ಪುನಾತ್ಯಾಸಪ್ತಮಂ ಕುಲಂ ।
ಮನಸಾ ಚಿಂತಿತಾನ್ಕಾಮಾಂಸ್ತಾಂಶ್ಚ ಪ್ರಾಪ್ನೋತಿ ಪುಷ್ಕಲಾನ್ ॥ ೩೦ ॥
ತದೈವ ಪುರುಷೋ ಮುಕ್ತೋ ಜನ್ಮದುಃಖಜರಾದಿಭಿಃ ।
ಯದಾ ಪಶ್ಯತಿ ಸಿಂಹೇಶಂ ಸಂಸಾರಾರ್ಣವತಾರಕಂ ॥ ೩೧ ॥
ವ್ಯಾಲವ್ಯಾಘ್ರಾದಯಶ್ಚೌರಾಸ್ತಥಾ ಸಾಹಸಿಕಾಶ್ಚ ಯೇ ।
ತೇಭ್ಯೋ ಭಯಂ ನ ಭವತಿ ಶ್ರೀಸಿಂಹೇಶ್ವರದರ್ಶನಾತ್ ॥ ೩೨ ॥
ಯಜ್ಞಾನಾಂ ತಪಸಾಂ ಚೈವ ದಾನಾದೀನಾಂ ಚ ಯತ್ಫಲಂ ।
ತತ್ಫಲಂ ಜಾಯತೇ ಸಮ್ಯಗ್ದೃಷ್ಟ್ವಾ ಸಿಂಹೇಶ್ವರಂ ಶಿವಂ ॥ ೩೩ ॥
ಮದೀಯಂ ಲೋಕಮಾಪ್ನೋತಿ ಸುರಾಸುರನಮಸ್ಕೃತಂ ।
ಯಃ ಪಶ್ಯತಿ ಪ್ರಯತ್ನೇನ ದೇವಂ ಸಿಂಹೇಶ್ವರಂ ತದಾ ॥ ೩೪ ॥
ಇತ್ಯುಕ್ತ್ವಾಽಸೌ ಜಗಾಮಾಥ ಬ್ರಹ್ಮಾ ಲೋಕಂ ಸ್ವಕಂ ಪ್ರಿಯೇ ।
ಯದ್ವಪುಸ್ತವ ಪೂರ್ವಂ ಸ್ಯಾತ್ಕಾಲಕಾಂತಿಕಲಂಕಿತಂ ।
ಪ್ರಭಾವಾತ್ತಪಸಸ್ತಸ್ಯ ಗೌರತ್ವಂ ಪ್ರಾಪ್ತಮದ್ಭುತಂ ॥ ೩೫ ॥

---

೩೦. ಈ ಲಿಂಗದ ಹೆಸರನ್ನು ಹೇಳುವುದರಿಂದ ಮಾನವನು ಪಾತಕಗಳನ್ನು ಕಳೆದುಕೊಳ್ಳುವನು. ದರ್ಶನದಿಂದ ಸೌಖ್ಯವನ್ನು ಕಾಣುವನು. ಈ ಲಿಂಗವನ್ನು ಮುಟ್ಟಿ ಸೇವಿಸುವುದರಿಂದ ಹಿಂದೆಯೂ ಮುಂದೆಯೂ ಏಳು ಕುಲದವರನ್ನುದ್ಧರಿಸುವನು. ಅಲ್ಲದೆ ಮನಸ್ಸಿನಲ್ಲಿ ಅಪೇಕ್ಷಿಸಿದ ಸಕಲಾಭಿಲಾಷೆಗಳನ್ನೂ ಸಮೃದ್ಧಿಯಾಗಿ ಪಡೆಯುವನು.

೩೧. ಸಂಸಾರವೆಂಬ ಸಮುದ್ರದಿಂದ ಕಡೆಹಾಯಿಸುವ ಸಿಂಹೇಶ್ವರನನ್ನು ಯಾವಾಗ ಮಾನವನು ನೋಡುವನೋ, ಆಗಲೇ ಅವನು ನಿಜವಾಗಿಯೂ ಜನನಮರಣಾದಿ ಕ್ಲೇಶಗಳಿಂದ ಮುಕ್ತನಾಗುವನು.

೩೨. ಸಿಂಹೇಶ್ವರನ ದರ್ಶನವನ್ನು ಮಾಡಿದವರಿಗೆ ಸರ್ಪಗಳು, ವ್ಯಾಘ್ರಗಳು, ಚೋರರು, ಉದ್ಧಟರು ಮುಂತಾದ ಯಾವ ಪ್ರಾಣಿಗಳಿಂದಲೂ ಭಯವುಂಟಾಗಲಾರದು.

೩೩. ಯಜ್ಞಗಳು, ತಪಸ್ಸುಗಳು, ದಾನಗಳು ಮುಂತಾದುವುಗಳನ್ನು ವಿಧ್ಯುಕ್ತರೀತಿಯಿಂದ ಆಚರಿಸಿದರೆ ಯಾವ ಫಲಗಳುಂಟೋ, ಆ ಫಲಗಳೇ ಸಿಂಹೇಶ್ವರಮಹಾಲಿಂಗದ ದರ್ಶನದಿಂದಲೂ ಲಭಿಸುವುವು.

೩೪. ಯಾವ ಮನುಜನು ಪ್ರಯತ್ನಪೂರ್ವಕವಾಗಿ ಸಿಂಹೇಶ್ವರನನ್ನು ನೋಡುವನೋ, ಅವನು ದೇವಾಸುರರಿಗೂ ನಮಸ್ಕಾರಯೋಗ್ಯವೆನಿಸಿದ ನನ್ನ ಲೋಕವನ್ನು ಪಡೆಯುವನು.''

೩೫. ಪ್ರಿಯಳೆ! ಇಂತೆಂದು ಬ್ರಹ್ಮದೇವನು ತನ್ನ ಲೋಕವನ್ನು ಕುರಿತು

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸಿಂಹೇಶ್ವರಸ್ಯ ದೇವಸ್ಯ ರೇವಂತೇಶಮತಃ ಶೃಣು ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಸಿಂಹೇಶ್ವರಮಾಹಾತ್ಮ್ಯವರ್ಣನಂ"ನಾಮ ಪಂಚಪಂಚಾಶತ್ತಮೋಽಧ್ಯಾಯಃ

---

ತೆರಳಿದನು. ಹಿಂದೆ ನೀಲವರ್ಣದ ಕಳಂಕದಿಂದ ಕೂಡಿದ್ದ ನಿನ್ನ ಶರೀರವೇ ಈ ಲಿಂಗದ ಪ್ರಭಾವದಿಂದಲೂ ತಪಸ್ಸಿನ ಫಲವಾಗಿಯೂ ಗೌರವರ್ಣವುಳ್ಳದ್ದಾಯಿತು.

೩೬. ದೇವಿಯೆ! ಇಂತು ನಿನಗೆ ಸಿಂಹೇಶ್ವರದೇವನ ಪಾಪಪರಿಹಾರಕವಾದ ಮಹಿಮೆಯ ಕಥೆಯನ್ನು ಹೇಳಿರುವೆನು. ಇನ್ನು ರೇವಂತೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಸಿಂಹೇಶ್ವರಮಾಹಾತ್ಮ್ಯವರ್ಣನ"ವೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಪಂಚಾಶತ್ತಮೋಽಧ್ಯಾಯಃ

### ರೇವಂತೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಷಟ್ಪಂಚಾಶತ್ತಮಂ ವಿದ್ಧಿ ರೇವಂತೇಶ್ವರಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ಪರಾ ಸಿದ್ಧಿಃ ಪ್ರಜಾಯತೇ ॥ ೧ ॥
ಅಸಹಂತೀ ಪುರಾ ಸಂಜ್ಞಾ ರವೇಸ್ತೇಜೋಽತಿದುಃಸಹಂ ।
ತಪಃ ಕರ್ತುಂ ಗತಾ ದೇವಿ ಜ್ಞಾತಾ ಸೂರ್ಯೇಣ ಸುವ್ರತಾ ॥ ೨ ॥
ಅಶ್ವರೂಪಂ ತತಃ ಕೃತ್ವಾ ಜಗಾಮಾಥೋತ್ತರಾನ್ಕುರೂನ್ ।
ದದೃಶೇ ತತ್ರ ಸಂಜ್ಞಾಂ ಚ ವಡವಾರೂಪಧಾರಿಣೀಂ ॥ ೩ ॥
ಗತಾ ಸಾ ಸಮ್ಮುಖಂ ತಸ್ಯ ಪೃಷ್ಠರಕ್ಷಣತತ್ಪರಾ ।
ತತೋಽಭೂನ್ನಾಸಿಕಾಯೋಗಸ್ತಯೋಸ್ತತ್ರ ಸಮೇತಯೋಃ ॥ ೪ ॥
ನಾಸತ್ಯದಸ್ರೌ ತನಯಾವಶ್ವವಕ್ತ್ರೌ ವಿನಿರ್ಗತೌ ।
ರೇತಸೋಽಂತೇ ಚ ರೇವಂತಃ ಖಡ್ಗೀ ಚರ್ಮೀ ತನುತ್ರಧೃಕ್ ॥ ೫ ॥

---

### ಕನ್ನಡದ ಅನುವಾದ

### ರೇವಂತೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಐವತ್ತಾರನೆಯದೇ ರೇವಂತೇಶ್ವರ ನಾಮಕವಾದ ಮಹಾಲಿಂಗವೆಂದು ತಿಳಿ. ಅದನ್ನು ನೋಡುವ ಮಾತ್ರದಿಂದಲೇ ಉತ್ತಮ ಸಿದ್ಧಿಯು ಲಭಿಸುವುದು.

೨. ಹಿಂದೆ ಸಂಜ್ಞಾದೇವಿಯು ಪತಿಯಾದ ಸೂರ್ಯನ ಅಪಾರವಾದ ತೇಜಸ್ಸನ್ನು ಸಹಿಸಲಾರದವಳಾಗಿ ತಪಸ್ಸನ್ನು ಮಾಡಲು ಹೊರಟುಹೋದಳು. ಇದನ್ನು ಸೂರ್ಯನೂ ತಿಳಿದನು.

೩. ಆತನಾದರೊ ಕುದುರೆಯ ರೂಪವನ್ನು ತಾಳಿ ಉತ್ತರ ಕುರುಪ್ರದೇಶ ಗಳಿಗೆ ಬಂದು ತನ್ನ ಹೆಂಡತಿಯು ಹೆಣ್ಣು ಕುದುರೆಯ ರೂಪವನ್ನು ತಾಳಿರು ವುದನ್ನು ಕಂಡನು.

೪. ಪೃಷ್ಠರಕ್ಷಣದಲ್ಲಿ ತತ್ಪರವಾದ ಆ ಹೆಣ್ಣು ಕುದುರೆಯು ಗಂಡು ಕುದುರೆಯ ಸಮ್ಮುಖದಲ್ಲಿಯೇ ಇರುತ್ತಿರಲು ಎರಡು ಕುದುರೆಗಳೂ ಒಂದ ನ್ನೊಂದು ಮೂಸಿನೋಡಿದುವು.

೫. ಅವುಗಳಿಂದ ದೇವವೈದ್ಯರೂ, ಅಶ್ವಮುಖವುಳ್ಳವರೂ ಆದ ಅಶ್ವಿನೀ ದೇವತೆಗಳು ಹುಟ್ಟಿದರು.

ಅಶ್ವಾರೂಢಃ ಸಮುದ್ಭೂತಸ್ತತೋ ಬಾಣಧನುರ್ಧರಃ ।
ತೇನ ವೈ ಜಾತಮಾತ್ರೇಣ ಅಶ್ವಾರೂಢೇನ ಲೀಲಯಾ ॥ ೬ ॥
ನಿರ್ಜಿತಂ ಚ ಜಗಚ್ಚೇದಂ ಸ ದೇವಾಸುರಮಾನುಷಂ ॥ ೭ ॥
ತತೋ ದೇವಾಃ ಪರಾಭೂತಾ ಬ್ರಹ್ಮಾಣಂ ಶರಣಂಗತಾಃ ।
ಪ್ರಣಮ್ಯ ಕಥಯಾಮಾಸುರ್ಭಯಕಂಪಿತಕಂಧರಾಃ ॥ ೮ ॥
ಅಸ್ಮಾಕಂ ವಿಭವಂ ತೇಜೋ ರವಿಪುತ್ರೇಣ ನಾಶಿತಂ ।
ರೇವಂತೇನ ಸುರೇಂದ್ರೇಣ ಶೃಣು ಲೋಕಪಿತಾಮಹ ॥ ೯ ॥
ತಸ್ಯ ಗಾತ್ರಸಮುದ್ಭೂತೋ ವಹ್ನಿರ್ಧಾವತಿ ಕಾಲಜಿತ್ ।
ಜ್ವಲಂತಿ ಪಾದಪಾಸ್ತೇನ ಪತಂತಿ ಶಿಖರಾಣಿ ಚ ॥ ೧೦ ॥
ಸರ್ವತೋ ವ್ಯಾಕುಲೀಭೂತಂ ಹಾಹಾಕಾರಮಚೇತಸಂ ।
ತೇನೈವ ಪೀಡಿತಂ ಸರ್ವಂ ಜ್ವಾಲಾಮಾಲಾಸಮಾಕುಲಂ ॥ ೧೧ ॥
ದಶದಿಕ್ಷು ಪ್ರವೃತ್ತೋಽಯಂ ಸಮೃದ್ಧೋ ಹವ್ಯವಾಹನಃ ।
ಸರ್ವಂ ಕಿಂಶುಕಸಂಕಾಶಂ ಪ್ರಜ್ವಲನ್ನಿವ ದೃಶ್ಯತೇ ॥ ೧೨ ॥

---

೬–೭. ಕಡೆಯಲ್ಲಿ ಸೂರ್ಯನ ರೇತಸ್ಸಿನಿಂದ ರೇವಂತನೆಂಬವನುದ್ಭವಿಸಿದನು. ಆತನು ಖಡ್ಗ, ಚರ್ಮ, ಕವಚ, ಧನುರ್ಬಾಣಗಳನ್ನು ಧರಿಸಿಕೊಂಡು ಕುದುರೆಯನ್ನೇರಿಯೇ ಬಂದನು. ಅಶ್ವಾರೂಢನಾದ ಆತನು ಹುಟ್ಟುತ್ತಲೇ ದೇವ, ದಾನವ, ಮನುಷ್ಯರೇ ಮುಂತಾದವರಿಂದ ತುಂಬಿದ ಈ ಸಮಸ್ತ ಭೂಮಂಡಲವನ್ನೂ ಲೀಲೆಯಿಂದ ಜಯಿಸಿದನು.

೮. ಆಗ ದೇವತೆಗಳೆಲ್ಲರೂ ಪರಾಭವವನ್ನು ಹೊಂದಿ ಬ್ರಹ್ಮದೇವನನ್ನು ಶರಣುಹೊಕ್ಕು ನಮಸ್ಕರಿಸಿ ಭಯದಿಂದ ಕುಗ್ಗಿದ ಧ್ವನಿಯೊಡನೆ ಆ ವೃತ್ತಾಂತವನ್ನು ತಿಳಿಸತೊಡಗಿದರು.

೯. "ಎಲೈ ಲೋಕಪಿತಾಮಹನೆ! ದೇವೋತ್ತಮನೂ, ಸೂರ್ಯಪುತ್ರನೂ ಆದ ರೇವಂತನೆಂಬವನಿಂದ ನಮ್ಮ ವೈಭವವೂ, ತೇಜಸ್ಸೂ ಅಪಹೃತಗಳಾದುವು.

೧೦–೧೧. ಆತನ ದೇಹದಿಂದ ಹುಟ್ಟಿದ ಅಗ್ನಿಯು ಕಾಲನನ್ನೂ ಗೆಲ್ಲುತ್ತ ವ್ಯಾಪಿಸುತ್ತಿರುವುದು. ಅದರಿಂದ ಮರಗಳೂ ಉರಿಯುತ್ತಿರುವುವು. ಗಿರಿಶಿಖರಗಳೂ ಉರುಳುತ್ತಿರುವುವು. ಎಲ್ಲೆಲ್ಲಿಯೂ ಪ್ರಾಣಿಕೋಟಿಯು ವ್ಯಾಕುಲಪೀಡಿತವಾಗಿ ಹಾಹಾಕಾರವನ್ನು ಮಾಡುತ್ತ ನಿಶ್ಚೇಷ್ಟವಾಗಿರುವುದು. ಅವನ ತೇಜಸ್ಸಿನಿಂದಲೇ ಜ್ವಾಲಾಮಾಲೆಗಳಿಗೆ ಸಿಕ್ಕಿ ಸಕಲವೂ ಸಂಕಟಗೊಂಡಿರುವುದು.

೧೨. ಈ ಮಹಾಗ್ನಿಯು ಹತ್ತು ದಿಕ್ಕುಗಳಲ್ಲಿಯೂ ಹಬ್ಬಿರುವುದು. ಪ್ರತಿಯೊಂದು ಪದಾರ್ಥವೂ ಮುತ್ತುಗದ ಹೂವಿನ ಬಣ್ಣದಿಂದೊಪ್ಪುತ್ತ ಉರಿಯುತ್ತಿರುವಂತೆಯೇ ತೋರುತ್ತಿರುವುದು."

ಇತಿ ತೇಷಾಂ ವಚಃ ಶ್ರುತ್ವಾ ಬ್ರಹ್ಮಣೋಕ್ತಂ ವರಾನನೇ ।
ಜ್ಞಾತಂ ಮಯಾ ಸುರಶ್ರೇಷ್ಠಾ ಭವತಾಂ ಕಾರ್ಯಮೀದೃಶಂ ॥ ೧೩ ॥
ಭವಿಷ್ಯತಿ ಚ ವಸ್ತುಚ್ಚ ಕಾಂಕ್ಷಿತಂ ಯತ್ಸುರೋತ್ತಮಾಃ ।
ಗಚ್ಛಧ್ವಂ ಸಹಸಾ ತಸ್ಮಾಚ್ಛಂಕರಂ ಶರಣಂ ಸುರಾಃ ॥ ೧೪ ॥
ಬ್ರಹ್ಮಣೋ ವಚನಂ ಶ್ರುತ್ವಾ ಮಮಾಂತಿಕಮುಪಾಗತಾಃ ।
ತ್ರಿದಶಾ ಭಯಸಂತ್ರಸ್ತಾ ನತ್ವಾ ಮಾಮಿದಮಬ್ರುವನ್ ॥ ೧೫ ॥
ಆದಿತ್ಯತನಯೇನೈವ ರೇವಂತೇನ ಮಹೇಶ್ವರ ।
ದಗ್ಧಂ ತ್ರಿಭುವನಂ ಸರ್ವಂ ಶರೀರಸ್ಥೇನ ವಹ್ನಿನಾ ।
ತೇಜಸಾ ಮಹತಾ ಚೈವ ವಿಕ್ರಮೇಣ ಬಲೇನ ಚ ॥ ೧೬ ॥
ಅಸಾಧ್ಯಃ ಕಿಲ ಸೋಽಸ್ಮಾಕಂ ಸರ್ವೇಷಾಂ ದೇವಸತ್ತಮ ।
ಭವಾನ್ಪ್ರಭವತೇ ತಸ್ಯ ನಾಽನ್ಯಃ ಶಂಕರ ಕಶ್ಚನ ॥ ೧೭ ॥
ತ್ವಾಂ ಪ್ರಪದ್ಯಾಮಹೇ ಸರ್ವೇ ಭಯಾರ್ತಾಃ ಶರಣಾರ್ಥಿನಃ ।
ಶರಣಂ ವರದಂ ದೇವಂ ತ್ರಿದಶಾನಾಂ ಮಹೇಶ್ವರ ॥ ೧೮ ॥

---

೧೩. ಇಂತೆಂದ ದೇವತೆಗಳ ಮಾತನ್ನು ಕೇಳಿ ಚತುರ್ಮುಖನಿಂತೆಂದನು. “ದೇವೋತ್ತಮರಿರಾ! ನಿಮ್ಮ ಕಾರ್ಯವು ಎಷ್ಟು ಗೌರವವುಳ್ಳದ್ದೆಂಬುದನ್ನು ನಾನು ತಿಳಿದಿರುವೆನು.

೧೪. ಸುರಶ್ರೇಷ್ಠರಿರಾ! ನಿಮ್ಮ ಮನಸ್ಸಿನ ಕಾಂಕ್ಷಿತವು ನಿಶ್ಚಯವಾಗಿಯೂ ಈಡೇರುವುದು. ನೀವೀಗಲೇ ಮಹಾದೇವನಲ್ಲಿಗೆ ಹೋಗಿ ಶರಣಾಗತರಾಗಿರಿ.”

೧೫. ಬ್ರಹ್ಮದೇವನ ಮಾತನ್ನು ಕೇಳಿ ಭಯದಿಂದ ನಡುಗುತ್ತಿರುವ ದೇವತೆಗಳೆಲ್ಲರೂ ನನ್ನ ಸಮೀಪಕ್ಕೆ ಬಂದು ನಮಸ್ಕರಿಸಿ ಬಿನ್ನವಿಸತೊಡಗಿದರು.

೧೬. “ಮಹೇಶ್ವರ! ಸೂರ್ಯಪುತ್ರನಾದ ರೇವಂತನೆಂಬವನು ತನ್ನ ದೇಹದೊಳಗಿರುವ ಅಗ್ನಿಯಿಂದಲೂ, ಮಹತ್ತರವಾದ ತೇಜಸ್ಸಿನಿಂದಲೂ, ಪರಾಕ್ರಮದಿಂದಲೂ, ಬಲದಿಂದಲೂ ಮೂರು ಲೋಕಗಳನ್ನೂ ಸುಡುತ್ತಿರುವನು.

೧೭. ಮಹಾದೇವ! ನಾವೆಲ್ಲರೂ ಕೂಡಿಯೂ ಆತನನ್ನು ಗೆಲ್ಲಲು ಅಸಾಧ್ಯವಾಗಿರುವುದು. ಶಂಕರ! ಆತನನ್ನು ಜಯಿಸಲು ನೀನೊಬ್ಬನೇ ಶಕ್ತನಲ್ಲದೆ ಬೇರೊಬ್ಬರನ್ನು ಕಾಣೆವು.

೧೮. ಪರಮೇಶ್ವರ! ಆದುದರಿಂದ ಭಯಭ್ರಾಂತರೂ, ಶರಣಾರ್ಥಿಗಳೂ ಆದ ನಾವೆಲ್ಲರೂ ಶರಣದನೂ, ದೇವತೆಗಳಿಗೆ ಸಕಲ ವರಗಳನ್ನು ಕೊಡುವವನೂ ಆದ ನಿನ್ನನ್ನೇ ಮರೆಹೊಕ್ಕಿರುವೆವು.”

ಮಯಾ ಸ್ಮೃತಃ ಸೂರ್ಯಪುತ್ರೋ ರೇವಂತಸ್ತತ್ಕ್ಷಣಾತ್ಪ್ರಿಯೇ ।
ಪ್ರಾಪ್ತಃ ಪ್ರೀತಿಪ್ರಸನ್ನಾತ್ಮಾ ವಚನಂ ಚೇದಮಬ್ರವೀತ್ ॥ ೧೯ ॥
ಕಿಂ ಮಯಾ ದೇವ ಕರ್ತವ್ಯಂ ಬ್ರೂಹಿ ಸರ್ವಮಶೇಷತಃ ।
ತತೋ ಮಯಾ ಸೂರ್ಯಪುತ್ರ ಉತ್ಸಂಗೇ ಚ ಕೃತಸ್ತದಾ ॥ ೨೦ ॥
ಸ್ನೇಹಾದಾಚುಂಬಿತೋ ಮೂರ್ಧ್ನಿ ಪರಿಷ್ವಕ್ತಃ ಪುನಃ ಪುನಃ ।
ದದಾಮಿ ತೇ ಮಹಾಭಾಗ ವರಂ ವರಯ ಸುವ್ರತ ॥ ೨೧ ॥
ಪರಿತುಷ್ಟೋಽಸ್ಮಿ ತೇ ಕಾಮಂ ಯಥೇಷ್ಟಂ ಕಾಮಮಾಪ್ನುಹಿ ।
ಇದಮಾಜ್ಞಾಪಯಾಮಿ ತ್ವಾಂ ಶ್ರೇಯಶ್ಚೈವಮವಾಪ್ಸ್ಯಸಿ ॥ ೨೨ ॥
ಮಮಾಽಭೀಷ್ಟಂ ಪರಂ ಸ್ಥಾನಂ ವಿದ್ಯತೇ ಪೃಥಿವೀತಲೇ ।
ಅಕ್ಷಯಂ ಪ್ರಲಯೇ ಪುತ್ರ ಮಹಾಕಾಲವನಂ ಶುಭಂ ।
ತತ್ರ ದಾಸ್ಯಾಮಿ ತೇ ಸ್ಥಾನಂ ತತ್ರ ಕೀರ್ತಿರ್ಭವಿಷ್ಯತಿ ॥ ೨೩ ॥
ಪೂರ್ವೇ ಕಂಟೇಶ್ವರಸ್ಯಾಽಪಿ ಸ್ಥಾನಂ ಪರಮದುರ್ಲಭಂ ।
ತತ್ರ ತ್ವಂ ವಸ ರೇವಂತ ಲಿಂಗಂ ದ್ರಕ್ಷ್ಯಸಿ ಶಾಶ್ವತಂ ॥ ೨೪ ॥

---

೧೯. ದೇವಿಯೆ! ಆ ಕ್ಷಣದಲ್ಲಿಯೇ ನಾನು ಸೂರ್ಯನ ಮಗನಾದ ರೇವಂತನನ್ನು ಸ್ಮರಿಸಿದೆನು. ಪ್ರೀತಿಯಿಂದ ಪ್ರಶಾಂತಚಿತ್ತನಾದ ಆತನು ಆಗಲೇ ಪ್ರಾಪ್ತನಾಗಿ ಇಂತೆಂದು ನುಡಿದನು.

೨೦. "ದೇವದೇವನೆ! ಈಗ ನಾನು ಮಾಡಬೇಕಾದುದೇನೆಂಬುದನ್ನು ಆಜ್ಞೆಮಾಡು" ಎಂದು ಬಿನ್ನವಿಸಿಕೊಳ್ಳುತ್ತಿರುವ ಆ ಸೂರ್ಯಪುತ್ರನನ್ನು ನಾನು ತೊಡೆಯಮೇಲೆ ಕುಳ್ಳಿರಿಸಿಕೊಂಡೆನು.

೨೧. ಸ್ನೇಹದಿಂದ ಅವನ ತಲೆಯನ್ನು ಆಘ್ರಾಣಿಸುತ್ತ ಮತ್ತೆ ಮತ್ತೆ ಬಿಗಿದಪ್ಪಿಕೊಂಡು ಹೇಳಿದೆನು. "ಮಹಾಪರಾಕ್ರಮಿಯೆ! ನಿನಗೆ ಬೇಕಾದ ವರವನ್ನು ಕೊಡುವೆನು, ಕೇಳಿಕೊ.

೨೨. ನಿನ್ನಲ್ಲಿ ನಾನು ಸಂತುಷ್ಟನಾಗಿರುವೆನು. ನಿನಗೆ ಇಚ್ಛೆಬಂದ ವರಗಳನ್ನೆಲ್ಲ ಕೇಳಿಕೊ. ನಿನಗೆ ಅಪ್ಪಣೆಯನ್ನು ಮಾಡುತ್ತಿದ್ದೇನೆ. ಮುಂದೆ ನಿನಗೆ ಶ್ರೇಯಸ್ಸುಂಟಾಗುವುದು.

೨೩. ಭೂಲೋಕದಲ್ಲಿ ನನಗೆ ಪರಮಪ್ರಿಯವಾದ ಸ್ಥಾನವೊಂದಿರುವುದು. ವತ್ಸ! ಪವಿತ್ರವಾದ ಮಹಾಕಾಲವನವೆಂದು ಕರೆಯಲ್ಪಡುವ ಆ ಕ್ಷೇತ್ರವು ಪ್ರಳಯದಲ್ಲಿಯೂ ನಾಶವಾಗುವುದಿಲ್ಲ. ಅಲ್ಲಿ ನಿನಗೊಂದು ಸ್ಥಳವನ್ನು ಕೊಡುತ್ತೇನೆ. ಅಲ್ಲಿಯೇ ನಿನ್ನ ಕೀರ್ತಿಯು ಹಬ್ಬುವುದು.

೨೪. ಇತರರಿಗೆ ಅತ್ಯಂತ ದುರ್ಲಭವಾದ ಈ ಸ್ಥಾನವು ಕಂಟೇಶ್ವರನಿಗೆ ಪೂರ್ವದಲ್ಲಿರುವುದು. ರೇವಂತನೆ! ಅಲ್ಲಿ ನಿನಗೊಂದು ಅನಾದಿಯಾದ ಲಿಂಗವು ಕಾಣುವುದು. ಅದರ ಬಳಿಯಲ್ಲಿಯೆ ವಾಸಿಸು.

ಸರ್ವದಾ ತ್ರಿದಶೈಃ ಪೂಜ್ಯೋ ಭವಿಷ್ಯಸಿ ನ ಸಂಶಯಃ ।
ಗುಹ್ಯಕಾಧಿಪತಿಸ್ತ್ವಂ ಚ ಸ್ವರ್ಗಲೋಕೇ ಭವಿಷ್ಯಸಿ ॥ ೨೫ ॥
ಅಶ್ವಶಾಲಾಸು ಸರ್ವಾಸು ಪೂಜನೀಯೋ ಭವಿಷ್ಯಸಿ ।
ನೃಪತೀನಾಂ ಗೃಹೇ ಚೈವ ವಸಿಷ್ಯಸಿ ಸುಪೂಜಿತಃ. ॥ ೨೬ ॥
ತೇಜೋ ಮದೀಯಂ ತತ್ಸ್ಥಾನಂ ಲಿಂಗಾಕಾರಂ ಸನಾತನಂ ।
ಪೂಜಿತಂ ತ್ರಿದಶೈಸ್ತತ್ರ ಸಂಸೇವ್ಯಂ ಯತ್ನತಸ್ತ್ವಯಾ ॥ ೨೭ ॥
ಏವಮುಕ್ತೋ ಮಯಾ ದೇವಿ ರೇವಂತೋ ರವಿಜಸ್ತದಾ ।
ಜಗಾಮಾಕಾಶಮಾವಿಶ್ಯ ಮಹಾಕಾಲವನಂ ಕ್ಷಣಾತ್ ॥ ೨೮ ॥
ದದರ್ಶ ತತ್ರ ತಲ್ಲಿಂಗಂ ಜ್ಯೋತೀರೂಪಂ ಸನಾತನಂ ।
ಸೂರ್ಯಪುತ್ರಸ್ತು ರೇವಂತೋ ದೃಷ್ಟೋ ಲಿಂಗೇನ ಪಾರ್ವತಿ ।
ಪ್ರೋಕ್ತಃ ಪ್ರಣಯಪೂರ್ವೇಣ ದಿಷ್ಟ್ಯಾ ದೃಷ್ಟೋಽಸಿ ಸೂರ್ಯಜ ॥ ೨೯ ॥
ಅದ್ಯ ಪ್ರಭೃತಿ ತೇ ನಾಮ್ನಾ ಖ್ಯಾತಿಂ ಯಾಸ್ಯಾಮಿ ಭೂತಲೇ ॥ ೩೦ ॥
ಸ್ಥಾತವ್ಯಂ ಮತ್ಸಮೀಪೇ ತು ಸೂರ್ಯಪುತ್ರ ತ್ವಯಾ ಸದಾ ।
ಅಕ್ಷಯಾ ಭವಿತಾ ಕೀರ್ತಿಸ್ತ್ವದೀಯಾ ಭುವನತ್ರಯೇ ।
ರೇವಂತೇಶ್ವರಸಂಜ್ಞೋಽಹಂ ಭವಿಷ್ಯಾಮಿ ನ ಸಂಶಯಃ ॥ ೩೧ ॥

---

೨೫. ನೀನು ನಿತ್ಯವೂ ದೇವತೆಗಳಿಗೂ ಪರಮಪೂಜ್ಯನಾಗುವೆಯೆಂಬದರಲ್ಲಿ ಸಂದೇಹವಿಲ್ಲವು. ಮತ್ತು ಸ್ವರ್ಗಲೋಕದಲ್ಲಿ ನಿನಗೆ ಗುಹ್ಯಕಗಣಗಳ ಒಡೆತನವೂ ಲಭಿಸುವುದು.

೨೬–೨೭. ಸಮಸ್ತ ಅಶ್ವಶಾಲೆಗಳಲ್ಲಿಯೂ ನಿನ್ನ ಪೂಜೆಯು ನಡೆಯುತ್ತಿರುವುದು. ಅಲ್ಲದೆ ನೀನು ಮಹಾರಾಜರ ಮನೆಗಳಲ್ಲಿಯೂ ಪೂಜೆಗೊಳ್ಳುತ್ತ ವಾಸ ಮಾಡುತ್ತಿರುವೆ. ಲಿಂಗಾಕಾರವಾಗಿರುವ ಆ ಸ್ಥಾನವು ನನ್ನ ತೇಜಸ್ಸಿನಿಂದ ಕೂಡಿರುವುದು. ಸನಾತನವಾದ ಆ ಕ್ಷೇತ್ರವನ್ನು ದೇವತೆಗಳೂ ಪೂಜಿಸುತ್ತಿರುವರು. ಆಲ್ಲಿ ನೀನೂ ಪ್ರಯತ್ನದಿಂದ ಸೇವೆಯನ್ನು ಮಾಡಬೇಕು."

೨೮. ದೇವಿಯೆ! ಇಂತೆಂದು ಹೇಳಲು ನನ್ನ ಮಾತಿನಂತೆ ಸೂರ್ಯತನೂಜನಾದ ಆ ರೇವಂತನು ಆಕಾಶಮಾರ್ಗವನ್ನವಲಂಬಿಸಿ ನಿಮಿಷಮಾತ್ರದಲ್ಲಿಯೇ ಮಹಾಕಾಲವನವನ್ನು ಸೇರಿದನು.

೨೯. ಅಲ್ಲಿ ಜ್ಯೋತೀರೂಪದಿಂದ ಅನಾದಿಯಾಗಿ ನೆಲಸಿದ್ದ ಆ ಲಿಂಗವನ್ನೂ ಕಂಡನು. ಪಾರ್ವತಿಯೆ! ಆ ಲಿಂಗವೂ ಸೂರ್ಯಪುತ್ರನನ್ನು ಕಂಡು ಸಂತೋಷಗೊಂಡಿತು. ಮತ್ತು ಪ್ರಣಯಪೂರಿತವಾದ ಮಾತುಗಳಿಂದ ಇಂತೆಂದಿತು. "ರೇವಂತ! ನೀನು ದೈವಯೋಗದಿಂದ ಇಲ್ಲಿಗೆ ಬಂದಿರುವೆಯಷ್ಟೆ!

೩೦–೩೧. ಇಂದು ಮೊದಲಾಗಿ ನಾನು ನಿನ್ನ ಹೆಸರಿನಿಂದಲೇ ಭೂಲೋಕದಲ್ಲಿ

ಯೇ ಮಾಂ ದ್ರಕ್ಷ್ಯಂತಿ ರೇವಂತ ಭಕ್ತ್ಯಾ ಪರಮಯಾ ಯುತಾಃ ।
ತೇಷಾಮಶ್ವಾ ಭವಿಷ್ಯಂತಿ ವಿಜಯೋ ಯಶ ಊರ್ಜಿತಂ ॥ ೩೨ ॥
ಐಶ್ವರ್ಯಂ ದಾನಶಕ್ತಿಶ್ಚ ಪುತ್ರಪೌತ್ರಮನಂತಕಂ ।
ಗುಹ್ಯಕಾನಾಂ ಪತಿರ್ಭೂತ್ವಾ ಸ್ವರ್ಗಲೋಕೇ ಸ ವತ್ಸ್ಯತಿ ॥ ೩೩ ॥
ಲಿಂಗಸ್ಯ ವಚನಂ ಶ್ರುತ್ವಾ ಪ್ರೋಕ್ತಂ ವೈ ರವಿಸೂನುನಾ ।
ರೇವಂತೇನ ವಿಶಾಲಾಕ್ಷಿ ಸಂತುಷ್ಟೇನಾಂತರಾತ್ಮನಾ ॥ ೩೪ ॥
ದೇಹಿ ಮೇ ಹ್ಯಚಲಾಂ ಭಕ್ತಿಂ ದೇಹಿ ಮೇ ಸ್ಥಾನಮುತ್ತಮಂ ।
ದೇಹಿ ಮೇ ಪರಮಂ ಜ್ಞಾನಂ ಧ್ರುವಾಂ ಕೀರ್ತಿಂ ಚ ದೇಹಿ ಮೇ ॥ ೩೫ ॥
ಭಗವನ್ಭೂತಭವ್ಯೇಶ ಭವಬಂಧಭಯಾಽಪಹ ।
ಸಂಸ್ಕೃತಾರ್ಥೋಽಸ್ಮಿ ಸಂಜಾತಸ್ತವ ದೇವಸ್ಯ ದರ್ಶನಾತ್ ॥ ೩೬ ॥
ಜನ್ಮಕೋಟಿಸು ಸಂಶುದ್ಧಾ ಯೇ ತ್ವಾಂ ಪಶ್ಯಂತಿ ದೇಹಿನಃ ।
ನ ತೇಷಾಂ ಪುನರಾವೃತ್ತಿರ್ಘೋರೇ ಸಂಸಾರಸಾಗರೇ ॥ ೩೭ ॥

---

ಪ್ರಖ್ಯಾತಿಯನ್ನು ಪಡೆಯುವೆನು. ನೀನೂ ಯಾವಾಗಲೂ ನನ್ನ ಸಮೀಪದಲ್ಲಿಯೇ ನೆಲಸಿರು. ನಿನ್ನ ಕೀರ್ತಿಯು ಮೂರು ಲೋಕಗಳಲ್ಲಿಯೂ ಶಾಶ್ವತವಾಗಿ ನೆಲಸಿರುವುದು. ನಾನೂ ರೇವಂತೇಶ್ವರನೆಂಬ ನಿನ್ನ ಹೆಸರನ್ನೇ ಪಡೆಯುವುದರಲ್ಲಿ ಸಂಶಯವಿಲ್ಲ.

೩೨. ರೇವಂತ! ಯಾರು ಅತ್ಯಂತ ಭಕ್ತಿಯುಕ್ತರಾಗಿ ನನ್ನನ್ನು ನೋಡುವರೊ, ಅವರಿಗೆ ಅಶ್ವಾದಿ ವಾಹನಗಳೂ, ವಿಜಯವೂ, ಉತ್ತರೋತ್ತರವಾಗಿ ವರ್ಧಿಸುವ ಯಶಸ್ಸೂ ಲಭಿಸುವುವು.

೩೩. ಅಲ್ಲದೆ ಐಶ್ವರ್ಯವೂ, ದಾನಮಾಡುವ ಶಕ್ತಿಯೂ, ಅನಂತಕಾಲದವರೆಗೂ ಖಿಲವಾಗದ ಪುತ್ರಪೌತ್ರಸಂತಾನವೂ ಲಭಿಸುವುವಲ್ಲದೆ ಅವನು ಗುಹ್ಯಕಗಣನಾಯಕನಾಗಿ ಸ್ವರ್ಗಲೋಕದಲ್ಲಿ ವಾಸಮಾಡುವನು.''

೩೪. ವಿಶಾಲಾಕ್ಷಿಯೆ! ಆ ಮಹಾಲಿಂಗದ ಈ ಮಾತುಗಳನ್ನು ಕೇಳಿ ಸೂರ್ಯನಂದನನಾದ ರೇವಂತನು ಆನಂದಭರಿತಾಂತರಂಗನಾಗಿ ಇಂತೆಂದನು.

೩೫. ''ದೇವಾ! ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿಯನ್ನೂ, ಉತ್ತಮಪದವಿಯನ್ನೂ, ಪರಮಜ್ಞಾನವನ್ನೂ, ಶಾಶ್ವತ ಕೀರ್ತಿಯನ್ನೂ ಅನುಗ್ರಹಿಸು.

೩೬. ಸರ್ವೈಶ್ವರ್ಯಪ್ರದನೆ! ತ್ರಿಕಾಲಗಳಿಗೊಡೆಯನೆ! ಸಂಸಾರಬಂಧದ ಭಯವನ್ನು ನಿವಾರಿಸುವ ಮಹಾದೇವನಾದ ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆನು.

೩೭. ಕೋಟಿಜನ್ಮಗಳಲ್ಲಿ ಪರಿಶುದ್ಧಕಾರ್ಯಗಳನ್ನು ಮಾಡಿದ ಮನುಜರಿಗೆ ಮಾತ್ರ ನಿನ್ನ ದರ್ಶನವು ಲಭಿಸುವುದು. ಅಂತಹವರಿಗೆ ಪುನಃ ಭಯಂಕರವಾದ ಸಂಸಾರಸಮುದ್ರದಲ್ಲಿ ಜನನವಿರುವುದಿಲ್ಲ.''

ಇತ್ಯುಕ್ತ್ವಾ ರವಿಸೂನುರ್ವ್ರೈ ರೇವಂತೋ ರವಿವಲ್ಲಭಃ ।
ರೇವಂತೇಶ್ವರದೇವಸ್ಯ ಸಮೀಪೇ ಸಂವ್ಯವಸ್ಥಿತಃ ॥ ೩೮ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ರೇವಂತೇಶ್ವರದೇವಸ್ಯ ಘಂಟೇಶ್ವರಮುಖೋ ಶೃಣು ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ರೇವಂತೇಶ್ವರಮಾಹಾತ್ಮ್ಯವರ್ಣನಂ" ನಾಮ ಷಟ್ಪಂಚಾಶತ್ತಮೋಽಧ್ಯಾಯಃ

---

೩೮. ಇಂತೆಂದು ನುಡಿದು, ಸೂರ್ಯಪುತ್ರನೂ, ಸೂರ್ಯನಿಗೆ ಪ್ರಿಯನೂ ಆದ ಆ ರೇವಂತನು ವರವನ್ನು ಪ್ರಾರ್ಥಿಸಿಕೊಂಡು ಆ ರೇವಂತೇಶ್ವರಮಹಾಲಿಂಗದ ಸಮೀಪದಲ್ಲಿಯೇ ನಿಂತನು.

೩೯. ದೇವಿಯೆ! ಇಂತು ನಿನಗೆ ರೇವಂತೇಶ್ವರಮಹಾದೇವನ ಮಹಿಮೆಯನ್ನು ವರ್ಣಿಸಿರುವೆನು. ಸಕಲಪಾಪಪರಿಹಾರಕವಾದ ಈ ಚರಿತ್ರೆಯನ್ನು ಕೇಳಿದೆಯಷ್ಟೆ. ಇನ್ನು ಘಂಟೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ರೇವಂತೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶತ್ತಮೋಽಧ್ಯಾಯಃ

### ಘಂಟೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಸಪ್ತಪಂಚಾಶತಂ ವಿದ್ಧಿ ಘಂಟೇಶ್ವರಮಥೋ ಶೃಣು ।
ಯಸ್ಯ ದರ್ಶನಮಾತ್ರೇಣ ಕಾಮಾವಾಪ್ತಿಶ್ಚ ಜಾಯತೇ ॥ ೧ ॥
ಘಂಟೋ ನಾಮ ಗಣಶ್ರೇಷ್ಠೋ ಬಭೂವ ಮಮ ವಲ್ಲಭಃ ।
ಚಾಕ್ಷುಷಸ್ಯ ಮನೋಃ ಕಾಲೇ ಕೌತುಕಾರ್ಥಂ ಯದೃಚ್ಛಯಾ ।
ಪ್ರಸ್ಥಿತೋ ಬ್ರಹ್ಮಸದನಂ ದ್ರಷ್ಟುಂ ಬ್ರಹ್ಮಾಣಮವ್ಯಯಂ ॥ ೨ ॥
ಅಥಾಯಾಂತಂ ಸಮಾಲೋಕ್ಯ ಗಂಧರ್ವಂ ಗೀತಕೋವಿದಂ ।
ಚಿತ್ರಸೇನಂ ಗಣಶ್ರೇಷ್ಠಃ ಪಪ್ರಚ್ಛ ಕುಶಲಂ ಮುದಾ ॥ ೩ ॥
ಮಯಾ ತತ್ರೈವ ಗಂತವ್ಯಂ ಸದನೇ ಪರಮೇಷ್ಠಿನಃ ।
ಗೀತೈರಾರಾಧಯಿಷ್ಯಾಮಿ ಬ್ರಹ್ಮಾಣಂ ಜಗತಾಂ ಪತಿಂ ॥ ೪ ॥
ಚಿತ್ರಸೇನೋಽಥ ತಂ ದೇವಿ ಪ್ರತ್ಯುಕ್ತೋ ಘಂಟಮಬ್ರವೀತ್ ।
ಪದ್ಮಯೋನಿಃ ಸುರೈಃ ಸಾರ್ಧಂ ಗುಹ್ಯಂ ಮಂತ್ರಮಚೀಕರತ್ ॥ ೫ ॥

---

### ಕನ್ನಡದ ಅನುವಾದ

#### ಘಂಟೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಇನ್ನು ಐವತ್ತೇಳನೆಯ ಮಹಾಲಿಂಗವಾದ ಘಂಟೇಶ್ವರನ ಚರಿತ್ರೆಯನ್ನು ಕೇಳು. ಈ ಮಹಾಲಿಂಗವನ್ನು ನೋಡುವ ಮಾತ್ರದಿಂದಲೇ ಅಭೀಷ್ಟಪ್ರಾಪ್ತಿಯುಂಟಾಗುವುದು.

೨. ಹಿಂದೆ ಘಂಟನೆಂಬ ಗಣೋತ್ತಮನು ನನಗೆ ಅತ್ಯಂತ ಪ್ರಿಯನಾಗಿದ್ದನಷ್ಟೆ. ಆತನೊಮ್ಮೆ ಚಾಕ್ಷುಷಮನುವಿನ ಕಾಲದಲ್ಲಿ ಕುತೂಹಲಾನ್ವಿತನಾಗಿ ಸ್ವೇಚ್ಛೆಯಿಂದ ತಿರುಗುತ್ತ ಶಾಶ್ವತನೆನಿಸಿದ ಬ್ರಹ್ಮದೇವನನ್ನು ನೋಡಲು ಸತ್ಯಲೋಕಕ್ಕೆ ಹೋದನು.

೩. ಅಲ್ಲಿಂದ ಬರುತ್ತಿದ್ದ ಗೀತಶಾಸ್ತ್ರನಿಪುಣನಾದ ಚಿತ್ರಸೇನಗಂಧರ್ವನನ್ನು ಕಂಡು ಅವನು ಸಂತೋಷದಿಂದ ಕುಶಲಪ್ರಶ್ನೆಯನ್ನು ಮಾಡಿದನು.

೪. "ನಾನೂ ಪರಮೇಷ್ಠಿಯಾದ ಆ ಚತುರ್ಮುಖನ ವಾಸಕ್ಕೇ ಹೋಗುತ್ತಿರುವೆನು. ಲೋಕನಾಯಕನಾದ ಆತನನ್ನು ನನ್ನ ಗೀತಕುಶಲತೆಯಿಂದ ಆರಾಧಿಸಬೇಕೆಂದಿರುವೆನು" ಎಂದು ಹೇಳಿದನು.

೫. ದೇವಿಯೆ! ಇಂತೆಂದ ಘಂಟನಿಗೆ ಚಿತ್ರಸೇನನು ಹೇಳಿದನು. "ಪದ್ಮಾಸನ

ಏತಚ್ಛ್ರುತ್ವಾ ಗಣೋ ಘಂಟಿಸ್ತಸ್ಥೌ ವಿಸ್ಮಿತಮಾನಸಃ ।
ಮುಹೂರ್ತಂ ಚಿಂತಯಾಮಾಸ ಪ್ರತಿಹಾರನಿವಾರಿತಃ ॥ ೬ ॥
ಹಿತ್ವಾ ಸ್ವಾಮಿನಮೀಶಾನಂ ದ್ರಷ್ಟುಂ ಬ್ರಹ್ಮಾಣಮಾಗತಃ ।
ಪ್ರವೇಶೋಽಪಿ ನ ಲಭ್ಯೇತ ಪ್ರಸಾದೋ ದೂರತಃ ಸ್ಥಿತಃ ॥ ೭ ॥
ಏವಂ ಚಿಂತಯತಸ್ತಸ್ಯ ಸಾಗ್ರಃ ಸಂವತ್ಸರೋ ಗತಃ ।
ಘಂಟಿಸ್ಯ ಬ್ರಹ್ಮಣೋ ದ್ವಾರಿ ಪ್ರವೇಶೋ ದೇವಿ ನಾಽಭವತ್ ॥ ೮ ॥
ನಿರ್ಗಚ್ಛಂತಮಥಾಲೋಕ್ಯ ವೀಣಾಹಸ್ತಂ ಸಮುತ್ಸುಕಂ ।
ನಾರದಂ ಸ ಗಣಶ್ರೇಷ್ಠಃ ಪದ್ಮಯೋನಿಂ ಗೃಹೋದರಾತ್ ॥ ೯ ॥
ಪ್ರೋಕ್ತೋ ಘಂಟೀನ ಸಹಸಾ ಮಾಂ ನಿವೇದಯ ನಾರದ ।
ಗಣೋಽಹಂ ಗೀತತತ್ತ್ವಜ್ಞೋ ಮಹಾದೇವಸ್ಯ ವಲ್ಲಭಃ ।
ದರ್ಶನಾರ್ಥಂ ಸಮಾಯಾತೋ ಬ್ರಹ್ಮಣಃ ಪರಮೇಷ್ಠಿನಃ ॥ ೧೦ ॥
ಘಂಟಿಸ್ಯ ವಚನಂ ಶ್ರುತ್ವಾ ಪ್ರೀತಿಮಾನಭವನ್ಮುನಿಃ ।
ನಾರದಃ ಪ್ರತ್ಯುವಾಚೇದಂ ಸಮಾಶ್ವಾಸ್ಯ ಸಕೈತವಂ ॥ ೧೧ ॥

---

ನಾದ ಆತನು ದೇವತೆಗಳೊಡನೆ ಏಕಾಂತದಲ್ಲಿ ಮಂತ್ರಾಲೋಚನೆಯನ್ನು ಮಾಡುತ್ತಿದ್ದನು.''

೬. ಇದನ್ನು ಕೇಳಿ ಘಂಟಗಣನಾಯಕನು ವಿಸ್ಮಯಾವಿಷ್ಟನಾಗಿ ನಿಂತು ಪ್ರತಿಹಾರಿಗಳಿಂದ ತಡೆಯಲ್ಪಟ್ಟವನಾಗಿ ಒಂದು ಮುಹೂರ್ತಕಾಲ ತನ್ನಲ್ಲಿಯೇ ಯೋಚಿಸಿದನು.

೭. ''ಸರ್ವೇಶ್ವರನಾದ ನನ್ನೊಡೆಯನನ್ನು ಬಿಟ್ಟು ಬ್ರಹ್ಮದೇವನನ್ನು ನೋಡಲು ಇಲ್ಲಿಗೆ ಬಂದರೆ ಇಲ್ಲಿ ಪ್ರವೇಶವೂ ಲಭಿಸದಂತಾಗಿರುವುದು. ಇನ್ನು ಆತನ ಪ್ರಸಾದವಂತೂ ದೂರಸ್ಥಿತವೇ ಆಯಿತು.''

೮. ಇಂತು ಆತನು ಚಿಂತಿಸುತ್ತಿದ್ದಂತೆಯೇ ಒಂದು ಸಂವತ್ಸರವು ಸಂಪೂರ್ಣವಾಗಿ ಕಳೆದುಹೋಯಿತು. ದೇವಿಯೆ! ಆದರೂ ಘಂಟನಿಗೆ ಬ್ರಹ್ಮನ ಅರಮನೆಯೊಳಕ್ಕೆ ಪ್ರವೇಶವು ದೊರೆಯಲಿಲ್ಲ.

೯–೧೦. ಬಳಿಕ ವೀಣಾಪಾಣಿಯಾಗಿ ಕೌತುಕಗೊಂಡು ಪದ್ಮಸಂಭವನ ಮನೆಯಿಂದ ಹೊರಕ್ಕೆ ಬರುತ್ತಿರುವ ನಾರದಮುನಿವರ್ಯನನ್ನು ಕಂಡು ಆ ಗಣ ಶ್ರೇಷ್ಠನು ಆತನಿಗೆ ಹೇಳಿದನು. ''ನಾರದ! ನಾನು ಬಂದಿರುವುದನ್ನು ಒಳಗೆ ತಿಳಿಸು. ನಾನು ಸಂಗೀತದ ಸಾರವನ್ನರಿತ ಗಣನಾಯಕನು. ಮಹಾದೇವನಿಗೆ ಅತ್ಯಂತ ಪ್ರಿಯನು. ಈಗ ಪರಮೇಷ್ಠಿಯಾದ ಚತುರ್ಮುಖನ ದರ್ಶನವನ್ನು ಅಪೇಕ್ಷಿಸಿ ಬಂದಿರುವೆನು.''

೧೧. ಘಂಟನ ಮಾತನ್ನು ಕೇಳಿ ನಾರದಮುನಿಯು ಪ್ರೀತಿಯುಳ್ಳವ

ಅಹಂ ಬೃಹಸ್ಪತೇಃ ಪಾರ್ಶ್ವೇ ಪ್ರೇಷಿತೋಽಸ್ಮಿ ಗಣಾಧಿಪ ।
ಕಿಂಚಿತ್ಕಾರ್ಯಾಂತರಂ ಪ್ರಷ್ಟುಂ ಬ್ರಹ್ಮಣಾ ಲೋಕಕರ್ತೃಣಾ ।
ಆಯಾಸ್ಯಾಮಿ ಕ್ಷಣೇನೈವ ತಾವತ್ಕಾಲಂ ಪ್ರತೀಕ್ಷ್ಯತಾಂ ॥ ೧೨ ॥
ಇತ್ಯುಕ್ತ್ವಾ ನಾರದೋ ದೇವಿ ಮಮ ಪಾರ್ಶ್ವಮುಪಾಗತಃ ।
ವೃತ್ತಾಂತಂ ಕಥಯಾಮಾಸ ಘಂಟಸ್ಯ ಮುನಿಸತ್ತಮಃ ॥ ೧೩ ॥
ಈದೃಶೋ ದುರ್ಲಭೋ ಭೃತ್ಯೋ ಘಂಟೇನ ಸದೃಶಃ ಪ್ರಭೋ ।
ಯಸ್ತ್ವಾಂ ತ್ಯಕ್ತ್ವಾ ಗಣೋ ದೇವ ಸೇವಾಯೈ ಪರಮೇಷ್ಠಿನಃ ।
ಸ್ಥಿತಃ ಸಂವತ್ಸರಂ ಸಾಗ್ರಂ ಪ್ರವೇಶಂ ಚ ನ ಲಬ್ಧವಾನ್ ॥ ೧೪ ॥
ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ಮುನೇಸ್ತದಾ ।
ಮಯಾ ಶಪ್ತಸ್ತು ಕೋಪೇನ ಪತ ಘಂಟ ಮಹೀತಲೇ ।
ಮಾಂ ತ್ಯಕ್ತ್ವಾ ಹಿ ಗತೋಽನ್ಯತ್ರ ಸೇವಾರ್ಥಂ ಪರವೇಶ್ಮನಿ ॥ ೧೫ ॥
ಮಯೇತ್ಯುಕ್ತೇ ಚ ವಚನೇ ಬ್ರಹ್ಮದ್ವಾರಿ ಸ್ಥಿತೋಽಪಿ ಸನ್ ।
ಪತಿತೋ ಭೂತಲೇ ಘಂಟೋ ದೇವದಾರುವನಾಂತಿಕೇ ॥ ೧೬ ॥

---

ನಾದನು. ಅವನು ಕುಹಕಬುದ್ಧಿಯಿಂದ ಆತನಿಗೆ ಸಮಾಧಾನವನ್ನು ಮಾಡಿ ಉತ್ತರವನ್ನಿತ್ತನು.

೧೨. "ಗಣಾಧಿಪತಿಯೆ! ಲೋಕಕರ್ತೃವಾದ ಚತುರ್ಮುಖನಿಂದ ಪ್ರೇರಿತನಾಗಿ ಒಂದಾನೊಂದು ಕಾರ್ಯಗೌರವವನ್ನು ವಿಚಾರಿಸಲು ನಾನು ಬೃಹಸ್ಪತಿಯ ಬಳಿಗೆ ಹೊರಟಿರುವೆನು. ಒಂದು ಕ್ಷಣಮಾತ್ರದಲ್ಲಿಯೇ ಹಿಂದಿರುಗುವೆನು. ಅಲ್ಲಿಯವರೆಗೂ ಇಲ್ಲಿಯೇ ನಿಂತಿರು."

೧೩. ದೇವಿಯೆ! ಇಂತೆಂದು ನುಡಿದು ನಾರದನು ನನ್ನ ಬಳಿಗೆ ಬಂದು ಆ ಘಂಟಗಣನಾಯಕನ ವೃತ್ತಾಂತವೆಲ್ಲವನ್ನೂ ಹೇಳಿದನು.

೧೪. "ಮಹೇಶ್ವರ! ಈ ಘಂಟನಂತಹ ಸೇವಕನು ಸಿಕ್ಕುವುದೇ ದುರ್ಲಭವು. ಇವನು ಗಣನಾದರೂ ನಿನ್ನನ್ನು ಬಿಟ್ಟು ಬ್ರಹ್ಮದೇವನ ಸೇವೆಯನ್ನು ಮಾಡಲು ಹೋಗಿ ಒಂದು ವರ್ಷದವರೆಗೂ ಆತನ ಬಾಗಿಲನ್ನು ಕಾದರೂ ಒಳಗೆ ಪ್ರವೇಶವನ್ನೂ ಪಡೆಯಲಿಲ್ಲವಲ್ಲ!"

೧೫. ದೇವಿಯೆ! ನಾರದಮಹರ್ಷಿಯಿಂದ ಈ ಸಮಾಚಾರವನ್ನು ಕೇಳಿ ನಾನು ಕೋಪಗೊಂಡು ಅವನಿಗೆ ಶಾಪವನ್ನಿತ್ತೆನು. "ಎಲೈ ಘಂಟನೆ! ನೀನು ಭೂಲೋಕದಲ್ಲಿ ಬೀಳು. ನನ್ನನ್ನು ತ್ಯಜಿಸಿ ಪರಗೃಹದಲ್ಲಿ ಇತರರ ಸೇವೆಗಾಗಿ ಹೋಗಿರುವೆಯಲ್ಲವೆ."

೧೬. ನಾನು ಇಂತು ಶಪಿಸಲು, ಬ್ರಹ್ಮನ ದ್ವಾರದಲ್ಲಿದ್ದರೂ ಆ ಘಂಟನು ಭೂಲೋಕದಲ್ಲಿ ದೇವದಾರುವನ ಪ್ರದೇಶದಲ್ಲಿ ಬಿದ್ದನು.

ಆತ್ಮಾನಂ ಪತಿತಂ ದೃಷ್ಟ್ವಾ ಭೂಮೌ ಘಂಟೇನ ಪಾರ್ವತಿ ।
ಪ್ರೋಕ್ತಂ ಶೋಕೋತ್ತರೇಣೈವ ವಚನಂ ಗದ್ಗದಾಕ್ಷರಂ ॥ ೧೭ ॥
ಸೇವಾರ್ಥಂ ಯಾತಿ ಯೋಽನ್ಯತ್ರ ಪರಿಹೃತ್ಯ ಸ್ವಕಂ ಪ್ರಭುಂ ।
ಸ ಯಾತಿ ನರಕಂ ಘೋರಮಪಕೀರ್ತಿಂ ಚ ವಿಂದತಿ ॥ ೧೮ ॥
ನಾರದೇನ ಮಮ ತ್ವದ್ಯ ವಂಚಿತಸ್ಯ ದ್ವಯಂ ಗತಂ ।
ಯಸ್ಮಾತ್ಸ್ವಾಮೀ ನ ಮೇ ಬ್ರಹ್ಮಾ ನ ಚ ದೇವೋ ಮಹೇಶ್ವರಃ ॥ ೧೯ ॥
ಏವಂ ವಿಲಪತಸ್ತಸ್ಯ ನಾರದೋ ಮುನಿಸತ್ತಮಃ ।
ಆಜಗಾಮ ತಮುದ್ದೇಶಂ ಯತ್ರ ಘಂಟೋ ವ್ಯವಸ್ಥಿತಃ ॥ ೨೦ ॥
ದೇವದಾರುವನೇ ದೇವಿ ದರ್ಶನಾರ್ಥಂ ತಪಸ್ವಿನಾಂ ।
ಘಂಟೇನ ನಾರದೋ ದೃಷ್ಟೋ ಭೀತೇನಾಕುಲಚೇತಸಾ ॥ ೨೧ ॥
ಅವಸ್ಥಾಮೀದೃಶೀಂ ಕೃತ್ವಾ ಕಿಮನ್ಯನ್ಮೇ ಕರಿಷ್ಯತಿ ।
ಏವಂ ತಂ ಚಿಂತಯಾನಂ ತು ನಾರದೋ ವಾಕ್ಯಮಬ್ರವೀತ್ ॥ ೨೨ ॥
ಗಣಾಧ್ಯಕ್ಷ ನ ತೇ ಕಾರ್ಯೋ ಮನ್ಯುಃ ಪುಣ್ಯವಿನಾಶನಃ ।
ಕೀರ್ತ್ಯರ್ಥಂ ಪತಿತೋ ಘಂಟೆ ಪ್ರಾಯಶ್ಚಿತ್ತಾರ್ಥಮೇವ ಚ ॥ ೨೩ ॥

---

೧೭. ತಾನು ಇಂತು ಪತಿತನಾದುದನ್ನು ಕಂಡು ಆತನು ದುಃಖದಿಂದ ಮಾತು ಗದ್ಗದಿತವಾಗಿರಲು ಅತಿಯಾಗಿ ಶೋಕಸಂತಪ್ತನಾಗಿ ಇಂತೆಂದನು.

೧೮. "ಯಾವನು ತನ್ನ ಯಜಮಾನನನ್ನು ತ್ಯಜಿಸಿ ಮತ್ತೊಬ್ಬರಲ್ಲಿ ಸೇವೆಗಾಗಿ ಹೋಗುವನೊ, ಅವನು ಘೋರ ನರಕಕ್ಕೆ ಭಾಗಿಯಾಗುವನಲ್ಲದೆ ಇಹದಲ್ಲಿಯೂ ಅಪಕೀರ್ತಿಯನ್ನು ಪಡೆಯುವನು.

೧೯. ನಾರದನಿಂದ ವಂಚಿತನಾದ ನನಗೆ ಈಗ ಎರಡು ಆಶ್ರಯಗಳೂ ಇಲ್ಲವಾದುವು. ಬ್ರಹ್ಮದೇವನೂ ನನ್ನ ಕೈಯನ್ನು ಹಿಡಿಯಲಿಲ್ಲ. ಮಹಾದೇವ ಸ್ವಾಮಿತ್ವವೂ ನನಗೆ ಲಭ್ಯವಾಗಲಿಲ್ಲ."

೨೦. ಇಂತು ಪ್ರಲಾಪವನ್ನು ಮಾಡುತ್ತಿರುವ ಘಂಟನಿದ್ದೆಡೆಗೆ ಮುನಿವರ್ಯನಾದ ನಾರದನು ಪುನಃ ಆಗಮಿಸಿದನು.

೨೧. ದೇವಿಯೆ! ದೇವದಾರುವನದಲ್ಲಿ ನೆಲಸಿದ್ದ ತಪಸ್ವಿಗಳನ್ನು ನೋಡಲು ಬಂದ ಆತನನ್ನು ಕಂಡು ಆ ಗಣನಾಯಕನು ಭಯಗೊಂಡನಲ್ಲದೆ ವ್ಯಾಕುಲಿತ ಮನಸ್ಕನೂ ಆದನು.

೨೨. "ಈತನು ನನ್ನನ್ನು ಈ ದುರವಸ್ಥೆಗೆ ಗುರಿಮಾಡಿ ಪುನಃ ಏನನ್ನು ಮಾಡಲು ಬಂದಿರಬಹುದು?" ಎಂದು ಚಿಂತಿಸುತ್ತಿದ್ದ ಆತನಿಗೆ ನಾರದ ಮಹರ್ಷಿಯು ಹೇಳತೊಡಗಿದನು.

೨೩. "ಅಯ್ಯಾ ಗಣನಾಯಕನೆ! ಪುಣ್ಯರಾಶಿಯನ್ನು ನಾಶಮಾಡುವ

ಪ್ರಾಯಶ್ಚಿತ್ತವಿಶುದ್ಧಾತ್ಮಾ ಪ್ರಭುಂ ಪ್ರಾಪ್ಸ್ಯಸಿ ಶಂಕರಂ ।
ತಸ್ಮಾದ್ಗಚ್ಛ ಮಮಾದೇಶಾನ್ಮಹಾಕಾಲವನಂ ಶುಭಂ ॥ ೨೪ ॥
ರೇವಂತೇಶ್ವರಪೂರ್ವೇ ತು ವಿದ್ಯತೇ ಲಿಂಗಮುತ್ತಮಂ ।
ಸರ್ವಸಂಪತ್ಕರಂ ದಿವ್ಯಂ ತ್ವನ್ನಾಮ್ನಾ ಖ್ಯಾತಿಮೇಷ್ಯತಿ ॥ ೨೫ ॥
ಇತ್ಯುಕ್ತೋ ನಾರದೇನೈವ ಜೈಗೀಷವ್ಯಃ ಸಮಾಗತಃ ।
ತೇನಾಽಪಿ ಕಥಿತಂ ಸರ್ವಂ ಸತ್ಯಮುಕ್ತಮನೇನ ವೈ ॥ ೨೬ ॥
ನಾರದೇನ ಗಣಾಧ್ಯಕ್ಷ ಕೀರ್ತಿಸ್ತೇ ಭವಿತಾಽಕ್ಷಯಾ ।
ಕಶ್ಯಪೇನ ಮೃಕಂಡೇನ ಕಣ್ವೇನ ಜಮದಗ್ನಿನಾ ॥ ೨೭ ॥
ಅತ್ರಿಣಾ ಭೃಗುಣಾ ದೇವಿ ಲೋಮಶೇನ ಸುರರ್ಷಿಣಾ ।
ಪ್ರೋಕ್ತೋ ಘಂಟೋ ಗತಃ ಶೀಘ್ರಂ ಮಹಾಕಾಲವನಂ ಶುಭಂ ॥ ೨೮ ॥
ಯತ್ರ ಘಂಟಾನಿನಾದೇನ ಯುಧ್ಯತೋ ಮಮ ಸಂಯುಗೇ ।
ಪಾಪಕ್ಷಯಕರಂ ದೇವಿ ಸಂಭೂತಂ ಲಿಂಗಮುತ್ತಮಂ ।
ದೃಷ್ಟಂ ತತ್ರ ಗಣೇನೈವ ಲಿಂಗಂ ತೇಜೋಮಯಂ ಶುಭಂ ॥ ೨೯ ॥

---

ಕೋಪವನ್ನು ತಾಳಬೇಡ. ನಿನ್ನ ಕೀರ್ತಿಯು ಹಬ್ಬುವುದಕ್ಕಾಗಿಯೂ, ತಪ್ಪಿಗೆ ಪ್ರಾಯಶ್ಚಿತ್ತರೂಪವಾಗಿಯೂ ನಿನಗೆ ಈ ರೀತಿ ಪತನವಾಗಿರುವುದು.

೨೪. ಪ್ರಾಯಶ್ಚಿತ್ತದಿಂದ ಪರಿಶುದ್ಧನಾದ ನೀನು ಪುನಃ ನಿನ್ನ ಸ್ವಾಮಿಯಾದ ಶಂಕರನನ್ನು ಪಡೆಯುವೆ. ಆದುದರಿಂದ ನನ್ನ ಮಾತನ್ನು ಕೇಳಿ ಪವಿತ್ರವಾದ ಮಹಾಕಾಲವನಕ್ಕೆ ಹೊರಡು.

೨೫. ರೇವಂತೇಶ್ವರನಿಗೆ ಪೂರ್ವದಲ್ಲಿ ಸರ್ವೈಶ್ವರ್ಯಪ್ರದವೂ, ಸರ್ವೋತ್ತಮವೂ ಆದ ದಿವ್ಯಲಿಂಗವೊಂದಿರುವುದು. ಮುಂದೆ ಅದು ನಿನ್ನ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವುದು."

೨೬. ಇಂತೆಂದು ನಾರದನು ಹೇಳುತ್ತಿರಲು ಜೈಗೀಷವ್ಯಮುನಿಯೂ ಅಲ್ಲಿಗೆ ಬಂದು "ಈತನು ಹೇಳಿದುದೆಲ್ಲವೂ ಸರ್ವಥಾ ಸತ್ಯವಾದುದು" ಎಂದನು.

೨೭–೨೮. "ಗಣಾಧ್ಯಕ್ಷನೆ! ನಾರದಮುನಿಯ ವಚನದಿಂದ ನಿನ್ನ ಕೀರ್ತಿಯು ಶಾಶ್ವತವಾಗಿ ನಿಲ್ಲುವುದೆ"ಂಬ ಮಾತನ್ನು ಕಾಶ್ಯಪ, ಮೃಕಂಡು, ಕಣ್ವ, ಜಮದಗ್ನಿ, ಅತ್ರಿ, ಭೃಗು, ಲೋಮಶನೆಂಬ ದೇವರ್ಷಿಯು ಸಹ ಹೇಳಿದರು. ಅವರ ಮಾತಿನಂತೆ ಘಂಟನು ಶೀಘ್ರವಾಗಿ ಶುಭಕ್ಷೇತ್ರವಾದ ಮಹಾಕಾಲವನಕ್ಕೆ ಬಂದನು.

೨೯. ದೇವಿಯೆ! ಹಿಂದೆ ಯುದ್ಧಮಾಡುತ್ತಿದ್ದಾಗ ರಣರಂಗದಲ್ಲಿ ನನ್ನ ಬಿಲ್ಲಿನ ಘಂಟೆಯ ನಾದದಿಂದ ಸಕಲಪಾಪಕ್ಷಯಕರವಾದ ಒಂದು ಉತ್ತಮ

ದರ್ಶನಾತ್ತಸ್ಯ ಲಿಂಗಸ್ಯ ಭೂಯೋ ಘಂಟೋ ಗಣೋಽಭವತ್ ।
ಲಕ್ಷ್ಮ್ಯಾ ಕಾಂತ್ಯಾ ಸಮಾಯುಕ್ತಃ ಸಹಸ್ರಕಿರಣಾಕೃತಿಃ ॥ ೩೦ ॥
ಘಂಟೋಽಭಿನಂದಿತೋಽತ್ಯರ್ಥಂ ವಿಮಾನೈಃ ಸಾರ್ವಕಾಮಿಕೈಃ ।
ಮಮ ಪಾರ್ಶ್ವಂ ಸಮಾಯಾತೋ ಮಮಾಽತೀವ ಪ್ರಿಯೋಽಭವತ್॥ ೩೧॥
ಯೇ ಪಶ್ಯಂತಿ ವಿಶಾಲಾಕ್ಷಿ ದೇವಂ ಘಂಟೇಶ್ವರಂ ಶಿವಂ ।
ತೇ ಘಂಟಾಭಿರ್ನಾದಿತಾಸ್ತು ವಿಮಾನೈಃ ಸಾರ್ವಕಾಮಿಕೈಃ ॥ ೩೨ ॥
ಯಾಸ್ಯಂತಿ ಸುಚಿರಂ ಕಾಲಂ ಮಮ ಲೋಕಂ ಸನಾತನಂ ।
ಘಂಟೇಶ್ವರಂ ಪರಂ ಲಿಂಗಂ ನಾಖ್ಯೇಯಂ ಯಸ್ಯ ಕಸ್ಯಚಿತ್ ।
ವ್ಯಾಧಿತೋ ಯದಿ ವಾ ದೀನೋ ದುಃಖಿತೋ ವಾ ಭವೇನ್ನರಃ ॥ ೩೩ ॥
ಯಃ ಪಶ್ಯತಿ ಪ್ರಸಂಗೇನ ದೇವಂ ಘಂಟೇಶ್ವರಂ ಪ್ರಿಯೇ ।
ದೀಪ್ತಕಾಂಚನ ವರ್ಣಾಭೈರ್ವಿಮಾನೈಃ ಸಾರ್ವಕಾಮಿಕೈಃ ।
ಗಂಧರ್ವಾಪ್ಸರಸಾಂ ಮಧ್ಯೇ ಸ್ವರ್ಗೇ ಮೋದತಿ ಮಾನವಃ ॥ ೩೪ ॥

---

ಲಿಂಗವುದ್ಭವಿಸಿತು. ತೇಜೋರಾಶಿಯಾದ ಆ ಶುಭಲಿಂಗವನ್ನೇ ಗಣನಾಯಕನು ಅಲ್ಲಿ ಕಂಡನು.

೩೦. ಆ ಲಿಂಗವನ್ನು ನೋಡುತ್ತಲೇ ಘಂಟನು ಪುನಃ ಗಣಾಧಿಪತ್ಯವನ್ನು ಹೊಂದಿ ಐಶ್ವರ್ಯದಿಂದಲೂ, ದೇಹಕಾಂತಿಯಿಂದಲೂ ಕೂಡಿ ಸೂರ್ಯನನ್ನು ಹೋಲುವವನಾದನು.

೩೧. ಬಳಿಕ ಸರ್ವರೂ ತನ್ನನ್ನು ಅಭಿನಂದಿಸುತ್ತಿರಲು ಸರ್ವಭೋಗ ಸಮನ್ವಿತಗಳಾದ ವಿಮಾನಗಳಲ್ಲಿ ಕುಳಿತುಕೊಂಡು ಆತನು ನನ್ನ ಪಾರ್ಶ್ವಕ್ಕೆ ಬಂದು ನನಗೆ ಅತ್ಯಂತ ಪ್ರಿಯಂಕರನಾದ ಪರಿಚರನಾದನು.

೩೨. ವಿಶಾಲಾಕ್ಷಿಯೆ! ಯಾವ ಮಾನವರು ಈ ಘಂಟೇಶ್ವರಮಹಾಲಿಂಗ ವನ್ನು ನೋಡುವರೊ, ಅವರು ಗಣನಾಯಕರ ಘಂಟಾನಾದಗಳೊಡನೆ ಸರ್ವಕಾಮಪ್ರದಗಳಾದ ವಿಮಾನಗಳನ್ನೇರಿ ಬಹಳಕಾಲದವರೆಗೂ ಸನಾತನ ವಾದ ನನ್ನ ಲೋಕದಲ್ಲಿ ವಾಸಿಸುತ್ತಿರುವರು.

೩೩. ವಿಶಾಲಾಕ್ಷಿಯೆ! ಈ ಘಂಟೇಶ್ವರವೆಂಬ ಉತ್ತಮಲಿಂಗದ ಮಾಹಾತ್ಮ್ಯವನ್ನು ಕಂಡಕಂಡವರಿಗೆಲ್ಲ ಹೇಳಬಾರದು. ಪ್ರಿಯಳೆ! ವ್ಯಾಧಿ ಪೀಡಿತನೂ, ದೀನನೂ, ದುಃಖಿತನೂ ಆದವನು ಪ್ರಸಂಗವಶದಿಂದಲಾದರೂ ಘಂಟೇಶ್ವರದೇವನನ್ನು ನೋಡಬೇಕು.

೩೪. ಹಾಗೆ ನೋಡುವವನು, ಮಿರುಗುವ ಚಿನ್ನದಬಣ್ಣದ ಸರ್ವಕಾಮ ಸಹಿತಗಳಾದ ವಿಮಾನಗಳಲ್ಲಿ ಕುಳಿತುಕೊಂಡು ಗಂಧರ್ವರು, ಅಪ್ಸರೆಯರು ಮುಂತಾದವರ ಸಹವಾಸದಲ್ಲಿ ಸ್ವರ್ಗಲೋಕದಲ್ಲಿ ಸುಖಿಸುವನು.

ಈಪ್ಸಿತಾಂಲ್ಲಭತೇ ಕಾಮಾನ್ವೀಣಾವೇಣುವಿನೋದಿತಃ ।
ತತಃ ಸ್ವರ್ಗಾತ್ಪರಿಭ್ರಷ್ಟಃ ಸರ್ವೈಶ್ವರ್ಯಸಮನ್ವಿತಃ ॥ ೩೫ ॥
ಹಿರಣ್ಯಧಾನ್ಯಸಂಪೂರ್ಣೇ ಸಮೃದ್ಧೇ ಜಾಯತೇ ಕುಲೇ ।
ರಾಜಾ ವಾ ರಾಜತುಲ್ಯೋ ವಾ ಜಂಬೂದ್ವೀಪಪತಿರ್ಭವೇತ್ ॥ ೩೬ ॥
ಯಃ ಪೂಜಯತಿ ದೇವೇಶಂ ಶ್ರದ್ಧಯಾ ಪರಯಾ ಯುತಃ ।
ಸ ಯಾತಿ ಪರಮಂ ಸ್ಥಾನಮಪುನರ್ಭವಕಾರಣಂ ॥ ೩೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಘಂಟೇಶ್ವರಸ್ಯ ದೇವಸ್ಯ ಪ್ರಯಾಗೇಶಮಥೋ ಶೃಣು ॥ ೩೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಘಂಟೇಶ್ವರಮಾಹಾತ್ಮ್ಯವರ್ಣನಂ" ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೩೫. ಮತ್ತು ತನ್ನ ಮನೋಭೀಷ್ಟಗಳೆಲ್ಲವನ್ನೂ ಪಡೆದು ದೇವಗಾಯಕರ ವೀಣಾವೇಣುಗಳ ಧ್ವನಿಯಿಂದ ವಿನೋದಗೊಳ್ಳುತ್ತ ಸ್ವರ್ಗದಿಂದ ಚ್ಯುತನಾದಾಗಲೂ ಸರ್ವೈಶ್ವರ್ಯಗಳಿಂದ ಕೂಡಿಯೇ ಇರುತ್ತಾನೆ.

೩೬. ಅವನು ಧನಧಾನ್ಯಗಳಿಂದ ತುಂಬಿರುವ ಉತ್ತಮ ಕುಲದಲ್ಲಿ ಹುಟ್ಟುವನು. ರಾಜನೊ, ರಾಜಸಮಾನನೊ ಆದವನು ಸಕಲ ಜಂಬೂದ್ವೀಪಕ್ಕೂ ಚಕ್ರವರ್ತಿಯಾಗುವನು.

೩೭. ಯಾವನು ಅತ್ಯಂತ ಶ್ರದ್ಧೆಯಿಂದ ಕೂಡಿ ಈ ಮಹಾಲಿಂಗವನ್ನು ಪೂಜಿಸುವನೊ, ಅವನು ಪುನರಾವೃತ್ತಿಯ ಕಾರಣವೇ ಇಲ್ಲದಂತಹ ಪರಮ ಪದವನ್ನು ಸೇರುವನು.

೩೮. ದೇವಿಯೆ! ಇಂತು ನಿನಗೆ ಘಂಟೇಶ್ವರದೇವನ ಪಾಪನಾಶಕವಾದ ಮಹಿಮೆಯ ಕಥೆಯನ್ನು ಹೇಳಿರುವೆನು. ಇನ್ನು ಪ್ರಯಾಗೇಶ್ವರನ ಮಾಹಾತ್ಮ್ಯವನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಘಂಟೇಶ್ವರಮಾಹಾತ್ಮ್ಯವರ್ಣನ"ವೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಪಂಚಾಶತ್ತಮೋಽಧ್ಯಾಯಃ

### ಪ್ರಯಾಗೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :–

ಪ್ರಯಾಗೇಶ್ವರಸಂಜ್ಞಂ ತು ಸರ್ವಕಾಮುಕರಂ ಪರಂ ।
ಅಷ್ಟಾಧಿಕಂ ವಿಜಾನೀಹಿ ಪಂಚಾಶತ್ತಮುಮೀಶ್ವರಂ ॥ ೧ ॥
ಆಸೀತ್ಪ್ರಥಮಕಲ್ಪೇ ತು ಮನುಃ ಸ್ವಾಯಂಭುವಃ ಪುರಾ ।
ತಸ್ಯ ಪ್ರಿಯವ್ರತಃ ಪುತ್ರೋ ಯಜ್ವಾ ಪರಮಧಾರ್ಮಿಕಃ ॥ ೨ ॥
ಸ ಚೇಷ್ಟ್ವಾ ಬಹುಭಿರ್ಯಜ್ಞೈಃ ಸಮಾಪ್ತವರದಕ್ಷಿಣೈಃ ।
ಸಪ್ತದ್ವೀಪೇಷು ಸಂಪ್ರಾಪ್ಯ ಭರತಾದೀನ್ ಸುತಾನ್ಪ್ರಿಯೇ ॥ ೩ ॥
ಸ್ವಯಂ ವಿಶಾಲಾಂ ಬದರೀಂ ಗತ್ವಾ ತೇಪೇ ಮಹತ್ತಪಃ ।
ಕಾಲೇನ ಬಹುನಾ ತತ್ರ ನಾರದಃ ಸಮುಪಸ್ಥಿತಃ ॥ ೪ ॥
ಪೂಜಿತೋ ವಿಷ್ಟರಾರ್ಘ್ಯೇಣ ರಾಜ್ಞಾ ಪ್ರಿಯವ್ರತೇನ ಚ ।
ಸ ಪೃಷ್ಟಃ ಪೂಜಯಿತ್ವಾ ತು ಕಿಮಾಶ್ಚರ್ಯಂ ವದಸ್ವ ಮೇ ॥ ೫ ॥

---

### ಕನ್ನಡದ ಅನುವಾದ

#### ಪ್ರಯಾಗೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಐವತ್ತೆಂಟನೆಯ ಪ್ರಯಾಗೇಶ್ವರನಾಮಕವಾದ ಮಹಾಲಿಂಗವು ಸರ್ವಾಭೀಷ್ಟದಾಯಕವೂ, ಉತ್ತಮೋತ್ತಮವೂ ಆದುದೆಂದು ತಿಳಿ.

೨. ಹಿಂದೆ ಮೊದಲನೆಯ ಬ್ರಹ್ಮಕಲ್ಪದಲ್ಲಿ ಸ್ವಾಯಂಭುವಮನುವೆಂಬ ಚಕ್ರವರ್ತಿಯಿದ್ದನು. ಆತನಿಗೆ ಯಜ್ಞಶೀಲನೂ, ಮಹಾಧರ್ಮನಿರತನೂ ಆದ ಪ್ರಿಯವ್ರತನೆಂಬ ಮಗನಾದನು.

೩. ಪ್ರಿಯಳೆ! ಆತನು ಯಥೇಚ್ಛಗಳಾದ ಉತ್ತಮ ದಕ್ಷಿಣೆಗಳಿಂದೊಡಗೂಡಿದ ಅನೇಕಯಜ್ಞಗಳನ್ನು ಮಾಡಿ ಭೂಮಂಡಲದ ಸಪ್ತದ್ವೀಪಗಳಲ್ಲಿಯೂ ಭರತನೇ ಮೊದಲಾದ ಪುತ್ರರನ್ನು ಪಡೆದನು.

೪. ಬಳಿಕ ತಾನು ವಿಶಾಲವಾದ ಬದರೀಕ್ಷೇತ್ರವನ್ನು ಸೇರಿ ಮಹತ್ತರವಾದ ತಪಸ್ಸನ್ನಾಚರಿಸುತ್ತಿದ್ದನು. ಇಂತು ಬಹುಕಾಲವು ಕಳೆಯಲು ನಾರದನೊಮ್ಮೆ ಅಲ್ಲಿಗೆ ಪ್ರಾಪ್ತನಾದನು.

೫. ಆ ರಾಜೇಂದ್ರನು ಆತನಿಗೆ ಅರ್ಘಾಸನವನ್ನಿತ್ತು ಅತಿಥಿಪೂಜೆಯನ್ನು ಮಾಡಿ, "ಮಹರ್ಷಿಯೆ! ಭೂಮಂಡಲದಲ್ಲಿ ಅತ್ಯಂತಾಶ್ಚರ್ಯಕರವಾದ ವಿಷಯವು ಯಾವುದೆಂಬುದನ್ನು ತಿಳಿಸು" ಎಂದು ಕೇಳಿದನು.

ಇತ್ಯುಕ್ತಃ ಕಥಯಾಮಾಸ ನಾರದೋ ಮುನಿಸತ್ತಮಃ ।
ಶ್ವೇತದ್ವೀಪೇ ಮಯಾ ರಾಜನ್ಕನ್ಯಾ ದೃಷ್ಟಾ ಸರೋವರೇ ॥ ೬ ॥
ಸಾ ಚ ಪೃಷ್ಟಾ ವಿಶಾಲಾಕ್ಷೀ ಕಸ್ಮಾದ್ವಸಸಿ ನಿರ್ಜನೇ ।
ಕಾಽಸಿ ಭದ್ರೇ ಕಥಂ ವಾಽಸಿ ಕಿಂ ವಾ ಕಾರ್ಯಮಿಹ ತ್ವಯಾ ॥ ೭ ॥
ಕರ್ತವ್ಯಂ ಚಾರುಸರ್ವಾಂಗಿ ತನ್ಮಮಾಚಕ್ಷ್ವ ಶೋಭನೇ ।
ಏವಮುಕ್ತಾ ಮಯಾ ಸಾ ಹಿ ಮಾಂ ದೃಷ್ಟ್ವಾ ಮೀಲಿತೇಕ್ಷಣಂ ॥ ೮ ॥
ಸ್ಮೃತ್ವಾ ತೂಷ್ಣೀಂ ಸ್ಥಿತಾ ಯಾವತ್ತಾವನ್ಮೇ ಜ್ಞಾನಮುತ್ತಮಂ ।
ವಿಸ್ಮೃತಾಃ ಸರ್ವವೇದಾಶ್ಚ ಸರ್ವಶಾಸ್ತ್ರಾಣಿ ಚೈವ ಹಿ ॥ ೯ ॥
ತತೋಽಹಂ ವಿಸ್ಮಯಾವಿಷ್ಟಶ್ಚಿಂತಾಮೋಹಸಮನ್ವಿತಃ ।
ತಾಮೇವ ಶರಣಂ ಗತ್ವಾ ಯಾವತ್ಪಶ್ಯಾಮಿ ಪಾರ್ಥಿವ ।
ತಾವದ್ದಿವ್ಯಃ ಪುಮಾಂಸ್ತಸ್ಯಾಃ ಶರೀರೇ ಸಮದೃಶ್ಯತ ॥ ೧೦ ॥
ತಸ್ಯಾಽಪಿ ಪುಂಸೋ ಹೃದಯೇ ದ್ವಿತೀಯಸ್ತಸ್ಯ ಚೋರಸಿ ।
ತಸ್ಯಾಽಪಿ ಹೃದಯೇ ಚಾಽನ್ಯಸ್ತೃತೀಯಸ್ತು ವ್ಯವಸ್ಥಿತಃ ॥ ೧೧ ॥

---

೬. ಇಂತೆಂದ ಮಹಾರಾಜನಿಗೆ ಮುನಿವರ್ಯನಾದ ನಾರದನು ಹೇಳತೊಡಗಿದನು. "ರಾಜೇಂದ್ರ! ಶ್ವೇತದ್ವೀಪದ ಒಂದು ಸರೋವರದಲ್ಲಿ ನಾನೊಬ್ಬ ಕನ್ಯಾಮಣಿಯನ್ನು ಕಂಡೆನು.

೭. ನಾನು ಆಕೆಯನ್ನು ಕುರಿತು, "ಮಂಗಳಾಂಗಿಯೆ! ನೀನು ಯಾರು? ನಿರ್ಜನವಾದ ಈ ಅರಣ್ಯದಲ್ಲಿ ಏಕೆ ವಾಸಿಸುತ್ತಿರುವೆ? ನೀನು ಯಾರ ಮಗಳು? ಇಲ್ಲಿ ನಿನಗೆ ಕಾರ್ಯವೇನು?" ಎಂದು ಪ್ರಶ್ನೆಮಾಡಿದೆನು.

೮. "ಸರ್ವಾಂಗಸುಂದರಿಯೆ! ನಿನ್ನ ಕಾರ್ಯವೇನೆಂಬುದನ್ನು ನನಗೆ ಹೇಳು." ಇಂತೆಂದು ಕಣ್ಣುಗಳನ್ನು ಮುಚ್ಚಿ ನಿಂತಿದ್ದ ನನ್ನನ್ನು ಆ ಕನ್ಯೆಯು ನೋಡಿದಳು.

೯. ನನ್ನನ್ನು ಕುರಿತು ಯೋಚಿಸಿ ಆಕೆಯು ಸುಮ್ಮನೆ ನಿಂತುಕೊಂಡಿದ್ದಂತೆಯೇ ನನ್ನ ಮಹಾಜ್ಞಾನವೂ, ಸಮಸ್ತ ವೇದಾಭ್ಯಾಸವೂ, ಸಕಲ ಶಾಸ್ತ್ರಗಳೂ ಮರೆತುಹೋದುವು.

೧೦. ಇದರಿಂದ ವಿಸ್ಮಯಗೊಂಡ ನಾನು ಚಿಂತಾಪರನೂ, ಮೋಹಪರವಶನೂ ಆಗಿ ಕಡೆಗೆ ಆಕೆಯನ್ನೇ ಶರಣುಹೊಂದಿ ನೋಡುತ್ತಿದ್ದೆನು. ರಾಜೇಂದ್ರನೆ! ಆಕೆಯ ಶರೀರದಿಂದ ಒಬ್ಬ ದಿವ್ಯಪುರುಷನು ಹುಟ್ಟಿಬಂದುದನ್ನು ನೋಡಿದೆನು.

೧೧. ಆತನ ಹೃದಯದಿಂದ ಮತ್ತೊಬ್ಬ ಪುರುಷನುದಯಿಸಿದನು. ಎರಡನೆಯವನ ಹೃದಯಪ್ರದೇಶದಿಂದ ಮೂರನೆಯವನೊಬ್ಬನೂ ಹುಟ್ಟಿಬಂದುದನ್ನು ನೋಡಿದೆನು.

ತತಃ ಪೃಷ್ಟಾ ಮಯಾ ದೇವೀ ಸಾ ಕುಮಾರೀ ಕಥಂಚನ ।
ವೇದಾ ನಷ್ಟಾ ಮಮಾಶೇಷಾ ಭದ್ರೇ ಕಿಂ ಬ್ರೂಹಿ ಕಾರಣಂ ॥ ೧೨ ॥

ಕನ್ಯೋವಾಚ :—

ಮಾತಾಽಹಂ ಸರ್ವವೇದಾನಾಂ ಸಾವಿತ್ರೀ ನಾಮ ನಾಮತಃ ।
ಮಾಂ ನ ಜಾನಾಸಿ ಯೇನ ತ್ವಮತೋ ವೇದಾ ಹೃತಾಸ್ತವ ॥ ೧೩ ॥
ಏವಮುಕ್ತೇ ಮಯಾ ಪೃಷ್ಟಾ ವಿಸ್ಮಯೇನ ಮಹೀಪತೇ ।
ವೇದಾನಾಂ ತ್ವಂ ತು ಮಾತಾ ವೈ ಕಥಯಸ್ವ ಮಮಾನಘೇ ॥ ೧೪ ॥
ತ್ವದೀಯಹೃದಯೇ ದೇವಿ ಕ ಏತೇ ಪುರುಷಾಸ್ತ್ರಯಃ ॥ ೧೫ ॥

ಕನ್ಯೋವಾಚ :—

ಯ ಏಷ ಮಚ್ಛರೀರಸ್ಥಃ ಶುಭಾಂಗಶ್ಚಾರುಶೋಭನಃ ।
ಏಷ ಋಗ್ವೇದನಾಮಾ ತು ಯಜುರ್ವೇದೋ ದ್ವಿತೀಯಕಃ ॥ ೧೬ ॥
ಸಾಮವೇದಸ್ತೃತೀಯಸ್ತು ತ್ರಯೋ ವೇದಾ ಮಯಿ ಸ್ಥಿತಾಃ ।
ತ್ರಯೋಽಗ್ನಯಸ್ತ್ರಯೋ ದೇವಾ ಮಚ್ಛರೀರೇ ಸ್ಥಿತಾ ದ್ವಿಜ ॥ ೧೭ ॥

---

೧೨. ಆಗ ನಾನು ಬಹಳ ಕಷ್ಟದಿಂದ ಆ ಕನ್ನಿಕೆಯು ದೇವತೆಯೆಂಬುದನ್ನು ತಿಳಿದು ಕೇಳಿದೆನು: "ಭದ್ರೆ! ನನ್ನಲ್ಲಿದ್ದ ಸರ್ವವೇದಗಳೂ ನಷ್ಟಗಳಾದುದಕ್ಕೆ ಕಾರಣವೇನೆಂಬುದನ್ನು ಹೇಳು."

೧೩. ಕನ್ಯೆಯು ಹೇಳುತ್ತಾಳೆ:—"ಎಲೈ ನಾರದನೆ! ನಾನೇ ಸಮಸ್ತ ವೇದಗಳಿಗೂ ಮಾತೆಯಾಗಿ ಸಾವಿತ್ರಿಯೆಂಬ ಹೆಸರಿನಿಂದ ಪ್ರಸಿದ್ಧಳಾದವಳು. ಇಂತಹ ನನ್ನನ್ನು ನೀನು ಗುರುತಿಸದಿದ್ದುದರಿಂದಲೇ ನಿನ್ನಲ್ಲಿದ್ದ ವೇದಗಳೆಲ್ಲವೂ ಕಳೆದುಹೋದುವು."

೧೪. ಮಹಾರಾಜನೆ! ಇಂತೆಂದ ಆಕೆಯನ್ನು ನಾನು ಮತ್ತೆ ಕೇಳಿದೆನು. "ಮಹಾದೇವಿಯೆ! ನೀನು ವೇದಮಾತೆಯೆಂಬುದನ್ನು ತಿಳಿಸಿದೆಯಲ್ಲವೆ.

೧೫. ದೇವಿಯೆ! ನಿನ್ನ ಹೃದಯದಿಂದ ಹೊರಕ್ಕೆ ಬಂದ ಈ ಮೂವರು ಪುರುಷರು ಯಾರು?"

೧೬. ಕನ್ಯೆಯು ಹೇಳುತ್ತಾಳೆ:—"ನನ್ನ ಶರೀರದಿಂದ ಮೊದಲು ಬಂದ ಮಂಗಳಾಂಗನೂ, ಪರಮಸುಂದರನೂ ಆದ ಆ ಪುರುಷನೇ ಋಗ್ವೇದವು. ಎರಡನೆಯವನೇ ಯಜುರ್ವೇದವು.

೧೭. ಮೂರನೆಯವನೇ ಸಾಮವೇದವು. ಮೂರು ವೇದಗಳೂ ನನ್ನಲ್ಲಿಯೇ ನೆಲಸಿರುವುವು. ಮಹರ್ಷಿಯೆ! ಹಾಗೆಯೇ ಮೂರು ಅಗ್ನಿಗಳೂ ಬ್ರಹ್ಮಾದಿ ದೇವತ್ರಯವೂ ನನ್ನ ದೇಹದಲ್ಲಿಯೇ ಅಡಗಿರುವುದು."

ಇತ್ಯುಕ್ತ್ವಾ ಸಾ ತದಾ ಕನ್ಯಾ ಪಶ್ಯತೋ ಮಮ ಭೂಪತೇ ।
ಅಂತರ್ಧಾನಂ ಗತಾ ಸದ್ಯಸ್ತತೋಽಹಂ ವಿಸ್ಮಿತೋಽಭವಂ ॥ ೧೮ ॥
ಕಿಂ ಕರೋಮಿ ಕ್ವ ಗಚ್ಛಾಮಿ ಶರಣಂ ಯಾಮಿ ಕಂ ಪ್ರಭುಂ ।
ಕಥಮಾವಿರ್ಭವಿಷ್ಯಂತಿ ವೇದಾಃ ಶಾಸ್ತ್ರಾಣಿ ಸಾಂಪ್ರತಂ ॥ ೧೯ ॥
ಕಾಮಿಕಸ್ತೀರ್ಥರಾಜಸ್ತು ಪ್ರಯಾಗಃ ಶ್ರೂಯತೇ ಶ್ರುತೌ ।
ಅಹಂ ತತ್ರ ಗಮಿಷ್ಯಾಮಿ ಜ್ಞಾನಂ ಸಮ್ಯಗ್ಭವಿಷ್ಯತಿ ॥ ೨೦ ॥
ನಷ್ಟವೇದೇನ ರೈಭ್ಯೇಣ ಪ್ರಾಪ್ತಾ ಸಿದ್ಧಿರನುತ್ತಮಾ ।
ಸಾವಿತ್ರೀ ಶ್ರೂಯತೇ ತತ್ರ ಅಕ್ಷಯ್ಯವಟಸನ್ನಿಧೌ ॥ ೨೧ ॥
ಏವಂ ಮನಸಿ ಸಂಧಾಯ ಗತೋಽಹಂ ನೃಪಸತ್ತಮ ।
ಪ್ರಯಾಗಂ ಕಾಮಿಕಂ ತೀರ್ಥಂ ಸರ್ವದೇವನಮಸ್ಕೃತಂ ॥ ೨೨ ॥
ತಪಸ್ತೀವ್ರಂ ಮಯಾ ತತ್ರ ತಪ್ತಂ ಪರಮದುಷ್ಕರಂ ।
ಅಥಾಜಗಾಮ ರಾಜೇಂದ್ರ ಪ್ರಯಾಗೋ ಮೂರ್ತಿಮಾನ್ ಸ್ವಯಂ ॥ ೨೩ ॥

---

೧೮. ಭೂಪಾಲಕನೆ! ಇಂತೆಂದು ತಿಳಿಸಿ ನಾನು ನೋಡುತ್ತಿದ್ದಂತೆಯೇ ಆಕೆಯು ಕಣ್ಣಿಗೆ ಕಾಣದಂತಾದಳು. ಆಗ ನಾನು ಬಹಳ ವಿಸ್ಮಯವನ್ನು ತಾಳಿದೆನು.

೧೯. "ಈಗೇನು ಮಾಡಲಿ? ಎಲ್ಲಿಗೆ ಹೋಗಲಿ? ಯಾವ ಮಹಾತ್ಮನನ್ನು ಶರಣುಹೋಗಲಿ? ನನಗೀಗ ವೇದಗಳೂ ಶಾಸ್ತ್ರಗಳೂ ಮತ್ತೆ ಲಭಿಸುವುದು ಹೇಗೆ?

೨೦. ಪ್ರಯಾಗಕ್ಷೇತ್ರವೇ ಸರ್ವಾಭೀಷ್ಟಗಳನ್ನು ಕೊಡುವ ತೀರ್ಥರಾಜವೆಂದು ಶಾಸ್ತ್ರಗಳಲ್ಲಿ ಕೇಳಿರುವೆನು. ಆದುದರಿಂದ ಅಲ್ಲಿಗೆ ಹೋದರೆ ನನ್ನ ಜ್ಞಾನವು ಮತ್ತೆ ಪೂರ್ಣವಾಗುವುದು.

೨೧. ವೇದಗಳನ್ನು ಕಳೆದುಕೊಂಡಿದ್ದ ರೈಭ್ಯಮುನಿಯು ಅಲ್ಲಿ ಉತ್ತಮ ಸಿದ್ಧಿಯನ್ನು ಪಡೆದನು. ಅಲ್ಲಿರುವ ಅಕ್ಷಯ ವಟವೃಕ್ಷದ ಸಾನ್ನಿಧ್ಯದಲ್ಲಿ ಯಾವಾಗಲೂ ಸಾವಿತ್ರೀಮಂತ್ರವು ಕೇಳಬರುತ್ತಿರುವುದು."

೨೨. ಮಹಾರಾಜನೆ! ಇಂತೆಂದು ಮನಸ್ಸಿನಲ್ಲಿ ಯೋಚಿಸಿ ನಾನು ಸಕಲ ಕಾಮಪ್ರದವೂ, ಸಮಸ್ತದೇವತೆಗಳಿಗೆ ಪೂಜ್ಯವೂ ಎನಿಸಿದ ಪ್ರಯಾಗಕ್ಷೇತ್ರವನ್ನು ಸೇರಿದೆನು.

೨೩. ಅಲ್ಲಿ ನಾನು ಇತರರಿಗೆ ಅಸಾಧ್ಯವಾದ ಉಗ್ರತಪಸ್ಸನ್ನು ಮಾಡುತ್ತಿದ್ದೆನು. ರಾಜೇಂದ್ರನೆ! ಒಮ್ಮೆ ಪ್ರಯಾಗದೇವತೆಯೇ ಮೂರ್ತಿಗೊಂಡು ನನ್ನ ಎದುರಿಗೆ ನಿಂತನು.

ಉಕ್ತೋಽಹಂ ಪ್ರಣಯಾತ್ತೇನ ನ ಮಾಂ ತಾಪಯ ನಾರದ ।
ಬ್ರಹ್ಮಪುತ್ರ ಪ್ರಯಾಗೋಽಹಂ ಭೀಷಿತಸ್ತಪಸಾ ತವ ॥ ೨೪ ॥
ಭವತಃ ಪಾರ್ಶ್ವಮಾಯಾತಃ ಪ್ರಣಯೇನ ತಪೋಧನ ।
ಧನ್ಯೋಽಸಿ ಸರ್ವಥಾ ಬ್ರಹ್ಮಂಸ್ತಪಸಾ ಚ ವಿಶೇಷತಃ ॥ ೨೫ ॥
ಮಯಾ ಸಾರ್ಧಂ ತ್ವಯಾ ಬ್ರಹ್ಮನ್ಗತಿಃ ಕಾರ್ಯಾಽವಿಕಲ್ಪತಃ ।
ಮಹಾಕಾಲವನೇ ರಮ್ಯೇ ತತ್ರ ತೇ ಜ್ಞಾನಮುತ್ತಮಂ ।
ಭವಿಷ್ಯತಿ ನ ಸಂದೇಹೋ ಮಮ ಕೀರ್ತಿಶ್ಚ ಸುಸ್ಥಿರಾ ॥ ೨೬ ॥
ಏವಂ ಹಿ ಬ್ರುವತಸ್ತಸ್ಯ ಪ್ರಯಾಗಸ್ಯ ನೃಪೋತ್ತಮ ।
ಪ್ರಾದುರ್ಬಭೂವ ಸಹಸಾ ಪೀತವಾಸಾ ಜನಾರ್ದನಃ ॥ ೨೭ ॥
ಶಂಖಚಕ್ರಗದಾಪಾಣಿರ್ಗರುಡಸ್ಥೋ ವಿಯದ್ಗತಃ ।
ಉವಾಚ ಮೇಘಗಂಭೀರಂ ವಾಕ್ಯಂ ಚ ಪುರುಷೋತ್ತಮಃ ॥ ೨೮ ॥
ಏಹಿ ನಾರದ ಗಚ್ಛಾಮಃ ಪ್ರಯಾಗೋ ಯತ್ರ ಯಾಸ್ಯತಿ ।
ಕೃಷ್ಣಸ್ಯ ವಚನಂ ಶ್ರುತ್ವಾ ಮಯಾ ಪ್ರೋಕ್ತೋ ಜನಾರ್ದನಃ ॥ ೨೯ ॥

---

೨೪. ಆತನು ಪ್ರೇಮಪೂರ್ವಕವಾಗಿ ಇಂತೆಂದನು. "ನಾರದ! ನನ್ನನ್ನು ತಾಪಗೊಳಿಸಬೇಡ. ಬ್ರಾಹ್ಮಣೋತ್ತಮನೆ! ನಾನೇ ಪ್ರಯಾಗಾಧಿಪತಿಯು. ನಿನ್ನ ತಪಸ್ಸಿನಿಂದ ಭಯಗೊಂಡಿರುವೆನು.

೨೫. ತಪೋಧನನೆ! ಪ್ರಣಯದಿಂದ ನಾನು ನಿನ್ನ ಬಳಿಗೆ ಬಂದಿರುವೆನು. ಬ್ರಾಹ್ಮಣ್ಯದಿಂದಲೂ, ವಿಶೇಷವಾಗಿ ತಪಸ್ಸಿನಿಂದಲೂ ನೀನು ಸರ್ವಥಾ ಧನ್ಯನಾಗಿರುವೆ.

೨೬. ಮಹರ್ಷಿಯೆ! ನೀನೂ ಮನಸ್ಸಿನಲ್ಲಿ ಕಿಂಕೃತಿಯನ್ನು ಮಾಡದೆ ನನ್ನೊಡನೆ ರಮ್ಯವಾದ ಮಹಾಕಾಲವನಕ್ಕೆ ಬರಬೇಕು. ಆ ಕ್ಷೇತ್ರದಲ್ಲಿ ನಿನಗೆ ಉತ್ತಮಜ್ಞಾನವೂ, ನನಗೂ ಶಾಶ್ವತವಾದ ಸತ್ಕೀರ್ತಿಯೂ ಉಂಟಾಗುವುವೆಂಬುದರಲ್ಲಿ ಸಂದೇಹವಿಲ್ಲ."

೨೭. ರಾಜೋತ್ತಮನೆ! ಇಂತು ಪ್ರಯಾಗಾಧಿನಾಥನು ಹೇಳುತ್ತಿದ್ದಂತೆಯೇ ಪೀತಾಂಬರಧಾರಿಯಾದ ಮಹಾವಿಷ್ಣುವೂ ಅಲ್ಲಿಗೆ ಬಂದನು.

೨೮. ಶಂಖಚಕ್ರಗದೆಗಳನ್ನು ಕೈಗಳಲ್ಲಿ ಹಿಡಿದು ಗರುಡವಾಹನನಾಗಿ ಆ ಪುರುಷೋತ್ತಮನು ಬಂದು ಮೇಘಗರ್ಜನೆಯಂತೆ ಗಂಭೀರವಾದ ಧ್ವನಿಯಿಂದಿಂತೆಂದನು.

೨೯. "ನಾರದ! ಹೊರಡು. ಪ್ರಯಾಗೇಶ್ವರನು ಹೊರಡುವಲ್ಲಿಗೆ ನಾವೂ ಹೋಗೋಣ." ಇಂತೆಂದ ಶ್ರೀನಾರಾಯಣನಿಗೆ ನಾನೂ ಬಿನ್ನವಿಸಿಕೊಂಡೆನು.

ಜ್ಞಾನಂ ಮೇ ದೇಹಿ ದೇವೇಶ ಕಥಂ ಯಾಸ್ಯಾಮಿ ತದ್ವನಂ ।
ಮಹಾಕಾಲಂ ಜಗನ್ನಾಥ ಶ್ರುತಿಜ್ಞಾನವಿವರ್ಜಿತಃ ॥ ೩೦ ॥
ಇತ್ಯುಕ್ತಃ ಶ್ರೀಧರೇಣಾಽಹಂ ಮಹಾಕಾಲವನಂ ನೃಪ ।
ಆನೀತಸ್ತತ್ಕ್ಷಣಾಚ್ಛೀಘ್ರಂ ಪ್ರಯಾಗಸಹಿತಸ್ತದಾ ॥ ೩೧ ॥
ಘಂಟೇಶ್ವರಸ್ಯ ಪೂರ್ವೇ ತು ನವನದ್ಯಾಸ್ತು ದಕ್ಷಿಣೇ ।
ತತ್ರ ಲಿಂಗಮನಾದಿಂ ತು ಜ್ಯೋತೀರೂಪಂ ಸನಾತನಂ ॥ ೩೨ ॥
ಪ್ರಯಾಗಃ ಪೂಜಯಾಮಾಸ ಪಶ್ಯತೋ ಮಮ ಭೂಪತೇ ।
ಲಿಂಗೇನೋಕ್ತಂ ಪ್ರಸನ್ನೇನ ಕಿಮರ್ಥಂ ತ್ವಮಿಹಾಗತಃ ॥ ೩೩ ॥
ಪ್ರಯಾಗ ಪ್ರಯತೋ ಭೂತ್ವಾ ಪ್ರಸನ್ನೋಽಹಂ ಸದಾ ತವ ।
ದರ್ಶನಂ ಚ ಮದೀಯಂ ತು ವಿಫಲಂ ನ ಭವಿಷ್ಯತಿ ॥ ೩೪ ॥
ಇತ್ಯುಕ್ತಸ್ತೇನ ಲಿಂಗೇನ ಮದರ್ಥಂ ಪ್ರಾರ್ಥಿತಸ್ತದಾ ।
ಜ್ಞಾನಂ ದೇಹಿ ದ್ವಿಜಾಯಾಽಸ್ಮೈ ನಾರದಾಯ ಮಹಾತ್ಮನೇ ॥ ೩೫ ॥
ನಷ್ಟಾ ವೇದಾಶ್ಚ ಶಾಸ್ತ್ರಾಣಿ ಸಾವಿತ್ರ್ಯಾ ದರ್ಶನಾತ್ಪ್ರಭೋ ॥ ೩೬ ॥

---

೩೦. "ದೇವೇಶ್ವರನಾದ ಜಗನ್ನಾಥನೆ! ನಾನು ವೇದಜ್ಞಾನಹೀನನಾಗಿರುವೆನು. ನನಗೆ ಮತ್ತೆ ಜ್ಞಾನವನ್ನನುಗ್ರಹಿಸು. ಆ ಮಹಾಕಾಲವನವೆಂಬ ಕ್ಷೇತ್ರಕ್ಕೆ ಹೋಗುವುದು ಹೇಗೆ?"

೩೧. ಮಹಾರಾಜನೆ! ಇಂತೆಂದ ನನ್ನನ್ನು ಆ ಕ್ಷಣದಲ್ಲಿಯೇ ಪ್ರಯಾಗೇಶ್ವರನೊಡನೆ ನಾರಾಯಣನು ಮಹಾಕಾಲವನಕ್ಕೆ ಕರೆದುಕೊಂಡು ಬಂದುಬಿಟ್ಟನು.

೩೨. ಅಲ್ಲಿ ಘಂಟೇಶ್ವರನಿಗೆ ಪೂರ್ವಕ್ಕೂ, ನವನದಿಗೆ ದಕ್ಷಿಣಕ್ಕೂ ಅನಾದಿಯೂ, ತೇಜೋಮಯವೂ, ಶಾಶ್ವತವೂ ಆದ ಒಂದು ಮಹಾಲಿಂಗವಿರುವುದು.

೩೩. ಭೂರಮಣನೆ! ನಾನು ನೋಡುತ್ತಿದ್ದಂತೆಯೇ ಪ್ರಯಾಗನು ಆ ಲಿಂಗಕ್ಕೆ ಪೂಜೆಯನ್ನು ಮಾಡಿದನು. ಆ ಲಿಂಗವು ಪ್ರಸನ್ನವಾಗಿ ಇಂತೆಂದಿತು. "ಪ್ರಯಾಗನೆ! ನೀನೇತಕ್ಕೆ ಇಲ್ಲಿಗೆ ಬಂದೆ?

೩೪. ಪ್ರಯತ್ನಪೂರ್ವಕವಾದ ನಿನ್ನ ಸೇವೆಯಿಂದ ನಾನು ನಿತ್ಯವೂ ನಿನ್ನಲ್ಲಿ ಪ್ರಸನ್ನನಾಗಿರುವೆನು. ನನ್ನ ದರ್ಶನವೆಂದಿಗೂ ವಿಫಲವಾಗುವುದಿಲ್ಲ."

೩೫. ಇಂತೆಂದ ಲಿಂಗಕ್ಕೆ ಪ್ರಯಾಗೇಶ್ವರನು ನನಗಾಗಿ ಪ್ರಾರ್ಥಿಸಿಕೊಂಡನು. "ಬ್ರಾಹ್ಮಣೋತ್ತಮನೂ, ಮಹಾತ್ಮನೂ ಆದ ಈ ನಾರದನಿಗೆ ಜ್ಞಾನವನ್ನು ಕೊಡುವವನಾಗು.

೩೬. ಸ್ವಾಮಿಯೆ! ಸಾವಿತ್ರೀದೇವಿಯನ್ನು ನೋಡಿದಂದಿನಿಂದ ಈತನ ವೇದಶಾಸ್ತ್ರಜ್ಞಾನವೆಲ್ಲವೂ ನಷ್ಟವಾಗಿಹೋಗಿರುವುದು.

ತತೋ ಲಿಂಗಾತ್ಸಮುತ್ತಸ್ಥೌ ಬ್ರಹ್ಮಾ ವೇದೈರ್ವೃತಸ್ತದಾ ।
ಷಡಂಗೈಃ ಸರಹಸ್ಯೈಶ್ಚ ಪುರಾಣೈಃ ಸಹಿತಸ್ತದಾ ॥ ೩೭ ॥
ಇತ್ಯುಕ್ತೋಽಹಂ ತದಾ ದೇವ್ಯಾ ಸಾವಿತ್ರ್ಯಾ ನೃಪಸತ್ತಮ ।
ಲಿಂಗಸ್ಯಾಽಸ್ಯ ಪ್ರಭಾವೇಣ ಪ್ರಯಾಗಾಭ್ಯರ್ಥಿತಸ್ಯ ವೈ ॥ ೩೮ ॥
ಪ್ರತಿಭಾಸ್ಯಂತಿ ತೇ ವೇದಾ ಧರ್ಮಶಾಸ್ತ್ರಾಣಿ ನಾರದ ।
ಇತ್ಯುಕ್ತೇ ವಚನೇ ಭೂಯಃ ಪ್ರಾಪ್ತಾ ವೇದಾ ಮಯಾ ನೃಪ ॥ ೩೯ ॥
ಜ್ಞಾನಂ ಷಡಂಗಸಹಿತಂ ಶಾಸ್ತ್ರಾಣಿ ವಿವಿಧಾನಿ ಚ ।
ಲಬ್ಧಜ್ಞಾನೇನ ರಾಜೇಂದ್ರ ಮಯಾ ಪ್ರೋಕ್ತಂ ವಚಸ್ತದಾ ॥ ೪೦ ॥
ಪ್ರಯಾಗೇನಾಽರ್ಚಿತೋ ದೇವೋ ಮಮ ಜ್ಞಾನಸ್ಯ ಕಾರಣಾತ್ ।
ಪ್ರಯಾಗೇಶ್ವರಸಂಜ್ಞಸ್ತು ಖ್ಯಾತಿಂ ಲೋಕೇಷು ಯಾಸ್ಯತಿ ॥ ೪೧ ॥
ತದಾಪ್ರಭೃತಿ ತಲ್ಲಿಂಗಂ ತೀರ್ಥಕೋಟಿಶತೈರ್ವೃತಂ ।
ಸ್ವರ್ಗಾಽಪವರ್ಗಫಲದಂ ತತ್ರ ತ್ವಂ ಗಂತುಮರ್ಹಸಿ ॥ ೪೨ ॥
ಕಿಮನೇನಾಽಶ್ವಮೇಧೇನ ಇಷ್ಟೇನ ನೃಪಸತ್ತಮ ।
ಅಶ್ವಮೇಧಶತಫಲಂ ಜಾಯತೇ ತಸ್ಯ ದರ್ಶನಾತ್ ॥ ೪೩ ॥

---

೩೭. ರಾಜಸತ್ತಮನೆ! ಆಗಲಾ ಲಿಂಗಮಧ್ಯದಿಂದ ಷಡಂಗಗಳು, ಅವುಗಳ ರಹಸ್ಯಗಳು, ಪುರಾಣಗಳು ಮುಂತಾದುವುಗಳೊಡಗೂಡಿದ ವೇದಗಳನ್ನು ತೆಗೆದು ಕೊಂಡು ಚತುರ್ಮುಖನು ಹೊರಬಂದನು.

೩೮–೩೯. ಆಗಲೇ ಸಾವಿತ್ರೀದೇವಿಯೂ ನನ್ನನ್ನು ಕುರಿತು ಹೇಳತೊಡಗಿದಳು. "ಪ್ರಯಾಗೇಶ್ವರನಿಂದ ಸಂಪ್ರಾರ್ಥಿತವಾದ ಈ ಮಹಾಲಿಂಗದ ಪ್ರಭಾವದಿಂದ ನಿನಗೆ ಸಮಸ್ತವೇದಗಳೂ ಬುದ್ಧಿಗೋಚರಗಳಾಗುವುವು." ಮಹಾರಾಜನೆ! ಆಕೆಯ ಅನುಗ್ರಹದಿಂದ ಆಗಲೇ ನನಗೆ ಸಕಲ ವೇದಗಳೂ ಪುನಃ ದೊರೆತವು.

೪೦. ಷಡಂಗಗಳೂ, ಬಹುವಿಧಗಳಾದ ಶಾಸ್ತ್ರಗಳೂ, ಕರಗತಗಳಾಗಲು ಆ ಮೂಲಕವಾಗಿ ಲಭಿಸಿದ ಜ್ಞಾನದಿಂದ ನಾನು ಈ ಮಾತುಗಳನ್ನಾಡಿದೆನು.

೪೧. "ನನಗೆ ಜ್ಞಾನವನ್ನು ಕೊಡಿಸುವ ನಿಮಿತ್ತದಿಂದ ಈ ಮಹಾಲಿಂಗವನ್ನು ಪ್ರಯಾಗೇಶ್ವರನು ಪೂಜಿಸಿದನಾದುದರಿಂದ ಇದು ಪ್ರಯಾಗೇಶ್ವರನೆಂದೇ ಹದಿನಾಲ್ಕು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವುದು."

೪೨. ಪ್ರಿಯವ್ರತನೆ! ಅಂದು ಮೊದಲುಗೊಂಡು ಆ ಲಿಂಗವು ನೂರಾರು ಕೋಟಿ ತೀರ್ಥಗಳಿಂದ ಪರಿವೃತವಾಗಿ ಸ್ವರ್ಗಮೋಕ್ಷಗಳೆರಡನ್ನೂ ಕೊಡುತ್ತಿರುವುದು. ನೀನೂ ಅಲ್ಲಿಗೆ ಹೋಗಬೇಕು.

೪೩. ರಾಜೇಂದ್ರನೆ! ನೀನು ಮಾಡಿರುವ ಅಶ್ವಮೇಧಯಜ್ಞದಿಂದ ಹೆಚ್ಚಿನ ಫಲವೇನು? ಆ ಮಹಾಲಿಂಗದ ದರ್ಶನದಿಂದ ನಿನಗೆ ಒಂದುನೂರು ಅಶ್ವಮೇಧಗಳನ್ನು ಮಾಡಿದ ಫಲವೇ ಪ್ರಾಪ್ತವಾಗುವುದು.

ತಪಸಾ ಕಿಂ ಸುತಪ್ತೇನ ಕಾಯಕ್ಲೇಶಕರೇಣ ತು ।
ವಾಂಛಿತಂ ಲಭತೇ ಸದ್ಯಃ ಪ್ರಯಾಗೇಶ್ವರದರ್ಶನಾತ್ ॥ ೪೪ ॥
ಈಶ್ವರ ಉವಾಚ :–
ನಾರದಸ್ಯ ವಚಃ ಶ್ರುತ್ವಾ ಸ್ವಾಯಂಭುವಸುತೋ ನೃಪಃ ।
ಪ್ರಿಯವ್ರತೋ ಮಹಾದೇವಿ ಮಹಾಕಾಲವನಂಗತಃ ॥ ೪೫ ॥
ದದರ್ಶ ತತ್ರ ತಲ್ಲಿಂಗಂ ನವನದ್ಯಾಸ್ತು ದಕ್ಷಿಣೇ ।
ದರ್ಶನಾತ್ತಸ್ಯ ಲಿಂಗಸ್ಯ ಮತ್ಸಮೀಪಂ ಸಮಾಗತಃ ॥ ೪೬ ॥
ಮಯಾ ಸಂಮಾನಿತೋ ದೇವಿ ಗಣಾನಾಮಧಿಪಃ ಕೃತಃ ।
ಯೇ ಪಶ್ಯಂತಿ ನರಾ ಭಕ್ತ್ಯಾ ಪ್ರಯಾಗೇಶ್ವರಮೀಶ್ವರಂ ।
ತೇ ಧನ್ಯಾ ಮಾನುಷೇ ಲೋಕೇ ಕ್ಲಿಶ್ಯಂತ್ಯನ್ಯೇ ನಿರರ್ಥಕಾಃ ॥ ೪೭ ॥
ಯಾ ಗತಿರ್ಯೋಗಯುಕ್ತಸ್ಯ ಸತ್ತ್ವಸ್ಥಸ್ಯ ಮನೀಷಿಣಃ ।
ಸಾ ಗತಿರ್ಜಾಯತೇ ಸಮ್ಯಕ್ಪ್ರಯಾಗೇಶ್ವರದರ್ಶನಾತ್ ॥ ೪೮ ॥
ಮಾಘಮಾಸೇ ಸಮೇಷ್ಯಂತಿ ಪ್ರಯಾಗೇಶ್ವರದರ್ಶನಂ ।
ಕರ್ತುಂ ಯೇ ಮಾನುಷಾಸ್ತೇಷಾಮಶ್ವಮೇಧಃ ಪದೇ ಪದೇ ॥ ೪೯ ॥

---

೪೪. ಶರೀರಕ್ಕೆ ಕ್ಲೇಶವನ್ನುಂಟುಮಾಡಿಕೊಂಡು ದೀರ್ಘವಾದ ತಪಸ್ಸನ್ನು ಮಾಡುವುದರಿಂದೇನು? ಪ್ರಯಾಗೇಶ್ವರನನ್ನು ನೋಡಿದ ಕ್ಷಣದಲ್ಲಿಯೇ ಸರ್ವಾಭೀಷ್ಟಗಳೂ ಕೈಗೂಡುವುವು.”

೪೫. ಈಶ್ವರನು ಹೇಳುತ್ತಾನೆ:—ಮಹಾದೇವಿಯೆ! ನಾರದನಾಡಿದ ಈ ಮಾತುಗಳನ್ನು ಕೇಳಿ ಸ್ವಾಯಂಭುವಮನುವಿನ ಪುತ್ರನಾದ ಆ ಪ್ರಿಯವ್ರತ ಚಕ್ರವರ್ತಿಯು ಮಹಾಕಾಲವನವನ್ನು ಸೇರಿದನು.

೪೬. ಅಲ್ಲಿಗೆ ಬಂದ ತರುವಾಯ ಆತನು ನವನದಿಯ ದಕ್ಷಿಣಕ್ಕಿದ್ದ ಆ ಲಿಂಗವನ್ನು ಸಂದರ್ಶಿಸಿದನು. ಅದರ ಫಲವಾಗಿ ಆತನು ನನ್ನ ಲೋಕವನ್ನು ಸೇರಿ ನನ್ನ ಬಳಿಗೆ ಬರುವವನಾದನು.

೪೭. ದೇವಿಯೆ! ನಾನು ಆತನಿಗೆ ಮರ್ಯಾದೆಯನ್ನು ಮಾಡಿ ಆತನನ್ನು ಗಣಾಧಿಪತಿಯನ್ನಾಗಿ ಮಾಡಿದೆನು. ಯಾವ ಮಾನವನು ಭಕ್ತಿಯುಕ್ತನಾಗಿ ಪ್ರಯಾಗೇಶ್ವರನನ್ನು ನೋಡುವನೊ, ಅವನೇ ಮನುಷ್ಯಲೋಕದಲ್ಲಿ ಧನ್ಯನು. ಇತರರು ವ್ಯರ್ಥಜೀವನವನ್ನು ನಡೆಸುತ್ತ ಕ್ಲೇಶಪಡುವವರು.

೪೮. ಸತ್ತ್ವಗುಣಸಂಪನ್ನನೂ, ಮೇಧಾವಿಯೂ, ಯೋಗಾಚಾರ ತತ್ಪರನೂ ಆದ ಮಹಾಮುನಿಗೆ ಯಾವ ಸದ್ಗತಿಯು ಲಭಿಸುವುದೊ, ಆ ಗತಿಯೇ ಪ್ರಯಾಗೇಶ್ವರನ ದರ್ಶನದಿಂದಲೂ ಲಭಿಸುವುದು.

೪೯. ಮಾಘಮಾಸದಲ್ಲಿ ಯಾವ ಮಾನವರು ಪ್ರಯಾಗೇಶ್ವರನ ದರ್ಶನ

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪ್ರಯಾಗೇಶ್ವರದೇವಸ್ಯ ಶೃಣು ಸಿದ್ಧೇಶ್ವರಂ ಪರಂ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪ್ರಯಾಗೇಶ್ವರಮಾಹಾತ್ಮ್ಯವರ್ಣನಂ"ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

ವನ್ನು ಮಾಡುವುದಕ್ಕೆ ಬರುವರೊ, ಅವರಿಗೆ ಹೆಜ್ಜೆಹೆಜ್ಜೆಗೂ ಅಶ್ವಮೇಧಫಲ ವುಂಟು.

೫೦. ಮಹಾದೇವಿಯೆ! ಇಂತು ಪ್ರಯಾಗೇಶ್ವರಮಹಾದೇವನ ಪಾಪ ಪರಿಹಾರಕವಾದ ಮಾಹಾತ್ಮ್ಯದ ಕಥೆಯನ್ನು ನಿನಗೆ ಹೇಳಿರುವೆನು. ಇನ್ನು ಸಿದ್ಧೇಶ್ವರಲಿಂಗದ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪ್ರಯಾಗೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಷಷ್ಠಿತಮೋಽಧ್ಯಾಯಃ

### ಸಿದ್ಧೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಏಕೋನಷಷ್ಠಿಕಂ ವಿದ್ಧಿ ದೇವಂ ಸಿದ್ಧೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಸಿದ್ಧಿಃ ಪುಂಸಾಂ ಪ್ರಜಾಯತೇ ॥ ೧ ॥
ಆಸೀದಶ್ವಶಿರಾ ನಾಮ ರಾಜಾ ಪರಮಧಾರ್ಮಿಕಃ ।
ಸೋಽಶ್ವಮೇಧೇನ ಯಜ್ಞೇನ ಇಷ್ಟ್ವಾ ಸಬಹುದಕ್ಷಿಣಂ ॥ ೨ ॥
ಸ್ನಾತಶ್ಚಾಽವಭೃಥೇ ಹೃಷ್ಟೋ ಬ್ರಾಹ್ಮಣೈಃ ಪರಿವಾರಿತಃ ।
ಯಾವದಾಸ್ತೇ ಸ ರಾಜರ್ಷಿಸ್ತಾವತ್ಸಿದ್ಧೋಽತಿದೀಪ್ತಿಮಾನ್ ॥ ೩ ॥
ನಾನೌಷಧಿಪ್ರಭಾವಜ್ಞೋ ಮಂತ್ರತಂತ್ರವಿಶಾರದಃ ।
ಆಯಯೌ ಕಪಿಲಃ ಶ್ರೀಮಾಂಜೈಗೀಷವ್ಯಶ್ಚ ಸಿದ್ಧರಾಟ್ ॥ ೪ ॥
ತಯೋಸ್ತ್ವರಿತಮುತ್ಥಾಯ ಸ ರಾಜಾಽಭ್ಯಾಗತಕ್ರಿಯಾಂ ।
ಚಕಾರ ಪರಯಾ ಯುಕ್ತೋ ಮುದಾ ವೈ ಪೃಥಿವೀಪತಿಃ ॥ ೫ ॥

---

### ಕನ್ನಡದ ಅನುವಾದ

### ಸಿದ್ಧೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಐವತ್ತೊಂಬತ್ತನೆಯ ಮಹಾಲಿಂಗವೇ ಸಿದ್ಧೇಶ್ವರವೆಂಬುದನ್ನು ತಿಳಿ. ಇದನ್ನು ನೋಡುವುದರಿಂದಲೇ ಮಾನವರಿಗೆ ಕಾರ್ಯಸಿದ್ಧಿಯುಂಟಾಗುವುದು.

೨. ಹಿಂದೆ ಮಹಾಧರ್ಮಿಷ್ಠನಾದ ಅಶ್ವಶಿರಸ್ಸೆಂಬ ರಾಜೇಂದ್ರನೊಬ್ಬ ನಿದ್ದನು. ಆತನು ಬಹಳ ದಕ್ಷಿಣೆಗಳೊಡಗೂಡಿದ ಅಶ್ವಮೇಧಯಜ್ಞವೊಂದನ್ನು ನೆರವೇರಿಸಿದನು.

೩–೪. ಕಡೆಯಲ್ಲಿ ಅವಭೃಥಸ್ನಾನವನ್ನು ಮಾಡಿ ಸಂತೋಷದಿಂದ ಬ್ರಾಹ್ಮಣರು ಸುತ್ತುವರೆದಿರಲು, ಆ ರಾಜರ್ಷಿಯಿದ್ದಲ್ಲಿಗೆ ಮಹಾತೇಜಸ್ವಿಯೂ, ಅನೇಕ ಓಷಧಿಗಳ ಮಹಿಮೆಗಳನ್ನರಿತವನೂ, ಮಂತ್ರತಂತ್ರಗಳಲ್ಲಿ ಪಾರಂಗತನೂ ಆದ ಕಪಿಲನೆಂಬ ಸಿದ್ಧನೂ, ಸರ್ವೈಶ್ವರ್ಯಸಮನ್ವಿತನಾದ ಜೈಗೀಷವ್ಯನೆಂಬ ಸಿದ್ಧರಾಜನೂ ಆಗಮಿಸಿದರು.

೫. ಆ ಮಹಾರಾಜನು ಸಂಭ್ರಮಗೊಂಡು ಆಸನದಿಂದೆದ್ದು ಎದುರುಗೊಂಡು ಅತ್ಯಂತ ಸಂತೋಷದಿಂದ ಅವರಿಬ್ಬರಿಗೂ ಅತಿಥಿಸತ್ಕಾರಗಳನ್ನು ಮಾಡಲುಪಕ್ರಮಿಸಿದನು.

ತಾವರ್ಚಿತಾವಾಸನಸ್ಥೌ ಕ್ಷಮಾಶೀಲೌ ಶುಚಿವ್ರತೌ ।
ಮಹೌಜಸೌ ಮಹಾಭಾಗೌ ಮುಮುಕ್ಷೂ ಮುನಿಪುಂಗವೌ ॥ ೭ ॥
ವಿದ್ಯಾವಿನಯಸಂಪನ್ನೌ ಬ್ರಹ್ಮಚರ್ಯಪರಾಯಣೌ ।
ಅನೇಕಸೃಷ್ಟಿಸಂಹಾರಸ್ಥಿತಿಕಾರ್ಯಪರಾಯಣೌ ॥ ೭ ॥
ಉದಯಾದಿತ್ಯಸಂಕಾಶೌ ವಿಭಾವಸುಸಮದ್ಯುತೀ ।
ತೇಜೋ ರಾಶಿಸಮಾಯುಕ್ತೌ ದುರ್ನಿರೀಕ್ಷ್ಯೌ ಪೃಥಗ್ಜನೈಃ ॥ ೮ ॥
ವಿನಯೇನೋಪಸಂಗಮ್ಯ ಪ್ರಣಿಪತ್ಯಾಭಿವಾದ್ಯ ಚ ।
ಸ ರಾಜಾ ಪ್ರಾಂಜಲಿರ್ಭೂತ್ವಾ ಪ್ರಶ್ನಮೇನಮಪೃಚ್ಛತ ॥ ೯ ॥

ಅಶ್ವಶಿರಾ ಉವಾಚ :—

ಶ್ರುತಂ ಮಯಾ ಮುನಿಶ್ರೇಷ್ಠೌ ನಾಽನ್ಯೋ ದೇವೋ ಜನಾರ್ದನಾತ್ ।
ಧ್ಯಾತೋಽಥ ಪೂಜಿತೋ ನೄಣಾಂ ಮುಕ್ತಿದೋ ಭವಬಂಧನಾತ್ ॥
ಸಂಸ್ಮೃತೇ ತು ಹೃಷೀಕೇಶೇ ನರಾಣಾಂ ಕೋಟಿಜನ್ಮಜಂ ।
ಅಶುಭಂ ಕ್ಷಯಮಾಪ್ನೋತಿ ಕಥಂ ನ ಪ್ರಣಮೇದ್ಧರಿಂ ॥ ೧೧ ॥

---

೬. ಕ್ಷಮಾವಂತರೂ, ಉತ್ತಮವ್ರತಪರರೂ, ಮಹಾತೇಜಸ್ವಿಗಳೂ, ಮಹಾತ್ಮರೂ, ಮೋಕ್ಷಾಪೇಕ್ಷಿಗಳೂ ಆದ ಆ ಮುನಿವರ್ಯರಿಬ್ಬರೂ ಸತ್ಕಾರವನ್ನು ಸ್ವೀಕರಿಸಿ ಉಚಿತಾಸನಗಳಲ್ಲಿ ಕುಳಿತರು.

೭. ಅವರು ವಿದ್ಯಾವಿನಯಾದಿ ಸದ್ಗುಣಭರಿತರೂ, ಬ್ರಹ್ಮಚರ್ಯವನ್ನು ಸಾಧಿಸಿದವರೂ, ಸ್ವತಃ ಸೃಷ್ಟಿಸ್ಥಿತಿಲಯಗಳನ್ನುಂಟುಮಾಡಲು ಸಮರ್ಥರೂ ಆಗಿದ್ದರು.

೮. ಬಾಲಸೂರ್ಯನನ್ನು ಹೋಲುವವರೂ, ಅಗ್ನಿಯಂತೆ ಕಾಂತಿಯುಕ್ತರೂ, ತೇಜಸ್ಸಿನ ರಾಶಿಗಳಂತಿರುವವರೂ ಆದ ಅವರು ಸಾಮಾನ್ಯಜನರಿಗೆ ನೋಡುವುದಕ್ಕೂ ಅಸಾಧ್ಯರಾಗಿದ್ದರು.

೯. ಆ ರಾಜೇಂದ್ರನು ವಿನಯಾನ್ವಿತನಾಗಿ ಅವರನ್ನು ಸಮೀಪಿಸಿ ದಂಡಪ್ರಣಾಮವನ್ನು ಮಾಡಿ ಕುಶಲಪ್ರಶ್ನೆಗಳಾದನಂತರ ಕೈಗಳನ್ನು ಮುಗಿದುಕೊಂಡು ಇಂತು ಪ್ರಶ್ನಿಸಿದನು.

೧೦–೧೧. ಅಶ್ವಶಿರನು ಹೇಳುತ್ತಾನೆ:—“ಎಲೈ ಮುನಿಶ್ರೇಷ್ಠರಿರಾ! ಶ್ರೀಮನ್ನಾರಾಯಣನಲ್ಲದೆ ಬೇರೆ ದೇವರಿಲ್ಲವೆಂದು ಕೇಳಿರುವೆನು. ಧ್ಯಾನಪೂಜಾದಿಗಳನ್ನು ಮಾಡಿದ ಮಾನವರನ್ನು ಆತನೇ ಸಂಸಾರಸಾಗರದಿಂದ ಉದ್ಧರಿಸುವವನು. ಆ ಹೃಷೀಕೇಶನನ್ನು ಸ್ಮರಿಸಿದ ಮಾತ್ರದಿಂದಲೇ ಕೋಟಿಜನ್ಮಗಳಲ್ಲಿ ಸಂಚಿತಗಳಾದ ಪಾತಕಗಳೂ ನಾಶವಾಗುವುವೆಂದಮೇಲೆ ಯಾರು ತಾನೆ ಆತನನ್ನು ನಮಸ್ಕರಿಸುವುದಿಲ್ಲ?

ಸಮಾರಾಧ್ಯ ಜಗನ್ನಾಥಂ ಶಕ್ರಾದ್ಯಾಸ್ತ್ರಿದಿವೌಕಸಃ ।
ವಸಂತಿ ಮುದಿತಾಃ ಸ್ವರ್ಗೇ ದಿವ್ಯದ್ಯುತಿಸಮನ್ವಿತಾಃ ॥ ೧೨ ॥
ಜನ್ಮಮೃತ್ಯುಜರಾರೋಗೈರ್ದುಃಖಾನಿ ವಿವಿಧಾನಿ ಚ ।
ಪ್ರಯಾಂತಿ ವಿಲಯಂ ಸದ್ಯಃ ಪ್ರಸನ್ನೇ ಗರುಡಧ್ವಜೇ ॥ ೧೩ ॥
ಇತಿ ಪೃಷ್ಟಸ್ತದಾ ತೇನ ಪ್ರಾರ್ಥಿತೇನ ಯಶಸ್ವಿನಾ ।
ಊಚತುಸ್ತಂ ನೃಪಂ ಸಿದ್ಧೌ ಸಿದ್ಧಿವಿಜ್ಞಾನಕೋವಿದೌ ॥ ೧೪ ॥
ಏಷ ಸಂಪ್ರೋಚ್ಯತೇ ರಾಜಂಸ್ತ್ವಯಾ ನಾರಾಯಣೋಽಧುನಾ ।
ಆವಾಂ ನಾರಾಯಣೌ ದ್ವೌ ತು ತ್ವತ್ಪ್ರತ್ಯಕ್ಷಂ ಗತೌ ನೃಪ ॥ ೧೫ ॥

ಅಶ್ವಶಿರಾ ಉವಾಚ :—

ಭವಂತೌ ಬ್ರಾಹ್ಮಣೌ ಸಿದ್ಧೌ ತಪಸಾ ದಗ್ಧಕಿಲ್ಬಿಷೌ ।
ಯುವಾಂ ನಾರಾಯಣೌ ಕಸ್ಮಾದಿತಿ ವಾಕ್ಯಮುವಾಚ ಸಃ ॥ ೧೬ ॥
ಶಂಖಚಕ್ರಗದಾಪಾಣಿಃ ಪೀತವಾಸಾ ಜನಾರ್ದನಃ ।
ಗರುಡಸ್ಥೋ ಹೃಷೀಕೇಶಃ ಕಸ್ತಸ್ಯ ಸದೃಶೋ ಭುವಿ ॥ ೧೭ ॥

---

೧೨. ಆ ಲೋಕೇಶ್ವರನನ್ನು ಪೂಜಿಸಿದುದರಿಂದಲೇ ದೇವತೆಗಳೂ ದಿವ್ಯ ಕಾಂತಿಯುಕ್ತರಾಗಿ ಇಂದ್ರನೊಡನೆ ಸ್ವರ್ಗಲೋಕದಲ್ಲಿ ಸಂತೋಷದಿಂದ ವಾಸಿಸುತ್ತಿರುವರು.

೧೩. ಆ ಗರುಡಧ್ವಜನು ಪ್ರಸನ್ನನಾಗಲು ಜನನ, ಮರಣ, ರೋಗ ಮುಪ್ಪುಗಳೇ ಮುಂತಾದ ಬಹುವಿಧ ದುಃಖಗಳೆಲ್ಲವೂ ನಿಮಿಷಮಾತ್ರದಲ್ಲಿಯೇ ನಾಶವಾಗುವುವು.''

೧೪. ಇಂತೆಂದು ರಾಜೇಂದ್ರನು ಕೇಳಲು, ಸಮಸ್ತಸಿದ್ಧಿಗಳನ್ನೂ ಪಡೆದು ಮಹಾ ಜ್ಞಾನಿಗಳಾಗಿದ್ದ ಆ ಇಬ್ಬರು ಮಹರ್ಷಿಗಳೂ ಆತನಿಗೆ ಹೇಳಿದರು.

೧೫. ''ರಾಜನೆ! ಈಗ ನೀನು ಬಣ್ಣಿಸುತ್ತಿರುವ ನಾರಾಯಣನೆಂಬವನು ಯಾರು? ನಾವಿಬ್ಬರೇ ನಿನಗೆ ಪ್ರತ್ಯಕ್ಷವಾಗಿ ಕಾಣಿಸುವ ಇಬ್ಬರು ನಾರಾಯಣರಾಗಿರುವೆವು.''

೧೬. ಅಶ್ವಶಿರನು ಕೇಳುತ್ತಾನೆ!—ನೀವಿಬ್ಬರೂ ಸಿದ್ಧರೆನಿಸಿದ ಬ್ರಾಹ್ಮಣೋತ್ತಮರು. ತಪಸ್ಸಿನಿಂದ ಸಕಲ ಪಾಪಗಳನ್ನೂ ಕಳೆದುಕೊಂಡಿರುವಿರಿ. ಆದರೂ ನೀವಿಬ್ಬರೂ ಹೇಗೆ ನಾರಾಯಣರಾಗಬಹುದು?

೧೭. ನಾರಾಯಣನಾದರೊ, ಶಂಖ, ಚಕ್ರ, ಗದೆಗಳನ್ನು ಕೈಗಳಲ್ಲಿ ಹಿಡಿದುಕೊಂಡು ಪೀತಾಂಬರವನ್ನುಟ್ಟಿರುವನು. ಗರುಡವಾಹನನಾಗಿ ಸರ್ವರ ಇಂದ್ರಿಯಗಳಿಗೂ ನಿಯಾಮಕನಾಗಿರುವನು. ಭೂಲೋಕದಲ್ಲಿ ಆತನಿಗೆ ಸಮಾನನಾದವನು ಯಾವನಿರುವನು?

ತಸ್ಯ ರಾಜ್ಞೋ ವಚಃ ಶ್ರುತ್ವಾ ಸಂಸಿದ್ಧೌ ಯೋಗಕೋವಿದೌ ।
ದರ್ಶಯಾಮಾಸತುಸ್ತೌ ಹಿ ಕೃತ್ವಾ ನಾರಾಯಣಂ ವಪುಃ ॥ ೧೮ ॥
ಕಪಿಲೋ ಮಂತ್ರಮಾಹಾತ್ಮ್ಯಾತ್ಸ್ವಯಂ ವಿಷ್ಣುರ್ಬಭೂವ ಹ ।
ಶಂಖಚಕ್ರಗದಾಪಾಣಿಃ ಪೀತವಾಸಾಶ್ಚ ತತ್ಕ್ಷಣಾತ್ ॥ ೧೯ ॥
ಜೈಗೀಷವ್ಯಶ್ಚ ಗರುಡಸ್ತತ್ಕ್ಷಣಾತ್ಸಮಜಾಯತ ।
ತತಃ ಸಮಭವತ್ತತ್ರ ರಾಜವೇಶ್ಮನಿ ಕೌತುಕಂ ॥ ೨೦ ॥
ದೃಷ್ಟ್ವಾ ನಾರಾಯಣಂ ದೇವಂ ಗರುಡಸ್ಥಂ ಸನಾತನಂ ।
ಆಶ್ಚರ್ಯಂ ತಾದೃಶಂ ದೃಷ್ಟ್ವಾ ಸ ರಾಜಾ ವಿಸ್ಮಯಾನ್ವಿತಃ ।
ಉವಾಚ ಕ್ಷಾಮ್ಯತಾಂ ಸಿದ್ಧೌ ನಾಽಯಂ ವಿಷ್ಣುರಥೇದೃಶಃ ॥ ೨೧ ॥
ತಸ್ಯ ಬ್ರಹ್ಮಾ ಸಮುತ್ಪನ್ನೋ ನಾಭಿಪಂಕಜಸಂಭೃತಃ ।
ತಸ್ಮಾತ್ತು ಬ್ರಹ್ಮಣೋ ರುದ್ರಃ ಸ ವಿಷ್ಣುಃ ಪರಮೇಶ್ವರಃ ॥ ೨೨ ॥
ಇತಿ ರಾಜ್ಞೋ ವಚಃ ಶ್ರುತ್ವಾ ತದಾ ತೌ ಸಿದ್ಧಸತ್ತಮೌ ।
ಚಕ್ರತುಃ ಪರಮಾಂ ಮಾಯಾಂ ಯೋಗಾಚಾರ್ಯೌ ಸುಮಾಂತ್ರಿಕೌ ॥ ೨೩ ॥

---

೧೮. ಇಂತೆಂದ ಆ ಮಹಾರಾಜನ ಮಾತುಗಳನ್ನು ಕೇಳಿ ಯೋಗಸಾಧನೆಗಳಲ್ಲಿ ಪರಿಣತರಾಗಿದ್ದ ಆ ಸಿದ್ಧರು ಆತನಿಗೆ ನಾರಾಯಣನ ಸ್ವರೂಪವನ್ನು ತೋರಿದರು.

೧೯. ಮಂತ್ರಪುರಶ್ಚರಣೆಯ ಮಹಿಮೆಯಿಂದ ಕಪಿಲನು ತಾನೇ ಮಹಾವಿಷ್ಣುವಾಗಿ ಶಂಖ ಚಕ್ರ ಗದೆಗಳನ್ನು ಕೈಗಳಲ್ಲಿ ಹಿಡಿದು ಪೀತಾಂಬರಧಾರಿಯಾಗಿ ಆ ಕ್ಷಣವೇ ಕಾಣಿಸಿಕೊಂಡನು.

೨೦. ಜೈಗೀಷವ್ಯನೂ ಆ ವೇಳೆಗೇ ಗರುಡನಾಗಿ ಕಾಣಿಸಿಕೊಂಡನು. ಆಗ ರಾಜಗೃಹದಲ್ಲೆಲ್ಲ ಈ ಆಶ್ಚರ್ಯವನ್ನು ಕಂಡು ಕೌತುಕವುಂಟಾಯಿತು.

೨೧. ದೇವದೇವನೂ, ಅನಾದಿನಿಧನನೂ ಆದ ನಾರಾಯಣನು ಗರುಡಾರೂಢನಾಗಿರುವುದನ್ನು ಕಂಡು ಆ ಮಹಾರಾಜನು ವಿಸ್ಮಯಾನ್ವಿತನಾಗಿ ಇಂತೆಂದನು. "ಎಲೈ ಸಿದ್ಧರಿರಾ! ನನ್ನ ಅಪರಾಧವನ್ನು ಕ್ಷಮಿಸಿರಿ. ಮಹಾವಿಷ್ಣುವು ಇಂತಹವನಲ್ಲ.

೨೨. ಆತನ ನಾಭೀಕಮಲದಿಂದ ಚತುರ್ಮುಖಬ್ರಹ್ಮನುದ್ಭವಿಸಿರುವನು. ಆ ಬ್ರಹ್ಮನಿಂದ ಮಹಾರುದ್ರನು ಹುಟ್ಟಿರುವನು. ಅಂತಹ ವಿಷ್ಣುವೇ ಸರ್ವೇಶ್ವರನು."

೨೩. ಇಂತೆಂದ ಆ ರಾಜೇಶ್ವರನ ಮಾತುಗಳನ್ನು ಸಿದ್ಧರಿಬ್ಬರೂ ಕೇಳಿ ಯೋಗಜ್ಞಾನನಿರತರೂ, ಮಂತ್ರಶಾಸ್ತ್ರಪ್ರವೀಣರೂ ಆದುದರಿಂದ ಒಂದು ಮಹಾಮಾಯೆಯನ್ನುಂಟುಮಾಡಿದರು.

ಕಪಿಲಃ ಪದ್ಮನಾಭಸ್ತು ಪದ್ಮಮಧ್ಯೇ ಪ್ರಜಾಪತಿಃ ।
ಬಭೂವ ಸ್ವಯಮೇವಾತ್ರ ಸಹಸಾ ಯೋಗತಸ್ತದಾ ॥ ೨೪ ॥
ಜೈಗೀಷವ್ಯೋಽಥ ರುದ್ರಸ್ತು ತಸ್ಯೈವಾಂಕೇ ವ್ಯವಸ್ಥಿತಃ ।
ದದರ್ಶ ಮಹದಾಶ್ಚರ್ಯಂ ಸ ರಾಜಾ ಯೋಗಮೋಹಿತಃ ॥ ೨೫ ॥
ಕೌತುಕಾತ್ಪ್ರತ್ಯುವಾಚೇದಂ ಭೀತಃ ಕಂಪಿತಕಂಧರಃ ।
ನೇತ್ಥಂ ಭವಿತಿ ವಿಶ್ವೇಶೋ ಮಾಯೈಷಾ ಯೋಗಿನಾಂ ತದಾ ।
ಸರ್ವರೂಪೀ ಹರಿಃ ಶ್ರೀಮಾನ್ಸರ್ವಗಃ ಸರ್ವದಃ ಸ್ಮೃತಃ ॥ ೨೬ ॥
ತತೋ ವಾಕ್ಯಾವಸಾನೇ ತು ತಸ್ಯ ರಾಜ್ಞಶ್ಚ ಸಂಸದಿ ।
ಮಶಕಾ ಮತ್ಕುಣಾ ಯೂಕಾ ಭ್ರಮರಾಃ ಪಕ್ಷಿಣೋ ಮೃಗಾಃ ॥ ೨೭ ॥
ಅಶ್ವಾ ಗಾವೋ ಹಯಾಃ ಸಿಂಹಾ ವ್ಯಾಘ್ರಾ ಗೋಮಹಿಷಾಸ್ತಥಾ ।
ಅನ್ಯೇಽಪಿ ಪಶವಃ ಕೀಟಾ ಗ್ರಾಮ್ಯಾರಣ್ಯಾಶ್ಚ ಸರ್ವಶಃ ॥ ೨೮ ॥
ದೃಶ್ಯಂತೇ ರಾಜಭವನೇ ಕೋಟಿಶಃ ಪರ್ವತಾತ್ಮಜೇ ।
ತಂ ದೃಷ್ಟ್ವಾ ಭೂತಸಂಘಾತಂ ರಾಜಾ ವಿಸ್ಮಿತಮಾನಸಃ ॥ ೨೯ ॥

---

೨೪. ಕಪಿಲನು ಮಹಾವಿಷ್ಣುವೂ, ಆತನ ನಾಭೀಕಮಲದಲ್ಲಿರುವ ಬ್ರಹ್ಮನೂ ಆಗಿ ಕಾಣಿಸಿದರು. ಆತನು ತನ್ನ ಯೋಗಮಹಿಮೆಯಿಂದ ಈ ಮಹಾಶ್ಚರ್ಯವನ್ನು ನಿಮಿಷದಲ್ಲಿ ಮಾಡಿದನು.

೨೫. ಜೈಗೀಷವ್ಯನಾದರೊ, ಮಹಾದೇವನ ರೂಪವನ್ನು ತಾಳಿ ಬ್ರಹ್ಮನ ತೊಡೆಯಮೇಲೆ ಕುಳಿತಿದ್ದನು. ಯೋಗಶಕ್ತಿಯಿಂದ ಮೋಹಿತನಾದ ಆ ರಾಜನು ಈ ಆಶ್ಚರ್ಯವನ್ನೆಲ್ಲ ನೋಡಿದನು.

೨೬. ಭಯಭ್ರಾಂತನೂ, ನಡುಗುತ್ತಿರುವ ಧ್ವನಿಯುಳ್ಳವನೂ ಆದರೂ ಕುತೂಹಲಪ್ರೇರಿತನಾಗಿ ಇಂತೆಂದನು. "ಆಹಾ! ಲೋಕೇಶ್ವರನು ಹೀಗೆ ಇರಲಾರನು. ಇದೆಲ್ಲವೂ ಯೋಗಿಗಳ ಮಾಯಾಪ್ರಪಂಚದಂತೆಯೇ ಇದ್ದೀತು! ಆ ಶ್ರೀಹರಿಯು ಸರ್ವಸ್ವರೂಪನೂ, ಸರ್ವೈಶ್ವರ್ಯಭರಿತನೂ, ಸರ್ವಾಂತರ್ಯಾಮಿಯೂ, ಸರ್ವವಾಂಛಪ್ರದನೂ ಆಗಿರುವನೆಂದು ಸ್ಮೃತಿಗಳಲ್ಲಿ ಹೇಳಿರುವುದು."

೨೭–೨೯. ದೇವಿಯೆ! ಆಗ ಆ ರಾಜನ ಅರಮನೆಯಲ್ಲೆಲ್ಲೆಲ್ಲಿಯೂ ಸೊಳ್ಳೆಗಳು, ತಿಗಣೆಗಳು, ಹೇನುಗಳು, ದುಂಬಿಗಳು, ಪಕ್ಷಿಗಳು, ಮೃಗಗಳು, ಕುದುರೆಗಳು, ಆಕಳುಗಳು, ಸಿಂಹಗಳು, ಹುಲಿಗಳು, ಎತ್ತು, ಎಮ್ಮೆಗಳು, ಇತರ ಪಶುಗಳೂ, ಕೀಟಗಳೂ, ಊರು ಕಾಡುಗಳಲ್ಲಿ ವಾಸಿಸುವ ಸಕಲ ಜಂತುಗಳೂ ಕೋಟಿಗಟ್ಟಲೆಯಾಗಿ ತೋರುತ್ತಿದ್ದುವು. ಪರ್ವತರಾಜಪುತ್ರಿಯೆ! ಆ ಭೂತಸಮೂಹವನ್ನು ಕಂಡು ಮಹಾರಾಜನು ಆಶ್ಚರ್ಯಚಕಿತನಾದನು.

ಯಾವಚ್ಚಿಂತಯತೇ ಕಿಂ ಸ್ಯಾತ್ತಾವಜ್ಜಾಜ್ಞಾತಂ ನೃಪೇಣ ಹಿ ।
ಜೈಗೀಷವ್ಯಸ್ಯ ಮಾಹಾತ್ಮ್ಯಂ ಕಪಿಲಸ್ಯ ಮಹಾತ್ಮನಃ ॥ ೩೦ ॥
ಕೃತಾಂಜಲಿಪುಟೋ ಭೂತ್ವಾ ಸ ರಾಜಾಽಶ್ವಶಿರಸ್ತದಾ ।
ಪಪ್ರಚ್ಛ ಚ ದ್ವಿಜೌ ಭಕ್ತ್ಯಾ ಕಿಮಿದಂ ಸಿದ್ಧಸತ್ತಮೌ ॥ ೩೧ ॥
ಸಾಮರ್ಥ್ಯಮೀದೃಶಂ ಲಬ್ಧಂ ಕಸ್ಮಾದ್ವೈ ತಪಸೋ ಬಲಾತ್ ।
ಅದ್ಯ ಮೇ ಸಫಲೋತ್ಪತ್ತಿರದ್ಯ ಮೇ ಸಫಲಂ ಶ್ರುತಂ ॥ ೩೨ ॥
ಸಫಲಾ ಮೇ ಮನೋವೃತ್ತಿರ್ಯುವಯೋರ್ದರ್ಶನೇನ ವೈ ।
ತಸ್ಯ ತದ್ವಚನಂ ಶ್ರುತ್ವಾ ಕಪಿಲೋ ವಾಕ್ಯಮಬ್ರವೀತ್ ॥ ೩೩ ॥
ಮಹಾಕಾಲವನೇ ರಾಜನ್ವಿದ್ಯತೇ ಲಿಂಗಮುತ್ತಮಂ ।
ಖ್ಯಾತಂ ಸಿದ್ಧೇಶ್ವರಂ ನಾಮ್ನಾ ಸಿದ್ಧೈರಭ್ಯರ್ಚಿತಂ ತದಾ ॥ ೩೪ ॥
ಸೌಭಾಗ್ಯೇಶ್ವರಪೂರ್ವೇ ತು ಸೌಭಾಗ್ಯಾರೋಗ್ಯದಾಯಕಂ ।
ಪ್ರಭಾವಾತ್ತಸ್ಯ ಲಿಂಗಸ್ಯ ಪ್ರಾಪ್ತಾ ಸಿದ್ಧಿರನುತ್ತಮಾ ॥ ೩೫ ॥

---

೩೦. ಇದೇನೆಂದು ಆತನು ಚಿಂತಿಸುತ್ತಿರುವಂತೆಯೇ ಆತನಿಗೆ ಜೈಗೀಷವ್ಯನ ಮತ್ತು ಮಹಾತ್ಮನಾದ ಕಪಿಲಮುನಿಯ ಮಾಹಾತ್ಮ್ಯವು ಮನಸ್ಸಿಗೆ ಗೋಚರವಾಯಿತು.

೩೧. ಬಳಿಕ ಆ ಅಶ್ವಶಿರಮಹಾರಾಜನು ಅಂಜಲಿಬಂಧವನ್ನು ಮಾಡಿಕೊಂಡು ಆ ಬ್ರಾಹ್ಮಣರನ್ನು ಪ್ರಶ್ನೆಮಾಡಿದನು: "ಎಲೈ ಸಿದ್ಧಶ್ರೇಷ್ಠರಿರಾ! ಈ ವಿಚಿತ್ರವೇನು?

೩೨. ಯಾವ ತಪಸ್ಸಿನ ಬಲದಿಂದ ನಿಮಗೆ ಇಂತಹ ಸಾಮರ್ಥ್ಯವುಂಟಾಯಿತು? ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತು. ಇಂದು ನನ್ನ ವಿದ್ಯೆಯು ಸಫಲವೆನಿಸಿತು.

೩೩. ನಿಮ್ಮಿಬ್ಬರ ದರ್ಶನದಿಂದ ನನ್ನ ಮನಸ್ಸಿನ ವೃತ್ತಿಯೂ ಸಫಲವಾಯಿತು." ಇಂತೆಂದ ಆ ರಾಜನ ಮಾತನ್ನು ಕೇಳಿ ಕಪಿಲಮಹರ್ಷಿಯು ಹೇಳತೊಡಗಿದನು.

೩೪. "ರಾಜೇಂದ್ರ! ಮಹಾಕಾಲವನಕ್ಷೇತ್ರದಲ್ಲಿ ಒಂದು ಉತ್ತಮ ಲಿಂಗವಿರುವುದು. ಸಿದ್ಧೇಶ್ವರನೆಂಬ ಹೆಸರಿನಿಂದ ಪ್ರಖ್ಯಾತವಾದ ಆ ಲಿಂಗವನ್ನು ಸಿದ್ಧರು ನಿತ್ಯವೂ ಪೂಜಿಸುತ್ತಿರುವರು.

೩೫. ಸೌಭಾಗ್ಯೇಶ್ವರನಿಗೆ ಪೂರ್ವದಿಕ್ಕಿನಲ್ಲಿರುವ ಅದು ಸೌಭಾಗ್ಯವನ್ನೂ, ದೇಹಾರೋಗ್ಯವನ್ನೂ ಕೊಡುವುದು. ಈ ಲಿಂಗದ ಪ್ರಭಾವದಿಂದಲೇ ನಮಗೆ ಇಂತಹ ಅಸದೃಶವಾದ ಸಿದ್ಧಿಯು ಲಭಿಸಿತು.

ಜೈಗೀಷವ್ಯೇನ ಸಿದ್ಧೇನ ಮಯಾ ವೈ ನೃಪಸತ್ತಮ ।
ತಸ್ಮಾದ್ವ್ರಜ ಮಹಾಬಾಹೋ ಮಹಾಕಾಲವನಂ ಶುಭಂ ॥ ೩೬ ॥
ತತ್ರ ದ್ರಕ್ಷ್ಯಸಿ ಸರ್ವೇಶಂ ಶಂಖಚಕ್ರಗದಾಧರಂ ।
ಲಿಂಗಮೂರ್ತೌ ಸ್ಥಿತಂ ವಿಷ್ಣುಂ ಯಸ್ತೇ ಸಿದ್ಧಿಂ ಪ್ರದಾಸ್ಯತಿ ॥ ೩೭ ॥
ಸಂಸಿದ್ಧಾ ಬಹವಸ್ತತ್ರ ಸನಕಾದ್ಯಾ ನರೇಶ್ವರ ।
ತಸ್ಯ ತದ್ವಚನಂ ಶ್ರುತ್ವಾ ಕಪಿಲಸ್ಯ ಮಹಾತ್ಮನಃ ॥ ೩೮ ॥
ಜಗಾಮ ಸಹಸಾ ತತ್ರ ಸ ರಾಜಾಽಶ್ವಶಿರಾಸ್ತದಾ ।
ದದರ್ಶ ಚೈವ ತೌ ಸಿದ್ಧೌ ಸಿದ್ಧೇಶ್ವರಸಮೀಪತಃ ॥ ೩೯ ॥
ಅನ್ಯೇ ಚ ಬಹವಃ ಸಿದ್ಧಾಃ ಸಿದ್ಧನಾಥಾಸ್ತಥಾಪರೇ ।
ಜ್ಞಾತ್ವಾ ಸಿದ್ಧೇಶ್ವರಂ ದೇವಂ ಸಿದ್ಧಸಂಘೈಃ ಸಮರ್ಚಿತಂ ॥ ೪೦ ॥
ಲಿಂಗಮಧ್ಯೇ ಸ್ಥಿತಂ ವಿಷ್ಣುಂ ಜ್ಞಾತ್ವಾ ಸ ನೃಪಸತ್ತಮಃ ।
ಪೂಜಯಾಮಾಸ ಭಾವೇನ ಪರಮೇಣ ಸಮಾಧಿನಾ ॥ ೪೧ ॥
ತತಸ್ತುಷ್ಟೋಽಬ್ರವೀದ್ದೇವೋ ವರಂ ವರಯ ಸುವ್ರತ ।
ಯತ್ತೇಽಭಿಲಷಿತಂ ಸರ್ವಮಹಂ ದಾಸ್ಯಾಮಿ ಭೂಪತೇ ॥ ೪೨ ॥

---

೩೬. "ಎಲೈ ನೃಪಸತ್ತಮನೆ! ಜೈಗೀಷವ್ಯನೂ ನಾನೂ ಸಿದ್ಧಿಯನ್ನು ಪಡೆದಿರುವ ಪರಮಪವಿತ್ರತಮವಾದ ಮಹಾಕಾಲವನಕ್ಕೆ ನೀನೂ ಹೊರಡು.

೩೭. ಅಲ್ಲಿ ಸರ್ವೇಶ್ವರನೂ, ಶಂಖಚಂಕ್ರಗದಾದ್ಯಾಯುಧಗಳನ್ನು ಧರಿಸಿದವನೂ, ಮಹಾಲಿಂಗದಲ್ಲಿ ನೆಲಸಿರುವವನೂ ಆದ ಮಹಾವಿಷ್ಣುವನ್ನು ನೋಡುವೆ. ಆತನೇ ನಿನಗೆ ಈ ಸಿದ್ಧಿಯನ್ನು ಕೊಡುವನು.

೩೮–೩೯. ರಾಜೇಂದ್ರ! ಸನಕಾದ್ಯನೇಕ ಮುನಿಪುಂಗವರು ಅಲ್ಲಿ ಸಿದ್ಧಿಗಳನ್ನು ಪಡೆದಿರುವರು." ಇಂತೆಂದ ಮಹಾಮಹಿಮನಾದ ಕಪಿಲನ ಮಾತನ್ನು ಕೇಳಿ ಅಶ್ವಶಿರಮಹಾರಾಜನು ಸಂಭ್ರಮದಿಂದ ಮಹಾಕಾಲವನವನ್ನು ಸೇರಿದನು. ಅಲ್ಲಿಯೂ ಸಿದ್ಧೇಶ್ವರನ ಸಮೀಪದಲ್ಲಿಯೇ ಮತ್ತೆ ಆ ಇಬ್ಬರು ಸಿದ್ಧರನ್ನೂ ನೋಡಿದನು.

೪೦. ಅಲ್ಲಿಯೇ ಇತರ ಅನೇಕ ಮಂದಿ ಸಿದ್ಧರೂ, ಸಿದ್ಧನಾಯಕರೂ ಕೂಡಿದ್ದುದನ್ನು ಕಂಡು ಆ ಲಿಂಗವೇ ಸಿದ್ಧಸಮೂಹಗಳಿಂದ ಪೂಜಿತವಾದ ಸಿದ್ಧೇಶ್ವರಲಿಂಗವೆಂಬುದನ್ನು ತಿಳಿದನು.

೪೧. ಅಲ್ಲಿಯೇ ಲಿಂಗಮಧ್ಯದಲ್ಲಿ ಅಂತರ್ಗತನಾಗಿದ್ದ ಮಹಾವಿಷ್ಣುವನ್ನು ಕಂಡು ಆತನು ಭಕ್ತಿಯಿಂದಲೂ, ಪರಮಸಮಾಧಾನದಿಂದಲೂ ಪೂಜೆಯನ್ನು ಮಾಡಿದನು.

೪೨. ಆತನ ಅರ್ಚನೆಯಿಂದ ಸಂತುಷ್ಟನಾಗಿ ಮಹಾದೇವನಿಂತೆಂದು

ಲಿಂಗಸ್ಯ ವಚನಂ ಶ್ರುತ್ವಾ ನೃಪೇಣೋಕ್ತಂ ಚ ತಚ್ಛೃಣು ।
ಯದಿ ಮೇಽಸ್ತಿ ದಯಾ ದೇವ ಪ್ರಸನ್ನೋಽಸಿ ಹಿ ಚೇತ್ಪ್ರಭೋ ।
ಯತ್ತೇ ರೂಪಂ ಪರಂ ನಾಥ ತದ್ದರ್ಶಯ ಮಮಾಚ್ಯುತ ॥ ೪೩ ॥
ಏತದೇವ ಹಿ ಮೇ ದೇವ ಸದಾಽಭಿಲಷಿತಂ ಹೃದಿ ।
ಆಜನ್ಮನೋ ಜಗನ್ನಾಥ ಕದಾ ದ್ರಕ್ಷ್ಯೇ ಜನಾರ್ದನಂ ॥ ೪೪ ॥
ಏತದಿಚ್ಛಾಮ್ಯಹಂ ದೇವ ವರಾಣಾಂ ಪ್ರವರಂ ವರಂ ।
ದೀಯಮಾನಂ ತ್ವಯಾಽಭೀಷ್ಟಂ ಖ್ಯಾತಂ ಸಿದ್ಧೇಶ್ವರಂ ಕ್ಷಿತೌ ॥ ೪೫ ॥
ನೃಪಸ್ಯ ವಚನಂ ಶ್ರುತ್ವಾ ಲಿಂಗೇನೋಕ್ತಂ ವರಾನನೇ ।
ನ ಮೇ ವಿದುರ್ದೇವಗಣಾ ನಾಽಸುರಾ ನ ಮಹರ್ಷಯಃ ॥ ೪೬ ॥
ಪರಂ ರೂಪಂ ನೃಪಶ್ರೇಷ್ಠ ಕೃಷ್ಣೋಽಹಂ ಲಿಂಗತಾಂ ಗತಃ ।
ಮಮ ಲೋಕಂ ತು ಯೇ ಪ್ರಾಪ್ತಾ ಮುನಯೋ ಮಂತ್ರಭೂಷಿತಾಃ॥ ೪೭॥
ನ ಜ್ಞೈತೇ ಮಾಂ ವಿಜಾನಂತಿ ಪರಮಾರ್ಥೇನ ಪಾರ್ಥಿವ ।
ಯದೇತದ್ದೃಶ್ಯತೇ ತೇಜೋ ಲಿಂಗರೂಪೇಣ ಮಾಮಕಂ ॥ ೪೮ ॥

---

ಹೇಳಿದನು : "ನಿಯತಾತ್ಮನೆ! ವರವನ್ನು ಕೇಳಿಕೊ. ನಿನಗೆ ಬೇಕಾಗಿರುವುದನ್ನೆಲ್ಲ ನಾನು ಕೊಡಲಿರುವೆನು."

೪೩. ಲಿಂಗವಾಡಿದ ಈ ಮಾತನ್ನು ಕೇಳಿ ಆ ಮಹಾರಾಜನು ಹೇಳಿದುದನ್ನು ಕೇಳು. "ದೇವದೇವ! ನಿನಗೆ ನನ್ನಲ್ಲಿ ದಯೆಯಿರುವುದಾದರೆ, ನೀನು ಪ್ರಸನ್ನನಾಗಿರುವೆಯಾದರೆ, ನಾಶರಹಿತವಾದ ನಿನ್ನ ಪರಾತ್ಪರರೂಪವನ್ನು ತೋರಿಸು.

೪೪. ಓ ಜಗನ್ನಾಥ! ನಾನು ಹುಟ್ಟಿದ ದಿನದಿಂದಲೂ, "ಜಗದೊಡೆಯ ನನ್ನು ಯಾವಾಗ ನೋಡುವೆನೊ?" ಎಂಬ ಒಂದೇ ಅಭಿಲಾಷೆಯು ನನ್ನ ಮನಸ್ಸಿನಲ್ಲಿರುವುದು.

೪೫. ವರಗಳಲ್ಲೆಲ್ಲ ಉತ್ತಮವರವಾದ ಇದನ್ನೇ ನಾನು ಬೇಡುತ್ತಿರುವೆನು. ಸಿದ್ಧೇಶ್ವರನೆಂದು ಭೂಮಿಯಲ್ಲಿ ಪ್ರಖ್ಯಾತನಾಗಿರುವ ನೀನು ನನಗೆ ಈ ಅಭೀಷ್ಟವನ್ನು ಕೊಡಬೇಕು."

೪೬–೪೭. ಸುಮುಖಿಯೆ! ಮಹಾರಾಜನ ವಚನವನ್ನು ಕೇಳಿ ಆ ಲಿಂಗವು ಹೇಳಿತು. "ರಾಜೇಂದ್ರನೆ! ನನ್ನ ಪರಾತ್ಪರರೂಪವನ್ನು ದೇವತಾಸಮೂಹಗಳಾಗಲಿ, ರಾಕ್ಷಸರಾಗಲಿ, ಮಹರ್ಷಿಗಳಾಗಲಿ ತಿಳಿಯಲಾರದವರಾಗಿರುವರು. ಕೃಷ್ಣನಾದ ನಾನೇ ಲಿಂಗಾಕಾರವನ್ನು ತಾಳಿರುವೆನು. ಮಹಾಮಂತ್ರಜಪಗಳಿಂದ ತೇಜಸ್ವಿಗಳಾದ ಅನೇಕ ಮುನಿಗಳು ನನ್ನ ಲೋಕವನ್ನು ಸೇರಿರುವರು.

೪೮. ಆದರೆ ಅವರೂ ನನ್ನನ್ನು ಪರಿಪೂರ್ಣವಾಗಿ ತಿಳಿಯಲು ಶಕ್ತರಾಗಿಲ್ಲ. ನನ್ನ ತೇಜಸ್ಸೇ ಈ ಲಿಂಗದ ರೂಪದಿಂದ ಕಾಣುತ್ತಿರುವುದು.

ಏತದೇವ ಹಿ ಬ್ರಹ್ಮಾದ್ಯಾ ಧ್ಯಾಯಂತಿ ತ್ರಿದಶಾಸ್ತ್ವಮೀ ।
ಅತೋ ನ ಮೇ ಪರಂ ರೂಪಂ ದ್ರಷ್ಟುಂ ಕಶ್ಚಿತ್ಕ್ಷಮೋ ಭವೇತ್ ॥ ೪೯ ॥
ಅನೇಕಜನ್ಮಸಂಶುದ್ಧಾ ಯೋಗಿನೋ ಮದನುಗ್ರಹಾತ್ ।
ಪ್ರವಿಶಂತಿ ತನೌ ಮಹ್ಯಂ ಮುಕ್ತಾಃ ಸಂಸಾರಬಂಧನೈಃ ॥ ೫೦ ॥
ಏವಂ ಹಿ ಬ್ರುವತಸ್ತಸ್ಯ ಸಿದ್ಧಿಃ ಪ್ರಾಪ್ತಾ ನೃಪೇಣ ಹಿ ।
ವಿಷ್ಣುರೂಪಂ ಸಮಾಸ್ಥಾಯ ತಸ್ಮಿಂಲ್ಲಿಂಗೇ ಲಯಂ ಗತಃ ॥ ೫೧ ॥
ಅತೋ ದೇವಿ ಸುವಿಖ್ಯಾತಂ ಲಿಂಗಂ ಸಿದ್ಧೇಶ್ವರಂ ಪರಂ ।
ಯೇ ಪಶ್ಯಂತಿ ನರಾ ಭಕ್ತ್ಯಾ ತೇಷಾಂ ಸಿದ್ಧಿಶ್ಚ ಶಾಶ್ವತೀ ॥ ೫೨ ॥
ಅಂಜನಂ ಪಾದಲೇಪಂ ಚ ಪಾದುಕಾಸಿದ್ಧಿರೇವ ಚ ।
ಘುಟಿಕಾಖಡ್ಗಸಿದ್ಧಿಶ್ಚ ಮಹಾಸಿದ್ಧಿಃ ಸುದುರ್ಲಭಾ ॥ ೫೩ ॥
ದಿವ್ಯೌಷಧೈಶ್ಚ ಯಾ ಸಿದ್ಧಿರ್ಮಂತ್ರಸ್ಪರ್ಶೋದ್ಭವಾ ಚ ಯಾ ।
ಏತಾಸ್ತು ಸಿದ್ಧಯಃ ಪ್ರೋಕ್ತಾ ಅಪರಾ ಲಘಿಮಾದಯಃ ॥ ೫೪ ॥
ಧರ್ಮಾರ್ಥಕಾಮಸಿದ್ಧಿಶ್ಚ ಮೋಕ್ಷಸಿದ್ಧಿರನುತ್ತಮಾ ।
ಜಾಯತೇ ನಾತ್ರ ಸಂದೇಹಃ ಶ್ರೀಸಿದ್ಧೇಶ್ವರದರ್ಶನಾತ್ ॥ ೫೫ ॥

---

೪೯. ಬ್ರಹ್ಮದೇವನೇ ಮೊದಲಾದ ದೇವತೆಗಳೆಲ್ಲರೂ ಈ ರೂಪವನ್ನೇ ಧ್ಯಾನಿಸುತ್ತಿರುವರು. ಆದುದರಿಂದ ನನ್ನ ಪರಾತ್ಪರರೂಪವನ್ನು ನೋಡಲು ಯಾವನೂ ಶಕ್ತನಾಗಿಲ್ಲ.

೫೦. ಅನೇಕ ಜನ್ಮಗಳಲ್ಲಿ ಪುಣ್ಯಗಳನ್ನು ಮಾಡಿ ಪರಿಶುದ್ಧರಾದ ಯೋಗಿಗಳು ಮಾತ್ರ ಸಂಸಾರಬಂಧನಗಳನ್ನು ಕಳೆದುಕೊಂಡು ನನ್ನ ಅನುಗ್ರಹದಿಂದ ನನ್ನ ದೇಹವನ್ನು ಪ್ರವೇಶಿಸುವರು."

೫೧. ಇಂತು ಆ ಲಿಂಗವು ಹೇಳುತ್ತಿದ್ದಂತೆಯೇ ರಾಜನಿಗೂ ಸಿದ್ಧಿಯು ಪ್ರಾಪ್ತವಾಯಿತು. ಆತನೂ ವಿಷ್ಣುವಿನ ರೂಪವನ್ನೇ ಹೊಂದಿ ಆ ಲಿಂಗದಲ್ಲಿ ಐಕ್ಯವನ್ನು ಪಡೆದನು.

೫೨. ದೇವಿಯೆ! ಅಂದಿನಿಂದ ಆ ಲಿಂಗವು ಸಿದ್ಧೇಶ್ವರನೆಂದು ಬಹಳ ಪ್ರಖ್ಯಾತಿಯನ್ನು ಹೊಂದಿತು. ಯಾವ ನರರು ಭಕ್ತಿಯಿಂದ ಅದನ್ನು ನೋಡುವರೊ, ಅವರಿಗೆ ನಿತ್ಯವೂ ಕಾರ್ಯಸಿದ್ಧಿಯುಂಟಾಗುತ್ತಿರುವುದು.

೫೩–೫೪. ಅಂಜನ, ಪಾದಲೇಪ, ಪಾದುಕಾ, ಘುಟಿಕಾ, ಖಡ್ಗಸಿದ್ಧಿಗಳು, ಅತಿ ದುರ್ಲಭವಾದ ಮಹಾಸಿದ್ಧಿ, ದಿವ್ಯೌಷಧಿಗಳಿಂದಾಗುವ ಸಿದ್ಧಿ, ಮಂತ್ರಜಪ, ಸ್ಪರ್ಶಗಳ ಸಿದ್ಧಿ ಇವುಗಳನ್ನೇ ಸಿದ್ಧಿಗಳೆಂದು ಕರೆಯುವರು. ಇವುಗಳಲ್ಲದೆ, ಲಘಿಮಾದಿಯೋಗಸಿದ್ಧಿಗಳೂ ಇರುವುವು.

೫೫. ಶ್ರೀಸಿದ್ಧೇಶ್ವರಮಹಾಲಿಂಗದ ದರ್ಶನದಿಂದ ಧರ್ಮ, ಅರ್ಥ, ಕಾಮ,

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸಿದ್ಧೇಶ್ವರಸ್ಯ ದೇವಸ್ಯ ಮತಂಗೇಶಮಥೋ ಶೃಣು ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸಿದ್ಧೇಶ್ವರಮಾಹಾತ್ಮ್ಯವರ್ಣನಂ" ನಾಮ್ನೈಕೋನಷಷ್ಟಿತಮೋಽಧ್ಯಾಯಃ

---

ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳೂ ಕೈಗೂಡುವುವೆಂಬುದರಲ್ಲಿ ಸಂಶಯವಿಲ್ಲ.

೫೬. ದೇವಿಯೆ! ಇಂತು ನಿನಗೆ ಶ್ರೀಸಿದ್ಧೇಶ್ವರನ ಪ್ರಭಾವವನ್ನು ಹೇಳಿರುವೆನು. ಪಾಪನಾಶಕವಾದ ಈ ಕಥೆಯಾದಮೇಲೆ ಮತಂಗೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸಿದ್ಧೇಶ್ವರಮಾಹಾತ್ಮ್ಯವರ್ಣನ"ವೆಂಬ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಟಿತಮೋಽಧ್ಯಾಯಃ

### ಮತಂಗೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಮತಂಗೇಶ್ವರಸಂಜ್ಞಂ ತು ಷಷ್ಟಿಸಂಖ್ಯಾಕಮೀಶ್ವರಂ ।
ವಿದ್ಧಿ ಪಾಪಹರಂ ದೇವಿ ಸಮೀಹಿತಕರಂ ಸದಾ ॥ ೧ ॥
ಸುಗತಿರ್ನಾಮ ವಿಪ್ರೇಂದ್ರೋ ಬಭೂವ ದ್ವಾಪರೇ ಯುಗೇ ।
ಸತ್ಯವಾದೀ ಸದಾ ದಾಂತೋ ವೇದಾಧ್ಯಯನತತ್ಪರಃ ॥ ೨ ॥
ಮತಂಗಸ್ತಸ್ಯ ಪುತ್ರೋಽಭೂದ್ಬಾಲ್ಯಾದ್ದಾರುಣತಾಂ ಗತಃ ।
ಸ ಬಾಲಂ ಗರ್ದಭಂ ದೇವಿ ತಿಷ್ಠಂತಂ ಮಾತುರಂತಿಕೇ ।
ದಂಡಕಾಷ್ಠೇನ ಸಹಸಾ ತಾಡಯಾಮಾಸ ಚಾಪಲಾತ್ ॥ ೩ ॥
ತಂ ತು ತ್ರೀವ್ರಾಹತಂ ದೃಷ್ಟ್ವಾ ಗರ್ದಭೀ ಪುತ್ರಗೃದ್ಧಿನೀ ।
ಉವಾಚ ಮಾ ಶುಚಃ ಪುತ್ರ ಚಂಡಾಲೋಽಯಂ ನ ವೈ ದ್ವಿಜಃ ॥ ೪ ॥
ಬ್ರಾಹ್ಮಣೇ ದಾರುಣಂ ನಾಸ್ತಿ ಮೈತ್ರೋ ಬ್ರಾಹ್ಮಣ ಉಚ್ಯತೇ ।
ತುದನ್ಪಾಪಾಕೃತಿರಯಂ ಬಾಲೇ ನ ಕುರುತೇ ದಯಾಂ ॥ ೫ ॥

---

## ಕನ್ನಡದ ಅನುವಾದ

### ಮತಂಗೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಮಹೇಶ್ವರಿಯೆ! ಅರುವತ್ತನೆಯ ಮಹಾಲಿಂಗವಾದ ಮತಂಗೇಶ್ವರಲಿಂಗವು ಪಾತಕಗಳನ್ನು ಕಳೆಯುವುದೂ, ಅಭೀಷ್ಟಪ್ರದವೂ ಆದುದೆಂದು ತಿಳಿ.

೨. ದ್ವಾಪರಯುಗದಲ್ಲಿ ಸುಗತಿಯೆಂಬ ಬ್ರಾಹ್ಮಣನೊಬ್ಬನಿದ್ದನು. ಆತನು ಸತ್ಯವಾಕ್ಯತತ್ಪರನೂ, ಇಂದ್ರಿಯನಿಗ್ರಹವುಳ್ಳವನೂ, ವೇದಾಧ್ಯಯನನಿರತನೂ ಆಗಿದ್ದನು.

೩. ಆತನ ಪುತ್ರನಾದ ಮತಂಗನೆಂಬವನು ಬಾಲ್ಯದಿಂದಲೂ ಕ್ರೂರಸ್ವಭಾವದವನಾಗಿದ್ದನು. ದೇವಿಯೆ! ಅವನೊಮ್ಮೆ ತಾಯಿಯೊಡನಿದ್ದ ಒಂದು ಕತ್ತೆಯನ್ನು ಬಡಿಗೋಲಿನಿಂದ ಕೇವಲ ಚಾಪಲ್ಯಚೋದಿತನಾಗಿ ಬಡಿದನು.

೪. ಮರಿಯು ಬಹಳ ಪೆಟ್ಟುತಿಂದುದನ್ನು ಕಂಡು ಪುತ್ರಸ್ನೇಹಪರವಶಳಾದ ಹೆಣ್ಣುಕತ್ತೆಯು ಇಂತೆಂದಿತು : "ಪುತ್ರ ! ಶೋಕಿಸಬೇಡ. ಇವನು ಚಂಡಾಲನಲ್ಲದೆ ಬ್ರಾಹ್ಮಣನೆನಿಸನು.

೫. ಬ್ರಾಹ್ಮಣನಲ್ಲಿ ಕ್ರೌರ್ಯವೆಂದಿಗೂ ಕಾಣಿಸದು. ಸರ್ವಭೂತ

ಸ್ವಕೀಯಾಂ ಭಜತೇ ಚಾಽಥ ಪ್ರಕೃತಿಂ ಮಾನವಃ ಸದಾ ।
ಏತಚ್ಛ್ರುತ್ವಾ ಮತಂಗಸ್ತು ದಾರುಣಂ ಗರ್ದಭೀವಚಃ ॥ ೬ ॥
ದಂಡಕಾಷ್ಠಂ ಪರಿತ್ಯಜ್ಯ ರಾಸಭೀಂ ಪ್ರತ್ಯಭಾಷತ ।
ಬ್ರೂಹಿ ರಾಸಭಿ ಕಲ್ಯಾಣಿ ಮಾತಾ ಮೇ ಯೇನ ದೂಷಿತಾ ॥ ೭ ॥
ಕಥಂ ಮಾಂ ವೇತ್ಸಿ ಚಂಡಾಲಂ ಯಾಯಾವರಕುಲೋದ್ಭವಂ ।
ಕೇನ ಜಾತೋಽಸ್ಮಿ ಚಂಡಾಲೋ ಬ್ರಾಹ್ಮಣ್ಯಂ ಯೇನ ಮೇ ಗತಂ ॥ ೮ ॥

ಗರ್ದಭ್ಯುವಾಚ :—

ನಾಪಿತೇನ ಪ್ರಮತ್ತೇನ ಬ್ರಾಹ್ಮಣ್ಯಾಂ ವೃಷಲೇನ ಹಿ ।
ತತಸ್ತ್ವಮಸಿ ಚಾಂಡಾಲೋ ಬ್ರಾಹ್ಮಣ್ಯಂ ತೇನ ತೇ ಗತಂ ॥ ೯ ॥
ಏವಮುಕ್ತೋ ಮತಂಗಸ್ತು ಪಿತರಂ ವಾಕ್ಯಮಬ್ರವೀತ್ ।
ತಾತಾಶ್ಚರ್ಯಂ ಶ್ರುತಂ ಮೇಽದ್ಯ ಜಾತೋಽಹಂ ನಾಪಿತೇನ ವೈ ॥ ೧೦ ॥
ಗರ್ದಭ್ಯಾ ಕಥಿತಂ ಸಮ್ಯಕ್ತಸ್ಮಾತ್ತಪ್ಸ್ಯೇ ಮಹತ್ತಪಃ ।
ಏವಮುಕ್ತ್ವಾ ಸ ಪಿತರಂ ವಿತಸ್ಥೇ ಕೃತನಿಶ್ಚಯಃ ॥ ೧೧ ॥

---

ಮೈತ್ರಿಯೇ ಬ್ರಾಹ್ಮಣಧರ್ಮವೆಂದು ಹೇಳಲ್ಪಡುವುದು. ಪಾಪಿಯಾದ ಇವನು ಎಳೆಯ ಮರಿಯನ್ನು ನೋಯಿಸುತ್ತ ದಯಾರಹಿತನಾಗಿರುವನು.

೬. ಮನುಷ್ಯನು ಯಾವಾಗಲೂ ತನ್ನ ಪ್ರಕೃತಿಯನ್ನನುಸರಿಸಿಯೇ ನಡೆಯುವನಲ್ಲವೆ.'' ಇಂತೆಂದ ಹೆಣ್ಣುಕತ್ತೆಯ ನಿಷ್ಠುರಸಹಿತಗಳಾದ ಮಾತುಗಳನ್ನು ಮತಂಗನು ಕೇಳಿದನು.

೭. ಕೂಡಲೆ ಕೋಲನ್ನು ಬಿಸುಟು ಆ ಕತ್ತೆಯನ್ನು ಕುರಿತು ಹೇಳಿದನು. ''ಎಲೌ ಕತ್ತೆಯೆ ! ಸೌಭಾಗ್ಯವತಿಯಾದ ನನ್ನ ತಾಯಿಯು ಹೇಗೆ ದುಷ್ಟಳಾದಳೆಂಬುದನ್ನು ತಿಳಿಸು.

೮. ಉತ್ತಮಕುಲದಲ್ಲಿ ಹುಟ್ಟಿರುವ ನನ್ನನ್ನು ಚಂಡಾಲನೆಂದು ಹೇಗೆ ಕರೆಯುವೆ? ಯಾವ ಕಾರಣದಿಂದ ನಾನು ಬ್ರಾಹ್ಮಣ್ಯವನ್ನು ಕಳೆದುಕೊಂಡು ಚಂಡಾಲನಾದೆನು ?''

೯. ಹೆಣ್ಣುಕತ್ತೆಯು ಹೇಳುತ್ತದೆ:—''ವಿಚಾರಶೂನ್ಯನೂ, ನೀಚವೃತ್ತಿಯವನೂ ಆದ ನಾಪಿತನಿಂದ ಬ್ರಾಹ್ಮಣಸ್ತ್ರೀಯಲ್ಲಿ ನೀನು ಜನಿಸಿರುವೆ. ಆದುದರಿಂದಲೇ ನೀನು ಚಂಡಾಲನೆನಿಸಿ ಬ್ರಾಹ್ಮಣ್ಯವನ್ನು ಕಳೆದುಕೊಂಡಿರುವೆ.''

೧೦. ಇದನ್ನು ಕೇಳಿ ಮತಂಗನು ತಂದೆಯೊಡನೆ ಹೇಳಿದನು. ''ತಂದೆಯೆ ! ನಾನು ಇಂದೊಂದಾಶ್ಚರ್ಯವನ್ನು ಕೇಳಿದೆನು. ನಾನು ನಾಪಿತನ ಮಗನಾಗಿ ಹುಟ್ಟಿದವನಂತೆ.

೧೧. ಈ ಸಮಾಚಾರವನ್ನು ಕತ್ತೆಯು ವಿಸ್ತಾರವಾಗಿ ನನಗೆ ಹೇಳಿತು.

ಸ ಗತ್ವಾ ಚ ತತೋಽರಣ್ಯಮತಪ್ಯತ ಮಹತ್ತಪಃ ।
ತತಃ ಸಂತಾಪಯಾಮಾಸ ವಿಬುಧಾಂಸ್ತಪಸಾನ್ವಿತಃ ॥ ೧೨ ॥
ತಂ ತಥಾ ತಪಸಾ ಯುಕ್ತಮುವಾಚ ಹರಿವಾಹನಃ ।
ಮತಂಗ ತಪ್ಯಸೇ ಕಿಂ ತ್ವಂ ಭೋಗಾನುತ್ಸೃಜ್ಯ ಮಾನುಷಾನ್ ।
ವರಂ ದದಾಮಿ ತೇಽಹಂ ತಂ ವೃಣೀಷ್ವ ತ್ವಂ ಯದಿಚ್ಛಸಿ ॥ ೧೩ ॥

ಮತಂಗ ಉವಾಚ :—

ಬ್ರಾಹ್ಮಣ್ಯಂ ಕಾಮಯಾನೋಽಹಮಿದಮಾರಬ್ಧವಾಂಸ್ತಪಃ ।
ದೇಹಿ ಮೇ ಶಾಶ್ವತಂ ಶಕ್ರ ವರ ಏಷ ವೃತೋ ಮಯಾ ॥ ೧೪ ॥
ಏತಚ್ಛ್ರುತ್ವಾ ತು ವಚನಂ ತಮುವಾಚ ಪುರಂದರಃ ।
ಬ್ರಾಹ್ಮಣ್ಯಂ ಯಾಚಸೇ ತ್ವಂ ಹಿ ದುಷ್ಪ್ರಾಪಮಕೃತಾತ್ಮಭಿಃ ॥ ೧೫ ॥
ನಾಶಮೇಷ್ಯಸಿ ದುರ್ಬುದ್ಧೇ ತದುಪಾರಮ ಮಾ ಚಿರಂ ।
ಚಂಡಾಲಯೋನೌ ಜಾತೇನ ನ ತತ್ಪ್ರಾಪ್ಯಂ ಕಥಂಚನ ॥ ೧೬ ॥
ಏವಮುಕ್ತೋ ಮತಂಗಸ್ತು ಸಂಶಿತಾತ್ಮಾ ಯತವ್ರತಃ ।
ಅತಿಷ್ಠದೇಕಪಾದೇನ ವರ್ಷಾಣಾಂ ಶತಸಂಖ್ಯಯಾ ॥ ೧೭ ॥

---

ಆದುದರಿಂದ ನಾನು ಮಹಾತಪಸ್ಸನ್ನು ಮಾಡುತ್ತೇನೆ.'' ಇಂತೆಂದು ತಂದೆಗೆ ಹೇಳಿ ದೃಢಮನಸ್ಸಿನಿಂದ ಹೊರಟುಹೋದನು.

೧೨. ಬಳಿಕ ಆತನು ಅರಣ್ಯವನ್ನು ಪ್ರವೇಶಿಸಿ ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ತಪೋನಿರತನಾಗಿ ತನ್ನ ತೇಜಸ್ಸಿನಿಂದ ದೇವತೆಗಳನ್ನೂ ತಾಪಗೊಳಿಸುತಿದ್ದನು.

೧೩. ಇಂತು ತಪಸ್ಸಂಪನ್ನನಾಗಿದ್ದ ಆತನಿಗೆ ಮಹೇಂದ್ರನು ಹೇಳಿದನು. "ಮತಂಗ! ಮನುಷ್ಯಲೋಕದ ಭೋಗಗಳನ್ನೆಲ್ಲ ಕಡೆಗಂಡು ತಪಸ್ಸನ್ನೇಕೆ ಮಾಡುತ್ತಿರುವೆ? ನಿನಗೆ ಬೇಕಾದ ವರವನ್ನು ಕೇಳು, ಕೊಡುತ್ತೇನೆ.''

೧೪. ಮತಂಗನು ಹೇಳುತ್ತಾನೆ:—"ಓ ಮಹೇಂದ್ರ! ಬ್ರಾಹ್ಮಣ್ಯವನ್ನ ಪೇಕ್ಷಿಸಿ ನಾನು ಈ ತಪಸ್ಸನ್ನಾರಂಭಿಸಿರುವೆನು. ನನಗೆ ಶಾಶ್ವತವಾದ ಬ್ರಾಹ್ಮಣ್ಯ ವನ್ನು ಕೊಡು. ಇದನ್ನೇ ನಾನು ಬೇಡುತ್ತಿರುವೆನು.''

೧೫. ಈ ಮಾತನ್ನು ಕೇಳಿ ಮಹೇಂದ್ರನು ಅವನಿಗಿಂತೆಂದನು. "ನೀನು ಪುಣ್ಯಾತ್ಮರಲ್ಲದವರಿಗೆ ಅಪ್ರಾಪ್ಯವಾದ ಬ್ರಾಹ್ಮಣ್ಯವನ್ನು ಬೇಡುತ್ತಿರುವೆಯಲ್ಲವೆ.

೧೬. ಮೂಢ! ನೀನು ಖಂಡಿತವಾಗಿಯೂ ನಾಶವನ್ನು ಹೊಂದುವೆ. ಬೇಗನೆ ನಿನ್ನ ತಪಸ್ಸನ್ನು ಕೊನೆಗಾಣಿಸು. ಚಂಡಾಲಯೋನಿಯಲ್ಲಿ ಹುಟ್ಟಿದ ನಿನಗೆ ಬ್ರಾಹ್ಮಣ್ಯವೆಂದಿಗೂ ಲಭಿಸುವುದಿಲ್ಲ.''

೧೭. ಇಂತೆಂದು ಮಹೇಂದ್ರನು ಹೊರಟುಹೋಗಲು, ಮತಂಗನು ಪುನಃ

ತಮುವಾಚ ತತಃ ಶಕ್ರಃ ಪುನರೇವ ಮಹಾಯಶಾಃ ।
ಬ್ರಾಹ್ಮಣ್ಯಂ ದುರ್ಲಭಂ ವೀರ ಮಾ ಕೃಥಾಃ ಸಾಹಸಂ ವೃಥಾ ॥ ೧೮ ॥
ನ ಹಿ ಶಕ್ಯಂ ಪ್ರಾಪ್ತುಮೇವಮಚಿರಾನ್ನಾಶಮೇಷ್ಯಸಿ ।
ವೃಣು ತ್ವಂ ಕಾಮಮನ್ಯಂ ತ್ವಂ ಬ್ರಾಹ್ಮಣತ್ವಂ ಸುದುರ್ಲಭಂ ॥ ೧೯ ॥
ಏವಮುಕ್ತೋ ಮತಂಗಸ್ತು ಸಂಶಿತಾತ್ಮಾ ದೃಢವ್ರತಃ ।
ಸಹಸ್ರಮೇಕಂ ಪಾದೇನ ತತೋಽಬ್ದಾನಾಮವರ್ತತ ॥ ೨೦ ॥
ತದೇವ ಚ ಪುನರ್ವಾಕ್ಯಮುವಾಚ ಬಲವೃತ್ರಹಾ ।
ಚಂಡಾಲಯೋನೌ ಜಾತೇನ ನಾಽವಾಪ್ಯಂ ತೇ ಕಥಂಚನ ॥ ೨೧ ॥
ಅನ್ಯಂ ವರಂ ವೃಣೀಷ್ವ ತ್ವಂ ಮಾಕೃಥಾಸ್ತ್ವತ್ಸ್ವಯಂ ಶ್ರಮಂ ।
ಏವಮುಕ್ತೋ ಮತಂಗಸ್ತು ಭೃಶಂ ಶೋಕಪರಾಯಣಃ ॥ ೨೨ ॥
ಅತಿಷ್ಠತ ಗಯಾಂ ಗತ್ವಾ ಸೋಽಂಗುಷ್ಠೇನ ಶತಂ ಸಮಾಃ ।
ಸುದುಷ್ಕರಂ ವಹನ್ಯೋಗಂ ಪ್ರಾಣಾಯಾಮಪರಾಯಣಃ ॥ ೨೩ ॥

---

ಇಂದ್ರಿಯಸಂಯಮವನ್ನು ಮಾಡಿ ಏಕನಿಷ್ಠೆಯಿಂದ ಒಂದೇ ಕಾಲಿನಮೇಲೆ ನಿಂತು ಒಂದುನೂರು ವರ್ಷಗಳಕಾಲ ತಪಸ್ಸನ್ನು ಮಾಡಿದನು.

೧೮. ಆತನಿಗೆ ಮತ್ತೆ ಮಹೇಂದ್ರನು ಕಾಣಿಸಿಕೊಂಡು ಹೇಳಿದನು. "ಅಯ್ಯಾ ವೀರನೆ! ಬ್ರಾಹ್ಮಣ್ಯವೆಂಬುದು ಅತ್ಯಂತ ದುರ್ಲಭವು. ವ್ಯರ್ಥವಾದ ಈ ಸಾಹಸವನ್ನು ಮಾಡಬೇಡ.

೧೯. ಅದನ್ನು ಈ ರೀತಿಯಾಗಿ ಪಡೆಯಲು ಶಕ್ಯವೂ ಅಲ್ಲ. ನೀನು ಶೀಘ್ರವಾಗಿಯೇ ನಾಶವನ್ನು ಹೊಂದುವೆ. ಬೇರೆ ಯಾವ ವರವನ್ನಾದರೂ ಕೇಳಿಕೋ. ಬ್ರಾಹ್ಮಣ್ಯವಂತೂ ಲಭಿಸಲಾರದು."

೨೦. ಮಹೇಂದ್ರನಿಂತೆನ್ನಲು, ಮತಂಗನು ಮತ್ತೂ ಹೆಚ್ಚಿನ ನಿಯಮಗಳಿಂದ ಪುನಃ ಒಂದುಸಾವಿರ ವರ್ಷಗಳವರೆಗೂ ಒಂದೇ ಪಾದದ ಮೇಲೆ ನಿಂತು ತಪಸ್ಸನ್ನಾಚರಿಸಿದನು.

೨೧. ಬಲವೈರಿಯಾದ ಇಂದ್ರನು ಪುನಃ ಅವನ ಬಳಿಗೆ ಬಂದು ಆ ಮಾತನ್ನೇ ಹೇಳಿದನು. "ಚಂಡಾಲವಂಶದಲ್ಲಿ ಜನ್ಮವನ್ನು ತಾಳಿದ ನಿನಗೆ ಆ ಬ್ರಾಹ್ಮಣ್ಯವೆಂದಿಗೂ ದೊರೆಯಲಾರದು.

೨೨–೨೩. ಬೇರೆ ಯಾವುದಾದರೂ ವರವನ್ನು ಕೇಳು. ಸುಮ್ಮನೆ ಕ್ಲೇಶಗೊಳ್ಳಬೇಡ." ಇಂತೆಂದ ಮಹೇಂದ್ರನ ಮಾತಿಗೆ ಮತಂಗನು ಅತ್ಯಂತ ದುಃಖವನ್ನು ತಾಳಿದನು. ಬಳಿಕ ಗಯಾಕ್ಷೇತ್ರಕ್ಕೆ ಹೋಗಿ ಒಂದುಕಾಲಿನ ಹೆಬ್ಬೆಟ್ಟಿನಮೇಲೆಯೇ ನಿಂತು ನೂರುವರ್ಷಗಳಕಾಲ ತಪಸ್ಸನ್ನು ಮಾಡಿದನು. ಅಲ್ಲಿ ಅವನು ಅತ್ಯಂತ ದುಸ್ಸಾಧ್ಯವಾದ ಯೋಗವನ್ನಭ್ಯಾಸಮಾಡುತ್ತ ಪ್ರಾಣಾಯಾಮಪರಾಯಣನಾಗಿದ್ದನು.

ತ್ವಗಸ್ಥಿಭೂತೋ ಧರ್ಮಾತ್ಮಾ ತತಾಪ ಪರಮಂ ತಪಃ ।
ತಪಂತಂ ತಮಭಿದ್ರುತ್ಯ ಪರಿಜಗ್ರಾಹ ವಾಸವಃ ॥ ೨೪ ॥
ವರಾಣಾಮೀಶ್ವರೋ ದಾತಾ ಸರ್ವಭೂತಹಿತೇ ರತಃ ॥ ೨೫ ॥

ಶಕ್ರ ಉವಾಚ :—

ಮತಂಗ ಬ್ರಾಹ್ಮಣತ್ವಂ ಹಿ ವಿರುದ್ಧಮಿಹ ದೃಶ್ಯತೇ ।
ಬ್ರಾಹ್ಮಣ್ಯಂ ದುರ್ಲಭಂ ತಾತ ಹ್ಯಸತಾಂ ಪಾಪಶೀಲಿನಾಂ ॥ ೨೬ ॥
ಬ್ರಾಹ್ಮಣೇ ಸರ್ವಭೂತಾನಾಂ ಯೋಗಕ್ಷೇಮಃ ಸಮಾಹಿತಃ ।
ತದುತ್ಸೃಜ್ಯೇಹ ದುಷ್ಪ್ರಾಪ್ಯಂ ಬ್ರಾಹ್ಮಣ್ಯಮಕೃತಾತ್ಮಭಿಃ ॥ ೨೭ ॥
ಅನ್ಯಂ ವರಂ ವೃಣೀಷ್ವ ತ್ವಂ ದುರ್ಲಭೋಽಯಂ ಹಿ ತೇ ವರಃ ॥ ೨೮ ॥

ಮತಂಗ ಉವಾಚ :—

ಕಿಂ ಮಾಂ ತುದಸಿ ದುಃಖಾರ್ತಂ ಮೃತಂ ಮಾರಯಸೇ ಚ ಮಾಂ ।
ತಂ ತು ಶೋಚಾಮಿ ಯೋ ಲಬ್ಧ್ವಾ ಬ್ರಾಹ್ಮಣ್ಯಂ ನಾಽನುಪಾಲಯೇತ್ ॥
ಬ್ರಾಹ್ಮಣ್ಯಂ ಯದಿ ದುಷ್ಪ್ರಾಪ್ಯಂ ತ್ರಿಭಿರ್ವರ್ಣೈಃ ಶತಕ್ರತೋ ।
ತಪಸಾ ಚ ಕಥಂ ಲಬ್ಧಂ ವಿಶ್ವಾಮಿತ್ರೇಣ ಭೂಭುಜಾ ॥ ೩೦ ॥

---

೨೪–೨೫. ಎಲುಬು ಚರ್ಮಗಳು ಮಾತ್ರ ಉಳಿದಿರುವ ದೇಹದಿಂದ ಧರ್ಮ ನಿರತನಾಗಿ ಪರಮ ತಪಸ್ಸನ್ನು ಮಾಡುತ್ತಿದ್ದ ಆತನ ಬಳಿಗೆ ಮಹೇಂದ್ರನು ಮತ್ತೆ ಬಂದು ವರಪ್ರದರಲ್ಲಿ ಶ್ರೇಷ್ಠನೂ, ಸಕಲ ಭೂತಗಳಲ್ಲಿ ಅನುಕಂಪವುಳ್ಳವನೂ ಆದುದರಿಂದ ಆತನನ್ನು ಸತ್ಕರಿಸಿದನು.

೨೬. ಇಂದ್ರನು ಹೇಳುತ್ತಾನೆ:—"ಚಂಡಾಲನಿಗೆ ಬ್ರಾಹ್ಮಣ್ಯವೆಂಬುದು ಅತ್ಯಂತ ವಿರುದ್ಧವಾಗಿ ಕಾಣುವುದು. ಅಪ್ಪಾ! ಅಸತ್ಪುರುಷರೂ, ಪಾಪಕೃತ್ಯ ನಿರತರೂ ಆದವರಿಗೆ ಬ್ರಾಹ್ಮಣ್ಯವು ದುರ್ಲಭವು.

೨೭. ಬ್ರಾಹ್ಮಣನಲ್ಲಿಯೇ ಸಕಲ ಪ್ರಾಣಿಗಳ ಯೋಗಕ್ಷೇಮವು ಇಡಲ್ಪಟ್ಟಿರುವುದು. ಆದುದರಿಂದ ಅಕೃತಪುಣ್ಯರಾದವರಿಗೆ ದೊರಕಲಾರದ ಈ ಬ್ರಾಹ್ಮಣ್ಯದ ಆಶೆಯನ್ನು ಬಿಟ್ಟುಬಿಡು.

೨೮. ನೀನು ಬೇರೆ ವರವನ್ನು ಕೇಳಿಕೊ. ನೀನು ಕೇಳುವ ಈ ವರವು ನಿನಗೆ ಲಭಿಸಲಾರದು."

೨೯. ಮತಂಗನು ಹೇಳುತ್ತಾನೆ:—"ಎಲೈ ಮಹೇಂದ್ರನೇ! ದುಃಖದಿಂದ ಪರಿತಪಿಸುತ್ತಿರುವ ನನ್ನನ್ನು ಪುನಃ ಏಕೆ ನೋಯಿಸುತ್ತಿರುವೆ? ಸತ್ತಪನಂತಿರುವ ನನ್ನನ್ನು ಹೊಡೆಯಬೇಕೆ? ಯಾವನು ಬ್ರಾಹ್ಮಣ್ಯವನ್ನು ಪಡೆದರೂ ಪಾಲಿಸಲಾರನೊ, ಅವನಿಗಾಗಿ ಶೋಕಪಡುತ್ತೇನೆ.

೩೦. ಮಹೇಂದ್ರ! ಇತರ ಮೂರು ವರ್ಣಗಳವರಿಗೆ ಬ್ರಾಹ್ಮಣ್ಯವು

ವೀತಹವ್ಯಶ್ಚ ರಾಜರ್ಷಿಸ್ತಪಸಾ ವಿಪ್ರತಾಂ ಗತಃ ।
ತಸ್ಮಾತ್ತಪಃ ಕರಿಷ್ಯಾಮಿ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥ ೩೮ ॥
ಅಹಿಂಸಾದಮಸತ್ಯಸ್ಥಃ ಕಥಂ ನಾಽರ್ಹಾಮಿ ವಿಪ್ರತಾಂ ।
ದೇವೇಶ ಕೃತಮೇತದ್ಧಿ ಯದ್ಯಹಂ ಮಾತೃದೋಷತಃ ॥ ೩೯ ॥
ಏತಾಮವಸ್ಥಾಂ ಸಂಪ್ರಾಪ್ತೋ ದೈವಯೋಗಾತ್ಪುರಂದರ ।
ನೂನಂ ದೈವಂ ನ ಶಕ್ಯಂ ತು ಪೌರುಷೇಣ ನಿವರ್ತಿತುಂ ॥ ೪೦ ॥
ಯದಹಂ ಯತ್ನವಾನೇವಂ ನ ಲಭೇ ವಿಪ್ರತಾಂ ವಿಭೋ ।
ಏವಂ ಜ್ಞಾತ್ವಾ ತು ದೇವೇಶ ದಾತುಮರ್ಹಸಿ ಮೇ ವರಂ ॥ ೪೧ ॥
ಯದಿ ತೇಽಹಮನುಗ್ರಾಹ್ಯಃ ಕಿಂಚಿದ್ವಾ ಸುಕೃತಂ ಮಮ ।
ತದುಪಾಯಂ ಹಿ ಮೇ ಶಂಸ ಕಥಂ ವಿಪ್ರೋ ಭವಾಮಿ ವೈ ॥ ೪೨ ॥
ಯಥಾ ಮಮಾಕ್ಷಯಾ ಕೀರ್ತಿರ್ಭವೇದ್ವಾಽಪಿ ಪುರಂದರ ।
ಕರ್ತುಮರ್ಹಸಿ ತದ್ದೇವ ಶಿರಸಾ ತ್ವಾಂ ಪ್ರಸಾದಯೇ ॥ ೪೩ ॥

---

ಅಪ್ರಾಪ್ಯವೆಂದು ಹೇಳಿದೆ. ಹಾಗಾದರೆ ಭೂಪಾಲಕನಾದ ವಿಶ್ವಾಮಿತ್ರನು ತಪಸ್ಸಿನಿಂದಲೇ ಅದನ್ನು ಹೇಗೆ ಸಂಪಾದಿಸಿದನು?

೩೮. ರಾಜರ್ಷಿಯಾದ ವೀತಹವ್ಯನೆಂಬವನು ಸಹ ಬ್ರಾಹ್ಮಣನಾದನಲ್ಲವೆ! ಆದುದರಿಂದ ನಾನೂ ದ್ವಂದ್ವಸಹಿಷ್ಣುವೂ, ನಿಷ್ಪರಿಗ್ರಹನೂ ಆಗಿ ತಪಸ್ಸನ್ನಾಚರಿಸುವೆನು.

೩೯. ಅಹಿಂಸೆ, ಇಂದ್ರಿಯನಿಗ್ರಹ ಮತ್ತು ಸತ್ತ್ವಗುಣಗಳಿಂದೊಡಗೂಡಿರುವ ನಾನು ಬ್ರಾಹ್ಮಣ್ಯಕ್ಕೆ ಹೇಗೆ ಅರ್ಹನಲ್ಲ? ನನ್ನ ತಾಯಿಯು ದೋಷಯುಕ್ತಳಾಗಿದ್ದುದು ದೈವಚೇಷ್ಟಿತವೇ ಆಗಿರಬೇಕು.

೪೦–೪೧. ಇಂದ್ರನೆ! ನಾನೂ ದೈವಯೋಗದಿಂದಲೇ ಇಂತಹ ಅವಸ್ಥೆಯನ್ನು ಹೊಂದಿರುವೆನು. ದೈವಬಲವನ್ನು ಪೌರುಷಮಾತ್ರದಿಂದ ಜಯಿಸಲು ಶಕ್ಯವಲ್ಲವಷ್ಟೆ. ಆದುದರಿಂದಲೇ ನಾನು ಇಷ್ಟು ಪ್ರಯತ್ನವನ್ನು ಮಾಡಿದರೂ ಬ್ರಾಹ್ಮಣ್ಯವನ್ನು ಹೊಂದಲಿಲ್ಲ. ಲೋಕೇಶ್ವರನೆ! ಇದನ್ನೆಲ್ಲ ತಿಳಿದ ನೀನು ನನಗೆ ವರವನ್ನು ಕೊಡಲು ಅರ್ಹನಾಗಿರುವೆ.

೪೨. ನಿನ್ನ ಅನುಗ್ರಹಕ್ಕೆ ನಾನು ಪಾತ್ರನಾಗಿದ್ದರೆ, ನನ್ನಲ್ಲಿ ಏನಾದರೂ ಸುಕೃತಪರಿಪಾಕವಿದ್ದರೆ ನಾನು ಈಗ ಹೇಗೆ ಬ್ರಾಹ್ಮಣನಾಗುವೆನೆಂಬುದಕ್ಕೆ ಉಪಾಯವನ್ನು ತಿಳಿಸು.

೪೩. ಪುರಂದರನೆ! ನನಗೆ ಮುಂದೆ ಶಾಶ್ವತವಾದ ಕೀರ್ತಿಯು ಲಭಿಸುವಂತೆ ನೀನು ಮಾಡಬೇಕೆಂದು ಬೇಡಿ ತಲೆಬಾಗಿ ನಿನ್ನನ್ನು ಪ್ರಸನ್ನೀಕರಿಸಿಕೊಳ್ಳುತ್ತಿರುವೆನು."

ಇತ್ಯುಕ್ತೋ ಹಿ ಮತಂಗೇನ ವಾಸವೋ ಬಲವೃತ್ರಹಾ ।
ಕಥಯಾಮಾಸ ಸಂತುಷ್ಟೋ ಲಿಂಗಮಾಹಾತ್ಮ್ಯಮುತ್ತಮಂ ॥ ೩೭ ॥
ಇಂದ್ರ ಉವಾಚ:—
ಮಹಾಕಾಲವನೇ ಲಿಂಗಂ ಸ್ಥಾಪಿತಂ ಬ್ರಹ್ಮಣಾ ಪುರಾ ।
ದಿವ್ಯಮೂರ್ತಿಧರಂ ದಿವ್ಯಂ ಶ್ರೀಸಿದ್ಧೇಶ್ವರಪೂರ್ವತಃ ॥ ೩೮ ॥
ತಸ್ಯ ದರ್ಶನಮಾತ್ರೇಣ ವಿಪ್ರತ್ವಂ ಸಮವಾಪ್ಸ್ಯಸಿ ।
ವಾಸವಸ್ಯ ಚ ವಾಕ್ಯೇನ ಮತಂಗೋ ಗತವಾಂಸ್ತದಾ ॥ ೩೯ ॥
ಮಹಾಕಾಲವನಂ ರಮ್ಯಂ ಸಿದ್ಧಕ್ಷೇತ್ರಮಥಾಪರಂ ।
ದದರ್ಶ ತತ್ರ ತಲ್ಲಿಂಗಮಶೇಷಫಲದಾಯಕಂ ॥ ೪೦ ॥
ದೃಷ್ಟ್ವಾ ಸಂಪೂಜಯಾಮಾಸ ಪುಷ್ಪೈರ್ನಾನಾವಿಧೈಸ್ತಥಾ ।
ಪೂಜಿತಃ ಪ್ರತ್ಯುವಾಚೇದಂ ಮತಂಗಂ ದೇವಸತ್ತಮಃ ॥ ೪೧ ॥
ಅಹೋ ಮಹಾನ್‌ಸಭಾಗ್ಯೋಽಸಿ ಯಸ್ತ್ವಯಾ ತೋಷಿತೋಽಸ್ಮ್ಯಹಂ ।
ಮತ್ತಃ ಸರ್ವಂ ಸಮುದ್ಭೂತಂ ಬ್ರಹ್ಮಾಂಡಂ ಭೂರ್ಭುವಾದಿಕಂ ॥ ೪೨ ॥

---

೩೭. ಇಂತೆಂದ ಮತಂಗನ ಮಾತನ್ನು ಕೇಳಿ ಬಲವೃತ್ರಾದಿ ರಾಕ್ಷಸ ವೈರಿಯಾದ ಮಹೇಂದ್ರನು ಸಂತೋಷಗೊಂಡು ಉತ್ತಮವಾದ ಆ ಲಿಂಗದ ಮಾಹಾತ್ಮ್ಯವನ್ನು ಹೇಳಲುಪಕ್ರಮಿಸಿದನು.

೩೮. ಇಂದ್ರನು ಹೇಳುತ್ತಾನೆ:—"ಅಯ್ಯಾ ಮತಂಗನೆ! ಮಹಾಕಾಲ ವನದಲ್ಲಿ ದಿವ್ಯರೂಪವನ್ನು ಧರಿಸಿರುವ ಮಹಾಲಿಂಗವೊಂದನ್ನು ಚತುರ್ಮುಖ ಬ್ರಹ್ಮನು ಸಿದ್ಧೇಶ್ವರನಿಗೆ ಪೂರ್ವದಿಕ್ಕಿನಲ್ಲಿ ಸ್ಥಾಪಿಸಿರುವನು.

೩೯. ಅದನ್ನು ನೋಡುವ ಮಾತ್ರದಿಂದಲೇ ನೀನು ವಿಪ್ರತ್ವವನ್ನು ಪಡೆಯುವೆ." ಮಹೇಂದ್ರನ ಈ ಮಾತನ್ನು ಕೇಳಿ ಮತಂಗನು ಆ ಕ್ಷೇತ್ರಕ್ಕೆ ಹೋದನು.

೪೦. ಪರಾತ್ಪರವಾದ ಸಿದ್ಧಕ್ಷೇತ್ರವೆನಿಸಿದ ರಮ್ಯವಾದ ಮಹಾಕಾಲವನ ಕ್ಷೇತ್ರಕ್ಕೆ ಬಂದು ಆತನು ಸರ್ವಾಭೀಷ್ಟಪ್ರದಾಯಕವಾದ ಆ ಲಿಂಗವನ್ನು ಕಂಡನು.

೪೧. ಅನೇಕ ವಿಧಗಳಾದ ಪುಷ್ಪಗಳಿಂದ ಭಕ್ತಿಭರಿತನಾಗಿ ಪೂಜೆಯನ್ನು ಮಾಡಲು ಸಂತುಷ್ಟನಾದ ಮಹಾದೇವನು ಆ ಮತಂಗನಿಗೆ ಹೇಳಿದನು.

೪೨. "ಎಲೈ ಮತಂಗನೇ! ನನ್ನನ್ನು ಸಂತೋಷಗೊಳಿಸಿರುವುದರಿಂದ ನೀನು ಮಾಹಾತ್ಮನೂ, ಸಕಲೈಶ್ವರ್ಯಾನ್ವಿತನೂ ಆಗಿರುವೆ. ನನ್ನಿಂದಲೇ ಭೂರ್ಭುವರಾದಿ ಹದಿನಾಲ್ಕು ಲೋಕಗಳನ್ನೊಳಗೊಂಡ ಸಮಸ್ತ ಬ್ರಹ್ಮಾಂಡವೂ ಹುಟ್ಟಿರುವುದು.

ವರದೋಽಸ್ಮಿ ವರಾರ್ಹಾಣಾಂ ಶಾಪದೋಽಸ್ಮಿ ದುರಾತ್ಮನಾಂ ।
ಬ್ರಾಹ್ಮಣ್ಯಂ ಮತ್ಪ್ರಸಾದಾಚ್ಚ ಅಕ್ಷಯಂ ತೇ ಭವಿಷ್ಯತಿ ॥ ೪೩ ॥
ತತೋಽಸೌ ವಿಪ್ರತಾಂ ಯಾತೋ ಮತಂಗೋ ಲಿಂಗದರ್ಶನಾತ್ ।
ಪುನಃ ಪೂಜಾಪ್ರಭಾವೇಣ ಬ್ರಹ್ಮಲೋಕಂ ಗತೋ ದ್ವಿಜಃ ॥ ೪೪ ॥
ಬ್ರಾಹ್ಮಣ್ಯಂ ದುರ್ಲಭಂ ಲಬ್ಧಂ ಲಿಂಗಸ್ಯಾಽಸ್ಯ ಪ್ರಭಾವತಃ ।
ಮತಂಗೇನ ವರಾರೋಹೇ ತಸ್ಮಾದ್ದೇವೋ ವಿಗೀಯತೇ ॥ ೪೫ ॥
ಮತಂಗೇಶ್ವರಕೋ ಲೋಕೇ ಬ್ರಹ್ಮಲೋಕಪ್ರದಾಯಕಃ ।
ವರ್ಣಾಶ್ರಮೇಷು ವಿದ್ವಿಷ್ಟಾಃ ಪಾಷಂಡವಚನೇ ರತಾಃ ॥ ೪೬ ॥
ನಿರ್ಮರ್ಯಾದಾ ದುರಾಚಾರಾ ನಿಃಶಂಕಾಶ್ಚಾಽತಿಲೋಲುಪಾಃ ।
ನಿರ್ಘೃಣಾಃ ಕ್ರೂರಕರ್ಮಾಣೋ ಧೃಷ್ಟಾಃ ಕಲಿಯುಗೇ ನರಾಃ ।
ದರ್ಶನಾತ್ತಸ್ಯ ಲಿಂಗಸ್ಯ ತೇಽಪಿ ಯಾಂತಿ ತ್ರಿವಿಷ್ಟಪಂ ॥ ೪೭ ॥
ಯೇ ವಿಶುದ್ಧಾ ಮಹಾಭಾಗಾ ಧ್ಯಾನಿನೋ ಮುಕ್ತಿಭಾಗಿನಃ ।
ತೇ ಪಶ್ಯಂತಿ ಕಲೌ ದೇವಿ ಮತಂಗೇಶ್ವರಮೀಶ್ವರಂ ॥ ೪೮ ॥

---

೪೩. ವರಗಳಿಗೆ ಅರ್ಹರಾದವರಿಗೆ ನಾನು ವರಪ್ರದನೂ, ದುರಾತ್ಮರಾದವರಿಗೆ ಶಾಪವನ್ನು ಕೊಡುವವನೂ ಆಗಿರುವೆನು. ನಿನಗೆ ಶಾಶ್ವತವಾದ ಬ್ರಾಹ್ಮಣ್ಯವೂ, ನನ್ನ ಅನುಗ್ರಹವೂ ಲಭಿಸುವುವು.''

೪೪. ಆ ಲಿಂಗದ ದರ್ಶನದಿಂದ ಲಭಿಸಿದ ಪುಣ್ಯದಿಂದ ಮತಂಗನು ಬ್ರಾಹ್ಮಣ್ಯವನ್ನು ತಾಳಿದನು. ಬಳಿಕಲೂ ಪೂಜೆಯನ್ನು ಮಾಡಿದುದರ ಫಲವಾಗಿ ಬ್ರಹ್ಮಲೋಕವನ್ನೂ ಸೇರಿದನು.

೪೫. ಸುಂದರಿ ! ಚಂಡಾಲನೂ ಈ ಲಿಂಗದ ಮಾಹಾತ್ಮ್ಯದಿಂದ ಅತ್ಯಂತ ದುರ್ಲಭವಾದ ಬ್ರಾಹ್ಮಣ್ಯವನ್ನು ಪಡೆದನು. ಆದುದರಿಂದ ಈ ಮಹಾಲಿಂಗವನ್ನು ಬಹಳವಾಗಿ ಹೊಗಳುವರು.

೪೬–೪೭. ಲೋಕದಲ್ಲಿ ಮತಂಗೇಶ್ವರನೆಂದು ಪ್ರಖ್ಯಾತವಾದ ಈ ಲಿಂಗವು ಬ್ರಹ್ಮಲೋಕಪ್ರದವಾಗಿರುವುದು. ವರ್ಣಾಶ್ರಮಧರ್ಮಗಳಲ್ಲಿ ನಿಂದಿತರಾದವರೂ, ಪಾಷಂಡಿಗಳ ಮಾತುಗಳಲ್ಲಿ ಶ್ರದ್ಧೆಯುಳ್ಳವರೂ, ಲೌಕಿಕ ಮರ್ಯಾದೆಗಳನ್ನು ಮೀರಿದವರೂ, ಆಚಾರಹೀನರೂ, ನಿರ್ಭಯರೂ, ಇಂದ್ರಿಯಲೋಲುಪರೂ, ದಯಾಹೀನರೂ, ಕ್ರೂರಕರ್ಮಿಗಳೂ, ಧೃಷ್ಟರೂ ಆಗಿ ಕಲಿಯುಗದಲ್ಲಿ ಹುಟ್ಟುವ ಮಾನವರೂ ಈ ಲಿಂಗದ ದರ್ಶನದಿಂದ ಸ್ವರ್ಗವನ್ನು ಸೇರುವರು.

೪೮. ದೇವಿಯೆ ! ಯಾರು ಪರಿಶುದ್ಧರೊ, ಮಹಾತ್ಮರೊ, ಧ್ಯಾನಪರಾಯಣರೊ, ಮೋಕ್ಷಕ್ಕೆ ಅಧಿಕಾರಿಗಳೊ, ಅವರು ಮಾತ್ರ ಕಲಿಯುಗದಲ್ಲಿ ಮತಂಗೇಶ್ವರಮಹಾಲಿಂಗವನ್ನು ನೋಡುವರು.

ಬ್ರಹ್ಮಧ್ಯಾನಪರಾ ಯೇ ಚ ಯಜ್ಞದಾನಕ್ರಿಯಾರತಾಃ ।
ತೇ ಪಶ್ಯಂತಿ ಕಲೌ ದೇವಿ ಮತಂಗೇಶ್ವರಮೀಶ್ವರಂ ॥ ೪೯ ॥
ಯೇಽರ್ಚಯಂತಿ ಮಹಾದೇವಿ ಮತಂಗೇಶ್ವರಮೀಶ್ವರಂ ।
ಕೃತಪುಣ್ಯಾ ನರಾ ಮರ್ತ್ಯೇ ತೇಷಾಂ ವಾಸೋಽಕ್ಷಯೋ ದಿವಿ ॥ ೫೦ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಮತಂಗೇಶ್ವರದೇವಸ್ಯ ಶೃಣು ಸೌಭಾಗ್ಯಮೀಶ್ವರಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಮತಂಗೇಶ್ವರಮಾಹಾತ್ಮ್ಯವರ್ಣನಂ"ನಾಮ ಷಷ್ಟಿತಮೋಽಧ್ಯಾಯಃ

---

೪೯. ಮಹೇಶ್ವರಿಯೆ! ಯಾರು ಬ್ರಾಹ್ಮಣನಿಷ್ಠರಾಗಿರುವರೊ ಅಥವಾ ಯಜ್ಞದಾನಾದಿ ಸತ್ಕರ್ಮಗಳಲ್ಲಿ ಶ್ರದ್ಧೆಯುಳ್ಳವರಾಗಿರುವರೊ, ಅವರಿಗೆ ಮಾತ್ರ ಕಲಿಯುಗದಲ್ಲಿ ಮತಂಗೇಶ್ವರನ ದರ್ಶನವು ಲಭಿಸುವುದು.

೫೦. ಪಾರ್ವತಿಯೆ! ಯಾರು ಮತಂಗೇಶ್ವರನನ್ನು ಪೂಜಿಸುವರೊ, ಅವರೇ ಭೂಲೋಕದಲ್ಲಿ ಪುಣ್ಯವಂತರು. ಅವರಿಗೆ ಸ್ವರ್ಗಲೋಕದಲ್ಲಿ ಶಾಶ್ವತವಾದ ಸ್ಥಾನವಿರುವುದು.

೫೧. ದೇವಿಯೆ! ಇಂತು ನಿನಗೆ ಮತಂಗೇಶ್ವರಮಹಾಲಿಂಗದ ಪರಮ ಪವಿತ್ರವಾದ ಮಾಹಾತ್ಮ್ಯವನ್ನು ನಿರೂಪಿಸಿರುವೆನು. ಇನ್ನು ಸೌಭಾಗ್ಯೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಮತಂಗೇಶ್ವರಮಹಾತ್ಮ್ಯವರ್ಣನ"ವೆಂಬ
ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಷಷ್ಟಿತಮೋಽಧ್ಯಾಯಃ

### ಸೌಭಾಗ್ಯೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಏಕಷಷ್ಟಿತಮಂ ವಿದ್ಧಿ ಸೌಭಾಗ್ಯೇಶ್ವರಮೀಶ್ವರಂ ।
ಯಸ್ಯ ದರ್ಶನಮಾತ್ರೇಣ ಸೌಭಾಗ್ಯಮತುಲಂ ಲಭೇತ್ ॥ ೧ ॥
ಪ್ರಥಮೇ ಪ್ರಾಕೃತೇ ಕಲ್ಪೇ ರಾಜಾಽಭೂದಶ್ವವಾಹನಃ ।
ಪ್ರಾಗ್ಜ್ಯೋತಿಷಪುರೇ ರಮ್ಯೇ ಧರ್ಮಾತ್ಮಾ ಕೀರ್ತಿವರ್ಧನಃ ॥ ೨ ॥
ಅನೇಕ ಯಜ್ಞಕೃತ್ಪ್ರಾಜ್ಞಃ ಸಂಗ್ರಾಮೇಷ್ವಪರಾಜಿತಃ ।
ತಸ್ಯ ಭಾರ್ಯಾ ವಿಶಾಲಾಕ್ಷಿ ನಾಮ್ನಾ ಮದನಮಂಜರೀ ॥ ೩ ॥
ಕಾಶಿರಾಜಸುತಾ ಸುಭ್ರೂ ರೂಪೇಣಾತೀವ ಶೋಭನಾ ।
ದಕ್ಷಾ ಸುಶೀಲಾ ಧರ್ಮಿಷ್ಠಾ ಗೃಹವ್ಯಾಪಾರಕೋವಿದಾ ॥ ೪ ॥
ಚತುಃಷಷ್ಟಿಕಲಾಯುಕ್ತಾ ಸದಾ ಭರ್ತೃಹಿತೇ ರತಾ ।
ಪೂರ್ಣೇಂದುವದನಾ ಸೌಮ್ಯಾ ಸದಾ ಮಧುರಭಾಷಿಣೀ ॥ ೫ ॥

---

### ಕನ್ನಡದ ಅನುವಾದ

#### ಸೌಭಾಗ್ಯೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:— ಸೌಭಾಗ್ಯೇಶ್ವರವೆಂಬ ಮಹಾಲಿಂಗವೇ ಅರುವತ್ತೊಂದನೆಯದೆಂದು ತಿಳಿ. ಇದನ್ನು ನೋಡುವುದರಿಂದಲೇ ಅಪರಿಮಿತಸೌಭಾಗ್ಯವು ಲಭಿಸುವುದು.

೨. ಮೊದಲನೆಯ ಪ್ರಾಕೃತಕಲ್ಪದಲ್ಲಿ ಪ್ರಾಗ್ಜ್ಯೋತಿಷವೆಂಬ ರಾಜಧಾನಿಯಲ್ಲಿ ಧರ್ಮಾತ್ಮನೂ, ಮಹಾ ಕೀರ್ತಿಸಂಪನ್ನನೂ ಆದ ಅಶ್ವವಾಹನನೆಂಬ ಚಕ್ರವರ್ತಿಯಿದ್ದನು.

೩. ಅನೇಕ ಯಜ್ಞಗಳನ್ನು ಮಾಡಿದವನೂ, ಮಹಾ ಬುದ್ಧಿಶಾಲಿಯೂ, ಯುದ್ಧದಲ್ಲಿ ಸೋಲನ್ನು ಕಾಣದವನೂ ಆದ ಆ ರಾಜೇಂದ್ರನಿಗೆ ಮದನಮಂಜರಿಯೆಂಬ ಹೆಸರಿನ ರಾಣಿಯಿದ್ದಳು.

೪. ಕಾಶಿರಾಜನ ಮಗಳಾದ ಆಕೆಯು ಸುಂದರಮುಖಿಯೂ, ಅತಿ ಮನೋಹರರೂಪಳೂ, ಕಾರ್ಯದಕ್ಷೆಯೂ, ಸೌಶೀಲ್ಯಾದಿ ಗುಣಭರಿತಳೂ, ಧರ್ಮನಿರತಳೂ, ಗೃಹಕೃತ್ಯಗಳಲ್ಲಿ ವಿಚಕ್ಷಣೆಯೂ ಆಗಿದ್ದಳು.

೫. ಅರುವತ್ತನಾಲ್ಕು ಕಲೆಗಳಲ್ಲಿ ಪಂಡಿತೆಯಾಗಿದ್ದರೂ ನಿತ್ಯವೂ ಗಂಡನ ಹಿತದಲ್ಲಿಯೇ ಅನುರಕ್ತಳೂ, ಪೂರ್ಣಚಂದ್ರನನ್ನು ಹೋಲುವ ಮುಖದವಳೂ,

ಪೂರ್ವಕರ್ಮವಶಾದ್ದೇವಿ ದುರ್ಭಗಾ ಸಮಜಾಯತ ।
ಸಾ ನೇಷ್ಟಾ ತಸ್ಯ ನೃಪತೇರ್ನೇತ್ರೋದ್ವೇಗಕರೀ ಸದಾ ॥ ೬ ॥
ಶ್ರೋತ್ರೋದ್ವೇಗಕರಂ ವಾಕ್ಯಂ ತಸ್ಯ ರಾಜ್ಞಃ ಕರೋತಿ ಸಾ ।
ದದಾಹ ಲೋಚನೇ ರಾಜ್ಞಸ್ತಸ್ಯಾಃ ಸಂದರ್ಶನಂ ಸದಾ ॥ ೭ ॥
ಮೂರ್ಛಾಂ ಪ್ರಾಪ್ನೋತ್ಯಸಹ್ಯಾಂ ಸ ತಸ್ಯಾಃ ಸ್ಪರ್ಶೇನ ಭೂಪತಿಃ ।
ಕದಾ ಚಾಲೋಕಿತೋ ರಾಜಾ ತಯಾ ಪ್ರೇಮ್ಣಾ ವರಾನನೇ ।
ದಹ್ಯಮಾನೋಽತಿತೀವ್ರೇಣ ವಹ್ನಿನಾ ವಾಕ್ಯಮಬ್ರವೀತ್ ॥ ೮ ॥
ದ್ವಾಃಸ್ಥೈತಾಂ ದುರ್ಭಗಾಂ ಭಾರ್ಯಾಮಾದಾಯ ವಿಪಿನೇ ವನೇ ।
ಪರಿತ್ಯಜಾಶು ನೈತತ್ತೇ ವಿಚಾರ್ಯಂ ವಚನಂ ಮಮ ॥ ೯ ॥
ತತೋ ನೃಪಸ್ಯ ವಚನಮವಿಚಾರ್ಯಮವೇಕ್ಷ್ಯ ಸಃ ।
ದ್ವಾಃಸ್ಥಸ್ತತ್ಯಾಜ ತಾಂ ಸುಭ್ರೂಮಾರೋಪ್ಯಸ್ಯಂದನಂ ವನೇ ॥ ೧೦ ॥
ಸಾ ಚ ತ್ಯಕ್ತಾ ವನೇ ಶೂನ್ಯೇ ರುದತೀ ಚ ಮುಹುರ್ಮುಹುಃ ।
ಸಸ್ಮಾರ ತಂ ಮಹೀಪಾಲಂ ತಮಮನ್ಯತ ದೈವತಂ ॥ ೧೧ ॥

---

ಸಾಧುಸ್ವಭಾವದವಳೂ, ಯಾವಾಗಲೂ ಮೃದುವಾಕ್ಯಗಳನ್ನಾಡುವವಳೂ ಆಗಿದ್ದಳು.

೬. ದೇವಿಯೆ! ಆದರೂ ಪೂರ್ವಕರ್ಮವಶದಿಂದ ಆಕೆಯು ದೌರ್ಭಾಗ್ಯವಂತಳಾಗಿದ್ದಳು. ಅವಳು ಮಹಾರಾಜನಿಗೆ ಇಷ್ಟವಿಲ್ಲದವಳೂ, ಕಣ್ಣುಗಳಿಗೆ ಬೇನೆಯನ್ನುಂಟುಮಾಡುವವಳೂ ಆದಳು.

೭. ಆಕೆಯಾಡಿದ ಮಾತೆಲ್ಲವೂ ರಾಜನ ಕಿವಿಗಳಿಗೆ ಉದ್ವೇಗವನ್ನುಂಟು ಮಾಡುತ್ತಿದ್ದಿತು. ಆಕೆಯನ್ನು ನೋಡುವ ಮಾತ್ರದಿಂದಲೇ ಆತನ ಕಣ್ಣುಗಳು ಉರಿಯುತ್ತಿದ್ದುವು.

೮. ಆಕೆಯನ್ನು ಸ್ಪರ್ಶಮಾಡುವುದರಿಂದಲೇ ಆ ರಾಜನಿಗೆ ಸಹಿಸಲಾರದ ಮೂರ್ಛೆಯುಂಟಾಗುತ್ತಿದ್ದಿತು. ಒಮ್ಮೆ ಆಕೆಯು ಆತನನ್ನು ಪ್ರೀತಿಯ ನೋಟದಿಂದ ನೋಡಲು ಅತಿ ತೀವ್ರವಾದ ಕೋಪಾಗ್ನಿಯಿಂದ ಆತನು ಹೇಳಿದನು.

೯. "ದ್ವಾರಪಾಲಕನೆ! ದರಿದ್ರಳಾದ ನನ್ನ ಈ ಹೆಂಡತಿಯನ್ನು ಕರೆದುಕೊಂಡುಹೋಗಿ ಘೋರವಾದ ಅರಣ್ಯದಲ್ಲಿ ಬಿಟ್ಟು ಬಾ, ಈ ನನ್ನ ಅಪ್ಪಣೆಯ ವಿಷಯದಲ್ಲಿ ವಿಚಾರಮಾಡಬೇಡ."

೧೦. ಇಂತು, ರಾಜಾಜ್ಞೆಯು ಅನುಲ್ಲಂಘ್ಯವೆಂಬುದನ್ನು ತಿಳಿದ ಆ ರಾಜಸೇವಕನು ಆಕೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಕಾಡಿನಲ್ಲಿ ತ್ಯಜಿಸಿ ಬಂದನು.

೧೧. ಆಕೆಯಾದರೊ ನಿರ್ಜನವಾದ ಅರಣ್ಯದಲ್ಲಿ ಏಕಾಕಿನಿಯಾಗಿ ಸಂಚರಿ

ಅಥ ಸಾ ಚಾರುಸರ್ವಾಂಗೀ ತತ್ರಾಸಕ್ತಾತ್ಮಮಾನಸಾ ।
ನಿಶ್ವಾಸಪರಮಾ ನಿನ್ಯೇ ದಿನಶೇಷಂ ತಥಾ ನಿಶಾಂ ॥ ೧೨ ॥
ನಿಶ್ವಸಂತ್ಯನವದ್ಯಾಂಗೀ ಹಾಹೇತಿ ರುದತೀ ಮುಹುಃ ।
ಮಂದಭಾಗ್ಯೇತಿ ಚಾತ್ಮಾನಂ ನಿನಿಂದ ಮದಿರೇಕ್ಷಣಾ ॥ ೧೩ ॥
ನ ವಿಹಾರೇ ನ ಚಾಹಾರೇ ರಮಣೀಯೇ ನ ತದ್ವನೇ ।
ನ ಕಂದರೇಷು ಶೈಲಾನಾಂ ಸಾ ಬಬಂಧ ತದಾ ರತಿಂ ।
ತ್ಯಕ್ತಾ ತೇನ ವರಾರೋಹೇ ನಿನಿಂದ ನಿಜಯೌವನಂ ॥ ೧೪ ॥
ದುರ್ಭಗಾಽಹಂ ಕ್ವ ಜಾತಾಽತ್ರ ದುಷ್ಟದೈವವಶೀಕೃತಾ ।
ಕಥಂ ಪ್ರಾಪ್ತಃ ಸ ಮೇ ಭರ್ತಾ ತಾದೃಶೋ ನೃಪಸತ್ತಮಃ ॥ ೧೫ ॥
ಧನ್ಯೋಽಯಮತಿಪುಣ್ಯೋಽಯಂ ಯೋಽಯಂ ಯೌವನಗೋಚರಃ ।
ಅನ್ಯಾಸಾಮಸತೀನಾಂ ಚ ರಮಿಷ್ಯತಿ ನ ಸಂಶಯಃ ॥ ೧೬ ॥
ಅಭೀಷ್ಟಾ ಕಸ್ಯಚಿತ್ಕಾಂತಾ ಕಾಂತಃ ಕಸ್ಯಾಪಿ ದೀಪ್ಸಿತಃ ।
ಪರಸ್ಪರಾನುರಾಗಾಢ್ಯಂ ದಾಂಪತ್ಯಮತಿದುರ್ಲಭಂ ॥ ೧೭ ॥

---

ಸುತ್ತ ಮತ್ತೆ ಮತ್ತೆ ರೋಧಿಸುತ್ತ ಮಹಾರಾಜನೇ ತನ್ನ ದೈವವೆಂದು ತಿಳಿದು ಆತನನ್ನೇ ಸ್ಮರಿಸುತ್ತಿದ್ದಳು.

೧೨. ಸರ್ವಾಂಗಸುಂದರಿಯಾದ ಆಕೆಯು ಆತನಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿ ನಿಟ್ಟುಸಿರುಗಳನ್ನು ಬಿಡುತ್ತ ಆ ದಿವಸವನ್ನೂ, ರಾತ್ರಿಯನ್ನೂ ಕಳೆದಳು.

೧೩. ಆ ವಿಶಾಲನೇತ್ರೆಯು ನಿಟ್ಟುಸಿರನ್ನು ಬಿಡುತ್ತ ಹಾಹಾಕಾರಗಳನ್ನು ಮಾಡಿಕೊಂಡು ಹತಭಾಗ್ಯಳೆಂದು ತನ್ನನ್ನು ತಾನೇ ನಿಂದಿಸಿಕೊಂಡು ತಿರುಗುತ್ತಿದ್ದಳು.

೧೪. ಆಕೆಯು ವಿಹಾರದಲ್ಲಿಯೂ, ಆಹಾರದಲ್ಲಿಯೂ, ಮನೋಹರವಾದ ಮಹಾವನದಲ್ಲಿಯೂ, ಪರ್ವತಗಳ ತಪ್ಪಲುಗಳಲ್ಲಿಯೂ ಅಭಿಲಾಷೆಯುಳ್ಳವಳಾಗದೆ ರಾಜಪರಿತ್ಯಕ್ತಳಾದುದರಿಂದ ವ್ಯರ್ಥವಾದ ತನ್ನ ಯೌವನವನ್ನು ನಿಂದಿಸಿಕೊಂಡಳು.

೧೫. "ದುರ್ದೈವದ ವಶಕ್ಕೆ ಸಿಕ್ಕಿದ ನಾನು ದೌರ್ಭಾಗ್ಯಯುಕ್ತಳಾಗಿ ಭೂಲೋಕದಲ್ಲೇಕೆ ಹುಟ್ಟಿದೆನೋ? ಅಂತಹ ಮಹಾರಾಜನಾದರೂ ಆತನು ನನಗೆ ಪತಿಯಾದುದು ಹೇಗೆ?

೧೬. ಯೌವನದಶೆಯನ್ನು ಹೊಂದಿರುವ ಆತನೇ ಧನ್ಯನು. ಅತ್ಯಂತ ಪುಣ್ಯಶಾಲಿಯು. ನಿಶ್ಚಯವಾಗಿಯೂ ಆತನು ಇತರ ವೇಶ್ಯಾದಿಗಳಲ್ಲಿ ಅನುರಕ್ತನಾಗಿರಬಹುದು.

೧೭. ಒಬ್ಬನಿಗೆ ಪತ್ನಿಯ ಅನುಕೂಲವಿರಬಹುದು. ಸ್ತ್ರೀಯಳಿಗೂ ಒಬ್ಬ

ಮಮಾಽಯಂ ವಲ್ಲಭೋ ರಾಜಾ ನ ಚಾಽಹಂ ನೃಪವಲ್ಲಭಾ ।
ಪರಸ್ಪರಾಽನುರಾಗೋ ಹಿ ಧನ್ಯಾನಾಮೇವ ಜಾಯತೇ ॥ ೧೮ ॥
ಯದ್ಯದ್ಯ ಸ ಮಹೀಪಾಲೋ ನ ಮಯಾ ಸಂಗಮೇಷ್ಯತಿ ।
ತತ್ಕಾಮಾಗ್ನಿರವಶ್ಯಂ ಮಾಂ ಕ್ಷಪಯಿಷ್ಯತಿ ದುಃಸಹಃ ॥ ೧೯ ॥
ರಮಣೀಯಮಭೂದ್ಯತ್ತು ಪುಂಸ್ಕೋಕಿಲನಿನಾದಿತಂ ।
ಹೀನಂ ಹಿ ವಲ್ಲಭೇನೈವಂ ದಹತೀವಾಽದ್ಯ ಮೇ ವನಂ ॥ ೨೦ ॥
ಇತ್ಥಂ ಸಾ ಮದನಾವಿಷ್ಟಾ ವಿಲಪಂತೀ ಪುನಃ ಪುನಃ ।
ದದರ್ಶ ತಾಪಸಂ ತತ್ರ ತ್ರಿಕಾಲಜ್ಞಂ ದೃಢವ್ರತಂ ॥ ೨೧ ॥
ಮೇಖಲಾಽಜಿನಕೌಪೀನದಂಡಕಾಷ್ಠೋಪಜೀವನಂ ।
ಮಹೌಜಸಂ ಮಹಾಭಾಗಂ ಮುಮುಕ್ಷುಂ ಮುನಿಪುಂಗವಂ ॥ ೨೨ ॥
ಉದಯಾದಿತ್ಯಸಂಕಾಶಂ ವಿಭಾವಸುಸಮದ್ಯುತಿಂ ।
ತಂ ದೃಷ್ಟ್ವಾ ಸಹಸೋತ್ಥಾಯ ಸಾ ರಾಜ್ಞೀ ದುರ್ಮತಾ ಸತೀ ॥ ೨೩ ॥

---

ಪತಿಯಿರಬಹುದು. ಆದರೆ ಪರಸ್ಪರಪ್ರೇಮದಿಂದ ಕೂಡಿರುವ ದಾಂಪತ್ಯವು ಬಹಳ ದುರ್ಲಭವೇ ಸರಿ.

೧೮. ನನಗೆ ರಾಜನೇನೋ ಮನೋವಲ್ಲಭನಾಗಿರುವನು. ನಾನು ಮಾತ್ರ ಆತನಿಗೆ ಪ್ರಿಯಳಾಗಿಲ್ಲ. ಪರಸ್ಪರಾನುರಾಗವು ಧನ್ಯರಾದವರಲ್ಲಿ ಮಾತ್ರ ಉದಯಿಸುವುದು.

೧೯. ಈಗ ಆ ಮಹಾರಾಜನು ನನ್ನೊಡನೆ ರಮಿಸುವುದಿಲ್ಲವಾದರೆ ಸಹಿಸಲಸಾಧ್ಯವಾದ ಕಾಮಾಗ್ನಿಯು ನನ್ನನ್ನು ಖಂಡಿತವಾಗಿಯೂ ನಾಶಮಾಡುವುದು.

೨೦. ಗಂಡುಕೋಗಿಲೆಗಳ ನಿನಾದದಿಂದ ಹಿಂದೆ ಅತ್ಯಂತ ರಮಣೀಯವೆನಿಸುತ್ತಿದ್ದ ಈ ಅರಣ್ಯವೇ ಪತಿಪರಿತ್ಯಕ್ತಳಾದ ನನಗೆ ಈಗ ಸುಡುತ್ತಿರುವಂತೆ ತೋರುವುದು."

೨೧. ಇಂತೆಂದು ಮದನಾಗ್ನಿಪರಿತಪ್ತಳಾದ ಆ ಮಹಾರಾಣಿಯು ಮತ್ತೆ ಮತ್ತೆ ಪ್ರಲಪಿಸಿ ತಿರುಗುತ್ತ ತ್ರಿಕಾಲಜ್ಞಾನಿಯೂ, ಮಹಾವ್ರತನಿರತನೂ ಆದ ಮುನಿಯೊಬ್ಬನನ್ನು ಕಂಡಳು.

೨೨. ಉಡೆನೂಲು, ಚರ್ಮವಸನ, ಕೌಪೀನ, ಯೋಗದಂಡಗಳಿಂದ ಒಪ್ಪುತ್ತಿದ್ದ ಆತನು ಮಹಾತೇಜಸ್ವಿಯೂ, ಮಹಾಭಾಗ್ಯಶಾಲಿಯೂ, ಮೋಕ್ಷಮಾರ್ಗನಿರತನೂ, ಮುನಿಶ್ರೇಷ್ಠನೂ ಆಗಿದ್ದನು.

೨೩. ಹುಟ್ಟುತ್ತಿರುವ ಸೂರ್ಯನನ್ನು ಹೋಲುತ್ತಿರುವವನೂ, ಅಗ್ನಿಯಂತೆ ತೇಜಃಪುಂಜನೂ ಆದ ಆ ಮಹರ್ಷಿಯನ್ನು ಕಂಡು ನಿಷ್ಠಳೂ, ಪತಿವ್ರತೆಯೂ ಆದ ಆ ರಾಣಿಯು ಸಂಭ್ರಮದಿಂದ ಎದುರುಬಂದಳು.

ವಿನಯೇನೋಪಸಂಗಮ್ಯ ಪ್ರಣಿಪತ್ಯಾಽಭಿವಾದ್ಯ ಚ ।
ವಿಯೋಗಕಾರಣಂ ರಾಜ್ಞಃ ಪಪ್ರಚ್ಛ ಪ್ರಣತಾ ಸತೀ ॥ ೨೪ ॥
ಭಗವನ್ಕಾಶಿರಾಜಸ್ಯ ಸುತಾಽಹಮತಿವಲ್ಲಭಾ ।
ಭಗಿನೀ ಶತ್ರುಸೇನಸ್ಯ ಮಾತುಶ್ಚಾಽತೀವ ವಲ್ಲಭಾ ॥ ೨೫ ॥
ಅಶ್ವವಾಹನಸಂಜ್ಞೇನ ನೃಪೇಣೋಢಾ ಮಹಾಮುನೇ ।
ಧರ್ಮತೋ ಧರ್ಮಕಲ್ಪೇನ ಪ್ರಜಾಪತಿಸಮೇನ ತು ॥ ೨೬ ॥
ಸಾ ಕಿಮರ್ಥಂ ನಚಾಽಭೀಷ್ಟಾ ಜಾತಾಽಹಂ ತಸ್ಯ ಭೂಪತೇಃ ।
ಸ ಚಾಽತೀವ ಮಮಾಽಭೀಷ್ಟೋ ನೃಪತಿಃ ಸರ್ವದಾ ವಿಭೋ ॥ ೨೭ ॥
ದುರ್ಭಗಾಽಹಂ ಕಥಂ ಜಾತಾ ಕರ್ಮಣಾ ಕೇನ ತಾಪಸ ।
ಕಥಂ ಭವತಿ ವಶ್ಯೋ ಮೇ ಭರ್ತಾ ನೃಪತಿಸತ್ತಮಃ ।
ಸೌಭಾಗ್ಯಂ ಚ ಕಥಂ ಮೇ ಸ್ಯಾದಿತಿ ಸತ್ಯಂ ಚ ಕಥ್ಯತಾಂ ॥ ೨೮ ॥
ತಸ್ಯಾಸ್ತದ್ವಚನಂ ಶ್ರುತ್ವಾ ಸ ಮುನಿಃ ಸಂಶಿತವ್ರತಃ ।
ಜ್ಞಾನೇನ ಕಥಯಾಮಾಸ ತಸ್ಯಾ ದೌರ್ಭಾಗ್ಯಕಾರಣಂ ॥ ೨೯ ॥

---

೨೪. ವಿನಯದಿಂದ ಬಳಿಗೆ ಬಂದು ನಮಸ್ಕಾರವನ್ನೂ, ಅಭಿವಾದನವನ್ನೂ ಮಾಡಿ ಬಳಿಕ ತಾನು ಮಹಾರಾಜನನ್ನು ಅಗಲಿರುವುದಕ್ಕೆ ಕಾರಣವನ್ನು ಕುರಿತು ಪ್ರಶ್ನಿಸಿದಳು.

೨೫. "ಮಹಾತ್ಮನೇ! ನಾನು ಕಾಶಿರಾಜನಿಗೆ ಅತ್ಯಂತ ಪ್ರೀತಿಪಾತ್ರಳಾದ ಮಗಳು. ಶತ್ರುಸೇನನ ಸಹೋದರಿಯು. ತಾಯಿಗೂ ಬಹಳ ಬೇಕಾದವಳಾಗಿರುವೆನು.

೨೬. ಮಹಾಮುನಿಯೆ! ಅಶ್ವವಾಹನನೆಂಬ ಮಹಾರಾಜನಿಗೆ ನಾನು ಪತ್ನಿಯಾಗಿರುವೆನು. ನನ್ನ ಧರ್ಮಪತಿಯಾದ ಆತನು ಧರ್ಮರಾಜನಿಗೆ ಸಮನೂ, ಪ್ರಜಾಪತಿಯನ್ನು ಹೋಲುವವನೂ ಆಗಿರುವನು.

೨೭. ಸರ್ವಜ್ಞನೆ! ನಾನು ಆ ಮಹಾರಾಜನಿಗೆ ಬೇಡದವಳಾಗಿರಲು ಕಾರಣ ವೇನು? ಆತನು ಮಾತ್ರ ನನಗೆ ಸರ್ವಕಾಲದಲ್ಲಿಯೂ ಅತ್ಯಂತ ಪ್ರಿಯನಾಗಿರುವನು.

೨೮. ತಾಪಸೋತ್ತಮನೆ! ನಾನು ಯಾವ ಕರ್ಮದ ಫಲವಾಗಿ ಹೀಗೆ ದೌರ್ಭಾಗ್ಯವಂತಳಾಗಿರುವೆನು? ಆ ರಾಜೇಂದ್ರನು ನನಗೆ ಹೇಗೆ ವಶನಾಗುವನು? ನನಗೆ ಮತ್ತೆ ಸೌಭಾಗ್ಯವು ಹೇಗೆ ಲಭಿಸುವುದು? ಈ ವಿಚಾರವನ್ನು ಯಥಾರ್ಥವಾಗಿ ತಿಳಿಸಿರಿ."

೨೯. ಆಕೆಯಾಡಿದ ಮಾತುಗಳನ್ನು ಕೇಳಿ ನಿಯಮಸಹಿತನಾದ ಆ ಮುನಿಯು ಜ್ಞಾನನೇತ್ರದಿಂದ ಆಕೆಯ ದೌರ್ಭಾಗ್ಯಕ್ಕೆ ಕಾರಣವನ್ನು ತಿಳಿದು ಹೇಳತೊಡಗಿದನು.

ಪಾಣಿಗ್ರಹಣಕಾಲೇ ತ್ವಂ ಗ್ರಹೈಃ ಪಾಪೈರ್ವಿಲೋಕಿತಾ ।
ಭರ್ತಾ ತೇ ನೃಪತಿಃ ಪುತ್ರಿ ಗ್ರಹೈಃ ಸೌಮ್ಯೈರ್ವಿಲೋಕಿತಃ ॥ ೩೦ ॥
ತೇನ ತೇ ವಲ್ಲಭೋ ರಾಜಾ ನ ತ್ವಂ ಭೂಪಸ್ಯ ವಲ್ಲಭಾ ।
ಇತಿ ತಸ್ಯ ವಚಃ ಶ್ರುತ್ವಾ ಸಾ ರಾಜ್ಞೀ ದೀನಮಾನಸಾ ।
ಪಪ್ರಚ್ಛ ವಿನಯೋಪೇತಾ ಭಕ್ತಿನಮ್ರಾತ್ಮಕಂಧರಾ ॥ ೩೧ ॥
ಭಗವನ್ಕೇನ ದಾನೇನ ಸ್ನಾನೇನ ನಿಯಮೇನ ಚ ।
ಕರ್ಮಣಾ ಕೇನ ಸೌಭಾಗ್ಯಂ ಪರಮಂ ಹಿ ಕಥಂ ಭವೇತ್ ॥ ೩೨ ॥
ಇತಿ ತಸ್ಯಾ ವಚಃ ಶ್ರುತ್ವಾ ಸ ಮುನಿಃ ಸಂಶಿತವ್ರತಃ ।
ಕಥಯಾಮಾಸ ಮಾಹಾತ್ಮ್ಯಂ ಸೌಭಾಗ್ಯಂ ಯೇನ ಲಭ್ಯತೇ ॥ ೩೩ ॥
ಮಹಾಕಾಲವನೇ ಪುತ್ರಿ ಲಿಂಗಂ ಸೌಭಾಗ್ಯದಾಯಕಂ ।
ಮತಂಗೇಶ್ವರಪಾರ್ಶ್ವೇ ತು ವಿದ್ಯತೇಽಭೀಷ್ಟದಾಯಕಂ ।
ಯಸ್ಯ ದರ್ಶನಮಾತ್ರೇಣ ಸೌಭಾಗ್ಯಂ ಸಮವಾಪ್ಸ್ಯಸಿ ॥ ೩೪ ॥

---

೩೦. "ಮಗಳೆ! ಮದುವೆಯ ಕಾಲದಲ್ಲಿ ನೀನು ಕ್ರೂರಗ್ರಹಗಳ ದೃಷ್ಟಿಗೆ ಸಿಕ್ಕಿಬಿದ್ದಿದ್ದೆ. ನಿನ್ನ ಪತಿಯಾದ ಆ ರಾಜೇಂದ್ರನು ಶುಭಗ್ರಹಗಳಿಂದ ವೀಕ್ಷಿತನಾಗಿದ್ದನು.

೩೧. ಆದುದರಿಂದಲೇ ನಿನ್ನ ಪತಿಯು ನಿನಗೆ ಬೇಕಾದವನಾಗಿದ್ದರೂ, ನೀನು ಮಾತ್ರ ಆತನಿಗೆ ಬೇಡದವಳಾಗಿರುವೆ." ಇಂತೆಂದ ಆ ಮುನಿಯ ವಾಕ್ಯವನ್ನು ಕೇಳಿ ರಾಣಿಯು ಕುಗ್ಗಿದ ಮನಸ್ಸಿನವಳೂ, ವಿನಯಭರಿತಳೂ, ಭಕ್ತಿಯಿಂದ ಬಾಗಿದ ತಲೆಯುಳ್ಳವಳೂ ಆಗಿ ಪ್ರಶ್ನಿಮಾಡಿದಳು.

೩೨. "ಎಲೈ ಮಹಾಪುರುಷನೆ! ಯಾವ ದಾನ, ಸ್ನಾನ, ನಿಯಮ, ಕರ್ಮ ಮುಂತಾದುವುಗಳನ್ನು ಮಾಡುವುದರಿಂದ ನನಗೆ ಸರ್ವೋತ್ತಮವಾದ ಸೌಭಾಗ್ಯವು ಲಭಿಸುವುದು?"

೩೩. ಇಂತು ಪ್ರಾರ್ಥಿಸಿದ ಆಕೆಗೆ ಮಹಾವ್ರತಿಯಾದ ಆ ಮಹರ್ಷಿಯು ಸೌಭಾಗ್ಯಲಾಭಕ್ಕೆ ಕಾರಣವಾದ ಒಂದು ಮಾಹಾತ್ಮ್ಯದ ಕಥೆಯನ್ನು ಹೇಳಿದನು.

೩೪. "ಪುತ್ರಿಯೆ! ಮಹಾಕಾಲವನಕ್ಷೇತ್ರದಲ್ಲಿ ಸೌಭಾಗ್ಯಪ್ರದವೂ ಸರ್ವಾಭೀಷ್ಟದಾಯಕವೂ ಆದ ಒಂದು ಮಹಾಲಿಂಗವು ಮತಂಗೇಶ್ವರನ ಪಕ್ಕದಲ್ಲಿಯೇ ಇರುವುದು. ಅದನ್ನು ನೋಡುವ ಮಾತ್ರದಿಂದಲೇ ನೀನು ಪುನಃ ಸೌಭಾಗ್ಯವನ್ನು ಪಡೆಯುವೆ.

ಇಂದ್ರಾಣ್ಯಾಽಽರಾಧಿತಂ ಲಿಂಗಂ ಪುರಾ ಸೌಭಾಗ್ಯಕಾರಣಾತ್ ।
ಸೌಭಾಗ್ಯಂ ಪರಮಂ ಲಬ್ಧಂ ನಷ್ಟಃ ಶಕ್ರೋಽಪಿ ಲಬ್ಧವಾನ್ ।
ತಸ್ಮಾದ್ಗಚ್ಛ ಮಮಾದೇಶಾನ್ಮಹಾಕಾಲವನಂ ಶುಭಂ ॥ ೩೫ ॥
ಸೌಭಾಗ್ಯಂ ಭವಿತಾ ತತ್ರ ಕಾಂತೇನ ಸಹದರ್ಶನಂ ।
ಪುತ್ರೋ ಭವಿಷ್ಯತಿ ಶುಭೇ ತಸ್ಯ ಲಿಂಗಸ್ಯ ದರ್ಶನಾತ್ ॥ ೩೬ ॥
ಇತ್ಯುಕ್ತಾ ಸಾ ತದಾ ತೇನ ತಾಪಸೇನ ವರಾನನೇ ।
ವಿದ್ಯತೇ ಯತ್ರ ತಲ್ಲಿಂಗಂ ಮಹಾಕಾಲವನಂ ಗತಾ ॥ ೩೭ ॥
ದದರ್ಶ ಪ್ರಣಯೋಪೇತಾ ಲಿಂಗಂ ಸೌಭಾಗ್ಯದಾಯಕಂ ।
ದರ್ಶನಾತ್ತಸ್ಯ ಲಿಂಗಸ್ಯ ರಾಜಾ ಸಸ್ಮಾರ ತಾಂ ಪ್ರಿಯಾಂ ॥ ೩೮ ॥
ಪಪ್ರಚ್ಛ ಜಮದಗ್ನಿಂ ತು ಕ್ವ ಗತಾ ಮೇ ಪ್ರಿಯಾ ವಿಭೋ ।
ಭಕ್ಷಿತಾ ವಿಪಿನೇ ವಿಪ್ರ ಸಿಂಹವ್ಯಾಘ್ರನಿಶಾಚರೈಃ ॥ ೩೯ ॥
ಮಯಾ ತ್ಯಕ್ತಾ ನೃಶಂಸೇನ ಅಹಂ ತಸ್ಯಾಸ್ತು ವಲ್ಲಭಃ ।
ಏವಂ ಬ್ರುವಾಣೋ ನೃಪತಿಃ ಪ್ರತ್ಯುಕ್ತೋ ಜಮದಗ್ನಿನಾ ॥ ೪೦ ॥

---

೩೫. ಹಿಂದೆ ಸೌಭಾಗ್ಯಕ್ಕಾಗಿಯೇ ಶಚೀದೇವಿಯು ಈ ಮಹಾಲಿಂಗವನ್ನು ಪೂಜಿಸಿದಳು. ಆಕೆಗೆ ಪರಮ ಸೌಖ್ಯವುಂಟಾದುದಲ್ಲದೆ ನಷ್ಟನಾಗಿದ್ದ ಮಹೇಂದ್ರನೂ ದೊರೆತು ಒಡಗೂಡಿದನು. ಆದುದರಿಂದ ನನ್ನ ಅಪ್ಪಣೆಯಂತೆ ನೀನು ಪವಿತ್ರಕ್ಷೇತ್ರವಾದ ಮಹಾಕಾಲವನಕ್ಕೆ ಹೊರಡು.

೩೬. ಮಂಗಳಾಂಗಿಯೆ! ಆ ಲಿಂಗದ ದರ್ಶನದಿಂದ ನಿನಗೆ ಮುಂದೆ ಮಂಗಳವುಂಟಾಗಿ ಪತಿದೇವನ ದರ್ಶನವೂ ಲಭಿಸುವುದು. ಕಾಲಾನಂತರದಲ್ಲಿ ಒಬ್ಬ ಸತ್ಪುತ್ರನೂ ಜನಿಸುವನು.''

೩೭. ಪಾರ್ವತಿಯೆ! ಇಂತೆಂದು ಆ ತಾಪಸಶ್ರೇಷ್ಠನು ಹೇಳಲು, ಮಹಾ ಕಾಲವನದಲ್ಲಿ ಆ ರಾಣಿಯು ಆ ಮಹಾಲಿಂಗವಿದ್ದೆಡೆಗೆ ಹೋಗಿ ಸೇರಿದಳು.

೩೮. ಭಕ್ತಿಭಾವದಿಂದ ಕೂಡಿದವಳಾಗಿ, ಸೌಭಾಗ್ಯಪ್ರದವಾದ ಆ ಮಹಾ ಲಿಂಗವನ್ನು ನೋಡಿದ ನಿಮಿಷದಲ್ಲಿಯೇ ಮಹಾರಾಜನೂ ಆ ತನ್ನ ಪ್ರಿಯಪತ್ನಿ ಯನ್ನು ಸ್ಮರಿಸಿಕೊಂಡನು.

೩೯. ಆತನು ಜಮದಗ್ನಿಮಹರ್ಷಿಗಳಲ್ಲಿ ಬಿನ್ನವಿಸಿಕೊಂಡನು. ''ನನ್ನ ಪತ್ನಿಯು ಎಲ್ಲಿಗೆ ಹೊರಟುಹೋದಳು? ಬ್ರಾಹ್ಮಣೋತ್ತಮನೆ! ಕಾಡಿನಲ್ಲಿ ಸಿಂಹ ಗಳಿಂದಲೊ, ವ್ಯಾಘ್ರಗಳಿಂದಲೊ, ರಾಕ್ಷಸರಿಂದಲೊ ಭಕ್ಷಿಸಲ್ಪಟ್ಟಿರುವಳೇ?

೪೦. ಪರಮನೀಚನಾದ ನಾನು ಆಕೆಯನ್ನು ತ್ಯಾಗಮಾಡಿದೆನಾದರೂ ಆಕೆಗೆ ಮಾತ್ರ ನಾನು ಪ್ರೇಮಾಸ್ಪದನಾಗಿಯೇ ಇರುವೆನು.'' ಇಂತೆಂದು ವಿಲಪಿಸುತ್ತಿರುವ ರಾಜನಿಗೆ ಜಮದಗ್ನಿಮಹರ್ಷಿಯೆಂದನು.

ನ ಭಕ್ಷಿತಾ ಸಾ ಭೂಪಾಲ ಸಿಂಹವ್ಯಾಘ್ರನಿಶಾಚರೈಃ ।
ಸಾ ಚಾ ವಿಶ್ರುತಚಾರಿತ್ರಾ ತ್ವದ್ಭಕ್ತಾ ಚ ಪತಿವ್ರತಾ ॥ ೪೧ ॥
ಮಹಾಕಾಲವನಂ ರಾಜನ್ಗತಾ ಸೌಭಾಗ್ಯಕಾಮ್ಯಯಾ ।
ಭಾರ್ಯಾ ರಕ್ಷ್ಯಾ ಮಹೀಪಾಲ ಇತಿ ಸಾ ಶ್ರುತಿರುತ್ತಮಾ ॥ ೪೨ ॥
ಭಾರ್ಯಾಯಾಂ ರಕ್ಷ್ಯಮಾಣಾಯಾಂ ಪ್ರಜಾ ಭವತಿ ರಕ್ಷಿತಾ ।
ಆತ್ಮಾ ಹಿ ಜಾಯತೇ ತಸ್ಯಾಂ ಸಾ ರಕ್ಷ್ಯಾಽತೋ ನರೇಶ್ವರ ॥ ೪೩ ॥
ಧರ್ಮಹಾನಿಶ್ಚಾಽನುದಿನಮಭಾರ್ಯಸ್ಯ ಭವೇನ್ನೃಪ ।
ನಿತ್ಯಕ್ರಿಯಾಯಾ ವಿಭ್ರಂಶಃ ಸ ಚಾಽಪಿ ಪತನಾಯ ವೈ ॥ ೪೪ ॥
ಪತ್ನ್ಯಾಽನುಕೂಲಯಾ ಭಾವ್ಯಂ ಯಥಾ ಶೀಲೇಽಪಿ ಭರ್ತರಿ ।
ದುಃಶೀಲಾ ದುರ್ಭಗಾ ಭಾರ್ಯಾ ಪೋಷಣೀಯಾ ನರೇಶ್ವರ ॥ ೪೫ ॥
ಇತಿ ತಸ್ಯ ವಚಃ ಶ್ರುತ್ವಾ ಸಮಾಯಾತೋ ನರೇಶ್ವರಃ ।
ಮಹಾಕಾಲವನೇ ರಮ್ಯೇ ದದರ್ಶ ಸ್ವಾಂ ಪ್ರಿಯಾಂ ತದಾ ॥ ೪೬ ॥

---

೪೧. "ಎಲೈಭೂಪಾಲಕನೆ! ಆಕೆಯು ಯಾವ ಸಿಂಹ ವ್ಯಾಘ್ರ ರಾಕ್ಷಸಾದಿಗಳಿಂದಲೂ ಭಕ್ಷಿತಳಾಗಲಿಲ್ಲ. ಆಕೆಯು ನಿರ್ದುಷ್ಟವಾದ ಚರಿತ್ರೆಯುಳ್ಳವಳೂ, ನಿನ್ನಲ್ಲಿಯೇ ಅನುರಕ್ತಳಾಗಿ ಪತಿವ್ರತೆಯೂ ಆಗಿರುವಳು.

೪೨. ರಾಜನೆ! ಸೌಭಾಗ್ಯವನ್ನಪೇಕ್ಷಿಸಿ ಆಕೆಯು ಈಗ ಮಹಾಕಾಲವನ ಕ್ಷೇತ್ರಕ್ಕೆ ಹೋಗಿರುವಳು. ಹೆಂಡತಿಯನ್ನು ರಕ್ಷಿಸಬೇಕೆಂದು ವೇದಗಳೂ ಬೋಧಿಸುತ್ತಿರುವುವಷ್ಟೆ.

೪೩. ಹೆಂಡತಿಯನ್ನು ರಕ್ಷಿಸಲು ಸಂತತಿಯನ್ನು ರಕ್ಷಿಸಿದಂತಾಗುವುದು. ತಾನೇ ಆಕೆಯಲ್ಲಿ ಮತ್ತೆ ಹುಟ್ಟುವನಾದುದರಿಂದ ಪ್ರತಿಯೊಬ್ಬನೂ ತನ್ನ ಪತ್ನಿಯನ್ನು ಸಂರಕ್ಷಿಸಬೇಕು.

೪೪. ಮಹಾರಾಜ! ಪತ್ನೀಹೀನನಾದವನಿಗೆ ದಿನ ದಿನಕ್ಕೂ ಧರ್ಮನಾಶವಾಗುತ್ತಿರುವುದು. ನಿತ್ಯಕರ್ಮವಾದ ವೈಶ್ವದೇವಕ್ಕೂ ಹಾನಿಯುಂಟಾಗುವುದು. ಅದು ಮನುಷ್ಯನ ಅಧಃಪತನಕ್ಕೆ ಕಾರಣವೇ ಸರಿ.

೪೫. ಗಂಡನ ಶೀಲವು ಹೇಗಿದ್ದರೂ ಅವನಿಗೆ ಪತ್ನಿಯು ಅನುಕೂಲೆಯಾಗಿರಬೇಕು. ಪತ್ನಿಯು ದುಶ್ಶೀಲಳೂ, ದೌರ್ಭಾಗ್ಯವತಿಯೂ ಆದರೂ ಗಂಡನು ಆಕೆಯನ್ನು ಪೋಷಿಸಬೇಕು."

೪೬. ಇಂತೆಂದ ಜಮದಗ್ನಿಯ ಮಾತುಗಳನ್ನು ಕೇಳಿ ಆ ರಾಜೇಂದ್ರನೂ ರಮ್ಯವಾದ ಮಹಾಕಾಲವನಕ್ಕೆ ಬಂದು ಅಲ್ಲಿ ತನ್ನ ಪ್ರಿಯಪತ್ನಿಯನ್ನು ಕಂಡನು.

ಸೌಭಾಗ್ಯಾಲಂಕೃತಾಂ ಸುಭ್ರೂಂ ಪೂಜಯಂತೀಂ ಮಹೇಶ್ವರಂ ।
ದೃಷ್ಟ್ವಾ ಸ್ನೇಹೇನ ಚಾಲಿಂಗ್ಯ ಪ್ರತ್ಯುವಾಚ ಸ ತಾಂ ಪ್ರಿಯಾಂ ॥ ೪೭ ॥
ವಿರಹೇಣ ತ್ವದೀಯೇನ ಸಂತಪ್ತೋಽಹಂ ವರಾನನೇ ।
ಅದ್ಯ ಮೇ ಸಫಲಂ ಚಕ್ಷುರ್ಜೀವಿತಂ ಚ ಸುಜೀವಿತಂ ॥ ೪೮ ॥
ಯತ್ತ್ವಾಂ ಪಶ್ಯಾಮಿ ಸುಭಗೇ ಕೃತಾರ್ಥೋಽಹಂ ಕೃತಸ್ತ್ವಯಾ ।
ಏವಂ ದೃಷ್ಟ್ವಾತಿಹರ್ಷೇಣ ಸಾ ದದರ್ಶ ತದಾ ಪತಿಂ ।
ಉವಾಚ ಚ ಪ್ರಸೀದೇತಿ ಭೂಯೋ ಭೂಯೋ ಮುದಾನ್ವಿತಾ ॥ ೪೯ ॥
ತತಃ ಸ ರಾಜಾ ರಭಸಾತ್ಪರಿಷ್ವಜ್ಯಾಽಽಹ ಭಾಮಿನೀಂ ।
ಪ್ರಿಯೇ ಪ್ರಸನ್ನ ಏವಾಽಹಂ ಭೂಯೋ ಭೂಯೋ ಬ್ರವೀಮಿ ಕಿಂ ॥೫೦॥
ತತಃ ಸಮಾಗಮೋ ಜಾತೋ ಜಾತಃ ಪುತ್ರೋಽತಿಧಾರ್ಮಿಕಃ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾದ್ದತ್ತೋ ನಾಮ ಸ ಗೀಯತೇ ॥ ೫೧ ॥
ಸೌಭಾಗ್ಯಮತುಲಂ ಲಬ್ಧಂ ತಯಾ ದೇವ್ಯಾ ಹಿಮಾತ್ಮಜೇ ।
ಸೌಭಾಗ್ಯೇಶ್ವರಸಂಜ್ಞಂ ತು ತತಃ ಪ್ರಭೃತಿ ಭೂತಲೇ ॥ ೫೨ ॥

---

೪೭. ಸೌಭಾಗ್ಯಾನ್ವಿತೆಯಾಗಿ ಮಹಾದೇವನ ಪೂಜೆಯನ್ನು ಮಾಡುತ್ತಿದ್ದ ಆ ಸುಂದರಿಯನ್ನು ಕಂಡು ರಾಜನು ಪ್ರೀತಿಯಿಂದ ಆಕೆಯನ್ನು ಆಲಿಂಗಿಸಿ ಕೊಂಡು ಇಂತೆಂದನು.

೪೮. "ಮಂಗಳಮುಖಿಯೆ! ನಿನ್ನನ್ನಗಲಿದ ಸಂತಾಪದಿಂದ ನಾನು ಬಹಳ ಬೆಂದಿರುವೆನು. ಇಂದಿಗೆ ನನ್ನ ನೇತ್ರಗಳು ಸಫಲವಾಗಿ ನನ್ನ ಜೀವನವೂ ಸಾರ್ಥಕವೆನಿಸಿತು.

೪೯–೫೦. ಸುಂದರಿಯೆ! ನಿನ್ನನ್ನು ನೋಡಿದುದರಿಂದಲೇ ನಾನು ಕೃತಾರ್ಥ ನಾದೆನು." ಇಂತೆಂದು ಆಲಿಂಗಿಸಿ ನುಡಿದ ಪತಿಯನ್ನು ಆಕೆಯೂ ಸಂತೋಷ ದಿಂದ ನೋಡಿದಮೇಲೆಯೂ ಆಕೆಯು ಮತ್ತೆ ಮತ್ತೆ "ನನ್ನಲ್ಲಿ ಪ್ರಸನ್ನನಾಗು" ಎಂದು ಬೇಡಿಕೊಳ್ಳುತ್ತಿದ್ದಳು. ಆಗ ರಾಜನು ಆಕೆಯನ್ನು ಬಿಗಿಯಾಗಿ ಅಪ್ಪಿ ಕೊಂಡು, "ಪ್ರಿಯಳೆ! ನಾನು ಯಾವಾಗಲೂ ನಿನ್ನಲ್ಲಿ ಪ್ರಸನ್ನನಾಗಿಯೇ ಇರು ವೆನು; ಪುನಃ ಪುನಃ ಬೇರೇನನ್ನುಹೇಳಲಿ?" ಎಂದು ಸಮಾಧಾನಗೊಳಿಸಿದನು.

೫೧. ಬಳಿಕ ಅವರಿಬ್ಬರ ಈ ಸಮಾಗಮದಿಂದ ಅತ್ಯಂತ ಧರ್ಮನಿರತನಾದ ಪುತ್ರನೊಬ್ಬನು ಹುಟ್ಟಿದನು. ಆ ಮಹಾಲಿಂಗದ ಪ್ರಭಾವದಿಂದ ಹುಟ್ಟಿದ ಆತನನ್ನು ದತ್ತನೆಂಬ ಹೆಸರಿನಿಂದ ಕರೆಯುತ್ತಿದ್ದರು.

೫೨. ಹಿಮಗಿರಿಪುತ್ರಿಯೆ! ಆ ದೇವಿಗೆ ಅಪರಿಮಿತವಾದ ಸೌಭಾಗ್ಯವು ಲಭಿಸಿತು. ಅಂದಿನಿಂದ ಭೂಲೋಕದಲ್ಲಿ ಆ ಲಿಂಗವು ಸೌಭಾಗ್ಯೇಶ್ವರವೆಂಬ ಹೆಸರನ್ನು ಪಡೆಯಿತು.

ಯೇ ಪಶ್ಯಂತಿ ವಿಶಾಲಾಕ್ಷಿ ಸೌಭಾಗ್ಯೇಶ್ವರಮೀಶ್ವರಂ ।
ತೇಷಾಂ ಕುಲೇ ನ ದೌರ್ಭಾಗ್ಯಂ ಜಾಯತೇ ಪರ್ವತಾತ್ಮಜೇ ॥ ೫೩ ॥
ಭವಿಷ್ಯತಿ ನ ದಾರಿದ್ರ್ಯಂ ವಿಯೋಗೋ ನ ಚ ಬಂಧುಭಿಃ ।
ಪುತ್ರಮಿತ್ರಕಲತ್ರಾಣಾಂ ಲಿಂಗಸ್ಯ ಚ ಸಮರ್ಚನಾತ್ ॥ ೫೪ ॥
ಸೋಪಸರ್ಗಭಯಂ ತೇಷಾಂ ಯೇ ಪಶ್ಯಂತಿ ವರಾನನೇ ।
ಸೌಭಾಗ್ಯೇಶ್ವರಸಂಜ್ಞಂ ತು ನ ಗ್ರಹಾದಿಭಯಂ ಭವೇತ್ ॥ ೫೫ ॥
ಸರ್ವಬಾಧಾವಿನಿರ್ಮುಕ್ತೋ ಧನಧಾನ್ಯಸಮನ್ವಿತಃ ।
ಮನುಷ್ಯೋ ಜಾಯತೇ ದೇವಿ ಸೌಭಾಗ್ಯೇಶ್ವರದರ್ಶನಾತ್ ।
ಸಂಪೂಜ್ಯಃ ಸರ್ವಲೋಕೇಷು ಸೌಭಾಗ್ಯೈಕನಿಧಿರ್ಭವೇತ್ ॥ ೫೬ ॥
ಜಾಯತೇ ಭೂಪತಿರ್ಲೋಕೇ ಸಾರ್ವಭೌಮೋ ವರಾನನೇ ।
ನಾಽಪುತ್ರಾ ನಾಽಧನಾ ನಾರೀ ನ ದೀನಾ ನ ಚ ದುಃಖಿತಾ ।
ಜಾಯತೇ ದುರ್ಭಗಾ ನೈವ ಸೌಭಾಗ್ಯೇಶ್ವರದರ್ಶನಾತ್ ॥ ೫೭ ॥

---

೫೩. ವಿಶಾಲಾಕ್ಷಿಯೆ! ಸೌಭಾಗ್ಯೇಶ್ವರಮಹಾದೇವನನ್ನು ಯಾರು ಭಕ್ತಿಯಿಂದ ಸಂದರ್ಶಿಸುವರೊ, ಅವರ ವಂಶದಲ್ಲಿಯೇ ಎಂದಿಗೂ ದಾರಿದ್ರ್ಯ ದೌರ್ಭಾಗ್ಯಗಳುಂಟಾಗುವುದಿಲ್ಲ.

೫೪. ಬಡತನವಾಗಲಿ, ಬಂಧುಬಾಂಧವರ ಅಗಲಿಕೆಗಳಾಗಲಿ, ಪುತ್ರ ಮಿತ್ರ ಕಳತ್ರಗಳ ಅಕಾಲಮರಣಗಳಾಗಲಿ ಈ ಲಿಂಗದ ಪೂಜೆಯನ್ನು ಮಾಡಿದವರಿಗೆ ಉಂಟಾಗುವುದಿಲ್ಲ.

೫೫. ಪಾರ್ವತಿಯೆ! ಯಾರು ಇದರ ದರ್ಶನವನ್ನು ಮಾಡುವರೊ, ಅವರಿಗೆ ಕಷ್ಟಗಳಿಂದ ಭಯವಾಗಲಿ ಗ್ರಹಾದಿಗಳಿಂದ ಪೀಡೆಗಳಾಗಲಿ ಎಂದಿಗೂ ಉಂಟಾಗಲಾರವು.

೫೬. ದೇವಿಯೆ! ಸೌಭಾಗ್ಯೇಶ್ವರನ ದರ್ಶನವನ್ನು ಮಾಡಿಕೊಂಡ ಮಾನವನು ಸಕಲಬಾಧೆಗಳನ್ನೂ ಕಳೆದುಕೊಳ್ಳುವನು. ಆತನ ಮನೆಯಲ್ಲಿ ಧನಧಾನ್ಯಗಳು ತುಂಬಿ ತುಳುಕುತ್ತಿರುವುವು. ಆತನು ಸಮಸ್ತಲೋಕಗಳಲ್ಲಿಯೂ ಪೂಜಾರ್ಹನಾಗುವನಲ್ಲದೆ, ಸಮಸ್ತ ಸೌಭಾಗ್ಯಗಳಿಗೂ ನೆಲೆಮನೆಯೆನಿಸಿ ಬಾಳುವನು.

೫೭. ಸುಂದರಮುಖಿಯೆ! ಸೌಭಾಗ್ಯೇಶ್ವರನ ದರ್ಶನದಿಂದ ಮನುಷ್ಯನು ಮಹಾರಾಜನೊ, ಚಕ್ರವರ್ತಿಯೋ ಆಗಿ ಹುಟ್ಟುವನು. ಸ್ತ್ರೀಯು ಎಂದಿಗೂ ಬಂಜೆಯೂ, ದರಿದ್ರಳೂ, ದೀನಳೂ, ದುಃಖಿತೆಯೂ, ದೌರ್ಭಾಗ್ಯವಂತಳೂ ಆಗುವುದಿಲ್ಲ.

ನ ವೈಧವ್ಯಂ ನ ಚ ವ್ಯಾಧಿರ್ನಾಽಕಾಲಮರಣಂ ಪ್ರಿಯೇ ।
ನ ಪುತ್ರಭರ್ತೃಜಂ ದುಃಖಂ ಜಾಯತೇ ಲಿಂಗದರ್ಶನಾತ್ ॥ ೫೮ ॥
ಯಥಾ ಲಕ್ಷ್ಮೀರ್ಹರೇರ್ನಿತ್ಯಂ ಸಾವಿತ್ರೀ ಬ್ರಹ್ಮಣಃ ಸ್ಮೃತಾ ।
ರೋಹಿಣೀ ವಲ್ಲಭಾ ಚೇಂದೋಃ ಶಚೀ ಶಕ್ರಸ್ಯ ವಲ್ಲಭಾ ।
ತಥಾ ಸಾ ಜಾಯತೇ ನಾರೀ ಸೌಭಾಗ್ಯೇಶ್ವರದರ್ಶನಾತ್ ॥ ೫೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸೌಭಾಗ್ಯೇಶ್ವರದೇವಸ್ಯ ಶೃಣು ರೂಪೇಶ್ವರಂ ಪ್ರಿಯೇ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸೌಭಾಗ್ಯೇಶ್ವರಮಾಹಾತ್ಮ್ಯವರ್ಣನಂ"
ನಾಮೈಕಷಷ್ಟಿತಮೋಽಧ್ಯಾಯಃ

---

೫೮. ಆ ಶಿವಲಿಂಗವನ್ನು ನೋಡಿದ ಹೆಂಗಸಿಗೆ ವೈಧವ್ಯವೂ, ವ್ಯಾಧಿಗಳೂ, ಅಕಾಲಮೃತ್ಯುವೂ, ಗಂಡಮಕ್ಕಳುಗಳಿಂದಲೂ, ಭರ್ತನಿಂದಲೂ ದುಃಖವೂ ಸಂಭವಿಸಲಾರವು.

೫೯. ಅಲ್ಲದೆ ಆ ಮಹಾಲಿಂಗದ ದರ್ಶನದಿಂದ ಆಕೆಯು ಮಹಾವಿಷ್ಣುವಿಗೆ ಲಕ್ಷ್ಮಿಯಂತೆಯೂ, ಬ್ರಹ್ಮನಿಗೆ ಸರಸ್ವತಿಯಂತೆಯೂ, ಚಂದ್ರನಿಗೆ ರೋಹಿಣಿಯಂತೆಯೂ, ಮಹೇಂದ್ರನಿಗೆ ಶಚೀದೇವಿಯಂತೆಯೂ ತನ್ನ ಪತಿಗೆ ಪರಮಪ್ರೀತ್ಯಾಸ್ಪದಳಾಗುವಳು.

೬೦. ದೇವಿಯೆ! ಇಂತು ನಿನಗೆ ಸೌಭಾಗ್ಯೇಶ್ವರಮಹಾದೇವನ ಪ್ರಭಾವವನ್ನು ತಿಳಿಸಿರುವೆನು. ಪಾಪಪರಿಹಾರಕವಾದ ಈ ಚರಿತ್ರೆಯಾದಮೇಲೆ ಇದೀಗ ರೂಪೇಶ್ವರಲಿಂಗದ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸೌಭಾಗ್ಯೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಷಷ್ಠಿತಮೋಽಧ್ಯಾಯಃ

### ರೂಪೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :–

ದ್ವಿಷಷ್ಠಿಕಂ ವಿಜಾನೀಹಿ ದೇವಂ ರೂಪೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ರೂಪವಾಂಜಾಯತೇ ನರಃ ॥ ೧ ॥
ಪಾದ್ಮಕಲ್ಪೇ ಮಹಾದೇವಿ ಪದ್ಮೋನಾಮ ಮಹೀಪತಿಃ ।
ಪದ್ಮಗರ್ಭಸಮುದ್ಭೂತೋ ಬಭೂವಾಽತಿಪರಾಕ್ರಮಿೀ ।
ಪೃಥಿವ್ಯಾಶ್ಚತುರಂತಾಯಾ ಜಾತೋ ಧರ್ಮರತೋ ಬಲೀ ॥ ೨ ॥
ಸ ಕದಾಚಿನ್ಮಹಾಬಾಹುಃ ಪ್ರಭೂತಬಲವಾಹನಃ ।
ವನಂ ಜಗಾಮ ಗಹನಂ ಹಯನಾಗಶತೈರ್ವೃತಃ ॥ ೩ ॥
ಬಿಲ್ವಾಽರ್ಕಖದಿರಾಕೀರ್ಣಂ ಕಪಿತ್ಥಧವಸಂಕುಲಂ ।
ಮೃಗಸಿಂಹೈರ್ವೃತಂ ಘೋರೈರನ್ಯೈಶ್ಚಾಽಪಿ ವನೇಚರೈಃ ॥ ೪ ॥

---

### ಕನ್ನಡದ ಅನುವಾದ

#### ರೂಪೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :–ಪ್ರಿಯಳೆ! ರೂಪೇಶ್ವರನೇ ಅರುವತ್ತೆರಡನೆಯ ಮಹಾಲಿಂಗವೆಂದು ತಿಳಿ. ಅದನ್ನು ನೋಡುವುದರಿಂದಲೇ ನರನು ಸುಂದರರೂಪವುಳ್ಳವನಾಗುವನು.

೨. ಮಹಾದೇವಿಯೆ! ಪಾದ್ಮಕಲ್ಪದಲ್ಲಿ ಚತುರ್ಮುಖಬ್ರಹ್ಮನ ಪುತ್ರನಾದ ಪದ್ಮನೆಂಬೊಬ್ಬ ಚಕ್ರವರ್ತಿಯಿದ್ದನು. ಆತನು ಅತ್ಯಂತ ಪರಾಕ್ರಮಿಯೂ, ಧರ್ಮನಿರತನೂ ಆಗಿ ಸಮುದ್ರಪರ್ಯಂತವಾದ ಸಮಸ್ತ ಭೂಮಂಡಲವನ್ನೂ ಆಳುತ್ತಿದ್ದನು.

೩. ಆತನೊಮ್ಮೆ ಅಸಂಖ್ಯಾತವಾದ ಸೈನ್ಯದಿಂದಲೂ, ನೂರಾರು ಆನೆ ಕುದುರೆಗಳಿಂದಲೂ ಪರಿವಾರಿತನಾಗಿ ಬೇಟೆಯಾಡಲು ದುರ್ಗಮವಾದ ಅರಣ್ಯವನ್ನು ಪ್ರವೇಶಿಸಿದನು.

೪. ಆ ಅರಣ್ಯವು ಬಿಲ್ವ, ಅರ್ಕ, ಖದಿರ, ಬೇಲ, ಧವ ಮುಂತಾದ ಮಹಾವೃಕ್ಷಗಳಿಂದ ನಿಬಿಡಿತವೂ, ಜಿಂಕೆಗಳಿಂದಲೂ, ಸಿಂಹಗಳೇ ಮೊದಲಾದ ಅನೇಕ ಘೋರಮೃಗಗಳಿಂದಲೂ ಬೇಡರಿಂದಲೂ ಕೂಡಿದ್ದಿತು.

ತತ್ರ ವನ್ಯಸಹಸ್ರಾಣಿ ಹತ್ವಾ ಸಬಲವಾಹನಃ ।
ರಾಜಾ ಮೃಗಪ್ರಸಂಗೇನ ವನಮನ್ಯದ್ವಿವೇಶ ಸಃ ॥ ೫ ॥
ಏಕ ಏವೋತ್ತಮಬಲಃ ಕ್ಷುತ್ಪಿಪಾಸಾಸಮನ್ವಿತಃ ।
ಸ ವನಸ್ಯಾಂತಮಾಸಾದ್ಯ ಮಹಾರಣ್ಯಮುಪಾಸದತ್ ॥ ೬ ॥
ತಚ್ಚಾಽಪ್ಯತೀತ್ಯ ನೃಪತಿರ್ದದರ್ಶಾಶ್ರಮಮುತ್ತಮಂ ।
ಮನಃ ಪ್ರಹ್ಲಾದಜನನಂ ದೃಷ್ಟಿಕಾಂತಮತೀವ ಚ ॥ ೭ ॥
ಪುಷ್ಪಿತೈಃ ಪಾದಪೈಃ ಕೀರ್ಣಮತೀವ ಸುಖಶಾದ್ವಲಂ ।
ತತೋಽಗಚ್ಛನ್ಮಹಾಬಾಹುರೇಕೋಽಮಾತ್ಯಾನ್ವಿಸೃಜ್ಯ ತಾನ್ ॥ ೮ ॥
ನಾಽಪಶ್ಯದಾಶ್ರಮೇ ತಸ್ಮಿಂಸ್ತಮೃಷಿಂ ಸಂಶಿತವ್ರತಂ ।
ಉವಾಚ ಕ ಇಹೇತ್ಯುಚ್ಚೈರ್ವನಂ ಸಂನಾದಯನ್ನಿವ ॥ ೯ ॥
ಶ್ರುತ್ವಾಽಥ ತಂ ತಥಾ ಶಬ್ದಂ ಕನ್ಯಾ ಶ್ರೀರಿವ ರೂಪಿಣೀ ।
ನಿಶ್ಚಕ್ರಾಮಾಶ್ರಮಾತ್ತಸ್ಮಾತ್ತಾಪಸಾಕಾರಧಾರಿಣೀ ॥ ೧೦ ॥

---

೫. ಸೈನ್ಯಸಮೇತನಾದ ರಾಜೇಂದ್ರನು ಅಲ್ಲಿ ಸಾವಿರಾರು ದುಷ್ಟಮೃಗಗಳನ್ನು ಸಂಹರಿಸಿ ಒಂದು ಜಿಂಕೆಯನ್ನಟ್ಟಿಸಿಕೊಂಡು ಮತ್ತೊಂದು ಕಾಡನ್ನು ಪ್ರವೇಶಿಸಿದನು.

೬. ಮಹಾಬಲಶಾಲಿಯಾದ ಆತನು ಒಬ್ಬನೇ ಮುನ್ನುಗ್ಗಿ ಹೋಗುತ್ತ ಹಸಿವು ಬಾಯಾರಿಕೆಗಳಿಂದ ಬಳಲಿದವನಾಗಿ ಅರಣ್ಯದಲ್ಲಿ ದಾರಿಗಾಣದ ಮಹಾ ಪ್ರದೇಶದಲ್ಲಿ ಸಿಕ್ಕಿಬಿದ್ದನು.

೭. ಅದನ್ನೂ ಬಹಳ ಕಷ್ಟದಿಂದ ಕಡೆಹಾಯಲು ಆ ಮಹಾರಾಜನು ಮನಸ್ಸಿಗೆ ಆನಂದವನ್ನು ಕೊಡುವುದೂ, ನೋಡಲು ಮನೋಹರವೂ ಆದ ಒಂದು ಆಶ್ರಮವನ್ನು ಕಂಡನು.

೮. ಆ ಆಶ್ರಮದಲ್ಲಿ ಮರಗಳೆಲ್ಲವೂ ಪುಷ್ಪಭರಿತಗಳಾಗಿದ್ದುವು. ಸುಖಸ್ಪರ್ಶಗಳಾದ ಹುಲ್ಲುಗಾವಲುಗಳಿದ್ದುವು. ರಾಜೇಂದ್ರನು ಮಂತ್ರಿಗಳೇ ಮುಂತಾದವರನ್ನು ದೂರದಲ್ಲಿರಿಸಿ ತಾನೊಬ್ಬನೇ ಒಳಕ್ಕೆ ಪ್ರವೇಶಿಸಿದನು.

೯. ಅಲ್ಲಿ ವ್ರತೋಪವಾಸನಿರತನಾದ ಯಾವ ಮಹರ್ಷಿಯೂ ಕಾಣದಿರಲು ಅರಣ್ಯವೇ ಪ್ರತಿಧ್ವನಿಸುವಂತೆ, "ಇಲ್ಲಿ ಯಾರಿರುವರು" ಎಂದು ಗಟ್ಟಿಯಾಗಿ ಕೂಗಿದನು.

೧೦. ಆ ಧ್ವನಿಯನ್ನು ಕೇಳಿ ಮಹಾಲಕ್ಷ್ಮಿಯಂತೆ ಸರ್ವಾಂಗಸುಂದರಿಯೂ ತಾಪಸವೇಷಧಾರಿಣಿಯೂ ಆದ ಕನ್ಯೆಯೊಬ್ಬಳು ಆಶ್ರಮದೊಳಗಿನಿಂದ ಹೊರಕ್ಕೆ ಬಂದಳು.

ಸಾ ತಂ ದೃಷ್ಟ್ವೈವ ರಾಜಾನಂ ಪದ್ಮಗರ್ಭಸಮುದ್ಭವಂ ।
ಆಸನೇನಾಽರ್ಚಯಿತ್ವಾ ಚ ಪಪ್ರಚ್ಛ ನಾಮ ತಂ ತದಾ ॥ ೧೧ ॥
ಉವಾಚ ಸ್ಮಯಮಾನಾಽಥ ಕಿಂ ಕಾರ್ಯಂ ಕ್ರಿಯತಾಮಿತಿ ।
ತಾಮಬ್ರವೀತ್ತತೋ ರಾಜಾ ಕನ್ಯಾಂ ಮಧುರಭಾಷಿಣೀಂ ।
ದೃಷ್ಟ್ವಾ ಚೈನಾಽನವದ್ಯಾಂಗೀಂ ಯಥಾವತ್ಪ್ರತಿಪೂಜಿತಃ ॥ ೧೨ ॥
ಆಗತೋಽಹಂ ಮಹಾಭಾಗೇ ಮುನಿಶ್ರೇಷ್ಠಮುಪಾಸಿತುಂ ।
ಕ್ವ ಗತೋ ಭಗವಾನ್ಭದ್ರೇ ತನ್ಮಮಾಚಕ್ಷ್ವ ಶೋಭನೇ ॥ ೧೩ ॥
ಏವಮುಕ್ತಾ ತು ಸಾ ಕನ್ಯಾ ತೇನ ರಾಜ್ಞಾ ತದಾಶ್ರಮೇ ।
ಹಸಂತೀ ಪ್ರತ್ಯುವಾಚೇದಂ ವಾಕ್ಯಂ ಸ ಮಧುರಾಕ್ಷರಂ ॥ ೧೪ ॥
ಕನ್ಯಾಽಹಂ ಪೃಥಿವೀಪಾಲ ಕೌಮಾರಬ್ರಹ್ಮಚಾರಿಣಃ ।
ತಪಸ್ವಿನೋ ಧೃತಿಮತೋ ಧರ್ಮಜ್ಞಸ್ಯ ಮನಸ್ವಿನಃ ॥ ೧೫ ॥
ಸುತಾ ಕಣ್ವಸ್ಯ ಮಾಮೇವಂ ವಿದ್ಧಿ ತ್ವಂ ಮನುಜಾಽಧಿಪ ।
ಕಣ್ವಂ ಹಿ ಪಿತರಂ ಮನ್ಯೇ ಪಿತರಂ ಸ್ವಮಜಾನತೀ ॥ ೧೬ ॥

---

೧೧. ಬ್ರಹ್ಮದೇವನ ಪುತ್ರನಾದ ಆ ಮಹಾರಾಜನನ್ನು ಕಂಡೊಡನೆಯೇ ಆಕೆಯು ಉಚಿತಾಸನವನ್ನಿತ್ತು ಸತ್ಕರಿಸಿ ಆತನ ಹೆಸರನ್ನು ಕೇಳಿದಳು.

೧೨. ಮುಗುಳ್ನಗೆಯಿಂದ, "ತಮಗಾಗಿ ನಾನು ಏನುಮಾಡಲಿ" ಎಂದು ಪ್ರಶ್ನೆಮಾಡಿದಳು. ಆ ಕನ್ಯೆಯ ಮಧುರಧ್ವನಿಯನ್ನು ಕೇಳಿ, ಆಕೆಯು ಸುಂದರಿಯೆಂಬುದನ್ನು ಮನಗಂಡು, ಆಕೆಯ ಸತ್ಕಾರದಿಂದ ತೃಪ್ತನಾದ ರಾಜನು ಇಂತೆಂದನು.

೧೩. "ಮಹಾತ್ಮಳೆ! ಇಲ್ಲಿರುವ ಮುನಿವರ್ಯನನ್ನು ಸೇವಿಸಲು ನಾನು ಬಂದಿರುವೆನು. ಮಂಗಳಾಂಗಿಯೆ! ಆತನು ಎಲ್ಲಿಗೆ ಹೋಗಿರುವನೆಂಬುದನ್ನು ನನಗೆ ತಿಳಿಸು."

೧೪. ಇಂತೆಂದು ರಾಜನು ಆಶ್ರಮಪ್ರದೇಶದಲ್ಲಿ ಮಾಡಿದ ಪ್ರಶ್ನೆಯನ್ನು ಕೇಳಿ ನಗುತ್ತ, ಆ ಕನ್ಯೆಯು ಅತ್ಯಂತ ಮಧುರವಾಣಿಯಿಂದ ಪ್ರತಿವಚನವನ್ನಿತ್ತಳು.

೧೫–೧೬. "ಭೂಪಾಲಕನೆ! ನಾನು ಜನ್ಮಕಾಲದಿಂದ ಬ್ರಹ್ಮಚರ್ಯವನ್ನು ನಡೆಸುತ್ತಿರುವ ಕನ್ಯೆಯು. ನಾನು ತಪೋನಿರತನೂ, ಧೈರ್ಯಶಾಲಿಯೂ, ಧರ್ಮಜ್ಞನೂ, ಸ್ವೇಚ್ಛಾವಿಹಾರಿಯೂ ಆದ ಕಣ್ವಮುನಿಯ ಮಗಳೆಂಬುದನ್ನು ತಿಳಿ. ನನ್ನ ನಿಜವಾದ ತಂದೆಯನ್ನು ತಿಳಿಯದಿರುವುದರಿಂದ ಕಣ್ವಮಹರ್ಷಿಯನ್ನೇ ತಂದೆಯೆಂದು ಭಾವಿಸಿರುವೆನು."

ತಸ್ಯಾಸ್ತದ್ವಚನಂ ಶ್ರುತ್ವಾ ನೃಪೇಣೋಕ್ತಂ ವರಾನನೇ ।
ಸುವ್ಯಕ್ತಂ ರಾಜಪುತ್ರೀ ತ್ವಂ ಯಥಾ ಕಲ್ಯಾಣಿ ಭಾಷಸೇ ॥ ೧೭ ॥
ಭಾರ್ಯಾ ಮೇ ಭವ ಸುಶ್ರೋಣಿ ಬ್ರೂಹಿ ಕಿಂ ಕರವಾಣಿ ತೇ ।
ಸುವರ್ಣರತ್ನವಾಸಾಂಸಿ ಕುಂಡಲೇ ಪರಿಹಾರಕೇ ॥ ೧೮ ॥
ಆಹರಾಮಿ ತವಾಽದ್ಯಾಽಹಂ ಭಾರ್ಯಾ ಮೇ ಭವ ಶೋಭನೇ ।
'ಗಾಂಧರ್ವೇಣ ಚ ಮಾಂ ಭೀರು ವಿವಾಹೇನೈವ ಸುಂದರಿ ।
ವಿವಾಹಾನಾಂ ಚ ರಂಭೋರು ಗಾಂಧರ್ವಃ ಶ್ರೇಷ್ಠ ಉಚ್ಯತೇ ॥ ೧೯ ॥
ನೃಪಸ್ಯ ವಚನಂ ಶ್ರುತ್ವಾ ಕನ್ಯಾ ವಚನಮಬ್ರವೀತ್ ।
ಮುಹೂರ್ತಂ ಸಂಪ್ರತೀಕ್ಷಸ್ವ ಸ ಮಾಂ ತುಭ್ಯಂ ಪ್ರದಾಸ್ಯತಿ ॥ ೨೦ ॥

ರಾಜೋವಾಚ :—

ಇಚ್ಛಾಮಿ ತ್ವಾಂ ವರಾರೋಹೇ ಭಜಮಾನಮನಿಂದಿತೇ ।
ತದರ್ಥಂ ಮಾಂ ಸ್ಥಿತಂ ವಿದ್ಧಿ ತ್ವಯಾ ಮೇಽಪಹೃತಂ ಮನಃ ॥ ೨೧ ॥
ಆತ್ಮನೋ ಬಂಧುರಾತ್ಮೈವ ಗತಿರಾತ್ಮೈವಚಾತ್ಮನಃ ।
ಆತ್ಮನ್ಯೇವಾತ್ಮನೋ ದಾನಂ ಕರ್ತುಮರ್ಹಸಿ ಧರ್ಮತಃ ॥ ೨೨ ॥

---

೧೭. ಪಾರ್ವತಿಯೆ! ಆ ಕನ್ಯೆಯ ಮಾತುಗಳನ್ನು ಕೇಳಿ ರಾಜೇಂದ್ರನು ಹೇಳಿದನು. "ಕಲ್ಯಾಣಿಯೆ! ನೀನು ಆಡುವ ಮಾತುಗಳಿಂದ ನೀನು ರಾಜಪುತ್ರಿಯೆಂಬುದು ಸ್ಪಷ್ಟವಾಗಿರುವುದು.

೧೮. ಸುಂದರಿಯೆ! ನೀನು ನನಗೆ ಪತ್ನಿಯಾಗು. ನಿನಗೆ ಏನು ಮಾಡಬೇಕೆಂಬುವನ್ನು ಹೇಳು. ನೀನು ಹೆಂಡತಿಯಾಗಲೊಪ್ಪಿದರೆ ಚಿನ್ನ, ರತ್ನಗಳು, ವಸ್ತ್ರಗಳು, ಕುಂಡಲಗಳು ಮುಂತಾದ ಎಲ್ಲವನ್ನೂ ನಿನಗೆ ಬಳುವಳಿಯಾಗಿ ಕೊಡುವೆನು.

೧೯. ಸುಂದರಿಯೆ! ನಿನಗೆ ಭಯವಾಗಿದ್ದರೆ ಗಾಂಧರ್ವವಿಧಿಯಿಂದ ನನ್ನನ್ನು ಮದುವೆಯಾಗು. ವಿವಾಹಕ್ರಮಗಳಲ್ಲೆಲ್ಲ ಕ್ಷತ್ರಿಯರಿಗೆ ಗಾಂಧರ್ವವೇ ಶ್ರೇಷ್ಠವೆಂದು ಹೇಳುವರು."

೨೦. ಆ ಮಹಾರಾಜನ ಮಾತನ್ನು ಕೇಳಿ ಆ ಕನ್ಯೆಯು, "ಒಂದು ಕ್ಷಣ ಕಾಲ ತಡೆಮಾಡು; ಆ ಮಹರ್ಷಿಯೇ ನನ್ನನ್ನು ನಿನಗೆ ಕೊಡುವನು" ಎಂದಳು.

೨೧. ರಾಜನು ಹೇಳುತ್ತಾನೆ:—"ಸುಂದರಿಯೆ! ನೀನು ನಿರ್ದುಷ್ಟಳು. ನಿನ್ನನ್ನು ಬಹಳವಾಗಿ ಅಪೇಕ್ಷಿಸುತ್ತಿರುವೆನು. ಅದಕ್ಕಾಗಿಯೇ ನಿನ್ನನ್ನು ಯಾಚಿಸುತ್ತ ನಿಂತಿರುವೆನು. ನೀನು ನನ್ನ ಮನಸ್ಸನ್ನೇ ಸೆಳೆದಿರುವೆ.

೨೨. ಆತ್ಮನಿಗೆ ಆತ್ಮನೇ ಬಂಧುವು. ಆತ್ಮನಿಗೆ ತಾನೇ ಗತಿಯು. ಆದುದರಿಂದ ಧರ್ಮದಂತೆಯೂ ನಿನ್ನನ್ನು ನಿಷ್ಠೆಯಿಂದ ಇನ್ನೊಬ್ಬನಿಗೆ ಒಪ್ಪಿಸಿಕೊಳ್ಳಲು ನಿನಗೇ ಅಧಿಕಾರವಿರುವುದು."

ಕನ್ಯೋವಾಚ :—

ಯದಿ ಧರ್ಮಪಥಸ್ತ್ವೇಷ ಯದಿ ಚಾತ್ಮಾ ಪ್ರಭುರ್ಮಮ ।
ಸತ್ಯಂ ಮೇ ಪ್ರತಿಜಾನೀಹಿ ದತ್ತಮಾತ್ಮಾಸಮಪ್ಯ ಮೇ ॥ ೨೩ ॥
ಇತಿ ತಸ್ಯಾ ವಚಃ ಶ್ರುತ್ವಾ ಪರಿಣೀತಾ ನೃಪೇಣ ಹಿ ।
ಗಾಂಧರ್ವೇಣ ವಿವಾಹೇನ ಕಾಮಾಸಕ್ತೇನ ಪಾರ್ವತಿ ॥ ೨೪ ॥
ಕಾಮಿತಾ ಸಾ ನೃಪೇಣೈವ ತತೋ ಗಂತುಂ ಸಮುದ್ಯತಃ ।
ಏತಸ್ಮಿನ್ನಂತರೇ ದೇವಿ ಕಣ್ವಶ್ಚಾಶ್ರಮಮಭ್ಯಗಾತ್ ॥ ೨೫ ॥
ಸಾ ಕನ್ಯಾ ಪಿತರಂ ದೃಷ್ಟ್ವಾ ಹ್ರಿಯಾ ನೋಪಜಗಾಮ ತಂ ॥ ೨೬ ॥
ವಿಜ್ಞಾಯಾಥ ಚ ತಾಂ ವಿಪ್ರೋ ದಿವ್ಯಜ್ಞಾನೋ ಮಹಾತಪಾಃ ।
ಉವಾಚ ಪರಮಂ ಕ್ರುದ್ಧಸ್ತಾಂ ಕನ್ಯಾಂ ಕಾಮಮೋಹಿತಾಂ ॥ ೨೭ ॥
ತ್ವಯಾಪಿ ದುಷ್ಟೇ ರಹಸಿ ಮಾಮವಜ್ಞಾಯ ಯತ್ಕೃತಃ ।
ಸ್ವಯಂ ಸ್ವಯಂವರೋ ಮೋಹಾತ್ತಸ್ಮಾತ್ಕೃಷ್ಣಾ ಭವಿಷ್ಯಸಿ ॥ ೨೮ ॥

---

೨೩. ಕನ್ಯೆಯು ಹೇಳುತ್ತಾಳೆ:—"ಇದೇ ಧರ್ಮಮಾರ್ಗವಾದರೆ ನಾನೇ ನನಗೆ ಈಶ್ವರಿಯಾಗಿದ್ದರೆ ನನ್ನನ್ನೇ ನಿನಗೆ ಒಪ್ಪಿಸಿಕೊಂಡಿರುವೆನೆಂಬುದೇ ಸತ್ಯವೆಂದು ತಿಳಿ."

೨೪. ಇಂತೆಂದ ಆಕೆಯ ಮಾತನ್ನು ಕೇಳಿ ಮಹಾರಾಜನು ಆಕೆಯನ್ನು ಸ್ವೀಕಾರಮಾಡಿಕೊಂಡನು. ಪಾರ್ವತಿಯೆ! ಕಾಮಪೀಡಿತನಾದ ಆತನು ಗಾಂಧರ್ವವಿಧಿಯನ್ನನುಸರಿಸಿ ಆಕೆಯನ್ನು ಮದುವೆಯಾದನು.

೨೫. ದೇವಿಯೆ! ರಾಜನ ಇಷ್ಟಾನುಸಾರವಾಗಿ ಆಕೆಯು ಆತನ ಹಿಂದೆ ಹೊರಡಲನುವಾಗುತ್ತಿರುವ ಸಮಯದಲ್ಲಿಯೇ ಕಣ್ವಮುನಿಯೂ ಆಶ್ರಮಕ್ಕೆ ಹಿಂದಿರುಗಿದನು.

೨೬. ತಂದೆಯನ್ನು ಕಂಡು ಆ ಕನ್ಯೆಯು ನಾಚಿಕೆಗೊಂಡು ಎಂದಿನಂತೆ ಆತನಿಗೆ ನಮಸ್ಕರಿಸಲಿಲ್ಲ.

೨೭. ದಿವ್ಯಜ್ಞಾನಿಯೂ, ಮಹಾತಪಸ್ವಿಯೂ ಆದ ಬ್ರಾಹ್ಮಣೋತ್ತಮನು ನಡೆದುದನ್ನು ತಿಳಿದು ಕೋಪಗೊಂಡು ಕಾಮಮೋಹಿತಳಾದ ಆಕೆಗೆ ಶಾಪವನ್ನಿತ್ತನು.

೨೮. "ದುಷ್ಟಳೆ! ನನ್ನನ್ನು ಕಡೆಗಂಡು ಮೋಹಪರವಶಳಾಗಿ ಏಕಾಂತದಲ್ಲಿ ಸ್ವತಂತ್ರಳಾಗಿ ಸ್ವಯಂವರವನ್ನು ಮಾಡಿಕೊಂಡೆಯಾದುದರಿಂದ ನೀನು ಕಪ್ಪು ದೇಹವುಳ್ಳವಳಾಗುವೆ.

ಕುತ್ಸಿತಾ ನಿರ್ಘೃಣಾ ದೀನಾ ನಿರ್ಲಜ್ಜಾ ರೂಪವರ್ಜಿತಾ ।
ಅಯಂ ತೇ ನೃಪತಿರ್ಭರ್ತಾ ದುಷ್ಟರೂಪೋ ಭವಿಷ್ಯತಿ ॥ ೨೯ ॥
ಇತ್ಯುಕ್ತಾ ತತ್ಕ್ಷಣಾಜ್ಜಾತಾ ಸಾ ಕನ್ಯಾ ರೂಪವರ್ಜಿತಾ ।
ಕುರೂಪೋ ನೃಪತಿರ್ಜಾತಃ ಶಾಪಾತ್ತಸ್ಯ ಮಹಾತ್ಮನಃ ॥ ೩೦ ॥
ಅಥ ಪ್ರಸಾದಯಾಮಾಸ ಸಾ ಕನ್ಯಾ ಪಿತರಂ ತದಾ ।
ಬಾಲಾಽನಭಿಜ್ಞಾ ಮೂಢಾಽಹಂ ಮನ್ಮಥೇನ ಪ್ರಪೀಡಿತಾ ॥ ೩೧ ॥
ಅಜ್ಞಾನಾಚ್ಚ ಕೃತಂ ಪಾಪಂ ತಾತ ತ್ವಂ ಕ್ಷಂತುಮರ್ಹಸಿ ।
ಅಯಂ ಮಹೀಪತಿಸ್ತಾತ ಪ್ರತ್ಯಗ್ಲೀನೋ ಮಹಾವ್ರತಃ ॥ ೩೨ ॥
ನ ಚಾಽಹಂ ಪ್ರಾರ್ಥಿತಾ ತೇನ ಮಯಾಽಸೌ ಪ್ರಾರ್ಥಿತೋ ನೃಪಃ ।
ತಸ್ಮಾದನುಗ್ರಹಂ ತಾತ ಕರ್ತುಮರ್ಹಸಿ ಚಾವಯೋಃ ॥ ೩೩ ॥
ಇತಿ ತಸ್ಯಾ ವಚಃ ಶ್ರುತ್ವಾ ಸ ವಿಪ್ರೋಽತಿಕೃಪಾನ್ವಿತಃ ।
ಉವಾಚ ಸ್ವಾಂ ದುಹಿತರಮಾಶ್ವಾಸ್ಯೈವಂ ಪುನಃ ಪುನಃ ॥ ೩೪ ॥

---

೨೯. ನೀನು ನೀಚಳೂ, ದಯಾರಹಿತಳೂ, ದೀನಳೂ, ನಾಚಿಕೆಯಿಲ್ಲದವಳೂ, ರೂಪಹೀನಳೂ ಆಗುವೆ. ನಿನ್ನ ಈ ಗಂಡನೂ ಸಹ ನೀಚವಾದ ರೂಪವನ್ನೇ ತಾಳುವನು.''

೩೦. ಇಂತೆಂದು ಆತನು ಶಾಪವನ್ನು ಕೊಡುತ್ತಲೇ ಕನ್ಯೆಯು ಆ ಸೌಂದರ್ಯವನ್ನು ಕಳೆದುಕೊಂಡಳು. ಆ ಮಹಾತ್ಮನ ಶಾಪದಿಂದ ಮಹಾರಾಜನೂ ಕುರೂಪಿಯಾದನು.

೩೧. ಆಗಲಾ ಕನ್ಯೆಯು ತಂದೆಯನ್ನು ಸುಮುಖನನ್ನಾಗಿ ಮಾಡಿಕೊಳ್ಳಲು ಹೀಗೆ ಪ್ರಾರ್ಥಿಸಿಕೊಂಡಳು. ''ನಾನು ಬಾಲಕಿಯು; ಏನೂ ಅರಿಯದವಳು; ಮೂಢಳೂ, ಕಾಮಪೀಡಿತಳೂ ಆಗಿರುವೆನು.

೩೨. ತಂದೆಯೆ! ಅಜ್ಞಾನದಿಂದ ಮಾಡಿದ ಈ ಪಾಪವನ್ನು ಕ್ಷಮಿಸಲು ನೀನೇ ಸಮರ್ಥನಾಗಿರುವೆ. ಈ ಭೂಪಾಲಕನು ಮಹಾವ್ರತನಿಷ್ಠನಾಗಿ ಬ್ರಹ್ಮಚಿಂತನೆಯಲ್ಲಿರುವವನು.

೩೩. ಆತನು ನನ್ನನ್ನು ಕೇಳಲಿಲ್ಲ. ನಾನೇ ಆತನನ್ನು ಪ್ರಾರ್ಥಿಸಿಕೊಂಡೆನು. ಆದುದರಿಂದ ನಮ್ಮಿಬ್ಬರಲ್ಲಿಯೂ ನೀನು ಅನುಗ್ರಹವನ್ನು ಮಾಡಬೇಕು.''

೩೪. ಇಂತೆಂದು ವ್ಯಾಕುಲದಿಂದಾಡಿದ ಮಗಳ ಮಾತನ್ನು ಕೇಳಿ ಆ ಬ್ರಾಹ್ಮಣನು ಅತ್ಯಂತ ಕೃಪೆಯುಳ್ಳವನಾಗಿ ಅವಳನ್ನು ಸಮಾಧಾನಗೊಳಿಸುತ್ತ ಮಾತನಾಡಿದನು.

ನೈವ ನಾಗನ್ಯತಂ ಪುತ್ರಿ ಯಾವದದ್ಯ ಸ್ಮರಾಮ್ಯಹಂ ।
ದೈವಮತ್ರ ಪರಂ ಮನ್ಯೇ ಧಿಗ್ಬುದ್ಧಿಂ ಧಿಕ್ಪರಾಕ್ರಮಂ ॥ ೩೫ ॥
ಅಕಾರ್ಯಂ ಕಾರಿತೋ ಯೇನ ಬಲಾದಹಮನಿಂದಿತೇ ।
ಉಪದೇಶಂ ಪ್ರದಾಸ್ಯಾಮಿ ತತ್ತ್ವಂ ಕರ್ತುಮಿಹಾಽರ್ಹಸಿ ॥ ೩೬ ॥
ಮಹಾಕಾಲವನೇ ಪುಣ್ಯೇ ಲಿಂಗಂ ರೂಪಪ್ರದಾಯಕಂ ।
ಪಶುಪೇಶ್ವರಪೂರ್ವೇ ತು ವಿದ್ಯತೇಽಭೀಷ್ಟದಾಯಕಂ ॥ ೩೭ ॥
ತತ್ತ್ವಂ ಗಚ್ಛ ತ್ವರಾಯುಕ್ತಾ ಸಹಭರ್ತ್ರಾ ನೃಪೇಣ ಹಿ ।
ರೂಪಂ ಪ್ರಾಪ್ಸ್ಯಸಿ ದುಷ್ಪ್ರಾಪ್ಯಂ ಲಿಂಗದರ್ಶನಮಾತ್ರತಃ ॥ ೩೮ ॥
ಇತ್ಯುಕ್ತ್ವಾ ಸಾ ತದಾ ಕನ್ಯಾ ಸಹ ಭರ್ತ್ರಾ ಗತಾ ಪ್ರಿಯೇ ।
ಮಹಾಕಾಲವನೇ ರಮ್ಯೇ ಯತ್ರ ಲಿಂಗಮನುತ್ತಮಂ ॥ ೩೯ ॥
ದದರ್ಶ ಪರಯಾ ಭಕ್ತ್ಯಾ ಸ ಚ ರಾಜಾ ನರೋತ್ತಮಃ ।
ತತ್ಕ್ಷಣಾದ್ದಿವ್ಯದೇಹಾ ಸಾ ರೂಪೇಣಾಽತಿಮನೋಹರಾ ।
ದಿವ್ಯವಸ್ತ್ರಪರೀಧಾನಾ ದಿವ್ಯಾಽಲಂಕಾರಭೂಷಿತಾ ॥ ೪೦ ॥

---

೩೫. "ಮಗಳೆ! ನನ್ನ ಮಾತೆಂದಿಗೂ ಸುಳ್ಳಾಗದು. ಈಗ ಜ್ಞಾಪಕಕ್ಕೆ ಬರುತ್ತಿರುವುದು. ಇದಕ್ಕೆ ದೈವವೇ ಕಾರಣವೆಂದು ತಿಳಿಯುವೆನು. ಮನುಷ್ಯನ ಬುದ್ಧಿಯೂ ಪರಾಕ್ರಮವೂ ಕೆಲಸಕ್ಕೆ ಬರುವುದಿಲ್ಲ.

೩೬. ಸುಂದರಿಯೆ! ದೈವವೇ ಬಲಾತ್ಕಾರದಿಂದ ನನ್ನ ಕೈಯಲ್ಲಿ ಈ ಅಕಾರ್ಯವನ್ನು ಮಾಡಿಸಿತು. ಆದರೆ ನಿನಗೊಂದುಪಾಯವನ್ನು ಹೇಳುವೆನು. ಅದರಂತೆ ನೀನು ನಡೆದುಕೊಳ್ಳಬೇಕು.

೩೭. ಪುಣ್ಯಕ್ಷೇತ್ರವಾದ ಮಹಾಕಾಲವನದಲ್ಲಿ ಪಶುಪತೀಶ್ವರನಿಗೆ ಪೂರ್ವದಲ್ಲಿ ಸೌಂದರ್ಯಪ್ರದವೂ ಸರ್ವಾಭೀಷ್ಟದಾಯಕವೂ ಆದ ಲಿಂಗವೊಂದಿರುವುದು.

೩೮. ಶೀಘ್ರವಾಗಿ ನೀನು ಪತಿಯಾದ ಈ ರಾಜೇಂದ್ರನೊಡನೆ ಅಲ್ಲಿಗೆ ಹೋಗು. ಆ ಲಿಂಗವನ್ನು ನೋಡುವಮಾತ್ರದಿಂದಲೇ ಇತರರಿಗೆ ದುರ್ಲಭವಾದ ರೂಪವನ್ನು ಪಡೆಯುವೆ."

೩೯. ಪ್ರಿಯಳೆ! ಇಂತೆಂದು ತಂದೆಯು ಹೇಳಲು ಆಕೆಯು ತನ್ನ ಪತಿಯೊಡನೆ ಮಹಾಕಾಲವನವೆಂಬ ರಮ್ಯಕ್ಷೇತ್ರದಲ್ಲಿ ಆ ಲಿಂಗವಿದ್ದೆಡೆಗೆ ಬಂದು ಸೇರಿದಳು.

೪೦. ಆಕೆಯೂ ಆ ಮಹಾರಾಜನೂ ಅತ್ಯಂತಭಕ್ತಿಯುಕ್ತರಾಗಿ ಅದರ ದರ್ಶನವನ್ನು ಮಾಡಿದರು. ಆ ಕ್ಷಣದಲ್ಲಿಯೇ ಆಕೆಯು ದಿವ್ಯಶರೀರಳೂ, ಅತಿ ಮನೋಹರವಾದ ರೂಪವುಳ್ಳವಳೂ, ದಿವ್ಯವಸ್ತ್ರಧಾರಿಣಿಯೂ, ದಿವ್ಯಾಲಂಕಾರ ಭೂಷಿತೆಯೂ ಆದಳು.

ಸ ಚ ರಾಜಾ ತಥಾ ಜಾತಃ ಕಂದರ್ಪಸದೃಶಾಕೃತಿಃ ।
ರೂಪೇಣಾಽಪ್ರತಿಮೋ ಲೋಕೇ ತಸ್ಯ ಲಿಂಗಸ್ಯ ದರ್ಶನಾತ್ ॥ ೪೧ ॥
ಅತೋ ಲೋಕೇಷು ವಿಖ್ಯಾತೋ ದೇವೋ ರೂಪೇಶ್ವರಃ ಪ್ರಿಯೇ ।
ರೂಪದೋ ಧನದೋಽತ್ಯರ್ಥಂ ಪುತ್ರದಃ ಸ್ವರ್ಗದಸ್ತಥಾ ॥ ೪೨ ॥
ಸ ಚ ರಾಜಾ ಸ್ವಕಂ ಪ್ರಾಪ್ತೋ ರಾಷ್ಟ್ರಂ ಸಸ್ಯಾದಿಸಂಯುತಂ ।
ಪ್ರಿಯಯಾ ಪರಯಾ ಸಾರ್ಧಂ ಚಕ್ರೇ ರಾಜ್ಯಮಕಂಟಕಂ ॥ ೪೩ ॥
ರಾಜ್ಯಂ ಕೃತ್ವಾ ಗತಃ ಸ್ವರ್ಗಂ ಭಾರ್ಯಯಾ ಸಹ ಪಾರ್ವತಿ ।
ದೇದೀಪ್ಯಮಾನೋ ವಪುಷಾ ದ್ವಿತೀಯ ಇವ ಭಾಸ್ಕರಃ ॥ ೪೪ ॥
ವಿಮಾನೇನ ಸುದೀಪ್ತೇನ ವಂದ್ಯಮಾನೋ ದಿವಾಲಯೇ ।
ದರ್ಶನಾತ್ತಸ್ಯ ಲಿಂಗಸ್ಯ ಪ್ರಾಪ್ತಃ ಪದಮನಾಮಯಂ ॥ ೪೫ ॥
ಯೇ ಪಶ್ಯಂತಿ ವಿಶಾಲಾಕ್ಷಿ ದೇವಂ ರೂಪೇಶ್ವರಂ ಶಿವಂ ।
ನ ತೇ ರೂಪೇಣ ಹೀಯಂತೇ ಯಶಸಾ ಚ ಕುಲೇನ ಚ ॥ ೪೬ ॥

---

೪೧. ಆ ಲಿಂಗದ ದರ್ಶನದಿಂದ ಮಹಾರಾಜನೂ ಮನ್ಮಥಸಮಾನವಾದ ರೂಪವುಳ್ಳವನೂ, ಲೋಕದಲ್ಲಿ ಅಪ್ರತಿಮ ಸೌಂದರ್ಯವಂತನೆನಿಸಿದವನೂ ಆಗಿ ಮಾರ್ಪಟ್ಟನು.

೪೨. ಪ್ರಿಯಳೆ! ಆದುದರಿಂದಲೇ ಆ ಲಿಂಗವು ರೂಪೇಶ್ವರವೆಂದು ಚತುರ್ದಶಲೋಕಗಳಲ್ಲಿಯೂ ಪ್ರಖ್ಯಾತವಾಗಿ ಸೌಂದರ್ಯವನ್ನೂ, ಧನವನ್ನೂ, ಪುತ್ರಸಂತಾನವನ್ನೂ, ಸ್ವರ್ಗಫಲವನ್ನೂ ಕೊಡುತ್ತಿರುವುದು.

೪೩. ಮಹಾರಾಜನೂ ಪರಮಪ್ರಿಯಳಾದ ಹೆಂಡತಿಯೊಡನೆ ಸರ್ವಸಸ್ಯ ಸಮೃದ್ಧವಾದ ತನ್ನ ರಾಜ್ಯಕ್ಕೆ ಬಂದು ನಿಷ್ಕಂಟಕವಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು.

೪೪. ಪಾರ್ವತಿಯೆ! ಹೀಗೆ ರಾಜ್ಯವಾಳುತ್ತಿದ್ದು ಬಳಿಕ ತೇಜಃಪುಂಜವಾದ ದೇಹವನ್ನು ತಾಳಿ ಎರಡನೆಯ ಸೂರ್ಯನೊ ಎಂಬ ಭ್ರಾಂತಿಯನ್ನುಂಟುಮಾಡುತ್ತ ತನ್ನ ಮಹಿಷಿಯೊಡಗೂಡಿ ಸ್ವರ್ಗಲೋಕವನ್ನು ಕುರಿತು ಪ್ರಯಾಣಮಾಡಿದನು.

೪೫. ಅತಿ ಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಸ್ವರ್ಗಲೋಕ ದಲ್ಲಿಯೂ ಮಹಾಗೌರವವನ್ನು ತಾಳಿದನು. ಇಂತು ಆ ಮಹಾರಾಜನು ಆ ಮಹಾ ಲಿಂಗದ ಸಂದರ್ಶನದಿಂದ ಶಾಶ್ವತವಾದ ಪದವನ್ನು ಪಡೆದನು.

೪೬. ವಿಶಾಲಾಕ್ಷಿಯೆ! ಯಾವ ನರರು ರೂಪೇಶ್ವರಮಹಾದೇವನನ್ನು ನೋಡುವರೊ, ಅವರೆಂದಿಗೂ ರೂಪದಿಂದಲೂ, ಕೀರ್ತಿಯಿಂದಲೂ, ಕುಲ ದಿಂದಲೂ ಹೀನರಾಗುವುದಿಲ್ಲ.

ಸದಾ ರೂಪಕರಂ ಲಿಂಗಂ ಭುಕ್ತಿಮುಕ್ತಿಫಲಪ್ರದಂ ।
ಯೇ ಪಶ್ಯಂತಿ ನರಾ ಲೋಕೇ ತೇಷಾಂ ಲೋಕಾಃ ಸದಾಽಕ್ಷಯಾಃ॥ ೪೭ ॥
ಯೇಽರ್ಚಯಂತಿ ನರಾ ನಿತ್ಯಂ ದೇವಂ ರೂಪೇಶ್ವರಂ ಪರಂ ।
ತೇಽರ್ಚಿತಾ ಯಾಂತಿ ಯಾನೇನ ಮಮ ಲೋಕಂ ಸನಾತನಂ ॥ ೪೮ ॥
ಸ ಏವ ಸುಕೃತೀ ಲೋಕೇ ಕುಲಂ ತೇನಾಽಪ್ಯಲಂಕೃತಂ ।
ಯಃ ಪೂಜಯತಿ ರೂಪೇಶಂ ರೂಪಸೌಭಾಗ್ಯದಾಯಕಂ ॥ ೪೯ ॥
ಯಃ ಪೂಜಯತಿ ದೇವೇಶಂ ಪ್ರಸಂಗಾದಪಿ ಪಾರ್ವತಿ ।
ಧನವಾನ್ರೂಪವಾನ್ ಸೋಽಪಿ ರಾಜಾ ಭವತಿ ಭೂತಲೇ ॥ ೫೦ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ರೂಪೇಶ್ವರಸ್ಯ ದೇವಸ್ಯ ಧನುಃಸಾಹಸ್ರಕಂ ಶೃಣು ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ರೂಪೇಶ್ವರಮಾಹಾತ್ಮ್ಯವರ್ಣನಂ" ನಾಮ
ದ್ವಿಷಷ್ಟಿತಮೋಽಧ್ಯಾಯಃ

---

೪೭. ರೂಪಪ್ರದವೂ, ಭುಕ್ತಿಮುಕ್ತಿಪ್ರದವೂ ಆದ ಈ ಲಿಂಗವನ್ನು ನಿತ್ಯವೂ ಯಾರು ನೋಡುವರೊ, ಅವರಿಗೆ ನಿತ್ಯಗಳೂ, ನಾಶರಹಿತಗಳೂ ಆದ ಲೋಕಗಳೇ ಲಭಿಸುವುವು.

೪೮. ಸರ್ವೋತ್ತಮನಾದ ರೂಪೇಶ್ವರಮಹಾದೇವನನ್ನು ಯಾರು ನಿತ್ಯದಲ್ಲಿಯೂ ಪೂಜಿಸುವರೊ, ಅವರು ತಾವೇ ಪ್ರಜೆಗಳನ್ನು ಕೈಗೊಳ್ಳುತ್ತ ದಿವ್ಯ ವಿಮಾನದಲ್ಲಿ ಸನಾತನವಾದ ನನ್ನ ಲೋಕವನ್ನು ಸೇರುವರು.

೪೯. ಸೌಂದರ್ಯಸೌಭಾಗ್ಯಗಳನ್ನು ನೀಡುವ ಈ ರೂಪೇಶ್ವರನನ್ನು ಪೂಜಿಸಿದ ಮಾನವನೇ ಪುಣ್ಯವಂತನು. ಅವನೇ ತನ್ನ ಕುಲವನ್ನಲಂಕರಿಸುವವನು.

೫೦. ಪಾರ್ವತಿಯೆ! ಪ್ರಸಂಗವಶದಿಂದ ಬಂದಾದರೂ ಯಾವನು ರೂಪೇಶ್ವರನನ್ನು ಪೂಜಿಸುವನೊ, ಆವನು ಮಹಾಧನಿಕನೂ, ರೂಪವಂತನೂ ಆಗುವನಲ್ಲದೆ ಭೂಮಂಡಲದಲ್ಲಿ ರಾಜನಾಗಿ ಹುಟ್ಟುವನು.

೫೧. ದೇವಿಯೆ! ಇಂತು ರೂಪೇಶ್ವರನ ಪ್ರಭಾವವನ್ನು ನಿನಗೆ ಹೇಳಿರುವೆನು. ಪಾಪನಾಶಕವಾದ ಈ ಚರಿತ್ರೆಯನ್ನು ಕೇಳಿದಮೇಲೆ ಧನುಸ್ಸಾಹಸ್ರಕೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ರೂಪೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಷಷ್ಟಿತಮೋಽಧ್ಯಾಯಃ

### ಧನುಃಸಾಹಸ್ರಕೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ಧನುಃಸಹಸ್ರನಾಮಾನಮೀಶ್ವರಂ ಶೃಣು ಪಾರ್ವತಿ ।
ತ್ರಿಷಷ್ಟಿಸಂಖ್ಯಕಂ ದಿವ್ಯಂ ದರ್ಶನಾತ್ಪಾಪನಾಶನಮ್ ॥ ೧ ॥
ವಿದೂರಥೋ ನಾಮ ನೃಪಃ ಖ್ಯಾತಕೀರ್ತಿರಭೂದ್ಭುವಿ ।
ತಸ್ಯ ಪುತ್ರದ್ವಯಂ ಜಾತಂ ಸುನೀತಿಃ ಸುಮತಿಸ್ತಥಾ ॥ ೨ ॥
ಏಕದಾ ತು ವನಂ ಯಾತೋ ಮೃಗಯಾಂ ಸ ವಿದೂರಥಃ ।
ದದರ್ಶ ಗರ್ತಂ ಸುಮಹದ್ಭೂಮೇರ್ಮುಖಮಿವೋದ್ಗತಂ ॥ ೩ ॥
ತಂ ದೃಷ್ಟ್ವಾ ಚಿಂತಯಾಮಾಸ ಕಿಮೇತದಿತಿ ಪಾರ್ಥಿವಃ ।
ಪಾತಾಲವಿವರಂ ಮನ್ಯೇ ವಡವಾಽನಲಸನ್ನಿಭಂ ॥ ೪ ॥
ಚಿಂತಯನ್ನಿವ ತತ್ರಾಽಸೌ ದದರ್ಶ ವಿಜನೇ ವನೇ ।
ಬ್ರಾಹ್ಮಣಂ ಸುವ್ರತಂ ನಾಮ ತಪಸ್ವಿನಮಕಲ್ಮಷಂ ॥ ೫ ॥
ಸ ತಂ ಪಪ್ರಚ್ಛ ನೃಪತಿಃ ಕಿಮೇತದಿತಿ ಭೋ ದ್ವಿಜ ॥ ೬ ॥

---

### ಕನ್ನಡದ ಅನುವಾದ

#### ಧನುಸ್ಸಾಹಸ್ರಕೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಅರುವತ್ತಮೂರನೆಯ ಮಹಾಲಿಂಗವಾದ ಧನುಸ್ಸಾಹಸ್ರಕೇಶ್ವರವೆಂಬುದರ ಚರಿತ್ರೆಯನ್ನು ಕೇಳು. ಆ ದಿವ್ಯಲಿಂಗದ ದರ್ಶನವು ಸಕಲ ಪಾತಕಗಳನ್ನೂ ನಾಶಗೊಳಿಸುವುದು.

೨. ಹಿಂದೆ ಭೂಲೋಕದಲ್ಲಿ ಪ್ರಖ್ಯಾತವಾದ ಕೀರ್ತಿಯುಳ್ಳ ವಿದೂರಥನೆಂಬೊಬ್ಬ ಮಹಾರಾಜನಿದ್ದನು. ಆತನಿಗೆ ಸುನೀತಿಯೆಂದೂ, ಸುಮತಿಯೆಂದೂ ಇಬ್ಬರು ಪುತ್ರರಾದರು.

೩. ಒಮ್ಮೆ ಆ ವಿದೂರಥನು ಬೇಟೆಗಾಗಿ ಅರಣ್ಯವನ್ನು ಸೇರಿದನು. ಅಲ್ಲಿ ಭೂದೇವಿಯ ತೆರದ ಬಾಯಿಯಂತಿದ್ದ ಒಂದು ದೊಡ್ಡ ಬಿಲವನ್ನು ನೋಡಿದನು.

೪. ಅದನ್ನು ಕಂಡು ರಾಜೇಂದ್ರನು ಇದೇನೆಂದು ಚಿಂತಿಸುತ್ತ ಬಡಬಾಗ್ನಿಗೆ ಸಮಾನವಾದ ಆ ಬಿಲವು ಪಾತಾಳಲೋಕದ ಪ್ರವೇಶಮಾರ್ಗವೇ ಇರಬಹುದೆಂದು ನಿಶ್ಚಯಿಸಿದನು.

೫. ಹೀಗೆ ಚಿಂತಿಸುತ್ತ ನಿರ್ಜನವಾದ ಅರಣ್ಯದಲ್ಲಿ ತಿರುಗುತ್ತಿರಲು ಆತನು ತಪಸ್ವಿಯೂ ಪಾಪದೂರನೂ ಆದ ಸುವ್ರತನೆಂಬೊಬ್ಬ ಬ್ರಾಹ್ಮಣನನ್ನು ಕಂಡನು.

೬. ಆತನನ್ನು, "ಅಯ್ಯಾ, ಬ್ರಾಹ್ಮಣೋತ್ತಮನೆ! ಈ ವಿವರವು ಯಾವುದು?" ಎಂದು ಪ್ರಶ್ನೆಮಾಡಿದನು.

ಬ್ರಾಹ್ಮಣ ಉವಾಚ :—

ದಾನವಃ ಸುಮಹಾವೀರ್ಯೋ ವಸತ್ಯುಗ್ರೋ ರಸಾತಲೇ ।
ಕುಜಂಭೋ ನಾಮ ವಿಖ್ಯಾತೋ ಭಿನತ್ತಿ ವಸುಧಾಮಿಮಾಂ ॥ ೭ ॥
ತಮಜಿತ್ವಾ ಕಥಂ ರಾಜ್ಯಂ ಭೋಕ್ಷ್ಯಸೇ ವಸುಧಾಽಧಿಪ ।
ತೇನ ವಿಧ್ವಂಸಿತಾ ವಿಪ್ರಾ ರಾತ್ರೌ ನಿಃಸೃತ್ಯ ಪಾರ್ಥಿವ ॥ ೮ ॥
ಉಪದ್ರುತಾಸ್ತಥಾ ದೇಶಾ ಧ್ವಸ್ತಾಶ್ಚೈವ ತಥಾಽಽಶ್ರಮಾಃ ।
ಆಪ್ಯಾಯಯತಿ ದೈತ್ಯೋಽಯಂ ಸಬಲೀ ಮುಸಲಾಯುಧಃ ॥ ೯ ॥
ಯದಿ ತ್ವಂ ಘಾತಯಸ್ಯೇನಂ ಪಾತಾಲಾಂತರಗೋಚರಂ ।
ತತಃ ಸಮಸ್ತವಸುಧಾಪತಿರೇವ ಭವಿಷ್ಯಸಿ ॥ ೧೦ ॥
ಇತಿ ವಿಪ್ರವಚಃ ಶ್ರುತ್ವಾ ಮಂತ್ರಯಾಮಾಸ ಪಾರ್ಥಿವಃ ।
ಮಂತ್ರಿಭಿಃ ಸಹಿತೋಽಮೋಘಂ ಶ್ರುತ್ವಾ ಮುಸಲಮುದ್ರಿಜೇ ॥ ೧೧ ॥
ತಂ ಮಂತ್ರಂ ಕ್ರಿಯಮಾಣಂ ತು ಸೂನುಭ್ಯಾಂ ಸಹ ಮಂತ್ರಿಭಿಃ ।
ತತ್ಪಾರ್ಶ್ವವರ್ತಿನೀ ಕನ್ಯಾ ಶುಶ್ರಾವಾಽಥ ಮುದಾವತೀ ॥ ೧೨ ॥

---

೭. ಬ್ರಾಹ್ಮಣನು ಹೇಳುತ್ತಾನೆ :—"ರಸಾತಲಲೋಕದಲ್ಲಿ ಮಹಾಪರಾಕ್ರಮಿಯೂ, ಭಯಂಕರನೂ, ಬಹುಪ್ರಸಿದ್ಧನೂ ಆದ ಕುಜಂಭನೆಂಬ ಮಹಾ ರಾಕ್ಷಸನೊಬ್ಬನು ವಾಸಿಸುತ್ತಿರುವನು. ಅವನೇ ಭೂಮಿಯನ್ನು ಹೀಗೆ ಸೀಳಿರುವನು.

೮. ಮಹಾರಾಜನೆ! ಆತನನ್ನು ಜಯಿಸಲಾರದ ನೀನು ರಾಜ್ಯವನ್ನು ಸುಖದಿಂದ ಹೇಗೆ ಅನುಭವಿಸುವೆ? ಆತನು ರಾತ್ರಿಯಲ್ಲಿ ಹೊರಗೆ ಬಂದು ಬ್ರಾಹ್ಮಣರನ್ನೆಲ್ಲ ನಾಶಗೊಳಿಸುವನು.

೯. ಅವನಿಂದಲೇ ದೇಶಗಳೆಲ್ಲವೂ ಪೀಡಿಸಲ್ಪಟ್ಟಿರುವುವು. ತಪೋನಿರತರ ಆಶ್ರಮಗಳೆಲ್ಲವೂ ನಾಶವಾಗಿರುವುವು. ಮಹಾ ಬಲಶಾಲಿಯಾದ ಆ ದೈತ್ಯನು ಒಂದು ಮುಸಲವನ್ನೇ ಆಯುಧವನ್ನಾಗಿ ಮಾಡಿಕೊಂಡು ಲೋಕವನ್ನು ದುಃಖಗೊಳಿಸುತ್ತಿರುವನು.

೧೦. ಪಾತಾಳಲೋಕದಲ್ಲಿ ವಾಸಿಸುತ್ತಿರುವ ಆತನನ್ನು ನೀನು ಕೊಲ್ಲುವೆಯಾದರೆ ಬಳಿಕ ಸಮಸ್ತ ಭೂಮಂಡಲಕ್ಕೂ ಏಕಚ್ಛತ್ರಾಧಿಪತಿಯಾಗುವೆ."

೧೧. ಪಾರ್ವತಿಯೆ! ಆ ರಾಕ್ಷಸನು ಅಮೋಘವಾದ ಮುಸಲಾಯುಧವನ್ನು ಪಡೆದಿರುವುದನ್ನು ಕೇಳಿ ಮಹಾರಾಜನು ತನ್ನ ಮಹಾ ಮಂತ್ರಿಗಳನ್ನು ಕರೆದು ಅವರೊಡನೆ ಆಲೋಚನೆಯನ್ನು ಮಾಡಿದನು.

೧೨. ಇಂತು ಮಕ್ಕಳೊಡನೆಯೂ ಮಂತ್ರಿಗಳೊಡನೆಯೂ ಮಂತ್ರಾಲೋಚನೆಯನ್ನು ಮಾಡುತ್ತಿದ್ದ ಆತನ ಮಾತುಗಳನ್ನು ಪಕ್ಕದಲ್ಲಿ ನಿಂತಿದ್ದ ಮುದಾವತಿಯೆಂಬ ಕನ್ಯೆಯೂ ಕೇಳುತ್ತಿದ್ದಳು.

ತತಃ ಕತಿಪಯಾಹಃಹೇತು ತಾಂ ಕನ್ಯಾಂ ಜಲಜೇಕ್ಷಣಾಂ ।
ಜಹಾರೋಪವನಾದ್ದೈತ್ಯಃ ಕುಜಂಭಃ ಸ್ವಸಖೀವೃತಾಂ ॥ ೧೩ ॥
ಏತಚ್ಛ್ರುತ್ವಾ ಮಹೀಪಾಲಃ ಕ್ರೋಧಪರ್ಯಾಕುಲೇಕ್ಷಣಃ ।
ಉವಾಚ ಪುತ್ರೌ ಜಾನೇಽಹಂ ಸ ಕುಜಂಭೋ ಮಹಾಸುರಃ ॥ ೧೪ ॥
ದೃಷ್ಟ್ವಾ ಭೂಮೌ ಪುರಾ ಗರ್ತೇ ತತ್ರ ಸಂಶಯಿತೇ ಮಯಿ ।
ಕಥಿತೋ ದ್ವಿಜಮುಖ್ಯೇನ ಮಯಾ ಪೃಷ್ಟೇನ ಪುತ್ರಕೌ ॥ ೧೫ ॥
ಸ ಹನ್ಯತಾಂ ಸೋಽಪಹರ್ತಾ ಮುದಾವತ್ಯಾಃ ಸುದುರ್ಮತಿಃ ।
ಪ್ರಸ್ಥಿತೌ ನೃಪಭಕ್ತ್ಯಾಽಥ ಸ್ವಸೈನ್ಯಪರಿವಾರಿತೌ ॥ ೧೬ ॥
ತೌ ಸುತೌ ತತ್ರ ಸಂಪ್ರಾಪ್ತೌ ಪಾತಾಲೇ ಪಿತೃಶಾಸನಾತ್ ।
ಯುಯುಧಾತೇ ಕುಜಂಭೇನ ಸ್ವಶಕ್ತ್ಯಾ ಸೇನಯಾ ವೃತೌ ॥ ೧೭ ॥
ತತಃ ಪರಿಘನಿಸ್ತ್ರಿಂಶಶಕ್ತಿಶೂಲಪರಶ್ವಧೈಃ ।
ಬಾಣೈಶ್ಚಿರತರಂ ಯುದ್ಧಂ ತೇಷಾಮಾಸೀತ್ಸುದಾರುಣಂ ॥ ೧೮ ॥

---

೧೩. ಬಳಿಕ ಕೆಲವು ದಿನಗಳಾದಮೇಲೆ ಆ ಕಮಲನೇತ್ರೆಯು ತನ್ನ ಸಖಿಯರೊಡನೆ ಉದ್ಯಾನವನದಲ್ಲಿ ಕ್ರೀಡಿಸುತ್ತಿರಲು ಆ ಕುಜಂಭರಾಕ್ಷಸನು ಆಕೆಯನ್ನು ಅಪಹರಿಸಿದನು.

೧೪. ಇದನ್ನು ಕೇಳಿದ ಮಹಾರಾಜನು ಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಮಕ್ಕಳಿಗೆ ಹೇಳಿದನು: "ಪುತ್ರರಿರಾ! ಈ ಕೆಲಸವು ದುಷ್ಟದೈತ್ಯನಾದ ಆ ಕುಜಂಭನದೆಂದು ತಿಳಿದಿರುವೆನು.

೧೫. ಹಿಂದೆ ಭೂಮಿಯಲ್ಲಿದ್ದ ಬಿಲವೊಂದನ್ನು ಕಂಡು ನಾನು ಸಂಶಯಗ್ರಸ್ತನಾಗಿರಲು ನನ್ನ ಪ್ರಶ್ನೆಗೆ ಉತ್ತರವಾಗಿ ಒಬ್ಬ ಬ್ರಾಹ್ಮಣೋತ್ತಮನು ಇವನ ವಿಚಾರವನ್ನು ಹೇಳಿದನು.

೧೬. ಮುದಾವತಿಯನ್ನು ಅಪಹರಿಸಿರುವ ಈ ದುರ್ಬುದ್ಧಿಯನ್ನು ನೀವು ಕೊಂದು ಬನ್ನಿರಿ." ಇಂತೆಂದ ತಂದೆಯಲ್ಲಿಯ ಭಕ್ತಿಯಿಂದ ಅವರಿಬ್ಬರೂ ತಮ್ಮ ಸೈನ್ಯಗಳನ್ನು ತೆಗೆದುಕೊಂಡು ಪಾತಾಳಲೋಕಕ್ಕೆ ಹೊರಟರು.

೧೭. ತಂದೆಯ ಅಪ್ಪಣೆಯನ್ನು ಪಾಲಿಸುವ ಕುತೂಹಲದಿಂದ ಆ ರಾಜಪುತ್ರರು ಪಾತಾಳಕ್ಕೆ ಹೋಗಿ ತಮ್ಮ ಬಾಹುಬಲದಿಂದಲೂ, ಸೈನ್ಯಸಂಪತ್ತಿಯಿಂದಲೂ ಆ ಕುಜಂಭನೊಡನೆ ಹೋರಾಡಿದರು.

೧೮. ಆಗ ಅವರಿಗೆ ಬಹುಕಾಲ ಪರಿಘ, ಅಸ್ತ್ರ, ಶಕ್ತಿ, ಶೂಲ, ಪರಶು, ಬಾಣ ಮುಂತಾದುವುಗಳಿಂದ ಭಯಂಕರವಾದ ಯುದ್ಧವು ನಡೆಯಿತು.

ತತೋ ಮಾಯಾಬಲವತಾ ತೇನ ದೈತ್ಯೇನ ತತ್ಕ್ಷಣಾತ್ ।
ಅಮೋಘೇನಾಽದ್ವಿತೀಯೇನ ಮುಸಲೇನ ವರಾನನೇ ॥ ೧೯ ॥
ಹತಸೈನ್ಯೌ ರಣೇ ಬದ್ಧೌ ರಾಜಪುತ್ರೌ ಮಹಾಬಲೌ ॥ ೨೦ ॥
ತತಃ ಶ್ರುತ್ವಾ ಮಹೀಪಾಲಃ ವಿವರ್ಣವದನೋಽಭವತ್ ।
ಬದ್ಧಪುತ್ರಃ ಪರಾಮಾರ್ತಿಂ ಜಗಾಮ ಗಿರಿಪುತ್ರಿಕೇ ॥ ೨೧ ॥
ರುರೋದ ಬಹುಧಾಽತ್ಯರ್ಥಂ ಪುತ್ರಸ್ನೇಹೇನ ಪಾರ್ಥಿವಃ ।
ತತೋ ವಿಲಪತಸ್ತಸ್ಯ ಮಾರ್ಕಂಡೇಯೋ ಮಹಾಮುನಿಃ ।
ಅನೇಕಸೃಷ್ಟಿಸಂಹಾರ ದೃಷ್ಟಕಾರ್ಯಪರಾವರಃ ॥ ೨೨ ॥
ಉದಿತಾದಿತ್ಯಸಂಕಾಶಃ ಸಪ್ತಕಲ್ಪಾನುಗೋ ವಶೀ ।
ಆಜಗಾಮ ನೃಪಾಽಭ್ಯಾಶೇ ವಿಲಪಂತಂ ದದರ್ಶ ಸಃ ।
ರಾಜಾನಂ ಕಥಯಾಮಾಸ ತ್ರಿಕಾಲಜ್ಞೋ ಮಹಾಮುನಿಃ ॥ ೨೩ ॥
ಮಾ ಶುಚಸ್ತ್ವಂ ಮಹೀಪಾಲ ಕ್ಷತ್ರಿಯೋಽಸಿ ದೃಢವ್ರತಃ ।
ಕ್ವ ಶೋಕಃ ಕ್ವ ಮಹೀಪಾಲೋ ದುರ್ಜೇಯೋ ಲೋಕಪಾಲವತ್ ॥೨೪॥

---

೧೯–೨೦. ಪಾರ್ವತಿಯೆ! ಕಡೆಯಲ್ಲಿ ಮಾಯಾಬಲಶಾಲಿಯಾದ ಆ ರಾಕ್ಷಸನು ನಿಮಿಷಮಾತ್ರದಲ್ಲಿಯೆ ಅಮೋಘವೂ ಅಪ್ರತಿಮವೂ ಆದ ತನ್ನ ಮುಸಲಾಯುಧದಿಂದ ಅವರ ಸೈನ್ಯವನ್ನೆಲ್ಲ ನಾಶಗೊಳಿಸಿ ಮಹಾಪರಾಕ್ರಮಿಗಳಾದ ಆ ರಾಜಪುತ್ರರಿಬ್ಬರನ್ನೂ ಬಂಧಿಸಿದನು.

೨೧. ಗಿರಿತನಯೆ! ಈ ಸಮಾಚಾರವನ್ನು ಕೇಳಿದೊಡನೆಯೇ ಆ ಮಹಾರಾಜನ ಮುಖವು ವಿವರ್ಣವಾಯಿತು. ಮಕ್ಕಳು ಸೆರೆಯಾದುದರಿಂದ ಆತನು ಬಹಳ ಸಂಕಟಗೊಂಡನು.

೨೨. ಪುತ್ರಸ್ನೇಹಕ್ಕೊಳಗಾಗಿ ಆತನು ಬಹಳಕಾಲ ರೋದನವನ್ನು ಮಾಡುತ್ತಿದ್ದನು. ಇಂತು ಪ್ರಲಪಿಸುತ್ತಿದ್ದ ಆತನ ಬಳಿಗೆ ಅನೇಕ ಬ್ರಹ್ಮಾಂಡಗಳ ಸೃಷ್ಟಿಲಯಗಳನ್ನು ಕಂಡು ಪರಾವರಜ್ಞನೆನಿಸಿದ ಮಾರ್ಕಂಡೇಯ ಮಹಾಮುನಿಯು ಬಂದನು.

೨೩. ಬಾಲಸೂರ್ಯನಂತೆ ತೇಜಸ್ವಿಯೂ, ಏಳುಕಲ್ಪಗಳನ್ನು ಕಂಡವನೂ, ಇಂದ್ರಿಯನಿಗ್ರಹತತ್ಪರನೂ ಆದ ಆ ಮಹರ್ಷಿಯು ಬಂದು ದುಃಖಪಡುತ್ತಿರುವ ಆತನ ಬಳಿಗೈದಿ ತ್ರಿಕಾಲಜ್ಞನಾದುದರಿಂದ ಆತನಿಗೆ ಸಮಾಧಾನವನ್ನು ಹೇಳತೊಡಗಿದನು.

೨೪. "ಮಹೀಪಾಲ! ಶೋಕಿಸಬೇಡ. ನೀನು ಕ್ಷತ್ರಿಯನೂ, ಮಹಾವ್ರತನೂ ಆಗಿರುವೆಯಲ್ಲವೆ. ನಿನಗೆ ಶೋಕವೆಲ್ಲಿಯದು? ನಿಜವಾದ ರಾಜನು ಎಂದಿಗೂ ಲೋಕಪಾಲಕನಂತೆ ಅಜೇಯನಾಗಿರುವನು.

ಶೋಕಂ ಕಾಪುರುಷಾಚೀರ್ಣಂ ತ್ಯಜ ತ್ವಂ ರಾಜಸತ್ತಮ ।
ಉದ್ಯಮಂ ಕುರು ರಾಜೇಂದ್ರ ಕುಜಂಭಂ ಘಾತಯಿಷ್ಯಸಿ ॥ ೨೫ ॥
ನಾಽತ್ಯುಚ್ಚಂ ಮೇರುಶಿಖರಂ ನಾಽತಿನೀಚಂ ರಸಾತಲಂ ।
ವ್ಯವಸಾಯಃ ಸಖಾ ಯಸ್ಯ ನಾಽಸ್ತಿದೂರೇ ಮಹೋದಧಿಃ ॥ ೨೬ ॥
ಮಹಾಕಾಲವನೇ ಲಿಂಗಮಾರಾಧಯ ಸಮಾಹಿತಃ ।
ರೂಪೇಶ್ವರಸ್ಯ ದೇವಸ್ಯ ಪಾರ್ಶ್ವೇ ದಕ್ಷಿಣತಃ ಸ್ಥಿತಂ ॥ ೨೭ ॥
ಧನುಃಸಾಹಸ್ರತುಲ್ಯಂ ತು ಮುಸಲಸ್ಯ ನಿವಾರಣಂ ।
ಧನುಃಪ್ರಾಪ್ಸ್ಯಸಿ ರಾಜೇಂದ್ರ ಕುಜಂಭಂ ವಿನಿಪಾತಯ ॥ ೨೮ ॥
ಧನುಃ ಸಾಹಸ್ರಹಸ್ತೈಸ್ತು ರಕ್ಷಿತಂ ಯೋಧಸತ್ತಮೈಃ ।
ಲಿಂಗಂ ದೇವಾಽಸುರೈರ್ಯುದ್ಧೇ ಸಹಸ್ರಾಕ್ಷೇಣ ಸೇವಿತಂ ।
ಇಂದ್ರೇಣ ಚ ಧನುರ್ಲಬ್ಧಂ ಜಂಭೋ ವೈ ಯೇನ ಪಾತಿತಃ ॥ ೨೯ ॥
ತಸ್ಯ ತದ್ವಚನಂ ಶ್ರುತ್ವಾ ಸ ರಾಜಾಽಥ ವಿದೂರಥಃ ।
ಜಗಾಮ ತ್ವರಿತೋ ದೇವಿ ಮಹಾಕಾಲವನಂ ಶುಭಂ ॥ ೩೦ ॥

---

೨೫. ಮಹಾರಾಜನೆ! ಕೇವಲ ಕಾಪುರುಷರಿಗೆ ತಕ್ಕುದಾದ ಈ ಶೋಕವನ್ನು ಬಿಟ್ಟುಬಿಡು. ನೀನು ತಕ್ಕ ಪ್ರಯತ್ನವನ್ನು ಮಾಡಿದರೆ ನಿಶ್ಚಯವಾಗಿಯೂ ಕುಜಂಭನನ್ನು ಜಯಿಸುವೆ.

೨೬. ಯಾವ ಮಾನವನಿಗೆ ಪ್ರಯತ್ನವೇ ಸಹಾಯವಾಗಿದೆಯೊ, ಅವನಿಗೆ ಮೇರುಶಿಖರವೂ ಹತ್ತಲಾರದ ಎತ್ತರವಲ್ಲ. ರಸಾತಲವೂ ಇಳಿಯಲಾರದ ಆಳವಲ್ಲ. ಸಮುದ್ರವೂ ದೂರವಲ್ಲ.

೨೭. ನೀನು ಸಮಾಹಿತಮನಸ್ಕನಾಗಿ ಮಹಾಕಾಲವನಕ್ಕೆ ಹೋಗಿ ಅಲ್ಲಿ ರೂಪೇಶ್ವರನಿಗೆ ದಕ್ಷಿಣಪಾರ್ಶ್ವದಲ್ಲಿ ನೆಲಸಿರುವ ಮಹಾಲಿಂಗವನ್ನು ಪೂಜಿಸು.

೨೮. ರಾಜೇಂದ್ರ! ಅದರ ಫಲವಾಗಿ ಶತ್ರುವಿನ ಮುಸಲವನ್ನು ನಾಶಪಡಿಸುವುದೂ, ಒಂದು ಸಾವಿರ ಧನುಸ್ಸುಗಳಿಗೆ ಸಮಾನವಾದುದೂ ಆದ ಧನುಸ್ಸನ್ನು ಪಡೆಯುವೆ. ಅದರಿಂದ ಕುಜಂಭನನ್ನು ನಿಗ್ರಹಿಸು.

೨೯. ಅದನ್ನು ಧನುಷ್ಪಾಣಿಗಳಿಂದ ಒಂದುಸಾವಿರ ಮಹಾ ಯೋಧರು ಸಂರಕ್ಷಿಸುತ್ತಿರುವರು. ದೇವತೆಗಳಿಗೂ ರಾಕ್ಷಸರಿಗೂ ಹಿಂದೆ ನಡೆದ ಮಹಾ ಯುದ್ಧದಲ್ಲಿ ಮಹೇಂದ್ರನು ಆ ಲಿಂಗದ ಸೇವೆಯನ್ನು ಮಾಡಿ ಮಹಾ ಧನುಸ್ಸನ್ನು ಪಡೆದು ಅದರಿಂದಲೇ ಜಂಭನನ್ನು ಕೊಂದನು.

೩೦. ದೇವಿಯೆ! ಮಾರ್ಕಂಡೇಯಮುನಿಯ ಈ ಮಾತುಗಳನ್ನು ಕೇಳಿ ವಿದೂರಥಮಹಾರಾಜನು ಸಂಭ್ರಮದಿಂದ ಪವಿತ್ರಕ್ಷೇತ್ರವಾದ ಆ ಮಹಾಕಾಲವನಕ್ಕೆ ಹೊರಟನು.

ದದರ್ಶ ತತ್ರ ತಲ್ಲಿಂಗಂ ಪೂಜಯಾಮಾಸ ಭಕ್ತಿತಃ ।
ತಸ್ಯ ತುಷ್ಟಸ್ತದಾ ದೇವೋ ದದೌ ದಿವ್ಯಂ ಧನುಸ್ತದಾ ॥ ೩೧ ॥
ಧನುಃ ಸಾಹಸ್ರತುಲ್ಯಂ ಚ ಮುಸಲಸ್ಯ ನಿವಾರಣಂ ।
ಧನುರ್ಲಬ್ಧ್ವಾ ತದಾ ರಾಜಾ ಬದ್ಧಗೋಧಾಂಗುಲಿತ್ರವಾನ್ ।
ಜಗಾಮ ಧೀರಃ ಪಾತಾಲಂ ತೇನ ಗರ್ತೇನ ಸತ್ವರಂ ॥ ೩೨ ॥
ತತೋ ಜ್ಯಾಸ್ವನಮತ್ಯುಗ್ರಂ ಸ ಚಕ್ರೇ ಪಾರ್ಥಿವಸ್ತದಾ ।
ಯೇನ ಪಾತಾಲಮಖಿಲಮಾಸೀದಾಪೂರಿತಾಂತರಂ ॥ ೩೩ ॥
ತತೋ ಜ್ಯಾಸ್ವನಮಾಕರ್ಣ್ಯ ಕುಜಂಭೋ ದಾನವೇಶ್ವರಃ ।
ಆಜಗಾಮಾತಿಕೋಪೇನ ಸ್ವಸೈನ್ಯಪರಿವಾರಿತಃ ॥ ೩೪ ॥
ತತೋ ಯುದ್ಧಮಭೂತ್ತಸ್ಯ ಸಹ ರಾಜ್ಞಾ ವರಾಸನೇ ।
ದಿನಾನಿ ತ್ರೀಣಿ ಸ ಯದಾ ಯೋಧಿತಸ್ತೇನ ದಾನವಃ ॥ ೩೫ ॥
ತತಃ ಕೋಪಪರೀತಾತ್ಮಾ ಮುಸಲಾಯಾಭ್ಯಧಾವತ ।
ಗಂಧೈರ್ಮಾಲ್ಯೈಸ್ತಥಾ ಧೂಪೈಃ ಪೂಜ್ಯಮಾನಃ ಸ ತಿಷ್ಠತಿ ॥ ೩೬ ॥

---

೩೧. ಅಲ್ಲಿ ಮಹಾಲಿಂಗವನ್ನು ಕಂಡು ಭಕ್ತಿಯಿಂದ ಪೂಜೆಯನ್ನು ಮಾಡಲು ಮಹಾದೇವನು ಸಂತೋಷಗೊಂಡು ಒಂದು ದಿವ್ಯಧನುಸ್ಸನ್ನು ಕೊಟ್ಟನು.

೩೨. ಒಂದುಸಹಸ್ರ ಧನುಸ್ಸುಗಳಿಗೆ ಸಮನಾದುದೂ, ಮುಸಲಾಯುಧಕ್ಕೆ ಪ್ರತಿಸ್ಪಂಧಿಯೂ ಆದ ಆ ಧನುಸ್ಸನ್ನು ಪಡೆದ ಮಹಾರಾಜನು ಮುಂಗೈಗೂ ಬೆರಳುಗಳಿಗೂ ಕವಚಗಳನ್ನು ತೊಟ್ಟುಕೊಂಡು ಧೈರ್ಯದಿಂದಲೂ ವೇಗವಾಗಿಯೂ ಆ ಬಿಲದ ಮಾರ್ಗವನ್ನು ಹಿಡಿದೇ ಪಾತಾಳಲೋಕವನ್ನು ಸೇರಿದನು.

೩೩. ಬಳಿಕ ಮಹಾರಾಜನು ಮಾಡಿದ ಭಯಂಕರವಾದ ಬಿಲ್ಲಿನ ಹೆದೆಯ ಟಂಕಾರಧ್ವನಿಯಿಂದ ಸಕಲಪಾತಾಳಲೋಕದ ಮೂಲೆಮೂಲೆಗಳೂ ತುಂಬಿ ಪ್ರತಿಧ್ವನಿಗೊಟ್ಟುವು.

೩೪. ಈ ಧನುಷ್ಟಂಕಾರವನ್ನು ಕೇಳಿ ಕುಜಂಭನು ಮಹಾಕೋಪವನ್ನು ತಾಳಿ ತನ್ನ ಸೈನ್ಯಗಳನ್ನೆಲ್ಲ ಸುತ್ತುವರೆಸಿಕೊಂಡು ಯುದ್ಧಸನ್ನದ್ಧನಾಗಿ ಬಂದನು.

೩೫. ಮಂಗಳಮುಖಿಯೆ! ಬಳಿಕ ಮಹಾರಾಜನಿಗೂ, ಆ ರಾಕ್ಷಸನಿಗೂ ಮಹಾಯುದ್ಧವು ಹವಣಿಸಿತು. ಮೂರುದಿನಗಳವರೆಗೂ ಆ ದಾನವನು ಯುದ್ಧವನ್ನು ಮಾಡಿದನು.

೩೬. ಬಳಿಕ ಕೋಪಾವಿಷ್ಟನಾಗಿ ತನ್ನ ಮುಸಲವನ್ನು ತರಲು ಓಡಿಬಂದನು. ಅದು ಗಂಧ, ಪುಷ್ಪ, ಧೂಪಾದಿಗಳಿಂದ ನಿತ್ಯವೂ ಪೂಜೆಯನ್ನು ಪಡೆಯುತ್ತಿದ್ದಿತು.

ಯಾವದ್ಗೃಹ್ಣಾತಿ ಮುಸಲಂ ತಾವತ್ಸಾ ಚ ಮುದಾವತೀ ।
ಪಸ್ಪರ್ಶ ಚಂದನವ್ಯಾಜ್ಯೈರನೇಕೈಶ್ಚ ಪುನಃ ಪುನಃ ॥ ೩೭ ॥
ತತಃ ಸ ಗತ್ವಾ ಯುಯುಧೇ ಮುಸಲೇನಾಽಸುರೇಶ್ವರಃ ।
ತದಾ ಮುಸಲಪಾತಾಸ್ತೇ ಧನುಷಾ ನಿಷ್ಪ್ರಭೀಕೃತಾಃ ॥ ೩೮ ॥
ಧನುರ್ಜ್ಯಾಘಾತಶಬ್ದೇನ ಪತಿತೇ ಭೂತಲೇ ತದಾ ।
ಗತೋ ವೈವಸ್ವತಂ ಲೋಕಂ ಕುಜಂಭೋ ನಾಮ ದಾನವಃ ॥ ೩೯ ॥
ತತೋಽಪತತ್ಪುಷ್ಪವೃಷ್ಟಿಸ್ತಸ್ಯೋಪರಿ ಮಹೀಪತೇಃ ।
ಜಗುರ್ಗಂಧರ್ವಪತಯೋ ದೇವವಾದ್ಯಾನಿ ಸಸ್ವನುಃ ॥ ೪೦ ॥
ಸ ಚಾಽಪಿ ರಾಜಾ ತಂ ಹತ್ವಾ ಪುತ್ರೌ ಲಬ್ಧ್ವಾ ಸುತಾಂ ತದಾ ।
ಮುದಾವತೀಂ ಮುದಾಯುಕ್ತೋ ಹರ್ಷಗದ್ಗದನಿರ್ಭರಃ ॥ ೪೧ ॥
ಪುತ್ರಾಭ್ಯಾಂ ಸಹಿತೋ ದೇವಿ ಸುಸಂಪೂರ್ಣಮನೋರಥಃ ।
ಸಾಂತಃಪುರಪರೀವಾರಃ ಪುನರಾಯಾದ್ಸ್ವರಾಸನೇ ॥ ೪೨ ॥
ಮಹಾಕಾಲವನೇ ರಮ್ಯೇ ಯತ್ರ ತಲ್ಲಿಂಗಮುತ್ತಮಂ ।
ಪೂಜಯಾಮಾಸ ರತ್ನೈಶ್ಚ ವಸ್ತ್ರೈರಾಭರಣೈಸ್ತಥಾ ॥ ೪೩ ॥

---

೩೭. ಆ ರಾಕ್ಷಸನು ಅದನ್ನು ತೆಗೆದುಕೊಳ್ಳಲು ಬಂದ ಕ್ಷಣದಲ್ಲಿಯೇ ಮುದಾವತಿಯು ಅದಕ್ಕೆ ಪೂಜೆಯನ್ನು ಮಾಡುವ ನೆವದಿಂದ ಮತ್ತೆ ಮತ್ತೆ ಅದನ್ನು ಮುಟ್ಟಿದಳು.

೩೮. ರಾಕ್ಷಸೇಶ್ವರನು ಆ ಮುಸಲಾಯುಧದಿಂದ ಯುದ್ಧವನ್ನು ಮಾಡ ತೊಡಗಲು, ಅದರ ಪೆಟ್ಟುಗಳೆಲ್ಲವೂ ಆ ರಾಜನ ದಿವ್ಯಧನುಸ್ಸಿನ ಮುಂದೆ ಕೆಲಸ ಮಾಡದಾದುವು.

೩೯. ಬಿಲ್ಲಿನ ಹೆದೆಯ ಧ್ವನಿಯಿಂದಲೇ ಮುಸಲವು ಭೂಮಿಯಲ್ಲಿ ಬಿದ್ದು ಹೋಗಲು ಕುಜಂಭರಾಕ್ಷಸೇಂದ್ರನೂ ಆಗಲೇ ಯಮಲೋಕವನ್ನು ಸೇರಿದನು.

೪೦. ಆಗ ಆ ಮಹಾರಾಜನಮೇಲೆ ಪುಷ್ಪವೃಷ್ಟಿಯುಂಟಾಯಿತು. ಗಂಧರ್ವ ನಾಯಕರು ಹಾಡಿದರು. ದೇವತೆಗಳ ಮಂಗಳವಾದ್ಯಗಳು ಮೊಳಗಿದುವು.

೪೧. ಆ ರಾಜೇಂದ್ರನೂ ರಾಕ್ಷಸನನ್ನು ಸಂಹರಿಸಿ ಇಬ್ಬರು ಪುತ್ರರನ್ನೂ, ಮಗಳಾದ ಮುದಾವತಿಯನ್ನೂ ಮತ್ತೆ ಸೇರಿ ಸಂತೋಷದಿಂದ ಗದ್ಗದಿತಕಂಠ ವುಳ್ಳವನಾದನು.

೪೨. ದೇವಿಯೆ! ರಾಜನು ಮಕ್ಕಳೊಡಗೂಡಿ ಮನೋರಥವೀಡೇರಲು ತನ್ನ ಅಂತಃಪುರಜನರೊಡನೆ ಕೂಡಿದವನಾಗಿ ರಾಜಧಾನಿಗೆ ಹಿಂದಿರುಗಿದನು.

೪೩. ತರುವಾಯ ರಮ್ಯವಾದ ಮಹಾಕಾಲವನಕ್ಕೆ ಹೋಗಿ ಆ ಉತ್ತಮ

ತತಃ ಸ ಪೂಜಿತೋ ದೇವೈಃ ಶಕ್ರೇಣ ಚ ಪುನಃ ಪುನಃ ।
ಅಸ್ಯ ಲಿಂಗಸ್ಯಮಾಹಾತ್ಮ್ಯಾದ್ಧನುಃ ಪ್ರಾಪ್ತಂ ನೃಪೇಣ ವೈ ॥ ೪೪ ॥
ಕುಜಂಭೋಽಪಿ ಹತೋ ದೈತ್ಯೋ ದೇವವಿದ್ವೇಷಕಾರಕಃ ।
ಧನುಃಸಾಹಸ್ರನಾಮಾಽಯಮತಃ ಖ್ಯಾತಿಂ ಗಮಿಷ್ಯತಿ ॥ ೪೫ ॥
ಭಕ್ತ್ಯಾ ಯೇ ಪೂಜಯಿಷ್ಯಂತಿ ಧನುಃಸಾಹಸ್ರಮೀಶ್ವರಂ ।
ಯಾಸ್ಯಂತಿ ಶತ್ರವಸ್ತೇಷಾಂ ಕ್ಷಯಂ ನೈವಾಽತ್ರ ಸಂಶಯಃ ॥ ೪೬ ॥
ಅರ್ಚಿತೇ ದೇವದೇವೇಶೇ ಧನುಃಸಾಹಸ್ರಿಕೇ ಶಿವೇ ।
ಅರ್ಚಿತಾಃ ಸರ್ವದೇವಾಃ ಸ್ಯುರ್ವರದಾಶ್ಚ ನ ಸಂಶಯಃ ॥ ೪೭ ॥
ಪ್ರಾತರ್ಮಧ್ಯೇಽಪರಾಹ್ಣೇ ಚ ಧನುಃ ಸಾಹಸ್ರಕಂ ಶಿವಂ ।
ಯೇ ನಮಂತಿ ನರಾ ನಿತ್ಯಂ ನ ತೇ ನರಕಭಾಗಿನಃ ॥ ೪೮ ॥
ತೀರ್ಥಾನಾಂ ಚ ಯಥಾ ಗಂಗಾ ರಕ್ಷಿತಾ ಯೋಘಸತ್ತಮೈಃ ।
ತಥಾಽಯಂ ರಕ್ಷಕೋ ದೇವೋ ನಾಮ್ನಾ ಧನುಃ ಸಹಸ್ರಕಃ ॥ ೪೯ ॥

---

ಲಿಂಗವನ್ನು ನವರತ್ನಗಳಿಂದಲೂ, ವಸ್ತ್ರಗಳಿಂದಲೂ, ಆಭರಣಗಳಿಂದಲೂ ಪೂಜಿಸಿದನು.

೪೪. ಬಳಿಕ ದೇವತೆಗಳೂ, ಮಹೇಂದ್ರನೂ ಆ ರಾಜೇಂದ್ರನನ್ನು ಮತ್ತೆ ಮತ್ತೆ ಬಹುಮಾನಿಸಿ ಹೇಳಿದರು. ಈ ಮಹಾಲಿಂಗದ ಪ್ರಭಾವದಿಂದ ಮಹಾರಾಜನು ದಿವ್ಯಧನುಸ್ಸನ್ನು ಪಡೆದನು.

೪೫. ದೇವತೆಗಳಿಗೆ ಅಪರಾಧಗಳನ್ನು ಮಾಡುತ್ತಿದ್ದ ಕುಜಂಭರಾಕ್ಷಸನೂ ಹತನಾದನು. ಆದುದರಿಂದ ಈ ಲಿಂಗವು ಧನುಸ್ಸಾಹಸ್ರವೆಂಬ ಹೆಸರನ್ನು ತಾಳಿರುವುದು.

೪೬. ಭಕ್ತಿಯಿಂದ ಈ ಧನುಸ್ಸಾಹಸ್ರೇಶ್ವರನನ್ನು ಪೂಜಿಸಿದವರ ಶತ್ರುಗಳೆಲ್ಲರೂ ನಾಶವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ.

೪೭. ಪಾರ್ವತಿಯೆ! ಈ ಒಂದು ಧನುಸ್ಸಾಹಸ್ರೇಶ್ವರಲಿಂಗವನ್ನು ಪೂಜಿಸುವುದರಿಂದಲೇ ಸಮಸ್ತ ದೇವತೆಗಳೂ ಪೂಜೆಗೊಂಡು ವರಗಳನ್ನೀಯುವರೆಂಬುದು ನಿಸ್ಸಂಶಯವು.

೪೮. ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಯಾರು ಈ ಮಹಾದೇವನನ್ನು ನಮಸ್ಕರಿಸುತ್ತಿರುವರೊ, ಅವರಿಗೆಂದಿಗೂ ನರಕವಾಸವು ಪ್ರಾಪ್ತವಾಗುವುದಿಲ್ಲ.

೪೯. ಮಹಾಯೋಧರಿಂದ ರಕ್ಷಿತವಾದ ಗಂಗಾನದಿಯು ಹೇಗೆ ಭಕ್ತರನ್ನು ರಕ್ಷಿಸುವುದೊ, ಹಾಗೆಯೇ ಧನುಸ್ಸಾಹಸ್ರನಾಮಕನಾದ ಈ ಮಹೇಶ್ವರನೂ ಸೇವಕರನ್ನು ರಕ್ಷಿಸುತ್ತಿರುವನು.

ತತ್ರ ಗಂಗಾದಿ ತೀರ್ಥಾನಿ ವಿದ್ಯಂತೇ ವಿವಿಧಾನಿ ಚ ।
ಸುರಹಸ್ಯಾತಿಪುಣ್ಯಾನಿ ಸದ್ಯಃ ಪಾಪಹರಾಣಿ ಚ ॥ ೫೦ ॥
ತೇಷಾಂ ಫಲಂ ವಿನಿರ್ದಿಷ್ಟಂ ಯೇ ಪಶ್ಯಂತಿ ತು ಭಕ್ತಿತಃ ।
ಧನುಃಸಾಹಸ್ರಕಂ ನಾಮ ಸದಾ ಶತ್ರುಕ್ಷಯಂಕರಂ ॥ ೫೧ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಧನುಃಸಾಹಸ್ರದೇವಸ್ಯ ದೇವಂ ಪಶುಪತಿಂ ಶೃಣು ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ, "ಧನುಸಾಹಸ್ರಕೇಶ್ವರಮಾಹಾತ್ಮ್ಯವರ್ಣನಂ" ನಾಮ ತ್ರಿಷಷ್ಟಿತಮೋಽಧ್ಯಾಯಃ

---

೫೦. ಇಲ್ಲಿಯೇ ಅತಿರಹಸ್ಯಗಳೂ, ಪುಣ್ಯಪ್ರದಗಳೂ, ನಿಮಿಷದಲ್ಲಿಯೆ ಪಾಪಗಳನ್ನು ಕಳೆಯುವುವುಗಳೂ ಎನಿಸಿದ ಗಂಗಾದಿ ಸಮಸ್ತತೀರ್ಥಗಳೂ ನೆಲಸಿರುವುವು.

೫೧. ಅದನ್ನು ಯಾರು ಭಕ್ತಿಯಿಂದ ನೋಡುವರೊ, ಅವರಿಗೆ ಆ ಎಲ್ಲ ತೀರ್ಥಗಳ ಸೇವೆಯ ಫಲವೂ ಲಭಿಸುವುದು. ಈ ಧನುಸ್ಸಹಸ್ರಕೇಶ್ವರಲಿಂಗವು ಯಾವಾಗಲೂ ಶತ್ರುನಾಶಕವಾಗಿರುವುದು.

೫೨. ದೇವಿಯೆ! ಇಂತು ನಿನಗೆ ಪರಮಪವಿತ್ರವೂ, ಪಾಪನಾಶಕವೂ ಆದ ಧನುಸ್ಸಹಸ್ರೇಶ್ವರನ ಚರಿತ್ರೆಯನ್ನು ಹೇಳಿರುವೆನು. ಇನ್ನು ಪಶುಪತೀಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಧನುಸ್ಸಾಹಸ್ರಕೇಶ್ವರಮಹಾತ್ಮ್ಯವರ್ಣನ"ವೆಂಬ ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಷಷ್ಟಿತಮೋಽಧ್ಯಾಯಃ

### ಪಶುಪತೀಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಶೃಣು ತ್ವಂ ಪಶುಪತ್ಯಾಖ್ಯಂ ಚತುಃಷಷ್ಟಿಕಮೀಶ್ವರಂ ।
ಯಸ್ಯ ದರ್ಶನಮಾತ್ರೇಣ ಪಶುಯೋನಿರ್ನ ಲಭ್ಯತೇ ॥ ೧ ॥
ಪಶುಪಾಲೋ ಮಹಾದೇವಿ ಬಭೂವ ಭುವಿ ವಿಶ್ರುತಃ ।
ರಾಜಾ ಪರಮಧರ್ಮಿಷ್ಠಃ ಪಶೂನಾಂ ಪಾಲನೇ ರತಃ ॥ ೨ ॥
ದಿದೃಕ್ಷುಃ ಸ ಕದಾಚಿಚ್ಚ ಗತಸ್ತೋಯನಿಧಿಂ ಪ್ರತಿ ।
ದದರ್ಶ ತತ್ರ ಪುರುಷಾನ್ಪಂಚ ಪ್ರಾಧಾನ್ಯತಃ ಸ್ಥಿತಾನ್ ।
ಏಕಾ ಸ್ತ್ರೀ ಮುಕ್ತಕೇಶಾ ಸಾ ಭ್ರಮಂತೀ ಚ ಪುನಃ ಪುನಃ ॥ ೩ ॥
ಅಥ ರಾಜಾ ಭಯಾವಿಷ್ಟೋ ವಿಸಂಜ್ಞಃ ಸಮಪದ್ಯತ ।
ಸಂವೇಷ್ಟಿತೋ ದಸ್ಯುಭಿಸ್ತೈಸ್ತಯಾ ನಾರ್ಯಾ ವಿಶೇಷತಃ ॥ ೪ ॥
ತತೋಽನ್ಯೇ ಸಮಪಾತಂ ಚ ಆಗತ್ಯ ನೃಪಸತ್ತಮಂ ।
ಸಂವೇಷ್ಟ್ಯ ಸಂಸ್ಥಿತೈಃ ಸರ್ವೈಸ್ತತೋ ರುದ್ಧೋ ಮಹೀಪತಿಃ ॥ ೫ ॥

---

## ಕನ್ನಡದ ಅನುವಾದ

### ಪಶುಪತೀಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಇನ್ನು ಅರುವತ್ತನಾಲ್ಕನೆಯ ಮಹಾಲಿಂಗವಾದ ಪಶುಪತೀಶ್ವರನ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದ ಮನುಷ್ಯನು ಪಶುಯೋನಿಗಳಲ್ಲಿ ಜನ್ಮಗಳನ್ನು ತಾಳುವುದಿಲ್ಲ.

೨. ಮಹೇಶ್ವರಿಯೆ! ಹಿಂದೆ ಪ್ರಖ್ಯಾತನೂ, ಮಹಾ ಧರ್ಮನಿರತನೂ, ಪಶುಪಾಲನಾತತ್ಪರನೂ ಆದ ಪಶುಪಾಲನೆಂಬ ಮಹಾರಾಜನೊಬ್ಬನಿದ್ದನು.

೩. ಆತನೊಮ್ಮೆ ಕುತೂಹಲದಿಂದ ಸಮುದ್ರತೀರಕ್ಕೆ ಹೋಗಿರಲು ಅಲ್ಲಿ ಪ್ರಮುಖರಾಗಿದ್ದ ಐದು ಮಂದಿ ಮಹಾಪುರುಷರು ನಿಂತಿದ್ದುದನ್ನು ನೋಡಿದನು. ಅವರ ಬಳಿಯಲ್ಲಿಯೇ ತಲೆಗೂದಲನ್ನು ಕೆದರಿಕೊಂಡು ಒಬ್ಬ ಸ್ತ್ರೀಯು ಸುಳಿದಾಡುತ್ತಿದ್ದಳು.

೪. ಅವರನ್ನು ಕಂಡ ರಾಜನು ಭಯಚಕಿತನಾಗಿ ಮೂರ್ಛೆಗೊಂಡನು. ಆ ಕಿರಾತರೂ, ಸ್ತ್ರೀಯೂ ಆತನನ್ನು ಮುತ್ತಿಕೊಂಡರು.

೫. ಬಳಿಕ ಬೇರೆ ಐವರು ಬಂದು ಮಹಾರಾಜನನ್ನು ಸುತ್ತುವರೆದರು. ಅವರೆಲ್ಲರೂ ಆತನನ್ನು ಸುತ್ತುವರೆದು ಓಡಾಡದಂತೆ ತಡೆದು ನಿಲ್ಲಿಸಿದರು.

ರುದ್ಧೇ ರಾಜನಿ ತೇ ಸರ್ವೇ ಏಕೀಭೂತಾಸ್ತು ದಸ್ಯವಃ ।
ಘಾತಿತಾಃ ಪಶುಪಾಲೇನ ನ ಮೃತಾಃ ಪುನರುತ್ಥಿತಾಃ ॥ ೬ ॥
ತಸ್ಯ ತಾಂ ಧೃಷ್ಟತಾಂ ಜ್ಞಾತ್ವಾ ಸ್ಥೈರ್ಯಂ ಚ ನೃಪತೇರ್ಮೃಧೇ ।
ತಸ್ಯೈವ ನೃಪತೇರ್ದೇಹೇ ಲೀನಾಸ್ತೇ ದಶ ದಸ್ಯವಃ ॥ ೭ ॥
ಅಮೂರ್ತಾ ಇವ ತೇ ಸರ್ವೇ ಏಕೀಭೂತಾಸ್ತತೋಽಭವನ್ ।
ತಾನ್ದೃಷ್ಟ್ವಾ ದುಃಖಿತೋ ರಾಜಾ ಪಶುಪಾಲೋಽಭವತ್ಕ್ಷಣಾತ್ ॥ ೮ ॥
ಅಥಾಽಪಶ್ಯತ್ತದಾಽಽಯಾಂತಂ ನಾರದಂ ಮುನಿಪುಂಗವಂ ।
ಬ್ರಹ್ಮಪುತ್ರಂ ತಪೋಯುಕ್ತಂ ಪಪ್ರಚ್ಛ ಸ ನೃಪಸ್ತದಾ ॥ ೯ ॥
ಪಶುಪಾಲ ಉವಾಚ :—
ಭಗವನ್ಬ್ರಹ್ಮಪುತ್ರಾದ್ಯ ಮಯಾ ದೃಷ್ಟಂ ತು ಕೌತುಕಂ ।
ಅಕಸ್ಮಾತ್ಪುರುಷಾಃ ಪಂಚ ಸಮಾಯಾತಾ ಭಯಾವಹಾಃ ॥ ೧೦ ॥
ತೈರಹಂ ವೇಷ್ಟಿತೋ ದುಷ್ಟೈರ್ವ್ಯಾಕುಲಶ್ಚ ಕೃತಸ್ತದಾ ।
ಮುಷ್ಟಿಭಿರ್ಹನ್ಯಮಾನೋಽಹಂ ಸ್ವಸ್ಥೋ ಜಾತೋ ದ್ವಿಜ ಕ್ಷಣಾತ್ ॥೧೧॥

---

೬. ರಾಜನು ನಿರುದ್ಧನಾಗಿರಲು ಸ್ವಲ್ಪ ಚೇತರಿಸಿಕೊಂಡು ಒಟ್ಟುಗೂಡಿದ ಅವರನ್ನೆಲ್ಲ ಬಹಳವಾಗಿ ಹೊಡೆದು ಕೆಡವಿದನು. ಆದರೆ ಒಬ್ಬರೂ ಸಾಯದೆ ಮತ್ತೆ ಮತ್ತೆ ಏಳುತ್ತಲೇ ಇದ್ದರು.

೭. ಆ ಮಹಾರಾಜನ ದಿಟ್ಟತನವನ್ನೂ, ಯುದ್ಧದಲ್ಲಿ ಆತನ ಸ್ಥೈರ್ಯವನ್ನೂ ಕಂಡು ಅವರೆಲ್ಲರೂ ಸ್ವಲ್ಪಕಾಲದಮೇಲೆ ಆತನ ದೇಹದಲ್ಲಿಯೇ ಲೀನರಾದರು.

೮. ಬೇರೆ ರೂಪಗಳಿಲ್ಲದವರಂತೆ ಹತ್ತುಜನರೂ ತನ್ನಲ್ಲಿಯೇ ಅಡಗಿದು ದನ್ನು ಕಂಡು ಪಶುಪಾಲಮಹಾರಾಜನು ಬಹಳ ಚಿಂತಾಕ್ರಾಂತನಾದನು.

೯. ಆಗ ಮುನಿಶ್ರೇಷ್ಠನೂ, ಬ್ರಹ್ಮಮಾನಸಪುತ್ರನೂ, ತಪೋನಿಧಿಯೂ ಆದ ನಾರದಮಹರ್ಷಿಯು ಬರುತ್ತಿದ್ದುದನ್ನು ಕಂಡು ರಾಜನು ಆತನನ್ನು ಪ್ರಶ್ನಿಸಿದನು.

೧೦. ಪಶುಪಾಲನು ಹೇಳುತ್ತಾನೆ:— "ಬ್ರಹ್ಮಪುತ್ರನಾದ ಓ ನಾರದ ಮಹರ್ಷಿಯೆ! ಈಗ ನಾನೊಂದು ಕೌತುಕವನ್ನು ಕಂಡೆನು. ಅನಿರೀಕ್ಷಿತವಾಗಿ ಐದು ಮಂದಿ ಭಯಂಕರರಾದ ವ್ಯಕ್ತಿಗಳು ಇಲ್ಲಿಗೆ ಬಂದರು.

೧೧. ಎಲೈ ಬ್ರಾಹ್ಮಣನೆ! ಆ ದುಷ್ಟರು ನನ್ನನ್ನು ಸುತ್ತುವರೆದುದನ್ನು ಕಂಡು ನಾನು ವ್ಯಾಕುಲಗೊಂಡೆನು. ಅವರು ಮುಷ್ಟಿಗಳಿಂದ ಗುದ್ದಿದರೂ ನಾನು ಕ್ಷಣಮಾತ್ರದಲ್ಲಿ ಸ್ವಸ್ಥನಾದೆನು.

ತತೋಽನ್ಯೇ ಪುರುಷಾಃ ಪಂಚ ಸಮಾಯಾತಾ ನಿಯುಧ್ಯ ಮಾಂ ।
ಹನ್ಯತಾಂ ಹನ್ಯತಾಮೇಷ ಮುಕ್ತಿಕಾಮೋ ನೃಪಾಽಧಮಃ ॥ ೧೨ ॥
ಏವಂ ತೈಃ ಪೀಡಿತೋಽತ್ಯರ್ಥಂ ಪುನರ್ಮೋಹಮುಪಾಗತಃ ।
ಏತಸ್ಮಿನ್ನಂತರೇ ಸಾ ಸ್ತ್ರೀ ಮಾಮುವಾಚ ಪುನಃ ಪುನಃ ॥ ೧೩ ॥
ಧೃಷ್ಟೋ ಭವ ಮಹಾರಾಜ ಮಾ ವಿಷಾದಂ ಕುರು ಪ್ರಭೋ ।
ಹೀನವೀರ್ಯಾಹ್ಯಮೀ ಚೋರಾಃ ಸಮರ್ಥಸ್ತ್ವಂ ಸ್ಥಿರೋ ಭವ ॥ ೧೪ ॥
ತಸ್ಯಾ ವಾಕ್ಯೇನ ವಿಪ್ರೇಂದ್ರ ಮಯಾ ಧೈರ್ಯೇಣ ಸಂಯುಗೇ ।
ದಶಪ್ರಧಾನಪುರುಷಾ ಜಿತಾಸ್ತೇ ನ ಮೃತಾಃ ಪ್ರಭೋ ॥ ೧೫ ॥
ಪ್ರಲೀನಾ ಮಚ್ಛರೀರೇ ತು ಕೇಽಪ್ಯೇತೇ ಕಾಽಪಿ ಸಾಽಬಲಾ ।
ಪಶುಪಾಲವಚಃ ಶ್ರುತ್ವಾ ನಾರದೋ ವಾಕ್ಯಮಬ್ರವೀತ್ ॥ ೧೬ ॥
ಯೇ ತ್ವಯಾ ಪುರುಷಾ ದೃಷ್ಟಾಸ್ತ್ವಯಿ ಲೀನಾ ಜಿತಾ ಮೃಧೇ ।
ಬುದ್ಧೀಂದ್ರಿಯಾಣಿ ತೇ ಪಂಚ ಪಂಚ ಕರ್ಮೇಂದ್ರಿಯಾಣಿ ಚ ।
ಭ್ರಮಂತೀ ಯಾ ಚ ನಾರೀ ಸಾ ತ್ವಯಾ ದೃಷ್ಟಾ ನೃಪೋತ್ತಮ ॥ ೧೭ ॥

---

೧೨. ಬಳಿಕ ಬೇರೆ ಐದುಮಂದಿ ಪುರುಷರು ಬಂದು, "ಮೋಕ್ಷಕಾಮನಾಗಿರುವ ಈ ರಾಜಾಧಮನನ್ನು ಕೊಲ್ಲಿರಿ" ಎಂದು ಕೂಗುತ್ತ ನನ್ನೊಡನೆ ಯುದ್ಧವನ್ನು ಮಾಡಿದರು.

೧೩. ಇಂತು ಅವರಿಂದ ಬಹಳ ಸಂಕಟಕ್ಕೊಳಗಾಗಿ ನಾನು ಮೂರ್ಛಿತನಾದೆನು. ಇಷ್ಟರಲ್ಲಿ ಅಲ್ಲಿದ್ದ ಸ್ತ್ರೀಯು ನನಗೆ ಮತ್ತೆ ಮತ್ತೆ ಹೇಳುತ್ತಿದ್ದಳು.

೧೪. ಮಹಾರಾಜನೆ! ಧೈರ್ಯವನ್ನು ತಂದುಕೊ. ವಿಷಾದವನ್ನು ಹೊಂದಬೇಡ. ಈ ಚೋರರೆಲ್ಲರೂ ಅಲ್ಪಬಲರಾಗಿರುವರು. ಇವರೆದುರಿನಲ್ಲಿ ಸಮರ್ಥನಾದ ನೀನು ಧೈರ್ಯವಾಗಿ ನಿಲ್ಲು.

೧೫. "ಮಹರ್ಷಿಯೆ! ಆಕೆಯ ಮಾತಿನಿಂದ ಉತ್ಸಾಹಿತನಾದ ನಾನು ಧೈರ್ಯಗೊಂಡು ಯುದ್ಧದಲ್ಲಿ ಆ ಹತ್ತುಮಂದಿ ಪರಾಕ್ರಮಿಗಳನ್ನು ಜಯಿಸಿದರೂ ಅವರು ಮಾತ್ರ ಸಾಯಲಿಲ್ಲ.

೧೬. ಅವರೆಲ್ಲರೂ ನನ್ನ ಶರೀರದಲ್ಲಿಯೇ ಅಡಗಿಹೋದರು. ಆ ಹತ್ತು ಜನರು ಯಾರು? ಆ ಸ್ತ್ರೀಯು ಯಾರು?" ಇಂತೆಂದ ಪಶುಪಾಲಮಹಾರಾಜನಿಗೆ ನಾರದನು ಹೇಳತೊಡಗಿದನು.

೧೭. "ನೀನು ಯಾವ ಪುರುಷರನ್ನು ನೋಡಿದೆಯೊ, ಯಾರು ನಿನ್ನಿಂದ ಪರಾಜಿತರಾಗಿ ನಿನ್ನಲ್ಲಿಯೇ ಲೀನರಾದರೊ, ಅವರೇ ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ ಆಗಿರುವರು. ನೀನು ಚಂಚಲೆಯಾದ ಒಬ್ಬ ಸ್ತ್ರೀಯನ್ನು ನೋಡಿದೆಯಲ್ಲವೆ.

ಮನೋರೂಪೇಣ ಸಾ ಬುದ್ಧಿರ್ಭ್ರಮತ್ಯೇವ ಹಿ ನ ಸ್ಥಿರಾ ।
ಜಿತಾನಿ ತಾನಿ ಪೂರ್ವೇಣ ಬ್ರಹ್ಮಣಾ ಲೋಕಕರ್ತೃಣಾ ॥ ೧೮ ॥
ಸೋಽಪಿ ಕ್ರೋಧವಶಂ ನೀತ ಇಂದ್ರಿಯೈರ್ವಿಷಯೈಃ ಪ್ರಿಯೈಃ ।
ಪಿತಾಮಹೇನ ಸ್ವೇ ಯಜ್ಞೇ ಶಂಭೋರ್ಭಾಗೋ ನ ಕಲ್ಪಿತಃ ॥ ೧೯ ॥
ಮಹಾದೇವೋ ಜಗನ್ನಾಥಃ ಸೃಷ್ಟಿಸಂಹಾರಕಾರಕಃ ।
ಇಂದ್ರಿಯೈರ್ಮೋಹಿತೋ ರಾಜನ್ಕ್ರೋಧಂ ಚಕ್ರೇ ಸುರಾನ್ಪ್ರತಿ ॥ ೨೦ ॥
ಸುರಾ ವಿಭೂತಯೋ ಯಸ್ಯ ಕ್ರೀಡಾರ್ಥಂ ಭುವನತ್ರಯಂ ।
ತೇನ ಭಾಗನಿಮಿತ್ತಾರ್ಥಂ ಚಕ್ರೇ ಸಜ್ಯಂ ಧನುಸ್ತದಾ ॥ ೨೧ ॥
ಪೂಷ್ಣಶ್ಚ ದಂತಾಃ ಸಂಭಗ್ನಾ ಮೋಹಿತಶ್ಚ ದಿವಾಕರಃ ।
ನೇತ್ರೇ ಭಗ್ನೇ ಭಗಸ್ಯಾಽಪಿ ವಿದ್ಧೋ ಯಜ್ಞೋ ಮೃಗಾಕೃತಿಃ ॥ ೨೨ ॥
ಪಶವಶ್ಚ ಕೃತಾ ದೇವಾ ಮುನಯೋ ವೇದವರ್ಜಿತಾಃ ।
ಋಷೀಣಾಂ ಧರ್ಮಶಾಸ್ತ್ರಾಣಿ ಹೃತಾನಿ ವಿಭುನಾ ತಥಾ ॥ ೨೩ ॥

---

೧೮. ಆಕೆಯೇ ಬುದ್ಧಿಯು. ಅವಳು ಮನಸ್ಸಿನ ಆಕಾರದಿಂದ ಒಂದೆಡೆಯಲ್ಲಿ ನಿಲ್ಲದೆ ಭ್ರಮಿಸುತ್ತಿರುವಳು. ಹಿಂದೆ ಸೃಷ್ಟಿಕರ್ತೃವಾದ ಬ್ರಹ್ಮದೇವನು ಇವುಗಳನ್ನೆಲ್ಲ ಜಯಿಸಿದ್ದನು.

೧೯. ಆವನೂ ಇಂದ್ರಿಯಗಳಿಗೂ. ಅವುಗಳಿಗೆ ಪ್ರಿಯಗಳಾದ ವಿಷಯಗಳಿಗೂ ಅಧೀನನಾಗಿ ಕೋಪವಶನಾದನು. ಬ್ರಹ್ಮನು ತನಗಾಗಿ ದಕ್ಷನು ಮಾಡಿದ ಯಜ್ಞದಲ್ಲಿ ಮಹಾದೇವನಿಗೆ ಯಜ್ಞಭಾಗವನ್ನು ತೆಗೆದಿಡಲಿಲ್ಲ.

೨೦. ರಾಜೇಂದ್ರನೆ! ಲೋಕೇಶ್ವರನೂ, ಸೃಷ್ಟಿಸ್ಥಿತಿಲಯಗಳನ್ನು ಮಾಡುವವನೂ ಆದ ಮಹಾದೇವನು ಇಂದ್ರಿಯಪರವಶನಾಗಿ, ದೇವತೆಗಳ ವಿಷಯದಲ್ಲಿ ಕೋಪಗೊಂಡನು.

೨೧. ದೇವತೆಗಳೇ ಯಾವನ ವಿಭೂತಿಗಳೊ, ಸಮಸ್ತಬ್ರಹ್ಮಾಂಡವೂ ಯಾವನ ಮಹಾಲೀಲೆಯೊ, ಆ ಮಹಾದೇವನೂ ತನ್ನ ಯಜ್ಞಭಾಗದ ಕಾರಣದಿಂದ ಧನುಸ್ಸನ್ನು ಸಜ್ಜುಗೊಳಿಸಿದನು.

೨೨. ಆ ಕದನದಲ್ಲಿ ಪೂಷನ ಹಲ್ಲುಗಳು ಮುರಿದುವು. ಸೂರ್ಯನು ಮೂರ್ಛೆಗೊಂಡನು. ಭಗನ ಕಣ್ಣುಗಳೆರಡೂ ಭಗ್ನವಾದುವು. ಜಿಂಕೆಯ ರೂಪದಿಂದ ಓಡಿಹೋಗುತ್ತಿದ್ದ ಯಜ್ಞಪುರುಷನು ಪೆಟ್ಟುತಿಂದನು.

೨೩. ದೇವತೆಗಳೆಲ್ಲರೂ ಪಶುಗಳಾದರು. ಮುನಿಗಳಿಗೆ ವೇದಗಳು ಭಾಸವಾಗಲಾರದಾದುವು. ಮಹೇಶ್ವರನು ಮಹರ್ಷಿಗಳ ಧರ್ಮಶಾಸ್ತ್ರಜ್ಞಾನವನ್ನೇ ಅಪಹರಿಸಿದನು.

ದುರ್ಜಯಾನೀಂದ್ರಿಯಾಣ್ಯಾಹುರ್ಮುನಯೋ ವೇದಪಾರಗಾಃ ।
ಮನೋರೂಪೇಣ ಯಾ ಬುದ್ಧಿಃ ಸಾ ಚಾಽತೀವ ಸು ದುರ್ಜಯಾ॥ ೨೪ ॥
ತಸ್ಮಾದ್ರಾಜನ್ಮಹಾಬಾಹೋ ಮಾ ವಿಷಾದಂ ವೃಥಾ ಕೃಥಾಃ ।
ತಸ್ಯ ತದ್ವಚನಂ ಶ್ರುತ್ವಾ ನಾರದಸ್ಯ ಮಹಾತ್ಮನಃ ।
ಪಶುಪಾಲೋ ಮಹಾದೇವಿ ವಕ್ತುಂ ಸಮುಪಚಕ್ರಮೇ ॥ ೨೫ ॥

ಪಶುಪಾಲ ಉವಾಚ :—

ಕಥಂ ತೇ ಭಗವನ್ಮುಕ್ತಾ ದೇವಾಃ ಶಕ್ರಪುರೋಗಮಾಃ ।
ಪಶುಭಾವಾಚ್ಚ ಬ್ರಹ್ಮಾಽಪಿ ಶ್ರೋತುಮಿಚ್ಛಾಮಿ ಕಥ್ಯತಾಂ ॥ ೨೬ ॥
ತಸ್ಯ ತದ್ವಚನಂ ಶ್ರುತ್ವಾ ನಾರದಃ ಪುನರಬ್ರವೀತ್ ।
ಪಶುತ್ವೇಽಪಿ ಗತಾ ದೇವಾ ಋಷಿಭಿರ್ಮುನಿಭಿಃ ಸಹ ॥ ೨೭ ॥
ಬ್ರಹ್ಮಾಣಮಗ್ರತಃ ಕೃತ್ವಾ ಗತಾಃ ಶರಣಮೀಶ್ವರಂ ।
ಸ್ತುತಿಭಿಸ್ತೋಷಿತೋ ದೇವೋ ಭಕ್ತಾಽನುಗ್ರಹಕಾರಕಃ ॥ ೨೮ ॥
ಉವಾಚ ವಚನಂ ರಾಜನ್ಯತ್ಕರ್ತವ್ಯಂ ತದುಚ್ಯತಾಂ ॥ ೨೯ ॥

---

೨೪. ವೇದವೇದಾಂತಗಳಲ್ಲಿ ನಿಷ್ಣಾತರಾದ ಮಹರ್ಷಿಗಳೂ ಇಂದ್ರಿಯ ಜಯವು ಬಹಳ ಕಷ್ಟವೆಂದು ಹೇಳುವರು. ಮನಸ್ಸಿನರೂಪದ ಬುದ್ಧಿಯನ್ನು ಜಯಿಸುವುದಂತೂ ಅತ್ಯಂತ ದುಸ್ಸಾಧ್ಯವೇ ಸರಿ.

೨೫. ಮಹಾರಾಜನೆ! ಆದುದರಿಂದ ನೀನು ಸುಮ್ಮನೆ ವಿಷಾದವನ್ನು ಹೊಂದಬೇಡ.'' ಮಹಾದೇವಿಯೆ! ಮಹಾತ್ಮನಾದ ನಾರದಮುನಿಯ ಈ ಮಾತುಗಳನ್ನು ಕೇಳಿ ಪಶುಪಾಲರಾಜೇಂದ್ರನು ಬಿನ್ನವಿಸತೊಡಗಿದನು.

೨೬. ಪಶುಪಾಲನು ಹೇಳುತ್ತಾನೆ:—ಮಹರ್ಷಿಯೆ! ಇಂದ್ರನೇ ಮೊದಲಾದ ದೇವತೆಗಳೂ, ಚತುರ್ಮುಖನೂ ತಮ್ಮ ಪಶುಭಾವದಿಂದ ಹೇಗೆ ಮುಕ್ತರಾದರೆಂಬುದನ್ನು ಕೇಳಲಪೇಕ್ಷಿಸುವೆನು, ಹೇಳಿರಿ.

೨೭. ಮಹಾರಾಜನ ಮಾತನ್ನು ಕೇಳಿ ನಾರದನು ಹೇಳುತ್ತಾನೆ:— ಪಶುರೂಪಗಳಿಂದಲೇ ದೇವತೆಗಳು ಮಹರ್ಷಿಗಳಿಂದಲೂ, ಮುನಿವರ್ಯರಿಂದಲೂ ಕೂಡಿದರು.

೨೮—೨೯. ಬ್ರಹ್ಮನನ್ನು ಮುಂದುಮಾಡಿಕೊಂಡು ಅವರೆಲ್ಲರೂ ಮಹಾದೇವನನ್ನೇ ಶರಣುಹೊಕ್ಕವರಾದರು. ಅವರ ವಿವಿಧ ಸ್ತೋತ್ರಗಳಿಂದ ಸಂತುಷ್ಟನಾದ ಮಹೇಶ್ವರನು ಭಕ್ತರಲ್ಲಿ ಅನುಗ್ರಹವನ್ನು ಮಾಡುವವನಾದುದರಿಂದ ಅವರನ್ನು ಕುರಿತು, "ದೇವತೆಗಳಿರಾ! ಈಗ ನಾನೇನು ಮಾಡಬೇಕೆಂಬುದನ್ನು ಹೇಳಿರಿ" ಎಂದನು.

ದೇವಾ ಊಚುಃ:—

ವೇದಶಾಸ್ತ್ರಾಣಿ ವಿಜ್ಞಾನಂ ದೇಹಿ ನೋ ಭವ ಮಾಚಿರಂ ।
ದೇವಸ್ತ್ವಂ ಪೂರ್ವವದ್ದೇವ ಯದಿ ತುಷ್ಟೋ ಮಹೇಶ್ವರಃ ॥ ೩೦ ॥

ಈಶ್ವರ ಉವಾಚ:—

ಭವಂತಃ ಪಶವಃ ಸರ್ವೇ ಮಯಾ ಸಾರ್ಧಂ ಚ ಗಮ್ಯತಾಂ ।
ಮಹಾಕಾಲವನೇ ಕ್ಷೇತ್ರೇ ಪಶುಭಾವವಿಮೋಕ್ಷಕೇ ॥ ೩೧ ॥
ಅಹಂ ಪತಿರ್ವೋ ಭವಿತಾ ತತೋ ಮೋಕ್ಷಮವಾಪ್ಸ್ಯಥ ।
ಭವತಾಮನುಕಂಪಾರ್ಥಂ ಲೋಕಾನುಗ್ರಹಕಾರಣಂ ।
ಲಿಂಗರೂಪೀ ಭವಿಷ್ಯಾಮಿ ನಾಮ್ನಾ ಪಶುಪತೀಶ್ವರಃ ॥ ೩೨ ॥
ಅಥ ತೇ ತ್ರಿದಶಾಃ ಸರ್ವೇ ದೃಷ್ಟ್ವಾ ದೇವಂ ತಮೀಶ್ವರಂ ।
ಪಶುಭಾವವಿನಿರ್ಮುಕ್ತಾ ಗತಾ ಹೃಷ್ಟಾಸ್ತ್ರಿವಿಷ್ಟಪಂ ।
ಬ್ರಹ್ಮಾ ಪಶುಪತಿಂ ಪ್ರಾಹ ಪ್ರಸನ್ನೇನಾಂತರಾತ್ಮನಾ ॥ ೩೩ ॥
ಯೇ ತ್ವಾಂ ಪಶ್ಯಂತಿ ದೇವೇಶಂ ಭಕ್ತ್ಯಾ ಪರಮಯಾ ಯುತಾಃ ।
ತೇಷಾಂ ಕುಲೇ ಪಶುತ್ವಂ ಚ ಯೇ ಗತಾಃ ಪಿತರಃ ಪ್ರಭೋ ।
ಸ್ವಕೈಃ ಕರ್ಮವಿಪಾಕೈಶ್ಚ ತೇಷಾಂ ಮೋಕ್ಷೋ ಭವಿಷ್ಯತಿ ॥ ೩೪ ॥

---

೩೦. ದೇವತೆಗಳು ಹೇಳುತ್ತಾರೆ:—ಮಹಾದೇವನೆ! ನೀನು ಸಂತೋಷ ಗೊಂಡಿರುವೆಯಾದರೆ ವೇದಶಾಸ್ತ್ರಜ್ಞಾನವನ್ನೂ, ಲೋಕವಿಜ್ಞಾನವನ್ನೂ, ಹಿಂದಿನಂತೆ ದೇವತಾಧಿಕಾರಗಳನ್ನೂ ನಮಗೆ ಕೊಡು.

೩೧. ಈಶ್ವರನು ಹೇಳುತ್ತಾನೆ:—ನೀವೆಲ್ಲರೂ ನನ್ನೊಡನೆ ಪಶುಭಾವವನ್ನು ನೀಗಿಸುವ ಉತ್ತಮಕ್ಷೇತ್ರವಾದ ಮಹಾಕಾಲವನಕ್ಕೆ ಬನ್ನಿರಿ.

೩೨. ನಾನೇ ಪಶುಗಳಾದ ನಿಮಗೆ ಪತಿಯಾಗುವೆನು. ಆದರಿಂದ ನಿಮಗೆ ಮುಕ್ತಿಯಾಗುವುದು. ನಿಮ್ಮಲ್ಲಿರುವ ಅನುಕಂಪದಿಂದಲೂ, ಲೋಕವನ್ನು ಅನುಗ್ರಹಿಸುವುದಕ್ಕೂ ನಾನು ಲಿಂಗದ ರೂಪವನ್ನು ತಾಳಿ ಪಶುಪತೀಶ್ವರನೆಂಬ ಹೆಸರನ್ನು ಪಡೆಯುವೆನು.

೩೩. ಬಳಿಕ ಸಕಲದೇವತೆಗಳೂ ಮಹಾಕಾಲವನದಲ್ಲಿ ಪಶುಪತೀಶ್ವರನನ್ನು ಕಂಡು ತಮ್ಮ ಪಶುಭಾವವನ್ನು ಕಳೆದುಕೊಂಡು ಸಂತೋಷದಿಂದ ಸ್ವರ್ಗಲೋಕಕ್ಕೆ ಹೊರಟುಹೋಗಲು, ಬ್ರಹ್ಮದೇವನು ಪ್ರಸನ್ನಾಂತಃಕರಣದಿಂದ ಪಶುಪತೀಶ್ವರನಿಗೆ ಹೀಗೆ ಹೇಳಿದನು.

೩೪. "ದೇವೇಶ್ವರನೆ! ಯಾರು ನಿನ್ನನ್ನು ಪರಮಭಕ್ತಿಯುಕ್ತರಾಗಿ ನೋಡುವರೊ, ಅವರ ಕುಲದಲ್ಲಿ ತಮ್ಮ ದುಷ್ಕರ್ಮಗಳ ಫಲವಾಗಿ ಪಶುಯೋನಿಗಳಲ್ಲಿ ಜನ್ಮಗಳನ್ನು ಪಡೆದಿರುವ ಪಿತೃಗಳೆಲ್ಲರಿಗೂ ಮೋಕ್ಷವು ಲಭಿಸುವುದು.

ಅಜ್ಞಾನಾಜ್ಜ್ಞಾನತೋ ವಾಽಪಿ ಯತ್ಪಾಪಂ ಕ್ರಿಯತೇ ನರೈಃ ।
ತತ್ಪಾಪಂ ವಿಲಯಂ ಯಾತು ತಸ್ಯ ದೇವಸ್ಯ ಪೂಜನಾತ್ ॥ ೩೫ ॥
ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಂ ।
ಯೈರ್ನದೃಷ್ಟಿಃ ಪಶುಪತಿಃ ಪಶುಯೋನಿವಿಮೋಚಕಃ ॥ ೩೬ ॥
ಕೌಮಾರೇ ಯೌವನೇ ಬಾಲ್ಯೇ ವಾರ್ಧಕೇ ಯದುಪಾರ್ಜಿತಂ ।
ತತ್ಪಾಪಂ ವಿಲಯಂ ಯಾತಿ ದೃಷ್ಟ್ವಾ ಪಶುಪತಿಂ ಶಿವಂ ॥ ೩೭ ॥
ಪೌಷಮಾಸೇ ತು ಸಂಪ್ರಾಪ್ತೇ ಯೇ ತ್ವಾಂ ಪಶ್ಯಂತಿ ಮಾನವಾಃ ।
ತೇಷಾಂ ತ್ವಂ ವರದೋ ದೇವ ಸದಾಽಭೀಷ್ಟಕರೋ ಭವೇತ್ ॥ ೩೮ ॥
ಸೂರ್ಯಗ್ರಹೇ ಯಥಾ ದತ್ತಂ ಕುರುಕ್ಷೇತ್ರೇ ವಿಶೇಷತಃ ।
ಪಾತ್ರೇ ದಾನಂ ಸುವರ್ಣಸ್ಯ ಪ್ರೋಕ್ತಮಕ್ಷಯ್ಯಮವ್ಯಯಂ ॥ ೩೯ ॥
ಪೌಷಮಾಸೇ ದಿನೈಕೇನ ನರಾಣಾಮಧಿಕಂ ತಥಾ ।
ತದ್ದರ್ಶನೇನ ದೇವೇಶ ಭವಿಷ್ಯತಿ ನ ಸಂಶಯಃ ॥ ೪೦ ॥
ಇತ್ಯುಕ್ತ್ವಾ ಭಗವಾನ್ಬ್ರಹ್ಮಾ ಬ್ರಹ್ಮಲೋಕಂ ಗತೋ ನೃಪ ।
ಕೃತಕೃತ್ಯಃ ಪ್ರಹೃಷ್ಟಾತ್ಮಾ ಮುನಿಭಿಃ ಕವಿಭಿಃ ಸಹ ॥ ೪೧ ॥

---

೩೫. ಈ ಮಹಾಲಿಂಗದ ಪೂಜೆಯಿಂದ ತಿಳಿದೂ ತಿಳಿಯದೆಯೂ ಜನರು ಮಾಡಿದ ಪಾತಕಗಳೆಲ್ಲವೂ ನಾಶವಾಗಲಿ.

೩೬. ಪಶುಜನ್ಮವನ್ನು ಕಳೆಯುವ ಈ ಪಶುಪತೀಶ್ವರನನ್ನು ನೋಡದಿರುವವರೇ ಪಶುಗಳು. ಅವರು ಬದುಕಿರುವುದರಿಂದ ಫಲವೇನು?

೩೭. ಮಹಾಪಶುಪತೀಶ್ವರಲಿಂಗವನ್ನು ನೋಡುವುದರಿಂದ ಬಾಲ್ಯ, ಯೌವನ, ವಾರ್ಧಕ್ಯಗಳಲ್ಲಿ ಮಾಡಿರುವ ಸಮಸ್ತ ಪಾತಕಗಳೂ ನಾಶವಾಗುವುವು.

೩೮. ಮಹಾದೇವನೆ! ಪುಷ್ಯಮಾಸದಲ್ಲಿ ಯಾರು ಈ ರೂಪದಿಂದಿರುವ ನಿನ್ನನ್ನು ವಿಶೇಷ ಪೂಜೆಗಳಿಂದ ದರ್ಶನಮಾಡುವರೊ, ಅವರಿಗೆ ನೀನು ಯಾವಾಗಲೂ ಸಕಲಾಭೀಷ್ಟಗಳನ್ನೂ ಕೊಡುವವನಾಗು.

೩೯. ಸೂರ್ಯಗ್ರಹಣಕಾಲದಲ್ಲಿ ಮಾಡಿದ ದಾನವು ಉತ್ತಮಫಲದಾಯಕವು. ಅದನ್ನೇ ಕುರುಕ್ಷೇತ್ರದಲ್ಲಿ ಮಾಡಲು ವಿಶೇಷ ಫಲವುಂಟು. ಅದರಲ್ಲಿಯೂ ಸುವರ್ಣವನ್ನು ಸತ್ಪಾತ್ರದಲ್ಲಿ ದಾನಮಾಡಿದ ಫಲವು ಅಕ್ಷಯಫಲಪ್ರದವೆಂದು ಶಾಸ್ತ್ರಗಳು ಹೇಳುವುವು.

೪೦. ಮಹೇಶ್ವರನೆ! ಪುಷ್ಯಮಾಸದಲ್ಲಿ ಒಮ್ಮೆಯಾದರೂ ನಿನ್ನ ದರ್ಶನವನ್ನು ಮಾಡುವವರಿಗೆ ಇದಕ್ಕಿಂತಲೂ ಹೆಚ್ಚಿನ ಫಲವು ಲಭಿಸುವುದೆಂಬುದರಲ್ಲಿ ಸಂದೇಹವಿಲ್ಲ."

೪೧. ಇಂತೆಂದು ಬ್ರಹ್ಮದೇವನು ಕೃತಾರ್ಥನೂ, ಸಂತುಷ್ಟಾಂತರಂಗನೂ

ತಸ್ಮಾತ್ತ್ವಮಪಿ ರಾಜೇಂದ್ರ ಯದೀಚ್ಛಸಿ ಪರಾಂ ಗತಿಂ ।
ಸಮಾರಾಧಯ ತಲ್ಲಿಂಗಂ ಪಶುಯೋನಿವಿಮೋಚನಂ ॥ ೪೨ ॥
ಮಹಾಕಾಲವನಂ ಗತ್ವಾ ಇಂದ್ರೇಶ್ವರಸ್ಯ ದಕ್ಷಿಣೇ ।
ತಸ್ಯ ತದ್ವಚನಂ ಶ್ರುತ್ವಾ ನಾರದಸ್ಯ ಮಹಾತ್ಮನಃ ॥ ೪೩ ॥
ಜಗಾಮ ಪಶುಪಾಲೋಽಪಿ ಮಹಾಕಾಲವನಂ ಪ್ರಿಯೇ ।
ದರ್ಶನಾತ್ತಸ್ಯ ಲಿಂಗಸ್ಯ ಗತೋಽಸೌ ಪರಮಾಂ ಗತಿಂ ॥ ೪೪ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪಶುಪತ್ಯಾಖ್ಯದೇವಸ್ಯ ಶೃಣು ಬ್ರಹ್ಮೇಶ್ವರಂ ಶಿವಂ ॥ ೪೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಪಶುಪತೀಶ್ವರಮಾಹಾತ್ಮ್ಯವರ್ಣನಂ"ನಾಮ ಚತುಃಷಷ್ಠಿತಮೋಽಧ್ಯಾಯಃ

---

ಆಗ ಮುನಿಗಳೂ, ಕವಿಗಳೂ ಸುತ್ತುವರೆದಿರಲು ತನ್ನ ಲೋಕವನ್ನು ಕುರಿತು ತೆರಳಿದನು.

೪೨. ರಾಜೇಂದ್ರನೆ! ಆದುದರಿಂದ ಸದ್ಗತಿಯನ್ನು ಬಯಸುವೆಯಾದರೆ ನೀನೂ ಆ ಮಹಾಕಾಲವನಕ್ಷೇತ್ರಕ್ಕೆ ಹೋಗಿ ಇಂದ್ರೇಶ್ವರನಿಗೆ ದಕ್ಷಿಣಕ್ಕಿರುವ ಪಶುಪಾಶವಿಮೋಚಕವಾದ ಆ ಲಿಂಗವನ್ನಾರಾಧಿಸು.

೪೩. ಪ್ರಿಯಳೆ! ಮಹಾತ್ಮನಾದ ನಾರದನ ಈ ಮಾತನ್ನು ಕೇಳಿ ಪಶುಪಾಲ ಮಹಾರಾಜನೂ ಮಹಾಕಾಲವನಕ್ಕೆ ಹೋಗಿ ಆ ಮಹಾಲಿಂಗವನ್ನು ನೋಡಿ ಉತ್ತಮಸದ್ಗತಿಯನ್ನು ಪಡೆದನು.

೪೪. ದೇವಿಯೆ! ಇಂತು ನಿನಗೆ ಪ್ರಭಾವಸಹಿತವೂ, ಪಾತಕಪರಿಹಾರಕವೂ ಆದ ಪಶುಪತೀಶ್ವರನ ಚರಿತ್ರೆಯನ್ನು ಹೇಳಿದೆನು. ಇನ್ನು ಬ್ರಹ್ಮೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಪಶುಪತೀಶ್ವರಮಾಹಾತ್ಮ್ಯವರ್ಣನ"ವೆಂಬ ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಷಷ್ಠಿತಮೋಽಧ್ಯಾಯಃ

### ಬ್ರಹ್ಮೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ:—

ಪಂಚಷಷ್ಠಿಕಸಂಖ್ಯಾಕಂ ವಿದ್ಧಿ ಬ್ರಹ್ಮೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಬ್ರಹ್ಮಲೋಕೋ ಹ್ಯವಾಪ್ಯತೇ ॥ ೧ ॥
ಪುಲೋಮಾ ನಾಮ ದೈತ್ಯೇಂದ್ರೋ ಮಹಾಬಲಪರಾಕ್ರಮಃ ।
ಪೌಲೋಮಾನಾಂ ಸಹಸ್ರೈಸ್ತು ಪೂಜ್ಯಮಾನಃ ಸ ತಿಷ್ಠತಿ ॥ ೨ ॥
ಆನರ್ಚುಸ್ತೇಽಪಿ ತಂ ದೈತ್ಯಂ ಸುರೇಶಂ ತ್ರಿದಶಾ ಇವ ।
ಸ ಕದಾಚಿತ್ಸಮಕ್ಷಂ ತು ದೈತ್ಯಾನಾಮಿದಮಬ್ರವೀತ್ ॥ ೩ ॥
ಅದ್ಯಾಽಪಿ ಲೋಕಪಾಲಾನಾಮರ್ಕೇಂದುಜ್ವಲನಾಂಭಸಾಂ ।
ಶತಕ್ರತೋರ್ಧನೇಶಸ್ಯ ಯಮಸ್ಯ ವರುಣಸ್ಯ ಚ ॥ ೪ ॥
ಯದಿ ನಾಮ ತತಃ ಕಿಂ ಮೇ ತಪಸಾ ಜೀವಿತೇನ ಚ ।
ಸೋಽಹಂ ವಿದ್ರಾವಯಿಷ್ಯಾಮಿ ಸರ್ವಾನೇವ ದಿವೌಕಸಃ ॥ ೫ ॥

---

### ಕನ್ನಡದ ಅನುವಾದ

#### ಬ್ರಹ್ಮೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಅರುವತ್ತೈದನೆಯ ಮಹಾಲಿಂಗವೇ ದರ್ಶನಮಾತ್ರದಿಂದ ಬ್ರಹ್ಮಲೋಕಪ್ರಾಪ್ತಿಯನ್ನು ಕೊಡುವ ಬ್ರಹ್ಮೇಶ್ವರನೆಂದು ತಿಳಿ.

೨. ಹಿಂದೆ ಪುಲೋಮನೆಂಬ ಮಹಾಬಲಶಾಲಿಯಾದ ರಾಕ್ಷಸೇಂದ್ರನು ಸಾವಿರಾರು ರಾಕ್ಷಸರಿಂದ ಪರಿವಾರಿತನಾಗಿ ಅವರ ಪೂಜೆಗಳಿಗೆ ಪಾತ್ರನಾಗಿದ್ದನು.

೩. ಅವರೂ, ದೇವತೆಗಳು ಮಹೇಂದ್ರನಿಗೆ ಮರ್ಯಾದೆಗಳನ್ನು ಮಾಡುವಂತೆ ಆತನಿಗೆ ಸೇವೆಗಳನ್ನು ನಡೆಸುತ್ತಿದ್ದರೂ ಆತನೊಮ್ಮೆ ಅನುಚರರೊಡನೆ ಇಂತೆಂದು ಹೇಳಿದನು.

೪. "ಇಂದಿಗೂ ಬ್ರಹ್ಮಾಂಡದಲ್ಲಿ ಸೂರ್ಯ, ಚಂದ್ರ, ಅಗ್ನಿ, ವರುಣ, ಮಹೇಂದ್ರ, ಕುಬೇರ, ಯಮಾದಿಗಳೇ ಲೋಕಪಾಲರಾಗಿ ಅಧಿಕಾರಗಳನ್ನು ನಡೆಸುತ್ತಿರುವರು.

೫. ಹೀಗಾದರೆ ನನ್ನ ತಪಸ್ಸಿನಿಂದಲೂ ಜೀವಿತದಿಂದಲೂ ಪ್ರಯೋಜನವೇನು? ಆದುದರಿಂದ ನಾನು ಸಮಸ್ತ ದೇವತೆಗಳನ್ನೂ ಯುದ್ಧದಲ್ಲಿ ಓಡಿಸುವೆನು.

ಸರ್ವೈರೇತೈಃ ಪರಿವೃತಃ ಪೌಲೋಮೈರ್ಬಲವತ್ತರೈಃ ।
ಇತ್ಯುಕ್ತ್ವಾ ಗತವಾನ್ದೇವಿ ಸಾಗರಂ ದೈತ್ಯಸಂವೃತಃ ।
ತಾವಚ್ಛಯಾನಂ ಸಹಸಾ ಹ್ಯಪಶ್ಯನ್ಮಧುಸೂದನಂ ॥ ೬ ॥
ಶಾರದಾಭ್ರಸಮಾಭಾಸಂ ಮಧ್ಯೇಕಾಲಂ ಯಥಾ ಘನಂ ।
ತಮಾಲೋಕ್ಯ ತತೋ ದೈತ್ಯಾನಬ್ರವೀದಸುಗಾಂಸ್ತಥಾ ॥ ೭ ॥
ಅಯಂ ಸ ದಾನವ ಗಿರಿವಜ್ರೋಽಹಿ ಮಧುಸೂದನಃ ।
ಕೀರ್ತಿಕಾಂತಾಕಲಾಕೇಲಿವೈಧವ್ಯಾದೇಶಕೋ ದ್ವಿಷಾಂ ॥ ೮ ॥
ದೈತ್ಯಸೀಮಂತಿನೀಕಾಂತಪತ್ರವಲ್ಲೀಪ್ರಭಂಜಕಃ ।
ಅಯಮಸ್ಮಜ್ಜಯವಧೂವೈಧವ್ಯಾದೇಶಕಃ ಪರಃ ॥ ೯ ॥
ಗತಶಂಕಃ ಸ್ವಪಿತ್ಯೇಕಃ ಸರ್ವದಾ ಕುಟಿಲಾಶಯಃ ।
ಹಂತವ್ಯಸ್ತ್ವರಯಾ ದುಷ್ಟಃ ಕಾಂಕ್ಷಿತೋ ದರ್ಶನಂ ಗತಃ ॥ ೧೦ ॥
ಇತ್ಯುಕ್ತ್ವಾ ಸ ಹಿ ದೈತ್ಯೇಂದ್ರಃ ಪುಲೋಮಾಽತಿರುಷಾನ್ವಿತಃ ।
ಅಭಿದುದ್ರಾವ ವೇಗೇನ ತಾವದಗ್ರೇ ಪಿತಾಮಹಂ ।
ದದರ್ಶ ನಾಭಿಕಮಲೇ ಚಿಂತಯಾನಂ ಪುನಃ ಪುನಃ ॥ ೧೧ ॥

---

೬. ಮಹಾ ಪರಾಕ್ರಮಿಗಳಾದ ಈ ಸಕಲ ರಾಕ್ಷಸರೂ ನನಗೆ ನೆರವಾಗಲಿ.'' ಇಂತೆಂದು ಆ ರಾಕ್ಷಸಶ್ರೇಷ್ಠನು ತನ್ನ ಪರಿವಾರದೊಡನೆ ಸಮುದ್ರತೀರಕ್ಕೆ ಹೋಗಲು ಸಮುದ್ರಮಧ್ಯದಲ್ಲಿ ಶೇಷಶಾಯಿಯಾಗಿದ್ದ ಶ್ರೀಮನ್ನಾರಾಯಣ ನನ್ನು ಕಂಡನು.

೭. ಶರತ್ಕಾಲದ ಮೇಘರಾಶಿಯ ಮಧ್ಯದಲ್ಲಿರುವ ಕಾರ್ಮೋಡದಂತೆ ತೋರುತ್ತಿರುವ ಆತನನ್ನು ಕಂಡು ಪುಲೋಮನು ತನ್ನ ಅನುಚರರಿಗೆ ಹೇಳಲು ಉಪಕ್ರಮಿಸಿದನು.

೮. "ಇವನೇ ರಾಕ್ಷಸರೆಂಬ ಪರ್ವತಗಳಿಗೆ ವಜ್ರಪ್ರಾಯನಾದ ಮಧು ಸೂದನನು. ಶತ್ರುಗಳ ಕೀರ್ತಿಕಾಂತೆಯ ಕ್ರೀಡೆಗಳನ್ನಡಗಿಸಿ ಆಕೆಗೆ ವೈಧವ್ಯ ವನ್ನುಂಟುಮಾಡುವವನು.

೯. ಇವನೇ ರಾಕ್ಷಸಪತ್ನಿಯರ ಬೈತಲೆಗಳ ಪತ್ರವಲ್ಲಿಗಳನ್ನು ಕಿತ್ತು ನಮ್ಮ ಜಯವೆಂಬ ಕಾಂತೆಯ ವೈಧವ್ಯಕ್ಕೆ ಕಾರಣನಾದ ಶತ್ರುವಾಗಿರುವನು.

೧೦. ಕುಟಿಲಬುದ್ಧಿಯಾದ ಇವನು ಯಾವಾಗಲೂ ನಿರ್ಭಯವಾಗಿ ಏಕಾಕಿಯಾಗಿ ಮಲಗಿರುವನು. ಈ ದುಷ್ಟನನ್ನು ಸಂಹರಿಸಿರಿ. ಬಹಳ ಕಾಲದಿಂದ ನಾವು ನೋಡಬೇಕೆಂದಿದ್ದ ಇವನು ಈಗ ಕಂಡುಬಂದಿರುವನು.''

೧೧. ಇಂತೆಂದು ಪುಲೋಮನು ಅತಿಕೋಪಗೊಂಡು ವೇಗದಿಂದ ಓಡಿ ಹೋಗುತ್ತ ಎದುರಿನಲ್ಲಿಯೇ ನಾರಾಯಣನ ನಾಭೀಕಮಲದಲ್ಲಿ ಹುಟ್ಟಿ ಬಹಳ ಚಿಂತಾಕ್ರಾಂತನಾಗಿದ್ದ ಪಿತಾಮಹನನ್ನು ಕಂಡನು.

ಅಥ ವ್ಯಾಕುಲತಾಂ ಪ್ರಾಪ್ತೋ ಬ್ರಹ್ಮಾ ದೃಷ್ಟ್ವಾ ತದದ್ಭುತಂ ।
ಅಯಾಂತಂ ದೈತ್ಯಸಿಂಹಾನಾಂ ಸೈನ್ಯಂ ರಣಸುದುರ್ಜಯಂ ॥ ೧೨ ॥
ಅಥ ಬೋಧಂ ಗತಃ ಕ್ಷಿಪ್ರಂ ಕೈಟಭಾರಿರ್ಮಹಾಬಲಃ ।
ದದರ್ಶಾಗ್ರೇ ಪುಲೋಮಂ ತು ಸ್ವಸೈನ್ಯಪರಿವಾರಿತಂ ॥ ೧೩ ॥
ಅಜೇಯಃ ಸಂಗರೇ ಧೀರೋ ಬ್ರಹ್ಮಾಣಮಿದಮಬ್ರವೀತ್ ॥ ೧೪ ॥

ವಿಷ್ಣುರುವಾಚ :—

ಪುಲೋಮಸ್ಯ ವಿನಾಶಾರ್ಥಮುದ್ಯೋಗಃ ಕ್ರಿಯತಾಮಿತಿ ।
ಅಸೌ ಲಬ್ಧವರೋ ದೈತ್ಯಃ ಸಹಸಾ ಮಾಂ ವಿಜೇಷ್ಯತಿ ॥ ೧೫ ॥
ತಸ್ಮಾದ್ಗಚ್ಛ ತ್ವರಾಯುಕ್ತೋ ಮಹಾಕಾಲವನೇ ಶುಭೇ ।
ಲಿಂಗಂ ದ್ರಕ್ಷ್ಯಸಿ ತತ್ರೈವ ಸಪ್ತಕಲ್ಪೋದ್ಭವಂ ಪರಂ ॥ ೧೬ ॥
ಉತ್ತರೇ ಚ್ಯವನೇಶಸ್ಯ ಶಿವಶಕ್ತಿಸಮನ್ವಿತಂ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾದ್ಬಲಂ ಪ್ರಾಪ್ಸ್ಯತಿ ಶಾಶ್ವತಂ ॥ ೧೭ ॥

---

೧೨. ಮಹಾದೈತ್ಯೇಂದ್ರರ ಸಮೂಹವೂ, ಯುದ್ಧದಲ್ಲಿ ಜಯಿಸಲಶಕ್ಯವೂ ಆದ ಆ ಅದ್ಭುತಸೈನ್ಯವನ್ನು ಕಂಡು ಬ್ರಹ್ಮದೇವನು ಮನೋವ್ಯಾಕುಲವನ್ನು ತಾಳಿದನು.

೧೩. ಆಗ ಕೈಟಭಮರ್ದನನೂ, ಮಹಾಪರಾಕ್ರಮಿಯೂ ಆದ ವಿಷ್ಣುವು ಯೋಗನಿದ್ರೆಯಿಂದೆಚ್ಚತ್ತು ಮುಂದೆ ತನ್ನ ಸೈನ್ಯದಿಂದ ಪರಿವಾರಿತನಾದ ಪುಲೋಮರಾಕ್ಷಸನನ್ನು ಕಂಡನು.

೧೪. ಆತನು ಯುದ್ಧದಲ್ಲಿ ದುರ್ಜಯನಾದ ಪರಾಕ್ರಮಿಯಾದರೂ ಚತುರ್ಮುಖನಿಗಿಂತೆಂದನು.

೧೫. ವಿಷ್ಣುವು ಹೇಳುತ್ತಾನೆ:—ಎಲೌ ಚತುರ್ಮುಖನೆ! ಈ ಪುಲೋಮನನ್ನು ನಾಶಮಾಡುವ ಉದ್ಯೋಗವನ್ನು ಕೈಗೊಳ್ಳಬೇಕು. ವರಪ್ರಸಾದವನ್ನು ಪಡೆದಿರುವ ಈ ದೈತನು ಸುಲಭವಾಗಿಯೇ ನನ್ನನ್ನು ಜಯಿಸುವನು.

೧೬. ಆದುದರಿಂದ ನೀನು ಶುಭಕ್ಷೇತ್ರವಾದ ಮಹಾಕಾಲವನಕ್ಕೆ ಹೋಗು. ಅಲ್ಲಿ ಏಳುಕಲ್ಪಗಳ ಹಿಂದೆ ಉದ್ಭವಿಸಿದ ಪರಮೋತ್ಕೃಷ್ಟವಾದ ಲಿಂಗವನ್ನು ನೋಡುವೆ.

೧೭. ಚ್ಯವನೇಶ್ವರನಿಗೆ ಉತ್ತರದಲ್ಲಿರುವ ಆ ಲಿಂಗವು ಶಿವಶಕ್ತಿಗಳ ಐಕ್ಯರೂಪವಾಗಿರುವುದು. ಅದರ ಮಾಹಾತ್ಮ್ಯದಿಂದಲೇ ನಿನಗೆ ಶಾಶ್ವತವಾದ ಮಹಾಬಲವು ಲಭಿಸುವುದು.

ಕುಂಡೇಶ್ವರಕರಸ್ಪರ್ಶಕಾರಿ ವಾರಿ ನಿರಂತರಂ ।
ತದಾನಯ ಗೃಹೀತ್ವಾ ತು ತೇನಾಽಯಂ ವಧ್ಯತಾಮಿತಿ ॥ ೧೮ ॥
ಇತಿ ತಸ್ಯ ವಚಃ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಆಜಗಾಮ ಮುಹೂರ್ತೇನ ಯತ್ರ ತಲ್ಲಿಂಗಮುತ್ತಮಂ ॥ ೧೯ ॥
ಸ್ತುತಿಂ ಚಕಾರ ಸಹಸಾ ದೃಷ್ಟ್ವಾ ಭಕ್ತ್ಯಾ ಪಿತಾಮಹಃ ॥ ೨೦ ॥

ಬ್ರಹ್ಮೋವಾಚ :—

ನಮಸ್ತೇ ದಿವ್ಯರೂಪಾಯ ನಮಸ್ತೇ ಬಹುರೂಪಿಣೇ ।
ನಮೋಽವಿಷಹ್ಯವೀರ್ಯಾಯ ನಮೋ ವಿಶ್ವಕ್ರಿಯಾತ್ಮನೇ ॥ ೨೧ ॥
ನಮಃ ಪಿಂಗಕಪರ್ದಾಯ ನಮಃ ಖಂಡೇಂದುಧಾರಿಣೇ ।
ನಮಃ ಕನಕವರ್ಣಾಯ ನಮೋ ವನನಿವಾಸಿನೇ ॥ ೨೨ ॥
ವಂದೇ ತ್ವಾಂ ಭೂತಭರ್ತಾರಂ ಸದಾ ಶತ್ರುವಿನಾಶನಂ ।
ರಣತ್ಕನಕಕೇಯೂರಂ ಧೃತಪೂರ್ಣೇಂದುಮಂಡಲಂ ॥ ೨೩ ॥
ವಂದೇ ತ್ವಾಂ ತ್ರಿದಶಾಧ್ಯಕ್ಷಂ ವಿಶ್ವಾಧ್ಯಕ್ಷಂ ಮಹೇಶ್ವರಂ ।
ಕ್ಷೀಣಸಂಸಾರದುಃಖೌಘಂ ಮುನಿಧ್ಯಾತಪದಂ ಸದಾ ॥ ೨೪ ॥

---

೧೮. ಅಲ್ಲಿರುವ ಕುಂಡೇಶ್ವರನ ಕರಸ್ಪರ್ಶದಿಂದ ಪವಿತ್ರವಾದ ನೀರನ್ನು ತೆಗೆದುಕೊಂಡು ಬಂದರೆ ಅದರಿಂದ ಇವನನ್ನು ನಿಗ್ರಹಿಸಬಹುದು.

೧೯. ಇಂತೆಂದ ಮಹಾವಿಷ್ಣುವಿನ ಮಾತನ್ನು ಕೇಳಿ ಲೋಕಪಿತಾಮಹನಾದ ಚತುರ್ಮುಖನು ಮುಹೂರ್ತಮಾತ್ರದಲ್ಲಿಯೇ ಆ ದಿವ್ಯಲಿಂಗವಿದ್ದೆಡೆಗೆ ಪ್ರಾಪ್ತನಾದನು.

೨೦. ಅದನ್ನು ಕಂಡಕೂಡಲೇ ಆತನು ಭಕ್ತಿಭರಿತನಾಗಿ ಸ್ತೋತ್ರವನ್ನು ಮಾಡತೊಡಗಿದನು.

೨೧. ಬ್ರಹ್ಮನು ಹೇಳುತ್ತಾನೆ:—“ದಿವ್ಯಸ್ವರೂಪನೂ, ಅನೇಕ ರೂಪಧಾರಿಯೂ, ಅಸಹ್ಯತೇಜೋರಾಶಿಯೂ, ಸಕಲಬ್ರಹ್ಮಾಂಡದ ವ್ಯಾಪಾರವನ್ನು ನಡೆಸುವವನೂ ಆದ ನಿನಗೆ ನಮಸ್ಕಾರವು.

೨೨. ಕೆಂಜಡೆಗಳುಳ್ಳವನೂ, ಬಾಲಚಂದ್ರನನ್ನು ಧರಿಸಿದವನೂ, ಚಿನ್ನದ ಮೈಬಣ್ಣದವನೂ, ಸ್ಮಶಾನದಲ್ಲಿ ವಾಸಮಾಡುವವನೂ ಆದ ನಿನ್ನನ್ನು ನಮಸ್ಕರಿಸುವೆನು.

೨೩. ಭೂತಗಳಿಗೊಡೆಯನೂ, ಯಾವಾಗಲೂ ಶತ್ರುಗಳನ್ನು ನಾಶಗೊಳಿಸುವವನೂ, ಧ್ವನಿಗೊಡುತ್ತಿರುವ ಚಿನ್ನದ ಕೇಯೂರಗಳಿಂದ ಭೂಷಿತನೂ, ಚಂದ್ರಶೇಖರನೂ ಆದ ನಿನ್ನನ್ನು ವಂದಿಸುವೆನು.

೨೪. ದೇವತೆಗಳಿಗೆ ಅಧ್ಯಕ್ಷನೂ, ಬ್ರಹ್ಮಾಂಡನಾಯಕನೂ, ಮಹೇಶ್ವರನೂ

ವಂದೇ ತ್ವಾಂ ಸರ್ವದಾ ದೇವಂ ದೈತ್ಯಸಂಘಾತನಾಶನಂ ।
ಟಂಕಪಟ್ಟಿಶಶೂಲಾಗ್ರಧನುಃಖಡ್ಗಗದಾಧರಂ ॥ ೧೫ ॥
ಏವಂ ಸ್ತುತಃ ಸ ಭಗವಾಲ್ಲಿಂಗರೂಪೀ ಮಹೇಶ್ವರಃ ।
ಕಿಂಚಿತ್ ಸ್ಮಿತಮುಖಃ ಪ್ರಾಹ ಬ್ರಹ್ಮಾಣಂ ಲೋಕಕಾರಣಂ ॥ ೧೬ ॥
ಕಿಂ ತೇಽಭೀಷ್ಟಂ ಕರೋಮ್ಯದ್ಯಂ ಕಿಂ ದದಾಮಿ ಪಿತಾಮಹ ।
ಕಸ್ಮಾತ್ ಸ್ತೌಷಿ ಮುನಿಶ್ರೇಷ್ಠ ಕಸ್ಮಾದಾರ್ತೋಽಸಿ ದೃಶ್ಯಸೇ ॥ ೧೭ ॥
ಇತಿ ಲಿಂಗವಚಃ ಶ್ರುತ್ವಾ ಕಥಿತಂ ಬ್ರಹ್ಮಣಾ ತದಾ ।
ವೃತ್ತಾಂತಂ ವಿಸ್ತರಾತ್ಸರ್ವಂ ಲಿಂಗೇನೋಕ್ತಂ ತದಾ ಪ್ರಿಯೇ ॥ ೧೮ ॥
ಜಲಂ ಗೃಹಾಣ ವಾಣೀಶ ಶಸ್ತ್ರಜಂ ಶತ್ರುವಾರಣಂ ।
ಹನಿಷ್ಯಸಿ ಕ್ಷಣೇನೈವ ಪುಲೋಮಂ ಸಹಸೈನ್ಯಕಂ ॥ ೧೯ ॥
ಇತ್ಯುಕ್ತಃ ಸತ್ವರೋ ಬ್ರಹ್ಮಾ ಗತೋ ಯತ್ರ ಜನಾರ್ದನಃ ।
ಜಲೇನ ತೇನ ತಾನ್ದೈತ್ಯಾನ್ಪಾತಯಾಮಾಸ ಭೂತಲೇ ॥ ೨೦ ॥

---

ಸಂಸಾರದುಃಖಗಳನ್ನು ಕಳೆದುಕೊಂಡವನೂ, ನಿತ್ಯವೂ ಮುನಿಗಳು ಧ್ಯಾನಿಸುತ್ತಿರುವ ಪಾದಕಮಲಗಳುಳ್ಳವನೂ ಆದ ನಿನಗೆ ನಮಸ್ಕಾರವಿರಲಿ.

೧೫. ಮಹಾ ತೇಜಸ್ವಿಯೂ, ರಾಕ್ಷಸಸಮೂಹನಾಶಕನೂ, ಟಂಕ, ಪಟ್ಟಿಶ, ತ್ರಿಶೂಲ, ಧನುಸ್ಸು, ಖಡ್ಗ, ಗದಾದ್ಯನೇಕಾಯುಧಗಳನ್ನು ಹಿಡಿದವನೂ ಆದ ನಿನ್ನನ್ನು ನಿತ್ಯವೂ ನಮಸ್ಕರಿಸುವೆನು.''

೧೬. ಇಂತು ಸ್ತೋತ್ರಮಾಡಿದ ಲೋಕಕರ್ತನಾದ ಚತುರ್ಮುಖನಿಗೆ ಮಹೇಶ್ವರನು ನಗೆಮೊಗದಿಂದ ಕೂಡಿದವನಾಗಿ ಲಿಂಗರೂಪದಿಂದ ದರ್ಶನವನ್ನಿತ್ತು ಹೇಳಿದನು.

೧೭. "ಮುನಿಶ್ರೇಷ್ಠನಾದ ಪಿತಾಮಹನೆ! ಈಗ ನಿನ್ನ ಯಾವ ಕೋರಿಕೆಯನ್ನು ನೆರವೇರಿಸಲಿ? ನಿನಗೇನನ್ನು ಕೊಡಲಿ? ನನ್ನನ್ನೇಕೆ ಸ್ತುತಿಸುತ್ತಿರುವೆ? ಬಹಳ ದುಃಖಿತನಾಗಿ ಬಂದಿರುವಂತೆ ಕಾಣುತ್ತಿರುವೆ. ಇದಕ್ಕೆ ಕಾರಣವೇನು?''

೧೮. ಪ್ರಿಯಳೆ! ಇಂತೆಂದ ಆ ಶಿವಲಿಂಗದ ಮಾತುಗಳನ್ನು ಕೇಳಿ ಬ್ರಹ್ಮನು ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ಬಿನ್ನವಿಸಿಕೊಳ್ಳಲು ಲಿಂಗವು ಆತನಿಗೆ ಹೇಳಿತು.

೧೯. "ವಾಣೀರಮಣನೆ! ನನ್ನ ಶಸ್ತ್ರದಿಂದುಂಟಾದ ಶತ್ರುನಾಶಕವಾದ ಈ ಜಲವನ್ನು ತೆಗೆದುಕೊ. ಇದರಿಂದ ಕ್ಷಣಮಾತ್ರದಲ್ಲಿಯೇ ಸೈನ್ಯಸಮೇತನಾದ ಪುಲೋಮನನ್ನು ಕೊಲ್ಲುವೆ.''

೨೦. ಆ ಮಾತನ್ನು ಕೇಳಿ ಬ್ರಹ್ಮದೇವನು ಸಂಭ್ರಮದಿಂದ ಮಹಾವಿಷ್ಣುವಿದ್ದಲ್ಲಿಗೆ ಬಂದು ಆ ಜಲದಿಂದ ಸಕಲ ರಾಕ್ಷಸರನ್ನೂ ಭೂಮಿಯಲ್ಲಿ ಕೆಡವಿದನು.

ಸ ಪುಲೋಮಾ ಮಹಾನಾಸೀತ್ಸ್ವಾರೋಚಿಷೇಂತರೇ ಮನೌ ।
ಕೃಷ್ಣೋಽಪಿ ಬ್ರಹ್ಮಣಾ ಸಾರ್ಧಮಾಜಗಾಮ ಕುಶಸ್ಥಲೀಂ ॥ ೩೧ ॥
ದದರ್ಶ ತತ್ರ ತಲ್ಲಿಂಗಂ ನಾಮ ಚಕ್ರೇ ಜನಾರ್ದನಃ ।
ಬ್ರಹ್ಮಣಾ ಸಂಸ್ತುತೋ ದೇವೋ ಮಮಾಽನುಗ್ರಹಕಾರಣಾತ್ ।
ತಸ್ಮಾದ್ಬ್ರಹ್ಮೇಶ್ವರೋ ನಾಮ ಖ್ಯಾತಿಂ ಲೋಕೇಷು ಯಾಸ್ಯತಿ ॥ ೩೨ ॥
ಯೇ ದ್ರಕ್ಷ್ಯಂತಿ ನರಾ ಭಕ್ತ್ಯಾ ದೇವಂ ಬ್ರಹ್ಮೇಶ್ವರಂ ಶಿವಂ ।
ತೇ ಬ್ರಹ್ಮಲೋಕಮಾಕ್ರಮ್ಯ ಸಮೇಷ್ಯಂತಿ ಮಮಾಂತಿಕಂ ॥ ೩೩ ॥
ಯಸ್ತು ಪಶ್ಯೇತ್ಪ್ರಸಂಗೇನ ದೇವಂ ಬ್ರಹ್ಮೇಶ್ವರಂ ಶಿವಂ ।
ಕೃತಕೃತ್ಯಃ ಸ ಪುರುಷೋ ನ ಶೋಚೇನ್ಮರಣಂ ಸದಾ ॥ ೩೪ ॥
ಯಃ ಪುಷ್ಕರಂ ಸರೋ ಗತ್ವಾ ತಪೋ ವರ್ಷಶತಂ ಚರೇತ್ ।
ಅನ್ಯೋ ಬ್ರಹ್ಮೇಶ್ವರಂ ಪಶ್ಯೇತ್ತಸ್ಯ ಪುಣ್ಯಂ ತತೋಽಧಿಕಂ ॥ ೩೫ ॥
ಪಂಚಪಾತಕಸಂಯುಕ್ತೋ ಯೋ ಮರ್ತ್ಯೋ ದುಷ್ಟಮಾನಸಃ ।
ಸೋಽಪಿ ಗಚ್ಛೇಚ್ಛಿವಂ ಸ್ಥಾನಂ ದೃಷ್ಟ್ವಾ ಬ್ರಹ್ಮೇಶ್ವರಂ ಶಿವಂ ॥ ೩೬ ॥

---

೩೧. ಹಿಂದೆ ಸ್ವಾರೋಚಿಷಮನ್ವಂತರದಲ್ಲಿ ಆ ಪುಲೋಮನು ಮಹಾ ಪರಾಕ್ರಮಿಯಾಗಿದ್ದನು. ಬಳಿಕ ಮಹಾವಿಷ್ಣುವೂ, ಬ್ರಹ್ಮನೊಡನೆ ಕುಶಸ್ಥಳಕ್ಕೆ ಬಂದನು.

೩೨. ಅಲ್ಲಿ ಆ ದಿವ್ಯಲಿಂಗವನ್ನು ಕಂಡು ತಾನೇ ಅದಕ್ಕೆ ಈ ಹೆಸರನ್ನಿಟ್ಟನು. "ನನ್ನಲ್ಲಿ ಅನುಗ್ರಹವನ್ನು ಮಾಡುವಂತೆ ಬ್ರಹ್ಮನು ಇದನ್ನು ಸ್ತುತಿಸಿದನಾದುದರಿಂದ ಇದು ಬ್ರಹ್ಮೇಶ್ವರವೆಂದೇ ಸಕಲಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವುದು.

೩೩–೩೪. ಯಾವ ನರರು ಭಕ್ತಿಯಿಂದ ಈ ಬ್ರಹ್ಮೇಶ್ವರಲಿಂಗವನ್ನು ನೋಡುವರೊ, ಅವರು ಬ್ರಹ್ಮಲೋಕವನ್ನಾಕ್ರಮಿಸಿ ಕಡೆಗೆ ನನ್ನ ಲೋಕವನ್ನು ಸೇರುವರು. ಯಾವನು ಪ್ರಸಂಗಮಾತ್ರದಿಂದಾದರೂ ಬ್ರಹ್ಮೇಶ್ವರಮಹಾಲಿಂಗವನ್ನು ನೋಡುವನೊ, ಅವನೇ ಕೃತಾರ್ಥನು. ಅವನೆಂದಿಗೂ ಮರಣಕ್ಕೆ ದುಃಖಿಸಬೇಕಾಗಿಲ್ಲ.

೩೫. ಯಾವನು ಪುಷ್ಕರಕ್ಷೇತ್ರಕ್ಕೆ ಹೋಗಿ ಅಲ್ಲಿ ಒಂದುನೂರು ವರ್ಷಗಳ ತಪಸ್ಸನ್ನು ಮಾಡುವನೊ, ಯಾವನು ಬ್ರಹ್ಮೇಶ್ವರನನ್ನು ನೋಡುವನೊ, ಅವರಿಬ್ಬರಲ್ಲಿ ಎರಡನೆಯವನ ಪುಣ್ಯವೇ ಅಧಿಕವೆನಿಸುವುದು.

೩೬. ಪಂಚಪಾತಕಗಳನ್ನು ಮಾಡಿದ ದುಷ್ಟಬುದ್ಧಿಯವನಾದ ಮನುಷ್ಯನು ಒಮ್ಮೆ ಬ್ರಹ್ಮೇಶ್ವರನನ್ನು ನೋಡುವನಾದರೆ ಅವನು ಉತ್ತಮಲೋಕವನ್ನೇ ಪಡೆಯುವನು.

ಚಾಂದ್ರಾಯಣಾನಾಂ ವಿಧಿವದ್ದಶಾನಾಮೇವ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಬ್ರಹ್ಮೇಶ್ವರಸ್ಯ ದರ್ಶನಾತ್ ॥ ೩೭ ॥
ಇತ್ಯುಕ್ತ್ವಾ ಗತವಾನ್ವಿಷ್ಣುರ್ವೈಕುಂಠಂ ಶಾಶ್ವತಂ ಪ್ರಿಯೇ ।
ಬ್ರಹ್ಮಲೋಕಂ ಜಗಾಮಾಥ ಬ್ರಹ್ಮಾ ಲೋಕಪಿತಾಮಹಃ ॥ ೩೮ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಬ್ರಹ್ಮೇಶ್ವರಸ್ಯ ದೇವಸ್ಯ ಜಲ್ಪೇಶ್ವರಮಥೋ ಶೃಣು ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಬ್ರಹ್ಮೇಶ್ವರಮಾಹಾತ್ಮ್ಯವರ್ಣನಂ"
ನಾಮ ಪಂಚಷಷ್ಟಿತಮೋಽಧ್ಯಾಯಃ

---

೩೭. ಹತ್ತು ಚಾಂದ್ರಾಯಣ ವ್ರತಗಳನ್ನು ವಿಧ್ಯುಕ್ತರೀತಿಯಿಂದಾಚರಿಸುವುದರಿಂದ ಯಾವ ಪುಣ್ಯವುಂಟೊ, ಅದನ್ನೇ ಬ್ರಹ್ಮೇಶ್ವರನ ದರ್ಶನದಿಂದ ಪಡೆಯಬಹುದು."

೩೮. ಪ್ರಿಯಳೆ! ಇಂತೆಂದು ನುಡಿದು ಮಹಾವಿಷ್ಣುವು ಸನಾತನವಾದ ತನ್ನ ವೈಕುಂಠಕ್ಕೆ ತೆರಳಿದನು. ಲೋಕಪಿತಾಮಹನಾದ ಬ್ರಹ್ಮನೂ ಸತ್ಯಲೋಕಕ್ಕೆ ಹೊರಟನು.

೩೯. ದೇವಿಯೆ! ಇಂತು ಬ್ರಹ್ಮೇಶ್ವರನ ಪ್ರಭಾವದ ಪಾಪನಾಶಕವಾದ ಕಥೆಯನ್ನು ಹೇಳಿದುದಾಯಿತು. ಇನ್ನು ಜಲ್ಪೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಬ್ರಹ್ಮೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಷಷ್ಟಿತಮೋಽಧ್ಯಾಯಃ

### ಜಲ್ಪೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಷಟ್‌ಷಷ್ಟಿತಮಕಂ ವಿದ್ಧಿ ದೇವಂ ಜಲ್ಪೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಮಹಾಪಾಪಂ ಶಮಂ ವ್ರಜೇತ್ ॥ ೧ ॥
ಜಲ್ಪೋ ನಾಮ ಮಹಾದೇವಿ ರಾಜಾಽಭೂದ್ಭುವಿ ವಿಶ್ರುತಃ ।
ಸದಾ ಜಲ್ಪರತೋ ನಿತ್ಯಂ ಜಲ್ಪವಾದಪ್ರವರ್ತಕಃ ॥ ೨ ॥
ವಿಕಲ್ಪಬಹುಲೋ ನಿತ್ಯಂ ಸಂಸಾರಗತಿಚಿಂತಕಃ ।
ಸುಬಾಹುಪ್ರಮುಖಾಃ ಪಂಚ ಪುತ್ರಾ ಜಾತಾ ಮಹಾಬಲಾಃ ॥ ೩ ॥
ತಸ್ಯ ರಾಜ್ಞೋ ವರಾರೋಹೇ ಮೂರ್ತಾಃ ಪಂಚಾಗ್ನಯೋ ಯಥಾ ।
ಸುಬಾಹುಃ ಶತ್ರುಮರ್ದೀ ಚ ಜಯೋ ವಿಜಯ ಏವ ಚ ।
ವಿಕ್ರಾಂತಃ ಪಂಚಮಃ ಪುತ್ರಃ ಸರ್ವೇ ಶಸ್ತ್ರಾಽಸ್ತ್ರಪಾರಗಾಃ ॥ ೪ ॥
ಪಿತ್ರಾ ಜಲ್ಪೇನ ತೇ ರಾಜ್ಞಾ ಪೃಥಗ್ರಾಜ್ಯೇ ಪ್ರತಿಷ್ಠಿತಾಃ ।
ಪೃಥಕ್ಪುತ್ರಾ ಹಿ ತೇ ಸರ್ವೇ ಪೃಥಗ್ದೇಶಾಽಧಿಪಾಃ ಕೃತಾಃ ॥ ೫ ॥

---

### ಕನ್ನಡದ ಅನುವಾದ

#### ಜಲ್ಪೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:— ಪ್ರಿಯಳೆ! ಅರುವತ್ತಾರನೆಯ ಮಹಾಲಿಂಗವೇ ಮಹಾಪಾತಕಗಳನ್ನು ದರ್ಶನಮಾತ್ರದಿಂದಲೇ ನಿರ್ಮೂಲಗೊಳಿಸುವ ಜಲ್ಪೇಶ್ವರವಾಗಿರುವುದು.

೨. ಪಾರ್ವತಿಯೆ! ಹಿಂದೆ ಭೂಲೋಕದಲ್ಲಿ ಪ್ರಖ್ಯಾತನಾದ ಜಲ್ಪನೆಂಬೊಬ್ಬ ರಾಜನಿದ್ದನು. ಅವನು ಬಹುಭಾಷಿಯೂ, ಜಲ್ಪವಾದದಲ್ಲಿಯೇ ನಿಷ್ಣಾತನೂ ಆಗಿದ್ದನು.

೩. ಯಾವಾಗಲೂ ಅತ್ಯಂತ ಸಂಶಯಸ್ವಭಾವದ ಮನಸ್ಸುಳ್ಳವನೂ, ಸಂಸಾರನಿರ್ವಹಣದಲ್ಲಿಯೇ ಆಸಕ್ತನೂ ಆಗಿದ್ದ ಆತನಿಗೆ ರೂಪುವೆತ್ತ ಪಂಚಾಗ್ನಿಗಳಂತೆ ತೋರುವ ಸುಬಾಹುವೇ ಮೊದಲಾದ ಐವರು ಮಹಾ ಪರಾಕ್ರಮಿಗಳಾದ ಪುತ್ರರು ಜನಿಸಿದರು.

೪. ಸುಬಾಹು, ಶತ್ರುಮರ್ದನ, ಜಯ, ವಿಜಯ ಮತ್ತು ವಿಕ್ರಾಂತರೆಂಬ ಆ ಐವರು ಪುತ್ರರೂ ಸಮಸ್ತ ಶಸ್ತ್ರಾಸ್ತ್ರವಿದ್ಯೆಗಳಲ್ಲಿ ಪಾರಂಗತರಾಗಿದ್ದರು.

೫. ತಂದೆಯಾದ ಜಲ್ಪಮಹಾರಾಜನು ಅವರನ್ನೆಲ್ಲ ಬೇರೆ ಬೇರೆ ರಾಜ್ಯಗಳಲ್ಲಿ

ಪ್ರಾಚ್ಯಾಂ ಸುಬಾಹುರ್ನೃಪತಿರ್ಯಾಮ್ಯಾಂ ವೈ ಶತ್ರುಮರ್ದನಃ ।
ಪಶ್ಚಿಮಾಯಾಂ ಜಯೋ ರಾಜಾ ಉತ್ತರೇ ವಿಜಯೋ ನೃಪಃ ॥ ೬ ॥
ಮಧ್ಯೇ ವಿಕ್ರಾಂತಸಂಜ್ಞಸ್ತು ಸ್ವಪದೇ ವಿನಿಯೋಜಿತಃ ।
ವ್ಯವಸ್ಥಾಮೀದೃಶೀಂ ಕೃತ್ವಾ ಸ್ವಯಮೇವ ವನಂ ಯಯೌ ॥ ೭ ॥
ಬಭೂವುರ್ಮಂತ್ರಿಣಸ್ತೇಷಾಂ ಹಿತಾ ವಂಶಕ್ರಮಾಗತಾಃ ।
ಬುಭುಜುಃ ಸ್ವಸ್ವ ರಾಜ್ಯಾನಿ ಮಂತ್ರಿಭಿಃ ಸಹಿತಾಸ್ತದಾ ॥ ೮ ॥
ವಿಕ್ರಾಂತಸ್ಯ ಚ ಯೋ ಮಂತ್ರೀ ವಿಕಲ್ಪೈಕಪರಾಯಣಃ ।
ತೇನೋಕ್ತಂ ವಿಜನೇ ದೇಶೇ ವಿಕ್ರಾಂತಸ್ಯ ಮಹೀಭೃತಃ ॥ ೯ ॥
ಯಸ್ಯೈಷಾ ಪೃಥಿವೀ ಕೃತ್ಸ್ನಾ ಸ ಸಮರ್ಥಃ ಪ್ರಕೀರ್ತಿತಃ ।
ಉದ್ಯಮೇನ ಪದಂ ಲಬ್ಧಂ ವಾಸವೇನ ಮಹಾತ್ಮನಾ ॥ ೧೦ ॥
ತ್ರಿದಶೈಶ್ಚಾಽಮೃತಂ ಲಬ್ಧಮುದ್ಯಮೇನ ಮಹೀಪತೇ ॥ ೧೧ ॥

---

ಸ್ಥಾಪಿಸಿದನು. ಬೇರೆ ಹೆಂಡಿರ ಮಕ್ಕಳಾದ ಅವರೆಲ್ಲರೂ ಬೇರೆ ಬೇರೆ ದೇಶಗಳಿಗೆ ಅಧಿಪತಿಗಳಾಗಿ ಮಾಡಲ್ಪಟ್ಟರು.

೬. ಪೂರ್ವದಿಶೆಗೆ ಸುಬಾಹುವು ದೊರೆಯಾದನು. ದಕ್ಷಿಣದೇಶಕ್ಕೆ ಶತ್ರುಮರ್ದನನೂ, ಪಶ್ಚಿಮಕ್ಕೆ ಜಯನೂ, ಉತ್ತರಕ್ಕೆ ವಿಜಯನೂ ರಾಜರಾದರು.

೭. ಮಧ್ಯಪ್ರದೇಶದಲ್ಲಿ ಐದನೆಯವನಾದ ವಿಕ್ರಾಂತನನ್ನು ತನ್ನ ಅಧಿಕಾರದಲ್ಲಿಯೇ ನೆಲೆಗೊಳಿಸಿದನು. ಈ ವಿಧವಾಗಿ ರಾಜ್ಯಾಧಿಕಾರದ ವ್ಯವಸ್ಥೆಯನು ಮಾಡಿ ಜಲ್ಪಮಹಾರಾಜನು ಅರಣ್ಯಕ್ಕೆ ಹೊರಟುಹೋದನು.

೮. ಅವರೆಲ್ಲರಿಗೂ ವಂಶಾನುಕ್ರಮದಿಂದ ಬಂದವರೂ, ಹಿತಚಿಂತಕರೂ ಆದ ಮಂತ್ರಿಗಳಿದ್ದರು. ಅವರೊಡನೆ ಐವರೂ ತಮ್ಮ ತಮ್ಮ ರಾಜ್ಯಗಳನ್ನಾಳುತ್ತ ಸುಖದಿಂದಿದ್ದರು.

೯. ವಿಕ್ರಾಂತನಿಗಿದ್ದ ಮಂತ್ರಿಯು ಮಾತ್ರ ಭೇದನೀತಿಯನ್ನೇ ಅನುಸರಿಸುವನಾಗಿದ್ದನು. ಆತನೊಮ್ಮೆ ಏಕಾಂತಪ್ರದೇಶದಲ್ಲಿ ತನ್ನ ರಾಜನಿಗೆ ಹೇಳ್ಳ ತೊಡಗಿದನು.

೧೦. "ಯಾವನಿಗೆ ಸಮಸ್ತ ಭೂಮಂಡಲವೂ ಸೇರಿರುವುದೊ, ಅವನೇ ಸಮರ್ಥನೆನಿಸಿಕೊಳ್ಳುವನು. ಮಹಾತ್ಮನಾದ ಮಹೇಂದ್ರನೂ ಸ್ವಪ್ರಯತ್ನದಿಂದಲೇ ತನ್ನ ಅಧಿಕಾರವನ್ನು ಪಡೆದನು.

೧೧. ಮಹಾರಾಜ! ದೇವತೆಗಳೂ ಮಹಾಪ್ರಯತ್ನದಿಂದಲೇ ಅಮೃತವನ್ನು ಪಡೆದರಷ್ಟೆ.

ಹೀನೋದ್ಯಮಾ ಮಾನವಾ ಯೇ ಕ್ಷತ್ರಿಯಾಶ್ಚ ವಿಶೇಷತಃ ।
ತೇ ಹಾಸ್ಯಾಸ್ಪದತಾಂ ಯಾಂತಿ ಹೀನವೀರ್ಯಾ ದಿನೇ ದಿನೇ ॥ ೧೨ ॥
ಸ್ನೇಹಂ ಚ ಕುರುತೇ ಭ್ರಾತಾ ರಾಜ್ಯಲುಬ್ಧೋಽರ್ಥಕಾರಣಾತ್ ।
ಅರ್ಥವೀರ್ಯೇಣ ತೇನೈವ ಸಂತೋಷಂ ಕುರುತೇ ನೃಪಃ ॥ ೧೩ ॥
ಕ್ರಿಯತೇ ನ ಕಿಮರ್ಥಂ ತು ಭೂಪ ಮಂತ್ರಪರಿಗ್ರಹಃ ।
ಭುಜ್ಯತೇ ಸಕಲಂ ರಾಜ್ಯಂ ಮಯಾ ತೇ ಮಂತ್ರಿಣಾ ಬಲಾತ್ ॥ ೧೪ ॥
ಪರೋಽಪಿ ಹಿತವಾನ್ ಬಂಧುರ್ಬಂಧುರಪ್ಯಹಿತಃ ಪರಃ ।
ಅಹಿತೋ ದೇಹಜೋ ವ್ಯಾಧಿರ್ಹಿತಮಾರಣ್ಯಮೌಷಧಂ ॥ ೧೫ ॥
ಭೂಮಿಮೇತೇ ನಿರ್ಗಿಲಂತಿ ಸರ್ಪಾ ಬಿಲಶಯಾನಿವ ।
ರಾಜಾನಮವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಂ ॥ ೧೬ ॥
ಮಾಯಯಾ ಮೋಹಿತಂ ಸರ್ವಂ ಕೋ ವಾ ಕಸ್ಯ ಚ ಬಾಂಧವಃ ।
ಉದ್ಯಮಃ ಕ್ರಿಯತಾಂ ತಸ್ಮಾದ್ಭ್ರಾತೄಣಾಂ ನಿಗ್ರಹೇ ದ್ರುತಂ ॥ ೧೭ ॥

---

೧೨. ಅಲ್ಪಪ್ರಯತ್ನವುಳ್ಳ ಮಾನವರೂ, ವಿಶೇಷವಾಗಿ ಕ್ಷತ್ರಿಯರೂ ದಿನ ದಿನಕ್ಕೂ ತಮ್ಮ ಅಧಿಕಾರವನ್ನು ಕಳೆದುಕೊಳ್ಳುತ್ತ ಕಡೆಯಲ್ಲಿ ಲೋಕದ ಅಪಹಾಸ್ಯಕ್ಕೆ ಗುರಿಯಾದರು.

೧೩. ರಾಜ್ಯಕಾಮುಕನಾದ ಸಹೋದರನು ತನ್ನ ಕಾರ್ಯವನ್ನು ಸಾಧಿಸಿಕೊಳ್ಳಲು ಸ್ನೇಹವನ್ನು ಮಾಡಿಕೊಳ್ಳುವನು. ಅದೇ ಐಶ್ವರ್ಯದಿಂದಲೇ ರಾಜನೂ ಸಂತೋಷಪಡುವನು.

೧೪. ಅಯ್ಯಾ ಭೂಪಾಲಕನೆ! ನೀನೇಕೆ ಮಂತ್ರಾಲೋಚನೆಯನ್ನು ಮಾಡಬಾರದು? ಮಂತ್ರಿಯಾದ ನನ್ನ ಸಹಾಯದಿಂದ ನೀನು ಬಲಾತ್ಕಾರವಾಗಿ ಸಕಲ ರಾಜ್ಯವನ್ನೂ ಅನುಭವಿಸುವೆ.

೧೫. ಬೇರೆಯವನಾದರೂ ಹಿತವನ್ನು ಮಾಡುವನೇ ಬಂಧುವು. ಬಂಧುವಾದರೂ ಅಹಿತವನ್ನೆಸಗುವವನು ಶತ್ರುವೇ ಸರಿ. ದೇಹದಲ್ಲಿಯೇ ಹುಟ್ಟಿದ ರೋಗವು ಅಹಿತವು. ಅರಣ್ಯದಲ್ಲಿ ಹುಟ್ಟಿದುದಾದರೂ ಮೂಲಿಕೆಯು ಹಿತವಾಗುವುದು.

೧೬. ಸರ್ಪಗಳು ಬಿಲದಲ್ಲಿರುವ ಜಂತುಗಳನ್ನು ನುಂಗುವಂತೆ ಇವರು ಭೂಮಿಯನ್ನೂ, ಸೌಮ್ಯನಾದ ರಾಜನನ್ನೂ, ಅಪ್ರವಾಸಿಯಾದ ಬ್ರಾಹ್ಮಣನನ್ನೂ ನುಂಗಿಬಿಡುವರು.

೧೭. ಸಕಲ ಬ್ರಹ್ಮಾಂಡವೂ ಮಾಯೆಯಿಂದಾವೃತವಾಗಿರುವುದು. ಯಾರಿಗೆ ಯಾರು ಬಂಧುವು? ಆದುದರಿಂದ ನಿನ್ನ ಅಣ್ಣಂದಿರನ್ನು ನಿಗ್ರಹಿಸುವ ಪ್ರಯತ್ನವನ್ನು ಬೇಗ ಮಾಡು.

ಭ್ರಾತೃಭಿರ್ಭ್ರಾತರಃ ಸರ್ವೇ ನಿಹತಾ ರಾಜ್ಯಕಾರಣಾತ್ ।
ಧರ್ಮಂ ಚ ಶಾಶ್ವತಂ ಜ್ಞಾತ್ವಾ ನಿಹತಾಶ್ಚಾಸುರಾಃ ಸುರೈಃ ॥ ೧೮ ॥
ಇತಿ ಮಂತ್ರಿವಚಃ ಶ್ರುತ್ವಾ ಸ ರಾಜಾ ವಿಸ್ಮಯಾನ್ವಿತಃ ।
ಹಸಿತ್ವಾ ಪ್ರತ್ಯುವಾಚೇದಂ ಮಮಾಯಂ ಶತ್ರುರಾಗತಃ ॥ ೧೯ ॥

ವಿಕ್ರಾಂತ ಉವಾಚ :—

ವಯಂ ಚ ಭ್ರಾತರಃ ಪಂಚ ಪೃಥಿವೀಂ ಕಾಮಯಾಮಹೇ ।
ಅತುಷ್ಟಾಃ ಪೃಥಗೈಶ್ವರ್ಯಂ ಕಥಂ ಕೃತ್ಸ್ನಂ ಭವಿಷ್ಯತಿ ॥ ೨೦ ॥
ಜ್ಯೇಷ್ಠೋ ಭ್ರಾತಾ ಸುಬಾಹುಶ್ಚ ದ್ವಿತೀಯಃ ಶತ್ರುಮರ್ದನಃ ।
ಜಯಶ್ಚ ವಿಜಯಶ್ಚೈವ ತೇಷಾಂ ಲಘುರಹಂ ಯತಃ ॥ ೨೧ ॥

ಮಂತ್ರ್ಯುವಾಚ :—

ರಾಜ್ಯೇ ಸ್ಥಿತಂ ಪೂಜಯಂತಿ ಜ್ಯೇಷ್ಠಂ ಪೂಜಾರ್ಹಣೈರ್ವರೈಃ ।
ಕನಿಷ್ಠಜ್ಯೇಷ್ಠತಾ ಕೇಯಂ ರಾಜ್ಯಂ ಪ್ರಾರ್ಥಯತಾಂ ನೃಣಾಂ ॥ ೨೨ ॥
ತಥೇತಿ ಚ ಪ್ರತಿಜ್ಞಾತೇ ವಿಕ್ರಾಂತೇನ ಮಹೀಭೃತಾ ।
ಸ ಮಂತ್ರೀ ಕಾರಯಾಮಾಸ ಅಭಿಚಾರವಿಧಿಂ ತದಾ ॥ ೨೩ ॥

---

೧೮. ಹಿಂದೆ ರಾಜ್ಯಕ್ಕಾಗಿ ಸಹೋದರರು ತಮ್ಮ ಸಮಸ್ತ ಭ್ರಾತೃಗಳನ್ನೂ ಕೊಂದಿರುವರು. ಈ ಧರ್ಮವೇ ಶಾಶ್ವತವೆಂದು ತಿಳಿದು ದೇವತೆಗಳೂ ರಾಕ್ಷಸರನ್ನು ನಿಗ್ರಹಿಸಿರುವರು.''

೧೯. ಇಂತೆಂದ ಮಂತ್ರಿಯ ಮಾತುಗಳನ್ನು ಕೇಳಿ ಆ ರಾಜನು ಸ್ವಲ್ಪ ಕಾಲ ಆಶ್ಚರ್ಯಚಕಿತನಾಗಿ ಬಳಿಕ, ''ಇಗೋ, ಇವನೇ ನನಗೆ ಶತ್ರುವಾಗಿ ಬಂದಿರುವನು'' ಎಂದು ನಗುತ್ತ ಇಂತೆಂದನು.

೨೦-೨೧. ವಿಕ್ರಾಂತನು ಹೇಳುತ್ತಾನೆ:—ನಾವೈದು ಮಂದಿ ಸಹೋದರರೂ ತೃಪ್ತಿಯಿಲ್ಲದೆ ಭೂಮಂಡಲವನ್ನೆಲ್ಲ ಸಮ ಸಮವಾಗಿ ಅಪೇಕ್ಷಿಸಿ ಪಾಲಿಸುತ್ತಿರುವೆವು. ಬೇರೆ ಬೇರೆಯಾಗಿರುವ ನಮ್ಮ ಐಶ್ವರ್ಯಗಳು ಒಬ್ಬನಲ್ಲಿಯೆ ಹೇಗೆ ಸೇರುವುವು? ಸುಬಾಹುವು ನನ್ನ ಜ್ಯೇಷ್ಠ ಸಹೋದರನು. ಎರಡನೆಯವನೇ ಶತ್ರುಮರ್ದನನು. ಬಳಿಕ ಜಯವಿಜಯರಿರುವರು. ನಾನೇ ಕಡೆಯವನಲ್ಲವೆ.

೨೨. ಮಂತ್ರಿಯು ಹೇಳುತ್ತಾನೆ:—ಜ್ಯೇಷ್ಠನಾದವನು ರಾಜ್ಯಾಧಿಕಾರದಲ್ಲಿದ್ದರೆ ಜನರು ಅವನನ್ನು ಮಾತ್ರ ಉತ್ತಮ ವಸ್ತುಗಳಿಂದ ಪೂಜಿಸುವರು. ಒಂದೇ ರಾಜ್ಯವನ್ನು ಅಪೇಕ್ಷಿಸುತ್ತಿರುವ ಮನುಷ್ಯರಲ್ಲಿ ಈ ಜ್ಯೇಷ್ಠ ಕನಿಷ್ಠಭಾವವೆಲ್ಲಿಯದು?

೨೩. ಇದನ್ನು ಕೇಳಿ ವಿಕ್ರಾಂತಮಹಾರಾಜನು ಹಾಗೇಯೆ ಆಗಲೆಂದೊಪ್ಪಿಕೊಂಡನು. ಬಳಿಕ ಆ ಮಂತ್ರಿಯು ಅಭಿಚಾರಕರ್ಮವನ್ನು ಮಾಡಿಸತೊಡಗಿದನು.

ಆಥರ್ವಣೇನ ಮಂತ್ರೇಣ ಪುರೋಧಾಃ ಪ್ರಚಕಾರ ಹ ।
ಜ್ಞಾತಂ ಪುರೋಹಿತೈಸ್ತೇಷಾಂ ತೇಽಪಿ ಚಕ್ರುಃ ಸಮಾಹಿತಾಃ ॥ ೨೪ ॥
ಅಥ ಕೃತ್ಯಾ ಸಮುತ್ಪನ್ನಾ ಪಶ್ಚಾತ್ಕೃತ್ಯಾ ಚತುಷ್ಟಯಂ ।
ಸ ಪುರೋಹಿತಭೃತ್ಯಾಂಸ್ತಾನಗ್ರಂಸಂಸ್ತು ಸಮಂ ತದಾ ॥ ೨೫ ॥
ತತಃ ಸಮಸ್ತಲೋಕಸ್ಯ ವಿಸ್ಮಯಶ್ಚಾಽಭವನ್ಮಹಾನ್ ।
ಯದ್ಯೈಕಕಾಲಂ ನೇಶುಸ್ತೇ ಪೃಥಕ್ಪುರನಿವಾಸಿನಃ ॥ ೨೬ ॥
ತತಃ ಶ್ರುತ್ವಾ ಚ ನಿಧನಂ ಪುತ್ರಾಣಾಂ ಜಲ್ಪಕೋ ನೃಪಃ ।
ವನೇ ವಸಿಷ್ಠಂ ಪಪ್ರಚ್ಛ ಕಿಮೇತದ್ಭಗವನ್ಪ್ರಭೋ ॥ ೨೭ ॥
ತೇನಾಽಪಿ ಕಥಿತಂ ಸರ್ವಂ ವಸಿಷ್ಠೇನ ಮಹಾತ್ಮನಾ ।
ದಿವ್ಯಜ್ಞಾನೇನ ವೃತ್ತಾಂತಂ ವಿಕಲ್ಪಂ ಚಾಽಕರೋನ್ನೃಪಃ ॥ ೨೮ ॥

ರಾಜೋವಾಚ :—

ನಿಮಿತ್ತೋಽಹಂ ವಿನಾಶಸ್ಯ ಧಿಗ್ಧಿಗ್ಜನ್ಮ ಮದೀಯಕಂ ।
ಸಾರ್ಧಂ ತ್ವಮಾತ್ಯಪುತ್ರೈಶ್ಚ ಮೃತಂ ಬ್ರಾಹ್ಮಣಪಂಚಕಂ ॥ ೨೯ ॥

---

೨೪. ಆತನ ಪುರೋಹಿತನು ಆಥರ್ವಣಮಂತ್ರಗಳಿಂದ ಅಭಿಚಾರಿಕಕರ್ಮವನ್ನು ಮಾಡುತ್ತಿದ್ದುದನ್ನು ಇತರ ಅಣ್ಣಂದಿರ ಪುರೋಹಿತರೂ ತಿಳಿದುಕೊಂಡು ಅವರೂ ಸಮಾಧಾನಮನಸ್ಸಿನಿಂದ ವಿಕ್ರಾಂತನ ನಾಶಕ್ಕಾಗಿ ಅದೇ ಕರ್ಮಗಳನ್ನೇ ಮಾಡುವವರಾದರು.

೨೫. ಮೊದಲು ವಿಕ್ರಾಂತನ ಕುಕರ್ಮಶಕ್ತಿಯು ಹೊರಟಿತು. ಅದರ ಹಿಂದೆಯೇ ಇತರ ನಾಲ್ವರ ಶಕ್ತಿಗಳೂ ಹೊರಟುಬಂದುವು. ಅವು ಪುರೋಹಿತ ಸೇವಕಾದಿಗಳೊಡನೆ ಆ ಐದು ಅಣ್ಣತಮ್ಮಂದಿರನ್ನೂ ನಾಶಗೊಳಿಸಿದುವು.

೨೬. ಇಂತು ಬೇರೆ ಬೇರೆ ರಾಜಧಾನಿಗಳಲ್ಲಿ ವಾಸಿಸುತ್ತಿದ್ದ ಸಹೋದರರೆಲ್ಲರೂ ಏಕಕಾಲದಲ್ಲಿಯೇ ಮರಣವನ್ನು ಹೊಂದಿದುದನ್ನು ಕಂಡು ಸಕಲ ಲೋಕದಲ್ಲಿಯೂ ಅತ್ಯಂತಾಶ್ಚರ್ಯವುಂಟಾಯಿತು.

೨೭. ಬಳಿಕ ತನ್ನ ಪುತ್ರರೆಲ್ಲರೂ ಸತ್ತುದನ್ನು ಕೇಳಿ ಜಲ್ಪಮಹಾರಾಜನು ಅರಣ್ಯದಲ್ಲಿದ್ದ ವಸಿಷ್ಠಮುನಿಯ ಆಶ್ರಮಕ್ಕೆ ಹೋಗಿ, "ಮಹಾತ್ಮನೆ! ಇದೇನಾಶ್ಚರ್ಯ ?" ಎಂದು ಕೇಳಿದನು.

೨೮. ಮಹಾತ್ಮನಾದ ವಶಿಷ್ಠನೂ ದಿವ್ಯಜ್ಞಾನದಿಂದ ವೃತ್ತಾಂತವನ್ನು ತಿಳಿದು ನಡೆದುದೆಲ್ಲವನ್ನೂ ಆತನಿಗೆ ಹೇಳಲು ಆ ರಾಜನು ಚಿಂತೆಗೊಳಗಾದನು.

೨೯. ರಾಜನು ಹೇಳುತ್ತಾನೆ:—ಈ ಸರ್ವನಾಶಕ್ಕೆ ನಾನೇ ಕಾರಣನಾದೆನು. ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ಮಂತ್ರಿಪುತ್ರರೊಡನೆ ಐವರು ಬ್ರಾಹ್ಮಣರೂ ಹತರಾದರಲ್ಲವೆ.

ಮತ್ತೋಽನ್ಯಃ ಕಃ ಪಾಪರತೋ ಭವಿಷ್ಯತಿ ಮಹಾನ್ ಭುವಿ ।
ಯದಿ ಜನ್ಮ ಮದೀಯಂ ಸ್ಯಾನ್ನ ಚ ಜಾತು ಮಹೀತಲೇ ।
ತತಸ್ತೇ ನ ವಿನಶ್ಯೇಯುರ್ಮಮ ಪುತ್ರಪುರೋಹಿತಾಃ ॥ ೩೦ ॥
ಧಿಗ್ರಾಜ್ಯಂ ಧಿಕ್ಚ ಮೇ ಜನ್ಮ ಭೂಭುಜಾಂ ಚ ಮಹಾಕುಲೇ ।
ಕಾರಣತ್ವಂ ಗತೋ ಯೋಽಹಂ ವಿನಾಶಸ್ಯ ದ್ವಿಜನ್ಮನಾಂ ॥ ೩೧ ॥
ಕುರ್ವಂತಃ ಸ್ವಾಮಿನಸ್ತೇಽರ್ಥಂ ಪುತ್ರಾಣಾಂ ಮಮ ಯಾಜಕಾಃ ।
ನಾಶಂ ಯಯುರ್ನ ದುಷ್ಟಾಸ್ತೇ ದುಷ್ಟೋಽಹಂ ನಾಶಕಾರಿಣೇ ॥ ೩೨ ॥
ಇತ್ಥಮುದ್ವಿಗ್ನಹೃದಯಃ ಸ ಜಲ್ಪಃ ಪೃಥಿವೀಪತಿಃ ।
ಪಪ್ರಚ್ಛ ಚ ಪುನಃ ಪ್ರಹ್ವೋ ವಸಿಷ್ಠಂ ಜ್ಞಾನಿನಾಂ ವರಂ ॥ ೩೩ ॥

ರಾಜೋವಾಚ :—

ಭಗವನ್ಬ್ರೂಹಿ ಮೇ ತೀರ್ಥಮವಿಯೋಗಕರಂ ಸದಾ ।
ಸದ್ಯಃ ಪಾಪಹರಂ ವಿಪ್ರ ಲಿಂಗಂ ವಾ ಕಥಯ ಪ್ರಭೋ ॥ ೩೪ ॥
ತಸ್ಯ ತದ್ವಚನಂ ಶ್ರುತ್ವಾ ಜಲ್ಪಸ್ಯ ಪೃಥಿವೀಪತೇಃ ।
ವಸಿಷ್ಠಃ ಕಥಯಾಮಾಸ ದಿವ್ಯಜ್ಞಾನೇನ ಪಾರ್ವತಿ ॥ ೩೫ ॥

---

೩೦. ನನಗಿಂತಲೂ ಹೆಚ್ಚಿನ ಮಹಾಪಾತಕಿಯು ಬೇರೆ ಯಾವನು ತಾನೆ ಭೂಲೋಕದಲ್ಲಿ ಹುಟ್ಟಿಯಾನು ? ನಾನೊಬ್ಬನು ಭೂಮಿಯಲ್ಲಿ ಹುಟ್ಟದಿದ್ದದ್ದರೆ ಈ ಪುತ್ರರೂ ಪುರೋಹಿತರೂ ನಾಶವನ್ನು ಹೊಂದುತ್ತಿರಲಿಲ್ಲ.

೩೧. ಈ ರಾಜ್ಯಕ್ಕೆ ಧಿಕ್ಕಾರವಿರಲಿ. ಮಹಾರಾಜರ ಉತ್ತಮ ಕುಲದಲ್ಲಿ ಜನಿಸಿದ ನನಗೂ ಧಿಕ್ಕಾರವಿರಲಿ. ಬ್ರಾಹ್ಮಣರ ನಾಶಕ್ಕೆ ನಾನೇ ಕಾರಣನಾದೆನಲ್ಲವೆ?

೩೨. ತಮ್ಮ ಒಡೆಯರಾದ ನನ್ನ ಮಕ್ಕಳ ಪ್ರಯೋಜನಕ್ಕಾಗಿ ಕಾರ್ಯವನ್ನು ಮಾಡಿದ ನನ್ನ ಪುರೋಹಿತರು ನಾಶವಾದರು. ಅವರು ದುಷ್ಟರೇ ಅಲ್ಲ. ಅವರ ನಾಶಕ್ಕೆ ಕಾರಣನಾದ ನಾನೇ ದುಷ್ಟನು.

೩೩. ಇಂತೆಂದು ಜಲ್ಪಮಹಾರಾಜನು ಮನಸ್ಸಿನಲ್ಲಿ ಬಹಳ ಖೇದಗೊಂಡವನಾಗಿ ಮತ್ತೆ ಜ್ಞಾನಿಗಳಲ್ಲಿ ಶ್ರೇಷ್ಠನಾದ ವಶಿಷ್ಠನಿಗೆ ನಮಸ್ಕರಿಸಿ ವಿಜ್ಞಾಪಿಸಿಕೊಂಡನು.

೩೪. ರಾಜನು ಹೇಳುತ್ತಾನೆ :—ವಿಪ್ರೋತ್ತಮನೆ! ಯಾವಾಗಲೂ ಪುತ್ರಮಿತ್ರಾದಿಗಳ ವಿಯೋಗವನ್ನೇ ಮಾಡಿಸದಿರುವುದೂ, ತತ್ಕ್ಷಣದಲ್ಲಿಯೇ ಪಾತಕಗಳನ್ನು ನಾಶಮಾಡುವುದೂ ಆದ ಒಂದು ತೀರ್ಥವನ್ನೋ, ಮಹಾಲಿಂಗವನ್ನೋ ತಿಳಿಸುವವನಾಗು.

೩೫. ಪಾರ್ವತಿಯೆ! ರಾಜೇಂದ್ರನಾದ ಜಲ್ಪನ ಈ ಮಾತನ್ನು ಕೇಳಿ ವಶಿಷ್ಠನು ದಿವ್ಯಜ್ಞಾನದಿಂದ ಕ್ಷೇತ್ರಗಳೆಲ್ಲವನ್ನೂ ನೋಡಿ ತಿಳಿದು ಆತನಿಗೆ ಹೇಳಿದನು.

ಗಚ್ಛ ಜಲ್ಪ ಮಹಾದೇಶಾನ್ಮಹಾಕಾಲವನೋತ್ತಮಂ ।
ಕೃತ್ವಾ ನಿಃಕ್ಷತ್ರಿಯಾಂ ಪೃಥ್ವೀಂ ಯತ್ರ ರಾಮಸ್ತಪಸ್ಯತಿ ।
ತತ್ರ ಲಿಂಗಮನಾದ್ಯಂ ಚ ಕುಕ್ಕುಟೇಶ್ವರಪಶ್ಚಿಮೇ ॥ ೩೬ ॥
ತದಾರಾಧಯ ರಾಜೇಂದ್ರ ಜಾಮದಗ್ನ್ಯಾಶ್ರಮೇ ಸ್ಥಿತಃ ।
ವಸಿಷ್ಠಸ್ಯ ವಚಃ ಶ್ರುತ್ವಾ ಜಲ್ಪೋಽಸೌ ಪೃಥಿವೀಪತಿಃ ।
ದೇವದಾರುವನಂ ತ್ಯಕ್ತ್ವಾ ಮಹಾಕಾಲವನಂ ಗತಃ ॥ ೩೭ ॥
ದದರ್ಶ ತತ್ರ ತಲ್ಲಿಂಗಮನಾದ್ಯಂ ದೇವಸಂಸ್ತುತಂ ।
ಪೂಜಯಾಮಾಸ ವಿಧಿವತ್ಪರಮೇಣ ಸಮಾಧಿನಾ ॥ ೩೮ ॥
ತತ್ರ ವಾಣೀ ಸಮುತ್ಪನ್ನಾ ಲಿಂಗಮಧ್ಯಾದ್ವರಾನನೇ ।
ನ ತ್ವಂ ಪಾಪಸಮಾಚಾರೋ ನ ತ್ವಂ ಮರಣಕಾರಣಂ ।
ಪುತ್ರಾಣಾಂ ನೃಪ ವಿಪ್ರಾಣಾಮದೃಷ್ಟಂ ತತ್ರ ಕಾರಣಂ ॥ ೩೯ ॥
ವಿಪಾಕೇನ ಸ್ವಕೀಯೇನ ಗತಾ ವೈವಸ್ವತಂ ಪುರಂ ।
ಮಾ ಶೋಕಂ ಕುರು ರಾಜೇಂದ್ರ ಗಹನಾ ಕರ್ಮಣೋ ಗತಿಃ ॥ ೪೦ ॥

---

೩೬. "ಎಲೈ ಜಲ್ಪನೆ! ನನ್ನ ಆದೇಶದಂತೆ ನೀನು ಉತ್ತಮವಾದ ಮಹಾಕಾಲವನಕ್ಕೆ ಹೋಗು. ಪರಶುರಾಮನು ಭೂಮಂಡಲವನ್ನು ಕ್ಷತ್ರಿಯ ರಹಿತವನ್ನಾಗಿ ಮಾಡಿ ಅಲ್ಲಿ ನೆಲಸಿರುವನು. ಅಲ್ಲಿ ಕುಕ್ಕುಟೇಶ್ವರನ ಪಶ್ಚಿಮಕ್ಕೆ ಅನಾದಿಯಾದ ಒಂದು ಲಿಂಗವಿರುವುದು.

೩೭. ರಾಜೇಂದ್ರ! ನೀನು ಜಾಮದಗ್ನ್ಯಾಶ್ರಮದಲ್ಲಿ ವಾಸಮಾಡುತ್ತ ಆ ಲಿಂಗದ ಪೂಜೆಯನ್ನು ಮಾಡು." ಇಂತೆಂದ ವಶಿಷ್ಠನ ಅಪ್ಪಣೆಯನ್ನು ಕೇಳಿ ಜಲ್ಪಮಹಾರಾಜನು ತಾನಿದ್ದ ದೇವದಾರುವನವನ್ನು ಬಿಟ್ಟು ಮಹಾಕಾಲವನಕ್ಕೆ ತೆರಳಿದನು.

೩೮. ಅಲ್ಲಿ ಅನಾದಿಯೂ, ದೇವಸಂಸ್ತುತವೂ ಆದ ಮಹಾಲಿಂಗವನ್ನು ಕಂಡು ಪರಮಸಂತೋಷದಿಂದಲೂ, ಶಾಂತಿಯಿಂದಲೂ ಅದರ ಪೂಜೆಯನ್ನು ವಿಧಿವಿಹಿತರೀತಿಯಿಂದ ನೆರವೇರಿಸುತ್ತಿದ್ದನು.

೩೯. ಆಗ ಆ ಲಿಂಗಮಧ್ಯದಿಂದ ಒಂದು ವಾಣಿಯು ಕೇಳಿಸಿತು. "ಮಹಾರಾಜನೆ! ನೀನು ಯಾವ ಪಾತಕವನ್ನೂ ಮಾಡಿದವನಲ್ಲ. ನಿನ್ನ ಮಕ್ಕಳ ಮತ್ತು ಬ್ರಾಹ್ಮಣರ ಮರಣಗಳಿಗೆ ನೀನು ಕಾರಣನಲ್ಲ. ಅದೃಷ್ಟವೇ ಅದಕ್ಕೆ ಕಾರಣವು.

೪೦. ಅವರೆಲ್ಲರೂ ತಮ್ಮ ಪೂರ್ವಕರ್ಮಗಳ ಫಲಕ್ಕನುಸಾರವಾಗಿ ಯಮನಗರಿಯನ್ನು ಸೇರಿದರು. ರಾಜೇಂದ್ರ! ನೀನು ಶೋಕಿಸಬೇಡ. ಕರ್ಮಗತಿಯನ್ನು ತಿಳಿಯಲಸಾಧ್ಯವಾಗಿರುವುದು.

ಅನೇನ ಶುದ್ಧಭಾವೇನ ತುಷ್ಟೋಽಹಂ ನೃಪಸತ್ತಮ ।
ಯದಭೀಷ್ಟಂ ವರಂ ಬ್ರೂಹಿ ತತ್ತೇ ದಾಸ್ಯಾಮಿ ನಾಽನ್ಯಥಾ ॥ ೪೧ ॥
ರಾಜೋವಾಚ :—
ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಸಂಸಾರಸಾಗರೇ ಘೋರೇ ಮಾಭವೇನ್ಮಮ ಜನ್ಮ ಚ ॥ ೪೨ ॥
ಅಕ್ಷಯಾಂ ದೇಹಿ ಮೇ ಕೀರ್ತಿಂ ನಾಮ್ನಾ ಮೇ ವಿಶ್ರುತೋ ಭುವಿ ।
ಅಯಂ ಜಲ್ಪೇಶ್ವರೋ ದೇವೋ ಜಲ್ಪೇನಾರಾಧಿತೋ ವಿಭುಃ ॥ ೪೩ ॥
ವದಂತು ತ್ರಿದಶಾಃ ಸರ್ವೇ ಏಷ ಮೇ ದುರ್ಲಭೋ ವರಃ ।
ಯೇ ತ್ವಾಂ ಪಶ್ಯಂತಿ ಮನುಜಾ ಮನ್ನಾಮ್ನಾ ಖ್ಯಾತಿಮಾಗತಂ ।
ತೇಷಾಂ ವಿಯೋಗೋ ಮಾ ಭೂಯಾತ್ಪುತ್ರತೋ ಧನತೋಽಪಿ ವಾ ॥ ೪೪ ॥
ನ ಸಂಸಾರಭಯಂ ತೇಷಾಂ ದಸ್ಯುತೋ ನೈವ ರಾಜತಃ ।
ನ ಭೂತಗ್ರಹರೋಗೇಭ್ಯೋ ಭಯಮಸ್ತು ಕದಾಚನ ॥ ೪೫ ॥
ಶಿವಮಸ್ತು ಸದಾ ತೇಷಾಂ ಯೇಷಾಂ ತ್ವಂ ದರ್ಶನಂಗತಃ ।
ತೇ ಧನ್ಯಾ ಮಾನುಷೇ ಲೋಕೇ ಯೇ ತ್ವಾಂ ಶರಣಮಾಗತಾಃ ॥ ೪೬ ॥

---

೪೧. ಮಹಾರಾಜನೇ! ನಿನ್ನ ಈ ಪರಿಶುದ್ಧಭಕ್ತಿಯಿಂದ ನಾನು ಸಂತೋಷಗೊಂಡಿರುವೆನು. ನಿನಗೆ ಬೇಕಾದ ವರವನ್ನು ಕೇಳಿಕೊ. ನಿಸ್ಸಂದೇಹವಾಗಿಯೂ ಕೊಡುತ್ತೇನೆ.''

೪೨. ರಾಜನು ಹೇಳುತ್ತಾನೆ :—ಓ ಮಹಾದೇವನೆ! ನೀನು ಸಂತುಷ್ಟನಾಗಿ ನನಗೆ ವರವನ್ನು ಕೊಡುವೆಯಾದರೆ ಭಯಂಕರವಾದ ಈ ಸಂಸಾರಸಮುದ್ರದಲ್ಲಿ ನನಗೆ ಮತ್ತೆ ಜನ್ಮವಾಗದಿರಲಿ.

೪೩. ನನಗೆ ಶಾಶ್ವತವಾದ ಕೀರ್ತಿಯನ್ನನುಗ್ರಹಿಸು. ನೀನು ನನ್ನ ಹೆಸರಿನಿಂದ ಭೂಲೋಕದಲ್ಲಿ ಪ್ರಖ್ಯಾತನಾಗು. ಜಲ್ಪನಿಂದ ಪೂಜಿತವಾದ ಈ ಮಹಾಲಿಂಗವು ಜಲ್ಪೇಶ್ವರವೆಂದು ಸಕಲದೇವತೆಗಳೂ ಹೊಗಳಲಿ. ಇದೇ ನನಗೆ ಬೇಕಾದ ದುರ್ಲಭ ವರವು.

೪೪. ಯಾರು ನನ್ನ ಹೆಸರಿನಿಂದ ಕೂಡಿದ ನಿನ್ನ ದರ್ಶನವನ್ನು ಮಾಡುವರೊ, ಅವರಿಗೆ ಪುತ್ರರಿಂದಲೂ ಐಶ್ವರ್ಯದಿಂದಲೂ ವಿಯೋಗವುಂಟಾಗದಿರಲಿ.

೪೫. ಅವರಿಗೆ ಸಂಸಾರದಿಂದಲೂ, ಚೋರರಿಂದಲೂ, ರಾಜನಿಂದಲೂ, ಭೂತಗಳಿಂದಲೂ, ಗ್ರಹಗಳಿಂದಲೂ, ರೋಗಾದಿಗಳಿಂದಲೂ ಎಂದಿಗೂ ಭಯವು ಸಂಭವಿಸದಿರಲಿ.

೪೬. ನೀನು ಯಾರ ಕಣ್ಣುಗಳಿಗೆ ಕಾಣಿಸುವೆಯೊ, ಅವರಿಗೆ ನಿತ್ಯಮಂಗಳಗಳಾಗಲಿ. ಯಾರು ನಿನಗೆ ಶರಣಾಗತರಾಗುವರೊ, ಅವರೇ ಮನುಷ್ಯಲೋಕದಲ್ಲಿ ಧನ್ಯರು.

ಸರ್ವತೀರ್ಥಾಽಭಿಷೇಕೈಸ್ತು ಯತ್ಪುಣ್ಯಂ ಪ್ರಾಪ್ಯತೇ ನರೈಃ ।
ತತ್ಸರ್ವಮಧಿಕಂ ದೇವ ಲಭ್ಯತೇ ತವ ದರ್ಶನಾತ್ ॥ ೪೭ ॥
ತಾವತ್ಪತತಿ ಸಂಸಾರೇ ಘೋರೇ ದುಃಖಶತಾಕುಲೇ ।
ಯಾವನ್ನ ದೃಶ್ಯತೇ ದೇವಃ ಸಂಸಾರಾರ್ಣವತಾರಕಃ ॥ ೪೮ ॥
ಯದಾ ಪಾಪಕ್ಷಯಃ ಪುಂಸಾಂ ತದಾ ತೇ ದರ್ಶನಂ ಭವೇತ್ ।
ಮಹತಾ ಸುಕೃತೇನೈವ ನಾಽಲ್ಪೇನ ತಪಸಾ ಪ್ರಭೋ ॥ ೪೯ ॥
ಏವಂ ಭವಿಷ್ಯತೀತ್ಯುಕ್ತ್ವಾ ತೇನ ಲಿಂಗೇನ ಪಾರ್ವತಿ ।
ಪಶ್ಯತಾಂ ಸರ್ವದೇವಾನಾಂ ಸ್ವತನೌ ಸಂನಿವೇಶಿತಃ ॥ ೫೦ ॥
ತಸ್ಮಿಂಲ್ಲಿಂಗೇ ಲಯಂ ಪ್ರಾಪ್ತೇ ನೃಪೇ ಜಲ್ಪೇ ವರಾನನೇ ।
ದೇವೋ ಜಲ್ಪೇಶ್ವರಃ ಖ್ಯಾತೋ ದೇವೈರುಕ್ತೋ ಮಹೀತಲೇ ।
ಭುಕ್ತಿದೋ ಮುಕ್ತಿದಶ್ಚೈವ ಸದಾಽಭೀಷ್ಟಕರಃ ಸ್ಮೃತಃ ॥ ೫೧ ॥

---

೪೭. ಎಲೈ ಮಹಾದೇವನೆ! ನಿನ್ನನ್ನು ಸಂದರ್ಶಿಸುವುದರಿಂದ ಮಾನವರಿಗೆ ಭೂಲೋಕದಲ್ಲಿರುವ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡುವುದಕ್ಕಿಂತಲೂ ಅಧಿಕವಾದ ಪುಣ್ಯವು ಲಭಿಸುವುದು.

೪೮. ಸಂಸಾರಸಮುದ್ರದಿಂದ ಸಮಸ್ತ ಮಾನವರನ್ನೂ ಕಡೆಹಾಯಿಸಿ ಮುಕ್ತಿಯನ್ನು ಕರುಣಿಸುವ ಈ ಮಹಾದೇವನನ್ನು ಎಲ್ಲಿಯವರೆಗೆ ನೋಡುವುದಿಲ್ಲವೊ, ಅಲ್ಲಿಯವರೆಗೆಮಾತ್ರ ಮನುಜನು ಘೋರವಾದ ಸಂಸಾರಮಹಾಸಾಗರದಲ್ಲಿ ಬೀಳುವನು.

೪೯. ಮಹತ್ತರವಾದ ಪುಣ್ಯದಿಂದಲೂ, ಅಸಾಧಾರಣವಾದ ತಪಸ್ಸಿನಿಂದಲೂ ಮನುಷ್ಯರ ಪಾಪಸಮೂಹವು ಯಾವಾಗ ನಾಶವಾಗುವುದೊ, ಆಗಲೇ ಅವರಿಗೆ ನಿನ್ನ ದರ್ಶನವು ಲಭಿಸುವುದು.

೫೦. ಜಲ್ಪನ ಈ ಪ್ರಾರ್ಥನೆಯನ್ನು ಕೇಳಿ ಹಾಗೆಯೇ ಮುಂದೆ ನಡೆಯುತ್ತದೆಯೆಂದು ಹೇಳಿ ಆ ಮಹಾಲಿಂಗವು ದೇವತೆಗಳೆಲ್ಲರೂ ನೋಡುತ್ತಿರುವಂತೆಯೇ ರಾಜನನ್ನು ತನ್ನಲ್ಲಿ ಐಕ್ಯಮಾಡಿಕೊಂಡಿತು.

೫೧. ಪಾರ್ವತಿಯೆ! ಇಂತು ಆ ಮಹಾರಾಜನು ಆ ಲಿಂಗದಲ್ಲಿ ಲಯವನ್ನು ಹೊಂದಲು ದೇವತೆಗಳೆಲ್ಲರೂ ಹೇಳಿದರು. ಭೂಲೋಕದಲ್ಲಿ ಈ ಲಿಂಗವು ಜಲ್ಪೇಶ್ವರವೆಂದು ಪ್ರಖ್ಯಾತವಾಗಲಿ. ಇದು ಭೋಗಮೋಕ್ಷಗಳನ್ನೂ, ಪೂಜಿಸುವವರ ಅಭೀಷ್ಟಗಳನ್ನೂ ನೀಡುತ್ತಿರಲಿ.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಜಲ್ಪೇಶ್ವರಸ್ಯ ದೇವಸ್ಯ ಶೃಣು ಕೇದಾರಸಂಜ್ಞಕಂ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಜಲ್ಪೇಶ್ವರಮಾಹಾತ್ಮ್ಯವರ್ಣನಂ" ನಾಮ ಷಟ್‌ಷಷ್ಟಿತಮೋಽಧ್ಯಾಯಃ

---

೫೨. ದೇವಿಯೆ! ಇಂತು ನಿನಗೆ ಜಲ್ಪೇಶ್ವರಮಹಾದೇವನ ಪ್ರಭಾವವನ್ನು ಹೇಳಿದೆನು. ಇದು ಭಕ್ತಿಯಿಂದ ಪರಮೇಶ್ವರನಾದ ತನ್ನನ್ನು ಭಜಿಸಿ ಪೂಜಿಸಿದ ಮಾನವರ ಸಮಸ್ತ ಪಾಪಗಳನ್ನೂ ನಾಶಗೊಳಿಸುವಂಥದು. ಇನ್ನು ಕೇದಾರೇಶ್ವರ ಮಹಾಲಿಂಗದ ಚರಿತ್ರೆಯನ್ನು ಹೇಳುತ್ತೇನೆ; ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಜಲ್ಪೇಶ್ವರಮಾಹಾತ್ಮ್ಯವರ್ಣನ"ವೆಂಬ ಅರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಷಷ್ಠಿತಮೋಽಧ್ಯಾಯಃ

### ಕೇದಾರೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಸಪ್ತಷಷ್ಠಿಕಸಂಖ್ಯಾಕಂ ಕೇದಾರೇಶ್ವರಸಂಜ್ಞಕಂ ।
ದೇವಂ ಶೃಣು ವರಾರೋಹೇ ದರ್ಶನಾತ್ಪಾಪನಾಶನಂ ॥ ೧ ॥
ಸೃಷ್ಟಿಕಾಲೇ ಪುರಾ ದೇವಿ ದೇವಾ ವ್ಯಾಪ್ತಾ ಹಿಮೇನ ಹಿ ।
ಶೀತಾರ್ತಾ ವಿಹ್ವಲಾಃ ಸರ್ವೇ ಬ್ರಹ್ಮಾಣಂ ಶರಣಂಗತಾಃ ॥ ೨ ॥
ಹಿಮಾದ್ರಿಣಾರ್ದಿತಾಃ ಸರ್ವೇ ವಯಂ ದೇವ ಜಗತ್ಪತೇ ।
ತ್ರಾಹಿ ಭೀತಾಂಶ್ಚತುರ್ವಕ್ತ್ರ ಪಿತಾಮಹ ನಮೋಽಸ್ತುತೇ ॥ ೩ ॥
ದೇವಾನಾಂ ವಚನಂ ಶ್ರುತ್ವಾ ಪ್ರೋಕ್ತಂ ವೈ ಬ್ರಹ್ಮಣಾ ಪ್ರಿಯೇ ।
ಪೀಡಿತಾ ಹಿಮಶೈಲೇನ ಶಂಕರಶ್ವಶುರೇಣ ಚ ॥ ೪ ॥
ನಾಽಹಂ ಯಾತುಂ ಸಮರ್ಥೋಽಸ್ಮಿ ಸತ್ಯಮೇತನ್ಮಯೋದಿತಂ ।
ಮಹಾದೇವಮೃತೇ ದೇವಾ ಗತಿರನ್ಯಾ ನ ವಿದ್ಯತೇ ॥ ೫ ॥

---

### ಕನ್ನಡದ ಅನುವಾದ

#### ಕೇದಾರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಸುಂದರಿಯೆ! ಅರುವತ್ತೇಳನೆಯ ಮಹಾಲಿಂಗವಾದ ಕೇದಾರೇಶ್ವರನ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ಪಾಪಗಳು ನಾಶವಾಗುವುವು.

೧. ಸೃಷ್ಟಿಯಾದ ಸಮಯದಲ್ಲಿ ದೇವತೆಗಳೆಲ್ಲರೂ ಹಿಮದಿಂದಾವೃತರಾಗಿ ಚಳಿಯಿಂದ ನಡುಗುತ್ತ ಸಂಕಟಗೊಂಡು ಬ್ರಹ್ಮನನ್ನು ಶರಣುಹೊಗುವವರಾದರು.

೩. "ಲೋಕೇಶ್ವರನೆ! ಚತುರ್ಮುಖನೆ! ನಾವೆಲ್ಲರೂ ಹಿಮವತ್ಪರ್ವತದಲ್ಲಿರುವ ಚಳಿಯಿಂದ ಸಂಕಟಗೊಂಡಿರುವೆವು. ಪಿತಾಮಹನಾದ ನೀನು ನಮ್ಮನ್ನು ಕಾಪಾಡಬೇಕು. ಇದೋ, ನಿನಗೆ ಮಣಿಯುತ್ತಿರುವೆವು."

೪–೫. ಪ್ರಿಯಳೆ! ದೇವತೆಗಳ ಈ ಬೇಡಿಕೆಯನ್ನು ಕೇಳಿ ಬ್ರಹ್ಮದೇವನು ಇಂತೆಂದನು: "ನೀವು ಮಹಾದೇವನ ಮಾವನಾದ ಹಿಮವಂತನಿಂದ ಪೀಡಿತರಾಗಿರುವಿರಿ. ಅಲ್ಲಿಗೆ ಹೋಗಲು ನಾನೂ ಸಮರ್ಥನಲ್ಲ. ಸತ್ಯವನ್ನೇ ಹೇಳುತ್ತಿರುವೆನು. ದೇವತೆಗಳಿರಾ! ಈಗ ಮಹೇಶ್ವರನ ಹೊರತು ನಮಗೆ ಬೇರೆ ಗತಿಯು ಕಾಣದು.

ಸ ಏವ ಶರಣಂ ದೇವಃ ಸರ್ವೇಷಾಂ ನೋ ಭವಿಷ್ಯತಿ ।
ತಸ್ಯಾಜ್ಞಯಾ ಮಯಾ ಸರ್ವೇ ಪರ್ವತಾ ರಚಿತಾಃ ಪುರಾ ॥ ೬ ॥
ಕೃತಾ ಸೃಷ್ಟಿರ್ವಿಚಿತ್ರಾ ಚ ಹಿಮಾದ್ರಿಶ್ಚ ಮಯಾ ಕೃತಃ ।
ಅಸೇವ್ಯಃ ಸರ್ವಜಂತೂನಾಮಧೃಷ್ಯೋ ದುರ್ಗಮೋ ಗಿರಿಃ ॥ ೭ ॥
ಹಿಮಾಚಲಸ್ಯ ತಸ್ಯೈವ ಶಾಸ್ತಾ ದೇವೋ ಮಹೇಶ್ವರಃ ।
ತಸ್ಮಾದ್ಯಾಸ್ಯಾಮಹೇ ದೇವಾ ಕೈಲಾಸಂ ಪರ್ವತೋತ್ತಮಂ ॥ ೮ ॥
ಯತ್ರ ತಿಷ್ಠತಿ ವಿಶ್ವಾತ್ಮಾ ದೇವದೇವೋ ಮಹೇಶ್ವರಃ ।
ಏವಮುಕ್ತ್ವಾ ಗತೋ ಬ್ರಹ್ಮಾ ದೇವೈಃ ಸಾರ್ಧಂ ಮಮಾಂತಿಕಂ ।
ದೃಷ್ಟೋಽಹಂ ಪೂಜಿತಸ್ತೈಸ್ತು ಸ್ತುತೋಽಹಂ ವಿವಿಧೈಃ ಸ್ತವೈಃ ॥ ೯ ॥
ಮಯಾ ಸಂಮಾನಿತಾ ದೇವಾಶ್ಚತುರ್ವಕ್ತ್ರಃ ಪ್ರಪೂಜಿತಃ ।
ಪೂಜಯಿತ್ವಾ ಮಯಾ ಪೃಷ್ಟೋ ಬ್ರಹ್ಮಾಽಽಗಮನಕಾರಣಂ ॥ ೧೦ ॥
ಕಿಂ ಕಾರ್ಯಂ ತ್ರಿದಶೈಃ ಸಾರ್ಧಮಾಗತೋಽಸಿ ಪಿತಾಮಹ ।
ಕಥಿತಂ ಬ್ರಹ್ಮಣಾ ಸರ್ವಂ ಶ್ರುತಂ ಸರ್ವಂ ಮಯಾ ಪ್ರಿಯೇ ॥ ೧೧ ॥

---

೬. ನಮಗೆಲ್ಲರಿಗೂ ಆ ದೇವದೇವನೇ ಶರಣ್ಯನಾಗುವನು. ಹಿಂದೆ ಆತನ ಅಪ್ಪಣೆಯಂತೆಯೇ ನಾನು ಸಕಲ ಪರ್ವತಗಳನ್ನೂ ಸೃಷ್ಟಿಮಾಡಿದೆನು.

೭. ವಿಚಿತ್ರವಾದ ಈ ಸೃಷ್ಟಿಯನ್ನು ಮಾಡಿದಮೇಲೆ ಹಿಮಾಚಲವನ್ನೂ ಸೃಷ್ಟಿಮಾಡಿದೆನು. ಆ ಪರ್ವತವು ಸಾಧಾರಣಪ್ರಾಣಿಗಳಿಗೆ ಸೇವಿಸಲಸದಳವೂ, ಏರಲಸಾಧ್ಯವೂ, ದುರ್ಗಮವೂ ಆಗಿರುವುದು.

೮. ಆ ಹಿಮಾಚಲಕ್ಕೆ ಮಹೇಶ್ವರನೊಬ್ಬನೇ ತಕ್ಕ ಶಾಸಕನಾಗಿರುವನು. ಆದುದರಿಂದ ನಾವೆಲ್ಲರೂ ಪರ್ವತಶ್ರೇಷ್ಠವಾದ ಕೈಲಾಸವನ್ನು ಕುರಿತು ಹೊರಡೋಣ.

೯. ಅಲ್ಲಿ ವಿಶ್ವವ್ಯಾಪಕನೂ, ದೇವದೇವನೂ ಆದ ಮಹೇಶ್ವರನು ವಾಸಿಸುತ್ತಿರುವನು.'' ಇಂತೆಂದು ಬ್ರಹ್ಮದೇವನು ದೇವತೆಗಳೊಡನೆ ನನ್ನ ಬಳಿಗೆ ಬಂದನು. ಬಳಿಕ ಅವರೆಲ್ಲರೂ ನನ್ನನ್ನು ಕಂಡು, ಪೂಜಿಸಿ, ಅನೇಕ ಸ್ತೋತ್ರಗಳಿಂದ ಹೊಗಳಿದರು.

೧೦. ನಾನೂ ದೇವತೆಗಳಿಗೆ ಸತ್ಕಾರಗಳನ್ನು ಮಾಡಿ, ಚತುರ್ಮುಖನಿಗೂ ಅತಿಥಿಪೂಜೆಯನ್ನೆಸಗಿ ಆತನ ಆಗಮನಕ್ಕೆ ಕಾರಣವನ್ನು ಕೇಳಿದೆನು.

೧೧. ''ಅಯ್ಯಾ ಪಿತಾಮಹನೆ! ಸಕಲ ದೇವತೆಗಳೊಡನೆ ನೀನು ಇಲ್ಲಿಗೆ ಬರಲು ಅಂಥ ಕಾರ್ಯಗೌರವವೇನು?'' ಎಂದು ನಾನು ಪ್ರಶ್ನೆಮಾಡಲು ಬ್ರಹ್ಮನು ಆ ವೃತ್ತಾಂತವನ್ನೆಲ್ಲ ತಿಳಿಸಿದನು.

ಹಿಮಾಚಲಂ ಸಮಾಹೂಯ ಮರ್ಯಾದಾಚ ಕೃತಾ ಮಯಾ ।
ಶೈಲಾನಾಂ ರಾಜರಾಜತ್ವೇ ಹಿಮಾದ್ರಿಶ್ಚ ಪ್ರತಿಷ್ಠಿತಃ ॥ ೧೨ ॥
ದೇವಾನಾಂ ವಿಷಯಾಶ್ಚೈವ ಗಂಧರ್ವಾಣಾಂ ತಥೈವ ಚ ।
ಯಕ್ಷಾಣಾಮಥ ನಾಗಾನಾಂ ಕಿನ್ನರಾಣಾಂ ತಥೈವ ಚ ॥ ೧೩ ॥
ವಿದ್ಯಾಧರಾಣಾಂ ಕ್ರೀಡಾರ್ಥಂ ಪೃಥಕ್ಪೃಥಙ್ನಿವೇಶಿತಾಃ ।
ರೂಪತೋ ಭಾತಿ ಶೈಲೇಂದ್ರಃ ಶುದ್ಧಸ್ಫಟಿಕಸನ್ನಿಭಃ ॥ ೧೪ ॥
ಜಾಹ್ನವೀ ನಿರ್ಝರೋಷ್ಣೀಶಃ ಶರ್ವಾಣೀಜನಕಸ್ತಥಾ ॥ ೧೫ ॥
ಸರ್ವದೇವಮಯೋ ದಿವ್ಯಃ ಸರ್ವತೀರ್ಥಮಯಃ ಕೃತಃ ।
ಸರ್ವಾಶ್ರಮನಿವಾಸಶ್ಚ ಸರ್ವಾಽಮರನಿಷೇವಿತಃ ॥ ೧೬ ॥
ಏವಂ ಸಂಸ್ಥಾಪ್ಯ ಶೈಲೇಂದ್ರಂ ಲಿಂಗಮೂರ್ತಿರಹಂ ಸ್ಥಿತಃ ।
ವಿಖ್ಯಾತಸ್ತ್ರಿಷುಲೋಕೇಷು ಕೇದಾರೇಶ್ವರನಾಮತಃ ॥ ೧೭ ॥
ಉದಕಂ ನಿರ್ಮಿತಂ ತತ್ರ ಮಂತ್ರಪೂರ್ಣಂ ಮಯಾ ಪ್ರಿಯೇ ।
ಮಾಹಾತ್ಮ್ಯಂ ವಿವಿಧಂ ಪ್ರೋಕ್ತಂ ಲಿಂಗಸ್ಯ ಚ ಜಲಸ್ಯ ಚ ॥ ೧೮ ॥

---

೧೨. ಬಳಿಕ ಹಿಮಾಚಲನನ್ನು ಕರೆದು ಆತನೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡೆನು. ಆತನನ್ನು ಸಕಲ ಪರ್ವತಗಳಿಗೂ ಚಕ್ರವರ್ತಿಯನ್ನಾಗಿ ಮಾಡಿ ನಿಲ್ಲಿಸಿದೆನು.

೧೩–೧೪. ಆ ಪರ್ವತದಲ್ಲಿಯೇ ದೇವತೆಗಳಿಗೂ, ಗಂಧರ್ವರಿಗೂ, ಯಕ್ಷರಿಗೂ, ನಾಗರಿಗೂ, ಕಿನ್ನರರಿಗೂ, ವಿದ್ಯಾಧರರಿಗೂ ಆಡುಂಬೊಲಗಳಾಗಿ ಬೇರೆ ಬೇರೆ ಪ್ರದೇಶಗಳನ್ನು ನಿರ್ದೇಶಿಸಿದೆನು. ಈ ಮಹಾಪರ್ವತವು ಸ್ವರೂಪದಿಂದ ಶುದ್ಧವಾದ ಸ್ಫಟಿಕಮಣಿಯನ್ನು ಹೋಲುತ್ತಿರುವುದು.

೧೫. ಗಂಗೆಯ ಪ್ರವಾಹವೇ ಅದರ ಉಷ್ಣೀಷವಾಗಿರುವುದು. ಈ ಪರ್ವತ ರಾಜನೇ ಪಾರ್ವತಿಯಾದ ನಿನಗೆ ತಂದೆಯಾಗಿರುವನು.

೧೬. ಸಮಸ್ತ ದೇವತಾಸಾನ್ನಿಧ್ಯಗಳುಳ್ಳವನೂ, ತೇಜೋಮಯನೂ, ಸಕಲ ತೀರ್ಥಮಯನೂ, ಸರ್ವಾಶ್ರಮಸಹಿತನೂ, ಸಕಲ ದೇವತೆಗಳಿಗೆ ಸಂಸೇವ್ಯನೂ ಆಗಿರುವನು.

೧೭. ಇಂತಹ ಮಹಾಪದವಿಯನ್ನಾತನಿಗಿತ್ತು ನಾನು ಅಲ್ಲಿಯೇ ಲಿಂಗ ರೂಪದಿಂದ ನೆಲಸಿ ಮೂರು ಲೋಕಗಳಲ್ಲಿಯೂ ಕೇದಾರೇಶ್ವನೆಂದು ಪ್ರಖ್ಯಾತನಾಗಿರುವೆನು.

೧೮. ಪ್ರಿಯಳೆ! ಬಳಿಕ ಅಲ್ಲಿ ಮಂತ್ರಪೂತವಾದ ತೀರ್ಥವೊಂದನ್ನೂ ನಿರ್ಮಿಸಿದೆನು. ಆ ಲಿಂಗದ ಮತ್ತು ತೀರ್ಥಗಳ ಮಾಹಾತ್ಮ್ಯಗಳು ಅನೇಕ ವಿಧಗಳಾಗಿ ಬಣ್ಣಿಸಲ್ಪಟ್ಟಿರುವುವು.

ಯೋಽತ್ರಾಗತ್ಯ ನರೋ ಭಕ್ತ್ಯಾ ಸಮ್ಯಗ್ಜಸ್ಮಾಂ ಪೂಜಯಿಷ್ಯತಿ ।
ಜಲಂ ಯೋಽತ್ರೈವ ಗೃಹ್ಣಾತಿ ವಿಧಾನೇನ ವರಾನನೇ ।
ತಸ್ಯೋದರೇ ಭವಿಷ್ಯಾಮಿ ಲಿಂಗರೂಪೀ ನ ಸಂಶಯಃ ॥ ೧೯ ॥
ಇತ್ಯುಕ್ತೇ ವಚನೇ ದೇವಿ ಸದೇವಾಸುರಪನ್ನಗಾಃ ।
ಯಕ್ಷರಕ್ಷಃ ಪಿಶಾಚಾಶ್ಚ ಭೂತವೇತಾಲಕಿನ್ನರಾಃ ॥ ೨೦ ॥
ವಿದ್ಯಾಧರಗಣಾಶ್ಚೈವ ಮಮ ದರ್ಶನಲಾಲಸಾಃ ।
ಸಮಾಯಾತಾ ವರಾರೋಹೇ ಪೀತ್ವಾ ತತ್ರ ಜಲಂ ಶುಭಂ ॥ ೨೧ ॥
ದೃಷ್ಟೋಽಹಂ ವಿಧಿನಾ ತೈಸ್ತು ಲಿಂಗಮೂರ್ತಿಗತಃ ಪ್ರಿಯೇ ।
ಮಮ ತುಲ್ಯಾಶ್ಚ ತೇ ಜಾತಾಸ್ತಸ್ಮಿನ್ನದ್ರಿವರೇ ಸ್ಥಿತಾಃ ।
ಜನಲೋಕಗತೈಃ ಸಿದ್ಧೈಃ ಪೂಜ್ಯಮಾನಾ ವರಾನನೇ ॥ ೨೨ ॥
ಅಥ ಕಾಲೇನ ಬಹುನಾ ಶ್ರುತ್ವಾ ಮಾಹಾತ್ಮ್ಯಮುತ್ತಮಂ ।
ಕೇದಾರೇಶ್ವರದೇವಸ್ಯ ಜಲಸ್ಯ ಚ ವಿಶೇಷತಃ ॥ ೨೩ ॥
ಮನುಷ್ಯಾಃ ಸಮುಪಾಯಾತಾಸ್ತೇ ರಜೋ ಬಹುಲಾಯುತಃ ।
ತಮಃಪ್ರಾಯಾ ವಿಶಾಲಾಕ್ಷಿ ತದಾಽಹಂ ಮಾಹಿಷಂ ವಪುಃ ॥ ೨೪ ॥

---

೧೯. ದೇವಿಯೆ! ಯಾವ ನರನು ಇಲ್ಲಿಗೆ ಬಂದು ನನಗೆ ವಿಧ್ಯುಕ್ತಪೂಜೆಯನ್ನು ಮಾಡಿ ನಿಯಮಪೂರ್ವಕವಾಗಿ ಈ ತೀರ್ಥದ ಜಲವನ್ನು ಸೇವಿಸುವನೊ, ಅವನ ದೇಹದಲ್ಲಿ ನಾನೇ ಲಿಂಗರೂಪದಿಂದ ನೆಲಸಿರುವೆನು. ಸಂದೇಹವಿಲ್ಲ."

೨೦–೨೧. ಮಹೇಶ್ವರಿಯೆ! ಇಂತೆಂದು ನಾನು ಹೇಳಲು ದೇವತೆಗಳೂ, ಅಸುರರೂ, ನಾಗರೂ, ಯಕ್ಷರೂ, ರಾಕ್ಷಸರೂ, ಪಿಶಾಚರೂ, ಭೂತನಾಯಕರೂ, ಭೇತಾಳರೂ, ಕಿನ್ನರರೂ, ವಿದ್ಯಾಧರರೂ ನನ್ನನ್ನು ನೋಡಬೇಕೆಂಬ ತೀವ್ರಾಭಿಲಾಷೆಯಿಂದ ಅಲ್ಲಿಗೆ ಬಂದರು. ಆ ತೀರ್ಥದ ಪವಿತ್ರೋದಕವನ್ನು ಕುಡಿದು ಲಿಂಗಸ್ವರೂಪದಿಂದ ನೆಲಸಿರುವ ನನ್ನನ್ನು ಎಲ್ಲರೂ ವಿಧ್ಯುಕ್ತರೀತಿಯಿಂದ ಸಂದರ್ಶಿಸಿದರು.

೨೨. ಅವರೆಲ್ಲರೂ ನನಗೆ ಸಮಾನರೇ ಆಗಿ ಆ ಪರ್ವತದಲ್ಲಿಯೇ ನೆಲಸಿರುವರು. ಅವರನ್ನು ಜನಲೋಕದ ನಿವಾಸಿಗಳಾದ ಸಿದ್ಧರು ಪೂಜಿಸುತ್ತಿರುವರು.

೨೩. ಹೀಗೆ ಬಹಳಕಾಲವು ಕಳೆಯಲು ಕೇದಾರೇಶ್ವರನ ಮತ್ತು ತೀರ್ಥದ ಆ ಮಹಾ ಮಾಹಾತ್ಮ್ಯವನ್ನು ಬಹಳವಾಗಿ ಕೇಳಿ ಮನುಷ್ಯರೂ ಅಲ್ಲಿಗೆ ಬರತೊಡಗಿದರು. ಆದರೆ ಅವರೆಲ್ಲರೂ ರಜೋಗುಣಭೂಯಿಷ್ಠರಾಗಿದ್ದರು.

೨೪. ವಿಶಾಲಾಕ್ಷಿಯೆ! ತಮಃಪ್ರಚುರರಾದ ಅವರನ್ನು ಕಂಡು ನಾನು ಮಹಿಷರೂಪವನ್ನು ಧರಿಸಿ ಅವರಿಗೆ ಕಾಣಿಸದಂತಿದ್ದೆನು. ಅದರಿಂದ ಅವರೆಲ್ಲರೂ ಭಯಗೊಳ್ಳುವರೆಂದೆಣಿಸಿದೆನು. ಆದರೆ ಅವರು ಭಯಪಡಲಿಲ್ಲ.

ಕೃತವಾಂಸ್ತದ್ದ್ಭಯಾರ್ಥಾಯ ನ ಚ ತೇ ಭೀತಿಮಾಗತಾಃ ।
ಇಹ ದೇವೋಽತ್ರ ದೇವೋಽತ್ರ ಬಭ್ರಮುಸ್ತೇ ದಿದೃಕ್ಷವಃ ॥ ೨೫ ॥
ನ ತೈರ್ದೃಷ್ಟೋ ಮಹಾದೇವಿ ಯತೋಽಹಂ ಮಹಿಷಾಕೃತಿಃ ।
ಸ್ಥಿತೋಽಸ್ಮ್ಯಲಕ್ಷ್ಯರೂಪೇಣ ತತಸ್ತೇ ದೀನಮಾನಸಾಃ ।
ಉದ್ವಿಗ್ನಾ ನಿಃಶ್ವಸಂತಶ್ಚ ವೈರಾಗ್ಯಂ ಪರಮಂಗತಾಃ ॥ ೨೬ ॥
ನಾತ್ರ ದೇವೋ ನ ತೀರ್ಥಾನಿ ನ ಗಂಗಾ ಪುಣ್ಯದಾಯಿನೀ ।
ನ ಧರ್ಮೋ ನ ಪರೋ ಲೋಕಃ ಸರ್ವಮೇತದ್ವಿಡಂಬನಂ ॥ ೨೭ ॥
ಏವಂ ಕಿಲ ಪುರಾಣೇಷು ಶ್ರೂಯತೇ ಸರ್ವದಾ ಶ್ರುತೌ ।
ಹಿಮಾಲಯೇ ಚ ಕೇದಾರಂ ಲಿಂಗಂ ಮೋಕ್ಷಪ್ರದಾಯಕಂ ॥ ೨೮ ॥
ಏವಂ ತು ವದತಾಂ ತೇಷಾಂ ಮಾನುಷಾಣಾಂ ಯಶಸ್ವಿನಿ ।
ಆಕಾಶಾದುತ್ಥಿತಾ ವಾಣೀ ಮಯಾ ಪ್ರೋಕ್ತಾಽನುಕಂಪಯಾ ॥ ೨೯ ॥
ಅಪಾರ್ಗಂ ಮಾ ವದಂತ್ವತ್ರ ನ ನಿಂದ್ಯಾಃ ಶ್ರುತಯೋಽವ್ಯಯಾಃ ।
ಪುರಾಣಂ ನಾಽನ್ಯಥಾ ಪ್ರೋಕ್ತಂ ಬ್ರಹ್ಮಣಾ ಲೋಕಕರ್ತೃಣಾ ॥ ೩೦ ॥

---

೨೫. ಮಹೇಶ್ವರಿಯೆ! "ಮಹಾದೇವನು ಇಲ್ಲಿರುವನು; ಅಲ್ಲಿರುವನು" ಎಂದು ಕೂಗುತ್ತ ಅವರು ಸುತ್ತಾಡುತ್ತಿದ್ದರೂ ಮಹಿಷರೂಪದಿಂದಿದ್ದ ನನ್ನನ್ನು ಗುರ್ತಿಸಲಿಲ್ಲ.

೨೬. ಕಣ್ಣಿಗೆ ಕಾಣದಂತಿದ್ದ ನನ್ನ ವಿಷಯದಲ್ಲಿ ಅವರು ಖಿನ್ನಮಾನಸರೂ, ಉದ್ವಿಗ್ನರೂ ಆಗಿ ನಿಟ್ಟುಸಿರುಗಳನ್ನು ಬಿಡುತ್ತ ಪರಮವೈರಾಗ್ಯವನ್ನು ತಾಳಿದರು.

೨೭. "ಇಲ್ಲಿ ಮಹಾದೇವನಾಗಲಿ, ತೀರ್ಥಗಳಾಗಲಿ, ಪುಣ್ಯಪ್ರದೆಯಾದ ಗಂಗೆಯಾಗಲಿ, ಇಲ್ಲವು. ಇದರಿಂದ ಧರ್ಮವೂ ಪರಲೋಕವೂ ಇಲ್ಲವೆಂದೇ ಹೇಳಬೇಕು. ಇದೆಲ್ಲ ದೊಡ್ಡ ಮೋಸವೆಂದೇ ತೋರುತ್ತಿರುವುದು.

೨೮. ಹಿಮಾಲಯ ಪರ್ವತದಲ್ಲಿ ಮೋಕ್ಷಪ್ರದಾಯಕವಾದ ಕೇದಾರೇಶ್ವರ ಮಹಾಲಿಂಗವಿರುವುದೆಂಬುದಾಗಿ ನಾವು ಪುರಾಣಗಳಲ್ಲಿಯೂ ವೇದಗಳಲ್ಲಿಯೂ ಕೇಳಿರುವೆವಲ್ಲವೆ."

೨೯. ದೇವಿಯೆ! ಇಂತು ನಿರಾಶೆಯಿಂದಿರುವ ಅವರಲ್ಲಿ ಅನುಕಂಪದಿಂದ ನಾನು ಆಕಾಶವಾಣಿಯ ಮೂಲಕವಾಗಿ ತತ್ತ್ವವನ್ನರುಹಿದೆನು.

೩೦. "ನೀವು ಸಲ್ಲದ ಮಾತುಗಳನ್ನಾಡಬೇಡಿರಿ. ಇಲ್ಲಿ ಅನಾದಿಗಳಾದ ವೇದಗಳನ್ನು ನಿಂದಿಸಬೇಡಿರಿ. ಲೋಕಕರ್ತೃವಾದ ಚತುರ್ಮುಖನು ಪುರಾಣಗಳಲ್ಲಿ ಸುಳ್ಳನ್ನಾಡಲಿಲ್ಲ.

ಯೇ ನಿಂದಂತಿ ಪುರಾಣಾನಿ ಧರ್ಮಶಾಸ್ತ್ರಾಣಿ ನಾಸ್ತಿಕಾಃ ।
ತೇ ಯಾಂತಿ ನರಕಂ ಘೋರಂ ಯಾವದಾಭೂತಸಂಪ್ಲವಂ ॥ ೩೧ ॥
ಸದಾ ದೇವೋಽತ್ರ ಕೇದಾರಃ ಸ್ವರ್ಗಮೋಕ್ಷಪ್ರದಾಯಕಃ ।
ವಿದ್ಯತೇ ತ್ರಿದಶೈಃ ಪೂಜ್ಯಃ ಸತತಂ ನೈವ ದೃಶ್ಯತೇ ॥ ೩೨ ॥
ಕರೋತಿ ಪೂಜಾಂ ಹಿಮವಾನ್ಮಾಸಾನಷ್ಟೌ ಚ ಶಾಶ್ವತಾನ್ ।
ಹಿಮಾದ್ರಿಸ್ತೇನ ಪುಣ್ಯೇನ ನಗೇಂದ್ರಸ್ತು ಕೃತೋ ನಗೈಃ ॥ ೩೩ ॥
ಸೇವ್ಯಶ್ಚ ರಮಣೀಯಶ್ಚ ಸರ್ವತೀರ್ಥಸಮುಸ್ಕೃತಃ ।
ಸರ್ವರತ್ನನಿಧಾನಶ್ಚ ದೇವಾನಾಂ ವಲ್ಲಭಸ್ತಥಾ ॥ ೩೪ ॥
ಗ್ರೀಷ್ಮೇ ಚೈವ ವಸಂತೇ ಚ ದೇವದೇವೋಽತ್ರ ದೃಶ್ಯತೇ ।
ನಿಯತೇನೈವ ಕಾಲೇನ ಮಾನುಷಾಣಾಂ ಚ ಸರ್ವದಾ ॥ ೩೫ ॥
ಯದಿ ಬುದ್ಧಿಃ ಪರಾ ಜಾತಾ ಸರ್ವದಾ ಮಮ ದರ್ಶನೇ ।
ಆಖ್ಯಾಸ್ಯೇ ತದುಪಾಯಂ ಚ ಶ್ರೂಯತಾಂ ಸಾವಧಾನತಃ ।
ಮಾ ವಿಕಲ್ಪೋಽತ್ರ ಕರ್ತವ್ಯಃ ಸರ್ವಾನ್ಕಾಮಾನವಾಪ್ಸ್ಯಥ ॥ ೩೬ ॥

---

೩೧. ನಾಸ್ತಿಕರಾದ ಯಾವ ಮಾನವರು ಪುರಾಣಗಳನ್ನಾಗಲಿ ಧರ್ಮಶಾಸ್ತ್ರಗಳನ್ನಾಗಲಿ ನಿಂದಿಸುವರೊ, ಅವರು ಮಹಾಪ್ರಳಯದವರೆಗೂ ನರಕವಾಸವನ್ನನುಭವಿಸುವರು.

೩೨. ಇಲ್ಲಿರುವ ಕೇದಾರೇಶ್ವರನು ಸ್ವರ್ಗಮೋಕ್ಷಗಳನ್ನು ಕೊಡುವವನಾಗಿ ಯಾವಾಗಲೂ ಇಲ್ಲಿಯೆ ನೆಲಸಿರುವನು. ದೇವತೆಗಳು ಆತನನ್ನು ಪೂಜಿಸುತ್ತಿರುವರು. ಆದರೆ ಮಾನವರಿಗೆ ಸರ್ವಕಾಲದಲ್ಲಿಯೂ ಆತನು ಕಾಣುವುದಿಲ್ಲ.

೩೩. ಹಿಮವದ್ರಾಜನು ಯಾವಾಗಲೂ ಇಲ್ಲಿ ವರ್ಷಕ್ಕೆ ಎಂಟುತಿಂಗಳ ಕಾಲ ಪೂಜೆಯನ್ನು ಮಾಡುತ್ತಿರುವನು. ಆ ಪುಣ್ಯದಿಂದಲೇ ಅವನು ಪರ್ವತಗಳಿಗೆಲ್ಲ ಚಕ್ರವರ್ತಿಯಾಗಿರುವನು.

೩೪. ಸರ್ವರಿಗೂ ಸೇವ್ಯನೂ, ಮನೋಹರನೂ, ಸಕಲ ತೀರ್ಥವಂದಿತನೂ, ಸರ್ವರತ್ನಗಳ ನಿವಾಸನೂ, ದೇವತೆಗಳಿಗೂ ಪ್ರೀತ್ಯಾಸ್ಪದನೂ ಆಗಿರುವನು.

೩೫. ಇನ್ನುಮೇಲೆ ವಸಂತ ಮತ್ತು ಗ್ರೀಷ್ಮರ್ತುಗಳಲ್ಲಿ ಮಾತ್ರ ಮಹಾದೇವನು ಇಲ್ಲಿ ಮನುಷ್ಯರಿಗೆ ದರ್ಶನವನ್ನು ಕೊಡುತ್ತಿರುವನು.

೩೬. ನಿಮಗೆ ಸರ್ವಕಾಲಗಳಲ್ಲಿಯೂ ನನ್ನ ದರ್ಶನವಾಗಬೇಕೆಂಬ ಇಚ್ಛೆಯು ತೀವ್ರವಾಗಿದ್ದರೆ ನಿಮಗೊಂದು ಉಪಾಯವನ್ನು ಹೇಳುವೆನು, ಸಾವಧಾನದಿಂದ ಕೇಳಿರಿ. ಈ ವಿಷಯದಲ್ಲಿ ಸಂದೇಹಗೊಳ್ಳಬೇಡಿರಿ. ನಿಮ್ಮ ಸಕಲಾಭೀಷ್ಟಗಳೂ ನೆರವೇರುವುವು.

ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಭುಕ್ತಿಮುಕ್ತಿಪ್ರದಾಯಕಂ ।
ಪ್ರಲಯೇಽಪ್ಯಕ್ಷಯಂ ಪ್ರೋಕ್ತಂ ಮಹಾಕಾಲವನಂ ನರಾಃ ॥ ೩೭ ॥
ತತ್ರಾಽಹಂ ಸಂಭವಿಷ್ಯಾಮಿ ಲೋಕಾನಾಮನುಕಂಪಯಾ ।
ಲಿಂಗರೂಪೇಣ ಶಿಪ್ರಾಯಾಸ್ತಟೇ ಪುಣ್ಯೇ ಸುಶೋಭನೇ ॥ ೩೮ ॥
ಸೋಮೇಶ್ವರಸ್ಯ ದೇವಸ್ಯ ಪಶ್ಚಿಮೇ ಸ್ಥಾನಮುತ್ತಮಂ ।
ಪ್ರಸಿದ್ಧಮುಪಯಾಸ್ಯಾಮಿ ಕೇದಾರೇಶ್ವರನಾಮತಃ ॥ ೩೯ ॥
ಸರ್ವದಾ ದರ್ಶನಂ ತತ್ರ ಮಯಾ ಸಾರ್ಧಂ ಭವಿಷ್ಯತಿ ।
ಸರ್ವೇಷಾಂ ಚ ಪ್ರದಾಸ್ಯಾಮಿ ಸರ್ವಾನ್ಕಾಮಾನ್ನ ಸಂಶಯಃ ।
ಇಹ ಯಾವತ್ಫಲಂ ತಸ್ಮಾದ್ದಾಸ್ಯಾಮಿ ಹ್ಯಧಿಕಂ ತತಃ ॥ ೪೦ ॥
ಇತಿ ತೇ ಮಾನವಾಃ ಸರ್ವೇ ಶ್ರುತ್ವಾ ವಾಣೀಂ ಮನೋರಮಾಂ ।
ಆಕಾಶಾದುತ್ಥಿತಾಂ ದಿವ್ಯಾಂ ಮನಃಪ್ರಹ್ಲಾದಕಾರಿಕಾಂ ॥ ೪೧ ॥
ಗತಾ ವನಂ ಮಹಾಕಾಲಂ ಸಂಸ್ಮರಂತೋ ಮಹೇಶ್ವರಂ ।
ವಿಕಲ್ಪೇನ ವಿಚಿತ್ರೇಣ ಸತ್ಯಮೇವೇತಿ ನಾಽನ್ಯಥಾ ॥ ೪೨ ॥

---

೩೭. "ಮಾನವರಿರಾ! ಕ್ಷೇತ್ರಗಳಲ್ಲೆಲ್ಲ ಉತ್ತಮಕ್ಷೇತ್ರವೂ, ಭುಕ್ತಿಮುಕ್ತಿಪ್ರದವೂ ಆದ ಮಹಾಕಾಲವನವೆಂಬ ಕ್ಷೇತ್ರವೊಂದಿರುವುದು. ಪ್ರಳಯದಲ್ಲಿಯೂ ಅದಕ್ಕೆ ನಾಶವಿರುವುದಿಲ್ಲವು.

೩೮. ಶಿಪ್ರಾನದಿಯ ದಡದಲ್ಲಿ ನಾನು ಪುಣ್ಯಪ್ರದವೂ ಪರಮಪವಿತ್ರವೂ ಆದ ಪ್ರದೇಶದಲ್ಲಿ ಲೋಕಾನುಗ್ರಹಕ್ಕಾಗಿ ಲಿಂಗರೂಪವನ್ನು ಧರಿಸಿ ನೆಲಸುವೆನು.

೩೯. ಸೋಮೇಶ್ವರಮಹಾಲಿಂಗದ ಪಶ್ಚಿಮಪ್ರದೇಶವು ಉತ್ತಮವಾಗಿರುವುದು. ಅಲ್ಲಿ ನಾನು ಕೇದಾರೇಶ್ವರನೆಂದೇ ಪ್ರಖ್ಯಾತಿಯನ್ನು ಪಡೆಯುವೆನು.

೪೦. ಅಲ್ಲಿ ನಿಮಗೆಲ್ಲಗಿಗೂ ಸರ್ವಕಾಲಗಳಲ್ಲಿಯೂ ನನ್ನ ದರ್ಶನವು ಲಭಿಸುತ್ತಿರುವುದು. ನಿಸ್ಸಂದೇಹವಾಗಿಯೂ ಅಲ್ಲಿ ಸಕಲರಿಗೂ ಸಕಲಾಭೀಷ್ಟಗಳನ್ನೂ ನಾನು ಕೊಡುತ್ತಿರುವೆನು. ಇಲ್ಲಿ ಯಾವ ಫಲವನ್ನು ಕೊಡುವೆನೊ, ಅದಕ್ಕೂ ಹೆಚ್ಚಿನ ಫಲವನ್ನೇ ಅಲ್ಲಿ ನಾನು ಕೊಡುತ್ತೇನೆ."

೪೧. ಇಂತೆಂದು ಆಕಾಶದಿಂದ ಹೊರಟುಬಂದ ಮನೋಹರವೂ, ದಿವ್ಯವೂ, ಮನಸ್ಸಂತೋಷಕಾರಕವೂ ಆದ ಮಾತನ್ನು ಆ ಮನುಷ್ಯರೆಲ್ಲರೂ ಕೇಳಿದರು.

೪೨. ಅದರಿಂದ ಅವರ ಮನಸ್ಸಿನಲ್ಲಿ ವಿಚಿತ್ರವಾದ ಪರಿಣಾಮವುಂಟಾಗಲು ಎಲ್ಲರೂ, "ಇದು ಸತ್ಯವೇ ಹೊರತು ಸುಳ್ಳಾಗಲಾರದು" ಎಂದುಕೊಂಡು ಮಹಾಕಾಲವನಕ್ಕೆ ಹೋದರು.

ಸ್ನಾತ್ವಾ ಶಿಪ್ರಾಜಲೇ ಪುಣ್ಯೇ ಯಾವತ್ಪಶ್ಯಂತಿ ಭಾಸ್ಕರಂ ।
ತಾವದ್ದೃಷ್ಟಿಪಥೋತ್ಪನ್ನಂ ಲಿಂಗಂ ಪಾಪಪ್ರಣಾಶನಂ ॥ ೪೩ ॥
ಅಥ ತೇ ಹರ್ಷಿತಾಃ ಪ್ರೋಚುಃ ಕೇದಾರೋಽಯಂ ನ ಸಂಶಯಃ ।
ದೃಷ್ಟೋಽಸ್ಮಾಕಂ ನ ಸಂದೇಹೋ ಗಂಗಾ ಶಿಪ್ರಾಜಲೇ ಸ್ಥಿತಾ ॥ ೪೪ ॥
ತತಸ್ತೇ ಪೂಜಯಾಮಾಸುಃ ಪುಷ್ಪೈರ್ನಾನಾವಿಧೈಸ್ತದಾ ।
ಪೂಜಿತೋಽಹಂ ವಿಶಾಲಾಕ್ಷಿ ತೇಷಾಂ ತುಷ್ಟೋ ವರಾನನೇ ॥ ೪೫ ॥
ದುರ್ಲಭೋಽತಿವರೋ ದತ್ತಃ ಕೈಲಾಸೇ ಸ್ಥಾನಮುತ್ತಮಂ ।
ಅಕ್ಷಯಂ ಚ ಪದಂ ದತ್ತಂ ಪುನರಾವೃತ್ತಿವರ್ಜಿತಂ ॥ ೪೬ ॥
ಅತೋಽಹಂ ತ್ರಿದಶೈಃ ಪ್ರೋಕ್ತಃ ಕೇದಾರೇಶ್ವರನಾಮತಃ ।
ಪ್ರಾರ್ಥಿತಃ ಪರಯಾ ಭಕ್ತ್ಯಾ ಲೋಕಾನಾಮನುಕಂಪಯಾ ॥ ೪೭ ॥
ಇಹಾಗತ್ಯ ನರಾ ಯೇ ಚ ತ್ವಾಂ ಪಶ್ಯಂತಿ ಸುಭಕ್ತಿತಃ ।
ತೇಷಾಂ ಫಲಂ ತ್ವಯಾ ದೇವ ದಾತವ್ಯಮಧಿಕಂ ಯತಃ ॥ ೪೮ ॥

---

೪೩. ಪುಣ್ಯಪ್ರದವಾದ ಶಿಪ್ರಾನದಿಯಲ್ಲಿ ಮಿಂದು ಅವರು ಸೂರ್ಯನನ್ನು ನೋಡುತ್ತಿದ್ದಂತೆಯೇ ಅವರ ನೇತ್ರಗಳಿಗೆ ಪಾಪಪರಿಹಾರಕವಾದ ಲಿಂಗವೊಂದು ಗೋಚರವಾಯಿತು.

೪೪. ಆಗ ಆವರೆಲ್ಲರೂ ಆನಂದಭರಿತರಾಗಿ ತಮ್ಮಲ್ಲಿಯೇ, "ಇದೇ ಕೇದಾರೇಶ್ವರಲಿಂಗವು; ಈ ಶಿಪ್ರಾಜಲದಲ್ಲಿಯೇ ಗಂಗೆಯು ಸನ್ನಿಹಿತಳಾಗಿರುವಳು" ಎಂದು ಹೇಳಿಕೊಂಡರು.

೪೫. ವಿಶಾಲಾಕ್ಷಿಯೆ! ಬಳಿಕ ಅವರು ಬಹುವಿಧಗಳಾದ ಪುಷ್ಪಗಳಿಂದ ನನ್ನನ್ನು ಪೂಜಿಸಿದರು. ಅವರ ಪೂಜೆಯನ್ನು ಕೈಗೊಂಡು ನಾನು ಪರಮ ಸಂತುಷ್ಟನಾದೆನು.

೪೬. ಅವರಿಗೆ ಕೈಲಾಸದಲ್ಲಿ ಉತ್ತಮಸ್ಥಾನಗಳೆಂಬ ಅತ್ಯಂತ ದುರ್ಲಭವಾದ ವರವನ್ನಿತ್ತೆನು. ಪುನರಾವೃತ್ತಿರಹಿತವಾದ ಶಾಶ್ವತ ಪದವಿಯನ್ನೂ ಕೊಟ್ಟೆನು.

೪೭. ಆದುದರಿಂದಲೇ ನಾನು ಕೇದಾರೇಶ್ವರ ನಾಮಾಂಕಿತನೆಂದು ದೇವತೆಗಳು ಹೇಳಿ ಲೋಕಾನುಗ್ರಹಬುದ್ಧಿಯಿಂದ ನನ್ನಲ್ಲಿ ಬಹಳ ಭಕ್ತಿಯುಕ್ತರಾಗಿ ಬೇಡಿಕೊಂಡರು.

೪೮. "ಮಹಾದೇವನೆ! ಇಲ್ಲಿಗೆ ಬಂದು ಯಾವ ಮಾನವರು ನಿನ್ನನ್ನು ದೃಢಭಕ್ತಿಯಿಂದ ನೋಡುವರೊ, ಅವರಿಗೆ ನೀನು ಅತ್ಯಧಿಕವಾದ ಫಲವನ್ನು ಕೊಡಬೇಕು.

ಹಿಮಾದ್ರೌ ಹಿಮನಾಥಸ್ಯ ಯಾತ್ರಾಯಾಃ ಪ್ರತ್ಯಹಂ ಫಲಂ ।
ಲಭಂತೇ ಚ ನರಾ ನಿತ್ಯಂ ನಾಽತ್ರ ಕಾರ್ಯಾ ವಿಚಾರಣಾ ॥ ೪೯ ॥
ಬ್ರಹ್ಮಹಾ ವಾ ಸುರಾಪೋ ವಾ ಸ್ತೇಯೀ ವಾ ಗುರುತಲ್ಪಗಃ ।
ತತ್ಸಂಪರ್ಕೀ ನರೋ ಯಸ್ತು ತ್ವಾಂ ದೃಷ್ಟ್ವಾ ಕಿಲ್ಬಿಷಾಕರಃ ।
ಸೋಽಪಿ ಯಾತಿ ಪರಂ ಸ್ಥಾನಂ ಪುನರಾವೃತ್ತಿವರ್ಜಿತಂ ॥ ೫೦ ॥
ಚಾಂದ್ರಾಯಣಾನಾಂ ವಿಧಿವಚ್ಛತಾನಾಂ ಚೈವ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಕೇದಾರೇಶ್ವರದರ್ಶನಾತ್ ॥ ೫೧ ॥
ತೇ ನರಾಃ ಪಶವೋ ಲೋಕೇ ತೇಷಾಂ ಜನ್ಮ ನಿರರ್ಥಕಂ ।
ಯೈರ್ನದೃಷ್ಟೋ ಮಹಾಕಾಲೇ ಕೇದಾರೇಶ್ವಸಂಜ್ಞಕಃ ॥ ೫೨ ॥
ಕೌಮಾರೇ ಯೌವನೇ ಬಾಲ್ಯೇ ವಾರ್ಧಕೇ ಯದುಪಾರ್ಜಿತಂ ।
ತತ್ಪಾಪಂ ಸಂಕ್ಷಯಂ ಯಾತಿ ಕೇದಾರೇಶ್ವರದರ್ಶನಾತ್ ॥ ೫೩ ॥
ಹಿಮಾಲಯಕೃತಾ ಯಾತ್ರಾ ತಸ್ಯಾಃ ಪ್ರೋಕ್ತಂ ಚ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಕೇದಾರೇಶ್ವರದರ್ಶನಾತ್ ॥ ೫೪ ॥

---

೪೯. ಹಿಮಾಚಲದಲ್ಲಿರುವ ಕೇದಾರೇಶ್ವರನ ಬಳಿಗೆ ನಿತ್ಯವೂ ಮಾಡುವ ಯಾತ್ರೆಯ ಮಹಾಫಲವನ್ನೇ ಮನುಜರು ಇಲ್ಲಿಯೂ ಪಡೆಯುವುದರಲ್ಲಿ ಸಂದೇಹವಿಲ್ಲ.

೫೦. ಬ್ರಹ್ಮಘಾತಕನೂ, ಸುರಾಪಾನಮಾಡಿದವನೂ, ಚೌರ್ಯಾಸಕ್ತನೂ, ಗುರುತಲ್ಪಗಾಮಿಯೂ, ಇವರೊಡನೆ ಸಂಪರ್ಕವುಳ್ಳವನೂ ಆಗಿರುವ ಮಹಾಪಾತಕಿಯೂ ನಿನ್ನ ದರ್ಶನವನ್ನು ಮಾಡುವುದರಿಂದ ಮರಳಿ ಸಂಸಾರಕ್ಕೆ ಬೀಳದಿರುವಂತೆ ಪರಮಪದವಿಯನ್ನು ಪಡೆಯುವನು.

೫೧. ಒಂದುನೂರು ಚಾಂದ್ರಾಯಣವ್ರತಗಳನ್ನು ವಿಧಿವತ್ತಾಗಿ ಆಚರಿಸಿದುದರಿಂದ ಯಾವ ಫಲವುಂಟೊ, ಅದನ್ನೇ ಕೇದಾರೇಶ್ವರನ ದರ್ಶನದಿಂದ ಪಡೆಯಬಹುದು.

೫೨. ಮಹಾಕಾಲವನದಲ್ಲಿರುವ ಕೇದಾರೇಶ್ವರನನ್ನು ನೋಡದಿರುವಂತಹ ನರರೇ ಪಶುಗಳೆನ್ನಬೇಕು. ಅವರ ಜನ್ಮಗಳು ನಿರರ್ಥಕಗಳೇ ಸರಿ.

೫೩. ಕೇದಾರೇಶ್ವರನ ದರ್ಶನಮಾತ್ರದಿಂದ ಮನುಷ್ಯನು ತನ್ನ ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯಗಳಲ್ಲಿ ಮಾಡಿದ ಸಮಸ್ತಪಾತಕಗಳೂ ನಾಶವಾಗುವುವು.

೫೪. ಹಿಮಾಲಯದಲ್ಲಿರುವ ಕೇದಾರೇಶ್ವರನ ಬಳಿಗೆ ಯಾತ್ರೆಯನ್ನು ಮಾಡಲು ಯಾವ ಫಲವುಂಟೊ, ಅದನ್ನೇ ಈ ಲಿಂಗವನ್ನು ನೋಡುವುದರಿಂದಲೂ ಪಡೆಯಬಹುದು.''

ಇತ್ಯುಕ್ತೋಽಹಂ ತದಾ ದೇವಿ ದೇವೈಃ ಪ್ರಣತಿಪೂರ್ವಕಂ ।
ತಥೇತಿ ಚ ಮಯಾಪ್ರೋಕ್ತಂ ತೇಽಪಿ ದೇವಾ ದಿವಂ ಗತಾಃ ॥ ೫೫ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕೇದಾರೇಶ್ವರದೇವಸ್ಯ ಪಿಶಾಚಾಖ್ಯಮತಃ ಶೃಣು ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕೇದಾರೇಶ್ವರಮಾಹಾತ್ಮ್ಯವರ್ಣನಂ" ನಾಮ
ಸಪ್ತಷಷ್ಠಿತಮೋಽಧ್ಯಾಯಃ

---

೫೫. ದೇವಿಯೆ! ಇಂತೆಂದು ದೇವತೆಗಳು ನಮಸ್ಕಾರಪೂರ್ವಕವಾಗಿ ನನ್ನನ್ನು ಬೇಡಿಕೊಳ್ಳಲು ನಾನೂ ಹಾಗೆಯೇ ಆಗಲೆಂದು ವರವನ್ನಿತ್ತೆನು. ಬಳಿಕ ದೇವತೆಗಳು ಸ್ವರ್ಗಕ್ಕೆ ಹೊರಟುಹೋದರು.

೫೬. ಮಹೇಶ್ವರಿಯೆ! ಇಂತು ನಿನಗೆ ಕೇದಾರೇಶ್ವರಮಹಾದೇವನ ಪ್ರಭಾವವನ್ನು ಹೇಳಿರುವೆನು. ಈ ಕಥೆಯು ಸಕಲಪಾತಕಗಳನ್ನು ನಾಶ ಮಾಡುವುದು. ಇನ್ನು ಪಿಶಾಚೇಶ್ವರನ ಮಹಿಮೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕೇದಾರೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಷಷ್ಟಿತಮೋಽಧ್ಯಾಯಃ

### ಪಿಶಾಚೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಅಷ್ಟಷಷ್ಟಿಕಸಂಖ್ಯಾಕಂ ಪಿಶಾಚಾಖ್ಯಮುಥೇಶ್ವರಂ ।
ಶೃಣು ದೇವಿ ಪ್ರಯತ್ನೇನ ದರ್ಶನಾತ್ಪಾಪನಾಶನಂ ॥ ೧ ॥
ಆದೌ ಕಲಿಯುಗೇ ದೇವಿ ಶೂದ್ರೋ ಬಹುಧನೋಽಭವತ್ ।
ಸೋಮೋ ನಾಮ ಸುವಿಖ್ಯಾತೋ ನಾಸ್ತಿಕೋ ವೇದನಿಂದಕಃ ॥ ೨ ॥
ಅಬ್ರಹ್ಮಣ್ಯೋ ನೃಶಂಸಶ್ಚ ಕದರ್ಯೋ ನಿರಪತ್ರಪಃ ।
ವಿಶ್ವಾಸಘಾತಕಶ್ಚೈವ ಪರಸ್ವಹರಣೇ ರತಃ ॥ ೩ ॥
ತ್ರಿವರ್ಗಹಂತಾ ಚಾನ್ಯೇಷಾಮಾತ್ಮಕಾಮಾನುವರ್ತಕಃ ।
ಸ ಕದಾಚಿನ್ಮೃತೋ ದೇವಿ ಕಷ್ಟೇನ ಪರಮೇಣ ಚ ॥ ೪ ॥
ಮರುದೇಶೇ ಪಿಶಾಚೋಽಭೂನ್ನಗ್ನೋ ದೀನೋ ಭಯಾವಹಃ ।
ನಾಶಕೃತ್ಸಪಿಶಾಚಾನಾಂ ಸ್ವಪಕ್ಷೋಚ್ಛೇದಕಾರಕಃ ॥ ೫ ॥

---

### ಕನ್ನಡದ ಅನುವಾದ

#### ಪಿಶಾಚೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಅರುವತ್ತೆಂಟನೆಯದೇ ಪಿಶಾಚೇಶ್ವರವೆಂದು ಪ್ರಸಿದ್ಧವಾದ ಲಿಂಗವು. ದರ್ಶನದಿಂದಲೇ ಪಾಪಗಳನ್ನು ತೊಲಗಿಸುವ ಇದರ ಚರಿತ್ರೆಯನ್ನು ಸಾವಧಾನದಿಂದ ಕೇಳು.

೨. ದೇವಿಯೆ! ಈ ಕಲಿಯುಗದ ಆದಿಯಲ್ಲಿ ಸೋಮನೆಂಬ ಹೆಸರಿನ ಬಹಳ ಧನಾಢ್ಯನಾದ ಶೂದ್ರನೊಬ್ಬನಿದ್ದನು. ಅವನು ನಾಸ್ತಿಕನೂ, ವೇದಶಾಸ್ತ್ರ ನಿಂದಕನೂ ಆಗಿ ಪ್ರಖ್ಯಾತಿಯನ್ನು ಪಡೆದಿದ್ದನು.

೩. ಮತ್ತು ಬ್ರಾಹ್ಮಣಭಕ್ತಿಯಿಲ್ಲದವನೂ, ಕ್ರೂರಿಯೂ, ನೀಚನೂ, ಲಜ್ಜಾರಹಿತನೂ, ವಿಶ್ವಾಸಘಾತಕನೂ, ಪರಧನವನ್ನಪಹರಿಸುವುದರಲ್ಲಿಯೇ ಆಸಕ್ತನೂ ಆಗಿದ್ದನು.

೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನೂ, ಇತರರನ್ನೂ ಸಂಹರಿಸುತ್ತ ತನ್ನ ಇಚ್ಛೆಯಂತೆಯೇ ನಡೆಯುವವನಾಗಿ ಅವನು ಕಾಲಕ್ರಮದಲ್ಲಿ ಬಹಳ ಕಷ್ಟತರವಾದ ಮರಣವನ್ನು ಪಡೆದನು.

೫. ಬಳಿಕ ಅವನು ಮರಳುಕಾಡಿನಲ್ಲಿ ಒಂದು ಪಿಶಾಚನಾಗಿ ದಿಗಂಬರನೂ, ದೀನನೂ, ಭಯಂಕರನೂ, ಪಿಶಾಚಗಳನ್ನೇ ನಾಶಮಾಡುವವನೂ, ತನ್ನ ಕಡೆಯವರನ್ನೇ ಕೊಲ್ಲುವವನೂ ಆದನು.

ಬಹವೋ ಮರ್ದಿತಾಸ್ತೇನ ಪಿಶಾಚಾ ಬಲವತ್ತರಾಃ ॥ ೬ ॥
ಅಥ ತೇನೈವ ಮಾರ್ಗೇಣ ಕದಾಚಿಚ್ಛಾಕಟಾಯನಃ ।
ಸ್ವಾಧ್ಯಾಯನಿರತೋ ವಿದ್ವಾನ್ವಾಗ್ಮೀ ಶಮಪರಾಯಣಃ ॥ ೭ ॥
ಉದಯಾದಿತ್ಯಸಂಕಾಶೋ ವಿಭಾವಸುಸಮದ್ಯುತಿಃ ।
ಶಕಟೇನ ಸದಾ ಯಾತಿ ಸ ಪಶ್ಯನ್ಸರ್ವತಾತ್ಮಜೇ ॥ ೮ ॥
ಗತೋ ದದರ್ಶ ತಂ ರೌದ್ರಂ ಪಿಶಾಚಂ ಚ ಭಯಾವಹಂ ।
ಸ ಪಿಶಾಚಃ ಕ್ಷುಧಾವಿಷ್ಟೋ ಭೋಕ್ತುಕಾಮೋಽಭ್ಯಧಾವತ ॥ ೯ ॥
ದೃಷ್ಟ್ವಾ ತಂ ಶಕಟಾರೂಢಂ ಬ್ರಾಹ್ಮಣಂ ಶಾಕಟಾಯನಂ ।
ಶಕಟಸ್ಯ ಧ್ವನಿಂ ಶ್ರುತ್ವಾ ರೂಪಂ ದೃಷ್ಟ್ವಾ ದ್ವಿಜಸ್ಯ ಚ ।
ತಥಾರೂಪಃ ಪಿಶಾಚಸ್ತು ಕರ್ಣಾಭ್ಯಾಂ ಬಧಿರೀಕೃತಃ ॥ ೧೦ ॥
ಆತ್ಮತ್ರಾಣಪರೋ ಭೂತ್ವಾ ನಷ್ಟಃ ಕಷ್ಟೇನ ಪಾರ್ವತಿ ।
ತಂ ಧಾವಂತಂ ಸಮಾಲೋಕ್ಯ ಪಿಶಾಚಂ ಬ್ರಾಹ್ಮಣೋಽಬ್ರವೀತ್ ॥ ೧೧ ॥

---

೬. ಅವನಿಂದ ಮಹಾಬಲಶಾಲಿಗಳಾದ ಅನೇಕ ಪಿಶಾಚರೂ ಪೀಡಿತರಾಗಿದ್ದರು.

೭. ಪರ್ವತಪುತ್ರಿಯೆ! ಒಮ್ಮೆ ವೇದಶಾಸ್ತ್ರಸಂಪನ್ನನೂ, ಮಹಾವಿದ್ವಾಂಸನೂ, ವಾಚಾಳಿಯೂ, ಇಂದ್ರಿಯನಿಗ್ರಹತತ್ಪರನೂ ಆದ ಶಾಕಟಾಯನನೆಂಬೊಬ್ಬ ಬ್ರಾಹ್ಮಣನು ಆ ಮಾರ್ಗದಲ್ಲಿ ಬರುತ್ತಿದ್ದನು.

೮. ಬಾಲಸೂರ್ಯನ ಮೈಬಣ್ಣದಿಂದೊಪ್ಪುತ್ತ ಅಗ್ನಿಯಂತೆ ತೇಜೋವಂತನಾದ ಆತನು ನಾನಾದೇಶಗಳನ್ನು ನೋಡುತ್ತ ಬಂಡಿಯನ್ನೇರಿಯೆ ಪ್ರಯಾಣ ಮಾಡಿ ಬರುತ್ತಿದ್ದನು.

೯. ಆತನು ಮರುಪ್ರದೇಶದಲ್ಲಿ ಬರುತ್ತಿರಲು ಕ್ರೂರನೂ, ಭಯಂಕರನೂ ಆದ ಆ ಪಿಶಾಚವನ್ನು ಕಂಡನು. ಪಿಶಾಚನೂ ಹಸಿವಿನಿಂದ ಬಳಲುತ್ತ ಆತನನ್ನು ತಿನ್ನಲು ಓಡಿಬಂದನು.

೧೦. ರಥವನ್ನೇರಿ ಬರುತ್ತಿದ್ದ ಶಾಕಟಾಯನ ಬ್ರಾಹ್ಮಣನನ್ನೂ, ಆತನ ತೇಜೋರೂಪವನ್ನೂ ಕಂಡು ಪಿಶಾಚನು ಆ ರಥದ ಘೋಷವನ್ನೂ ಕೇಳಿದನು. ಆದರಿಂದ ಒಡನೆಯೆ ಅವನ ಕಿವಿಗಳು ಮುಚ್ಚಿಹೋದುವು.

೧೧. ದೇವಿಯೆ! ಅವನು ತನ್ನನ್ನು ರಕ್ಷಿಸಿಕೊಳ್ಳುವುದರಲ್ಲಿಯೇ ತತ್ಪರನಾಗಿ ಬಹಳ ಕಷ್ಟದಿಂದ ಓಡಿಹೋಗುತ್ತಿದ್ದನು. ಓಡುತ್ತಿದ್ದ ಆ ಪಿಶಾಚನನ್ನು ಕಂಡು ಬ್ರಾಹ್ಮಣನು ಹೇಳಿದನು.

ಪಿಶಾಚ ತ್ರಸ್ತರೂಪೋಽಸಿ ತ್ವರಿತಶ್ಚೈವ ಲಕ್ಷ್ಯಸೇ ।
ಕ್ವ ಧಾವಸಿ ಸಮಾಚಕ್ಷ್ವ ಕುತಸ್ತೇ ಭಯಮಾಗತಮ್ ॥ ೧೨ ॥

ಪಿಶಾಚ ಉವಾಚ :—

ಶಕಟಸ್ಯಾಸ್ಯ ಮಹತೋ ಘೋಷಂ ಶ್ರುತ್ವಾ ಭಯಂಕರಂ ।
ಕರ್ಣಾಭ್ಯಾಂ ಬಧಿರೋ ಜಾತೋ ವಿಸಂಜ್ಞಸ್ತವದರ್ಶನಾತ್ ॥ ೧೩ ॥

ಬ್ರಾಹ್ಮಣ ಉವಾಚ :—

ಪಿಶಾಚಾನಾಂ ಬಲಿಷ್ಠಾಶ್ಚ ಶ್ರೂಯಂತೇ ಬ್ರಹ್ಮರಾಕ್ಷಸಾಃ ।
ಸತ್ವಂ ಮಾಂ ಭೋಕ್ತುಕಾಮೋಽಸಿ ವಿಖ್ಯಾತೋ ಬ್ರಹ್ಮರಾಕ್ಷಸಃ ॥ ೧೪ ॥

ಪಿಶಾಚ ಉವಾಚ :—

ಪಿಶಾಚಾನಾಂ ಸಮರ್ಥೋಽಸ್ಮಿ ನಷ್ಟೋಽಹಂ ತವ ದರ್ಶನಾತ್ ।
ದುಃಖಂ ಹಿ ಮೃತ್ಯುಃ ಸರ್ವೇಷಾಂ ಜೀವಿತಂ ಚ ಸುದುರ್ಲಭಂ ।
ಅತೋ ಭೀತಃ ಪಲಾಯಾಮಿ ಜೀವಹೇತೋಃ ಸುಖಾರ್ಥತಃ ॥ ೧೫ ॥

ಬ್ರಾಹ್ಮಣ ಉವಾಚ :—

ಕುತಃ ಪಿಶಾಚ ಸೌಖ್ಯಂ ತೇ ಮರಣಂ ಶ್ರೇಯ ಏವ ತೇ ।
ಪೈಶಾಚೀ ಕುತ್ಸಿತಾ ಯೋನಿಃ ಪಾಪಿನಾಮೇವ ಜಾಯತೇ ॥ ೧೬ ॥

---

೧೨. "ಎಲೈ ಪಿಶಾಚನೆ! ನೀನು ಬಹಳ ಕಷ್ಟಪಡುವಂತಿರುವೆಯೇಕೆ? ತ್ವರೆಯಿಂದ ಕೂಡಿದವನಾಗಿಯೂ ಕಾಣುತ್ತಿರುವೆ. ಎಲ್ಲಿಗೆ ಓಡುತ್ತಿರುವೆ ಯೆಂಬುದನ್ನು ತಿಳಿಸು. ನಿನಗೆ ಯಾವುದರಿಂದ ಭಯವೊದಗಿತು?"

೧೩. ಪಿಶಾಚನು ಹೇಳುತ್ತಾನೆ:—ಈ ಮಹಾರಥದ ಭಯಂಕರ ಧ್ವನಿ ಯನ್ನು ಕೇಳಿ ನನ್ನ ಕಿವಿಗಳು ಮುಚ್ಚಿಹೋದುವು. ನಿನ್ನ ರೂಪವನ್ನು ಕಂಡು ನಾನು ನಿಶ್ಚೇಷ್ಟನಾದೆನು.

೧೪. ಬ್ರಾಹ್ಮಣನು ಹೇಳುತ್ತಾನೆ:—ಪಿಶಾಚರಲ್ಲಿ ಬ್ರಹ್ಮರಾಕ್ಷಸರೇ ಮಹಾ ಬಲಶಾಲಿಗಳೆಂದು ಕೇಳಿರುವೆನು. ನನ್ನನ್ನು ತಿನ್ನಬಯಸಿದುದರಿಂದ ನೀನೂ ಪ್ರಖ್ಯಾತನಾದ ಬ್ರಹ್ಮರಾಕ್ಷಸನೇ ಎಂದು ತಿಳಿಯುವೆನು.

೧೫. ಪಿಶಾಚನು ಹೇಳುತ್ತಾನೆ:—ನಾನು ಪಿಶಾಚರಲ್ಲಿ ಸಮರ್ಥನೇ ಸರಿ. ಆದರೆ ನಿನ್ನ ದರ್ಶನದಿಂದ ಗತಿಗೆಟ್ಟಿರುವೆನು. ಸಕಲ ಪ್ರಾಣಿಗಳಿಗೂ ಮರಣವು ಮಹಾದುಃಖಪ್ರದವಷ್ಟೆ. ಜೀವನವು ಬಹಳ ದುರ್ಲಭವಾಗಿರುವುದು. ಆದುದ ರಿಂದ ಪ್ರಾಣಸೌಖ್ಯಗಳೆರಡನ್ನೂ ರಕ್ಷಿಸಿಕೊಳ್ಳಲು ಭಯದಿಂದೋಡುತ್ತಿರುವೆನು.

೧೬. ಬ್ರಾಹ್ಮಣನು ಹೇಳುತ್ತಾನೆ:—ಅಯ್ಯಾ ಪಿಶಾಚನೆ! ನಿನಗೆ ಸೌಖ್ಯ ವೆಲ್ಲಿಯದು? ಮರಣವೇ ನಿನಗೆ ಶ್ರೇಯಸ್ಕರವೆಂದೆಣಿಸುವೆನು. ನೀಚವಾದ ಪಿಶಾಚಜನ್ಮವು ಮಹಾಪಾತಕಿಗಳಿಗೆ ಮಾತ್ರ ಲಭಿಸುವುದು.

ಪಿಶಾಚ ಉವಾಚ :—

ಸರ್ವತ್ರ ಹಿ ಗತೋ ಜೀವೋ ಭವತ್ಯೇವ ಸುಖಾಶ್ರಯಃ ।
ತಸ್ಮಾಜ್ಜೀವಿತುಮಿಚ್ಛಾಮಿ ಪ್ರಸೀದ ಬ್ರಹ್ಮರಾಕ್ಷಸ ॥ ೧೭ ॥

ಬ್ರಾಹ್ಮಣ ಉವಾಚ :—

ನಾಽಹಂ ತ್ವಾಂ ಭೋಕ್ತುಕಾಮೋಽಸ್ಮಿ ಬ್ರಾಹ್ಮಣೋಽಹಂ ನ ರಾಕ್ಷಸಃ ।
ಸರ್ವಭೂತಹಿತಾರ್ಥಾಯ ವಿಚರಾಮಿ ಮಹೀತಲೇ ॥ ೧೮ ॥
ಸರ್ವೇಷಾಮೇವ ಜಂತೂನಾಂ ಮೈತ್ರೀ ಬ್ರಾಹ್ಮಣ ಉಚ್ಯತೇ ।
ಮಾ ಕುರುಷ್ವ ಭಯಂ ಮತ್ತೋ ಮಿತ್ರಭಾವಂಗತೋ ಹ್ಯಹಂ ॥ ೧೯ ॥
ತಸ್ಯ ತದ್ವಚನಂ ಶ್ರುತ್ವಾ ಪಿಶಾಚಃ ಸ್ವಸ್ಥಮಾನಸಃ ।
ಪ್ರಣಮ್ಯ ಪ್ರತ್ಯುವಾಚೇದಂ ಬ್ರಾಹ್ಮಣಂ ಶಾಕಟಾಯನಂ ॥ ೨೦ ॥
ಯದಿ ತೇ ಸರ್ವಭೂತಾನಾಂ ದತ್ತಾ ಹ್ಯಭಯದಕ್ಷಿಣಾ ।
ಕರ್ಮಣಾ ಮನಸಾ ವಾಚಾ ಮಿತ್ರಭಾವಂ ಗತೋ ಯದಿ ॥ ೨೧ ॥
ಪೃಚ್ಛಾಮಿ ತ್ವಾಂ ಮಹಾಭಾಗ ಸಂಶಯೋ ಹೃದಯೇ ಸ್ಥಿತಃ ।
ಶ್ರುತ್ವಾಽನುಕಂಪಯಾ ಸಮ್ಯಕ್ತನ್ಮೇ ವ್ಯಾಖ್ಯಾತುಮರ್ಹಸಿ ॥ ೨೨ ॥

---

೧೭. ಪಿಶಾಚನು ಹೇಳುತ್ತಾನೆ:—ಎಲ್ಲೆಡೆಗಳಲ್ಲಿರುವ ಜೀವರೂ ಸುಖಕ್ಕೆ ಬಾಧ್ಯರೇ ಅಲ್ಲವೆ. ಆದುದರಿಂದ ನಾನೂ ಜೀವಿಸಲಪೇಕ್ಷಿಸುವೆನು. ಬ್ರಹ್ಮರಾಕ್ಷಸನೆ! ನನ್ನಲ್ಲಿ ಪ್ರಸನ್ನನಾಗು.

೧೮. ಬ್ರಾಹ್ಮಣನು ಹೇಳುತ್ತಾನೆ:—ನಾನು ನಿನ್ನನ್ನು ತಿನ್ನಬಯಸುವವನಲ್ಲ. ನಾನು ಬ್ರಾಹ್ಮಣನೇ ಹೊರತು ರಾಕ್ಷಸನಲ್ಲ. ಸಮಸ್ತಪ್ರಾಣಿಗಳ ಹಿತವನ್ನೇ ಕೋರುತ್ತ ಭೂಮಂಡಲದಲ್ಲಿ ಸಂಚರಿಸುತ್ತಿರುವೆನು.

೧೯. ಸಕಲಪ್ರಾಣಿಗಳಲ್ಲಿಯೂ ಸ್ನೇಹಭಾವವೇ ಬ್ರಾಹ್ಮಣಧರ್ಮವೆಂದೆನಿಸುವುದು. ಆದುದರಿಂದ ನಿನ್ನೊಡನೆಯೂ ಮಿತ್ರಭಾವದಿಂದಿರುವ ನನ್ನಲ್ಲಿ ಭಯಗೊಳ್ಳಬೇಡ.

೨೦. ಆತನ ಮಾತನ್ನು ಕೇಳಿ ಪಿಶಾಚನು ಸಮಾಹಿತವಾದ ಮನಸ್ಸುಳ್ಳವನಾಗಿ ಶಾಕಟಾಯನ ಬ್ರಾಹ್ಮಣನಿಗೆ ನಮಸ್ಕರಿಸಿ ಮರುಮಾತನ್ನಾಡಿದನು.

೨೧. "ನೀನು ಸಕಲಪ್ರಾಣಿಗಳಿಗೂ ಅಭಯದಕ್ಷಿಣೆಯನ್ನು ನೀಡಿರುವೆ. ಮನೋವಾಕ್ಕಾಯಗಳಿಂದಲೂ ನನ್ನಲ್ಲಿ ಮಿತ್ರತ್ವವನ್ನು ತೋರಿಸುತ್ತಿರುವೆ.

೨೨. ಮಹಾತ್ಮನೆ! ನನ್ನ ಹೃದಯದಲ್ಲಿ ಸಂದೇಹವೊಂದು ನೆಲಸಿರುವುದು. ಅದನ್ನು ಕೇಳುವೆನು. ಅದನ್ನು ಕೇಳಿ ನನ್ನಲ್ಲಿ ದಯೆಯಿಂದ ಚೆನ್ನಾಗಿ ತಿಳಿಯ ಹೇಳಬಯಸುವೆನು.

ಕೇನ ಕರ್ಮವಿಪಾಕೇನ ಪೈಶಾಚಂ ಯಾತಿ ಮಾನವಃ ।
ಪಿಶಾಚತ್ವಾತ್ಕಥಂ ಮುಕ್ತಿಃ ಪ್ರಾಪ್ಯತೇ ಪಾಪಕರ್ಮಭಿಃ ॥ ೨೩ ॥
ಇತಿ ತಸ್ಯ ವಚಃ ಶ್ರುತ್ವಾ ಪಿಶಾಚಸ್ಯ ವರಾನನೇ ।
ಮುಮುತ್ಸೇನಾವೃತಸ್ತಸ್ಮೈ ಪ್ರಾವೋಚಚ್ಛಾಕಟಾಯನಃ ॥ ೨೪ ॥
ಅಪಹೃತ್ಯ ಚ ವಿಪ್ರಸ್ವಂ ದೇವಸ್ವಂ ಚ ವಿಶೇಷತಃ ।
ತೇನ ಪಾಪೇನ ಪಾಪಿಷ್ಠಾಃ ಪಿಶಾಚತ್ವಂ ಪ್ರಯಾಂತಿ ಚ ॥ ೨೫ ॥
ಪಿತರಂ ಮಾತರಂ ಚೈವ ಸ್ತ್ರಿಯಂ ಬಾಲಂ ದ್ವಿಜಂ ತಥಾ ।
ವಂಚಯಿತ್ವಾ ಹರತ್ಯರ್ಥಂ ಸ ಪಿಶಾಚೋ ಭವೇನ್ನರಃ ॥ ೨೬ ॥
ರಾಜದ್ರವ್ಯಂ ಗೃಹೀತ್ವಾ ತು ನ ಯಜೇನ್ನ ದದಾತಿ ಯಃ ।
ಆತ್ಮಾನಮೇವ ಪುಷ್ಣಾತಿ ಪಿಶಾಚತ್ವಂ ಸ ಗಚ್ಛತಿ ॥ ೨೭ ॥
ವಿಶ್ವಾಸಘಾತಕಾ ಯೇ ಚ ಪರದಾರರತಾಶ್ಚ ಯೇ ।
ಪ್ರಾಪ್ನುವಂತಿ ಪಿಶಾಚತ್ವಂ ತಥಾ ಯೇ ವೇದನಿಂದಕಾಃ ॥ ೨೮ ॥
ನಿಂದಂತಿ ಯೇ ಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವದಾ ।
ತೇ ಭವಂತಿ ಪಿಶಾಚಾಶ್ಚ ಯೇ ಸದಾ ಪಿಶುನಾ ನರಾಃ ॥ ೨೯ ॥

---

೨೩. ಯಾವ ಪಾಪಕರ್ಮದ ಫಲವಾಗಿ ಮನುಷ್ಯನು ಪಿಶಾಚಜನ್ಮವನ್ನು ತಾಳುವನು ? ಈ ಪಾಪಗಳಿಂದಲೂ, ಪಿಶಾಚತ್ವದಿಂದಲೂ ಮುಕ್ತಿಯಾಗುವ ದಾರಿಯಾವುದು ?''

೨೪. ಸುಂದರಿಯೆ ! ಇಂತೆಂದ ಪಿಶಾಚನ ಮಾತುಗಳನ್ನು ಕೇಳಿ ಶಕಟಾಯನನು ಅವನಲ್ಲಿ ಬಹಳವಾದ ಕರುಣೆಯುಳ್ಳವನಾಗಿ ಹೇಳತೊಡಗಿದನು.

೨೫. ''ಬ್ರಾಹ್ಮಣರ ಪದಾರ್ಥಗಳನ್ನೂ, ವಿಶೇಷವಾಗಿ ದೇವರ ಸ್ವತ್ತುಗಳನ್ನೂ ಅಪಹರಿಸಿದ ಪಾಪಗಳಿಂದ ಮನುಷ್ಯನು ಪಾಪಿಯಾಗಿ ಪಿಶಾಚಜನ್ಮವನ್ನು ಹೊಂದುವನು.

೨೬. ತಂದೆ, ತಾಯಿ, ಸ್ತ್ರೀ, ಬಾಲಕ, ಬ್ರಾಹ್ಮಣ ಮುಂತಾದವರನ್ನು ಮೋಸಗೊಳಿಸಿ ಅವರ ಧನವನ್ನಪಹರಿಸುವ ಪಾತಕಿಯು ಪಿಶಾಚತ್ವವನ್ನು ಪಡೆಯುವನು.

೨೭. ಯಾವನು ರಾಜದ್ರವ್ಯವನ್ನು ತೆಗೆದುಕೊಂಡರೂ ಯಜ್ಞಯಾಗಾದಿಗಳನ್ನು ಮಾಡದೆ ಉಚಿತ ಪಾತ್ರಗಳಲ್ಲಿ ದಾನಮಾಡದೆ ತನ್ನನ್ನೇ ಪೋಷಿಸಿಕೊಳ್ಳುವನೊ, ಅವನೂ ಪಿಶಾಚನಾಗುವನು.

೨೮. ನಂಬಿದವರನ್ನು ಮೋಸಮಾಡುವವರೂ, ಪರಸ್ತ್ರೀಲಂಪಟರೂ, ವೇದಗಳನ್ನು ಹೀಯಾಳಿಸುವವರೂ ಪಿಶಾಚತ್ವವನ್ನು ಹೊಂದುವರು.

೨೯. ಯಾರು ಪುರಾಣಗಳನ್ನೂ ಧರ್ಮಶಾಸ್ತ್ರಗಳನ್ನೂ ನಿಂದಿಸುತ್ತಿರುವರೊ,

ಇತಿ ತೇ ಕಥಿತಂ ಸರ್ವಂ ವೇದಪ್ರಾಮಾಣ್ಯತೋಽಧುನಾ ।
ಇದಾನೀಂ ಕಥಯಿಷ್ಯಾಮಿ ಯಸ್ತ್ವಂ ಜಾತೋಽಸಿ ತಚ್ಛೃಣು ॥ ೩೦ ॥
ಸೋಮಕೋ ನಾಮ ಶೂದ್ರಸ್ತ್ವಂ ಪರಮರ್ಮಪ್ರಕಾಶಕಃ ।
ವಿಶ್ವಾಸಘಾತಕೋ ಜಾತೋ ದೇವಬ್ರಾಹ್ಮಣದೂಷಕಃ ॥ ೩೧ ॥
ನಾಸ್ತಿಕೋ ಭಿನ್ನಮರ್ಯಾದೋ ಜನ್ಮನ್ಯತ್ರಾಪಿ ಸಪ್ತಮೇ ।
ಸಕುಲಂ ಪಾತಯಿತ್ವಾಽತ್ರ ನರಕೇ ದಾರುಣೇ ಭೃಶಂ ॥ ೩೨ ॥
ಪಿಶಾಚಯೋನಿಂ ಸಂಪ್ರಾಪ್ತಃ ಪುನಃ ಪ್ರಾಪ್ಸ್ಯಸಿ ರೌರವಂ ।
ಮಹಾರೌರವಸಂಜ್ಞಂ ತು ಕ್ರಕಚಂ ಕಾಲಸೂತ್ರಕಂ ।
ಯಂತ್ರಪೀಡನಕಂ ರೌದ್ರಂ ಮಥನಂ ಕುಂಭವಾಲುಕಂ ॥ ೩೩ ॥
ಇತ್ಯೇವಂ ವದತಸ್ತಸ್ಯ ಬ್ರಾಹ್ಮಣಸ್ಯ ಯಶಸ್ವಿನಿ ।
ಸಸ್ಮಾರ ಪ್ರಾಕ್ತನಂ ಜನ್ಮ ಸತ್ಸಂಗಾತ್ಕುತ್ಸಿತಂ ಸ್ವಕಂ ॥ ೩೪ ॥
ದುಃಖಾಭಿಭೂತೋ ನಿರ್ವೇಷ್ಟೋ ಧಿಗ್ಧಿಗಿತ್ಯಸಕೃದ್ವ್ರುವನ್ ।
ಪತಿತೋ ಭೂತಲೇ ದೇವಿ ಇದಂ ವಾಕ್ಯಮಥಾಽಬ್ರವೀತ್ ॥ ೩೫ ॥

---

ನಿತ್ಯವೂ ಯಾರು ಪರರ ದೋಷಗಳನ್ನೇ ನೋಡುತ್ತಿರುವರೊ, ಅವರು ಪಿಶಾಚ ರಾಗುವರು.

೩೦. ಇಂತು ನಿನಗೆ ವೇದಶಾಸ್ತ್ರಗಳ ಪ್ರಮಾಣವನ್ನನುಸರಿಸಿ ಪಿಶಾಚತ್ವಕ್ಕೆ ಕಾರಣಗಳೆಲ್ಲವನ್ನೂ ಹೇಳಿರುವೆನು. ಇನ್ನು ನೀನು ಪಿಶಾಚನಾಗುವುದಕ್ಕೆ ಕಾರಣವನ್ನು ಹೇಳುವೆನು, ಕೇಳು.

೩೧. ನೀನು ಹಿಂದೆ ಪರಚ್ಛಿದ್ರಗಳನ್ನು ಪ್ರಕಾಶಗೊಳಿಸುವವನೂ, ವಿಶ್ವಾಸ ಘಾತುಕನೂ, ದೇವಬ್ರಾಹ್ಮಣರನ್ನು ಅಲ್ಲಗಳೆಯುವವನೂ ಆದ ಸೋಮನೆಂಬ ಶೂದ್ರನಾಗಿದ್ದೆ.

೩೨. ಹಿಂದಿನ ಏಳನೆಯ ಜನ್ಮದಲ್ಲಿಯೂ ನೀನು ನಾಸ್ತಿಕವಾದಿಯೂ, ಲೋಕಮರ್ಯಾದೆಗಳನ್ನು ಮೀರುವವನೂ ಆಗಿದ್ದೆ. ಮತ್ತು ನಿನ್ನ ಕುಲವನ್ನೆಲ್ಲ ಭಯಂಕರವಾದ ನರಕದಲ್ಲಿ ಹಾಕಿದೆ.

೩೩. ಈ ಪಿಶಾಚಜನ್ಮವು ಕಳೆದಮೇಲೂ ಮತ್ತೆ ರೌರವನರಕವನ್ನು ಸೇರುವೆ. ಮಹಾರೌರವ, ಕ್ರಕಚ, ಕಾಲಸೂತ್ರ, ಯಂತ್ರಪೀಡನಕ, ರೌದ್ರ, ಮಥನ, ಕುಂಭವಾಲುಕ ಮೊದಲಾದ ನರಕಗಳಲ್ಲಿ ಯಾತನೆಗಳನ್ನನುಭವಿಸುವೆ.''

೩೪. ಪಾರ್ವತಿಯೆ! ಇಂತು ಹೇಳುತ್ತಿರುವ ಬ್ರಾಹ್ಮಣನ ಸತ್ಸಹವಾಸದ ಫಲವಾಗಿ ಆ ಪಿಶಾಚನಿಗೆ ತನ್ನ ಹಿಂದಿನ ನೀಚಜನ್ಮದ ಸ್ಮರಣೆಯುಂಟಾಯಿತು.

೩೫. ದುಃಖಸಂತಪ್ತನೂ, ನಿಶ್ಚೇಷ್ಟನೂ ಆಗಿ ತನ್ನನ್ನೇ ನಿಂದಿಸಿಕೊಳ್ಳುತ್ತ ಭೂಮಿಯಲ್ಲಿ ಬಿದ್ದು ಹೊರಳಾಡುತ್ತ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು.

ಅಹೋ ಕೇನಾಽಪಿ ಪುಣ್ಯೇನ ಭವತಾ ಸಹದರ್ಶನಂ ।
ಜಾತಂ ಮಮಾಲ್ಪಪುಣ್ಯಸ್ಯ ದೀನಸ್ಯ ಕೃಪಣಸ್ಯ ಚ ॥ ೩೬ ॥
ನಾಸ್ತಿ ಧರ್ಮಸಮಂ ಮಿತ್ರಂ ನಾಸ್ತಿ ಧರ್ಮಸಮಾ ಗತಿಃ ।
ನಾಸ್ತಿ ಧರ್ಮಸಮಂ ತ್ರಾಣಂ ಸ ಚ ನಾಸ್ತಿ ಮಮ ಪ್ರಭೋ ॥ ೩೭ ॥
ಮಗ್ನೋಽಹಂ ದುಃಖಜಲಧೌ ಮಗ್ನೋಽಹಂ ಪಾಪಕರ್ದಮೇ ।
ಭ್ರಾಂತೋಽಹಮಂಧತಮಸಿ ತತಸ್ತ್ವಾಂ ಶರಣಂ ಗತಃ ॥ ೩೮ ॥
ನಮಸ್ತೇಽಸ್ತು ಮಹಾಭಾಗ ಕಿಂ ಕರೋಮಿ ಪ್ರಶಾಧಿ ಮಾಂ ।
ತತ್ತಪೋಬಲನಿರ್ದಿಷ್ಟಮಿದಂ ಪ್ರಾಪ್ತಂ ಮಯಾಽಧುನಾ ॥ ೩೯ ॥
ಏವಂ ನಿಗದತಸ್ತಸ್ಯ ಪಿಶಾಚಸ್ಯ ವರಾನನೇ ।
ಕಥಯಾಮಾಸ ಮಾಹಾತ್ಮ್ಯಂ ಸ ವಿಪ್ರಃ ಶಾಕಟಾಯನಃ ॥ ೪೦ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಆಸಮುದ್ರಗತಾನಿ ವೈ ।
ಕ್ಷೇತ್ರಾಣಿ ಯಾನಿ ಸಂತೀಹ ತೇಷಾಂ ಕ್ಷೇತ್ರಂ ಸುಪುಣ್ಯದಂ ।
ಮಹಾಕಾಲವನಂ ಕ್ಷೇತ್ರಂ ಪ್ರಲಯೇಽಪ್ಯಕ್ಷಯಂ ಗತಂ ॥ ೪೧ ॥

---

೩೬. "ಅಹಾ! ಪುಣ್ಯಹೀನನೂ, ದೀನನೂ, ಕೃಪಣನೂ ಆದ ನನಗೆ ಯಾವುದೊ ಅಲ್ಪವಾದ ಪುಣ್ಯದ ಫಲವಾಗಿ ನಿನ್ನೊಡನೆ ಸಮಾಗಮವು ಲಭಿಸಿತು.

೩೭. ಬ್ರಾಹ್ಮಣೋತ್ತಮನೆ! ಧರ್ಮಕ್ಕೆ ಸಮಾನವಾದ ಸ್ನೇಹಿತನಾಗಲಿ, ಸದ್ಗತಿಯಾಗಲಿ, ಆಶ್ರಯವಾಗಲಿ ಜೀವನಿಗಿಲ್ಲ. ನನಗೆ ಆ ಧರ್ಮವೇ ಇಲ್ಲವಾಗಿರುವುದು.

೩೮. ನಾನು ದುಃಖಸಮುದ್ರದಲ್ಲಿ ಮುಳುಗಿಹೋಗಿರುವೆನು. ಪಾಪದ ಕೆಸರಿನಲ್ಲಿ ಸಿಕ್ಕಿಬಿದ್ದಿರುವೆನು. ಅಂಧತಮಸ್ಸಿನಲ್ಲಿ ಬಿದ್ದು ದಿಕ್ಕುಗಾಣದೆ ನಿನ್ನನ್ನು ಶರಣುಹೊಕ್ಕಿರುವೆನು.

೩೯. ಮಹಾಭಾಗ್ಯಶಾಲಿಯೆ! ನಿನಗೆ ನಮಸ್ಕಾರಮಾಡುವೆನು. ಈಗ ನಾನೇನುಗೈಯಲೆಂಬುದನ್ನು ಅಪ್ಪಣೆ ಮಾಡು. ನಿನ್ನ ತಪೋಬಲದಿಂದಲೇ ನನಗೆ ಈ ಸದವಕಾಶವು ಲಭಿಸಿತು."

೪೦. ಪಾರ್ವತಿಯೆ! ಇಂತು ಬೇಡುತ್ತಿರುವ ಪಿಶಾಚನಿಗೆ ಆ ಶಾಕಟಾಯನ ಬ್ರಾಹ್ಮಣನು ಕ್ಷೇತ್ರದ ಮಾಹಾತ್ಮ್ಯವನ್ನು ಹೇಳಿದನು.

೪೧. "ಸಮುದ್ರಪರ್ಯಂತವಾದ ಭೂಮಂಡಲದಲ್ಲಿ ಎಷ್ಟು ತೀರ್ಥಗಳೂ, ಪುಣ್ಯಕ್ಷೇತ್ರಗಳೂ ಇರುವುವೊ, ಅವುಗಳೆಲ್ಲೆಲ್ಲ ಅತ್ಯಂತ ಪುಣ್ಯಪ್ರದವೂ, ಪ್ರಳಯದಲ್ಲಿಯೂ ನಾಶವನ್ನು ಹೊಂದಲಾರದುದೂ ಆದ ಮಹಾಕಾಲವನವೆಂಬ ಕ್ಷೇತ್ರವೊಂದಿರುವುದು.

ಲಿಂಗಂ ತತ್ರ ಮಹಾಕ್ಷೇತ್ರೇ ಪಿಶಾಚತ್ವವಿನಾಶನಂ ।
ಢುಂಡೇಶ್ವರಸ್ಯ ದೇವಸ್ಯ ದಕ್ಷಿಣೇ ತ್ರಿದಶಾರ್ಚಿತಂ॥ ॥ ೪೨ ॥
ಪೈಶಾಚಂ ವಿದ್ಯತೇ ಭೂಯಃ ಪಿಶಾಚಯೋನಿನಾಶನಂ ।
ತಸ್ಯ ದರ್ಶನಮಾತ್ರೇಣ ಪಿಶಾಚತ್ವಾತ್ಪ್ರಮುಚ್ಯಸೇ ॥ ೪೩ ॥
ತಸ್ಯ ತದ್ವಚನಂ ಶ್ರುತ್ವಾ ಸ ಪಿಶಾಚೋ ವರಾನನೇ ।
ಆಜಗಾಮ ತ್ವರಾಯುಕ್ತೋ ನಮಸ್ಕೃತ್ಯ ದ್ವಿಜಂ ತದಾ ॥ ೪೪ ॥
ಮಹಾಕಾಲವನೇ ಪುಣ್ಯೇ ಸಮೀಹಿತಫಲಪ್ರದೇ ।
ದದರ್ಶ ತತ್ರ ತಲ್ಲಿಂಗಂ ಸ್ನಾತ್ವಾ ಶಿಪ್ರಾಜಲೇ ಶುಭೇ ॥ ೪೫ ॥
ದರ್ಶನಾತ್ತಸ್ಯ ಲಿಂಗಸ್ಯ ಸ ಪಿಶಾಚೋ ವರಾನನೇ ।
ತತ್ಕ್ಷಣಾದ್ದಿವ್ಯದೇಹಸ್ತು ದಿವ್ಯಾಭರಣಭೂಷಿತಃ ॥ ೪೬ ॥
ದಿವ್ಯಂ ವಿಮಾನಮಾರೂಢೋ ಗತೋ ಲೋಕೇ ಸನಾತನೇ ।
ಉದ್ಧೃತ್ಯ ಸಕಲಂ ಗೋತ್ರಂ ಮಾತೃಕಂ ಪೈತೃಕಂ ತಥಾ ॥ ೪೭ ॥

---

೪೨. ಆ ಮಹಾಕ್ಷೇತ್ರದಲ್ಲಿ ಪಿಶಾಚತ್ವವನ್ನು ಹೋಗಲಾಡಿಸುವ ಮಹಾಲಿಂಗವೊಂದು ಢುಂಢೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿರುವುದು. ಅದನ್ನು ದೇವತೆಗಳೂ ಪೂಜಿಸುತ್ತಿರುವರು.

೪೩. ಪಿಶಾಚಜನ್ಮದ ಸಂಭವವನ್ನೂ ಕಳೆಯುವ ಅದಕ್ಕೆ ಪಿಶಾಚೇಶ್ವರನೆಂದೇ ಹೆಸರಾಗಿರುವುದು. ಅದರ ದರ್ಶನಮಾತ್ರದಿಂದಲೇ ನೀನು ಪಿಶಾಚತ್ವದಿಂದ ಬಿಡುಗಡೆಯನ್ನು ಹೊಂದುವೆ."

೪೪. ಪಾರ್ವತಿಯೆ! ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ಪಿಶಾಚನು ಆತನಿಗೆ ನಮಸ್ಕರಿಸಿ ಸಂಭ್ರಮದಿಂದ ಆ ಮಹಾಕ್ಷೇತ್ರವನ್ನು ಸೇರಿದನು.

೪೫. ಪುಣ್ಯಪ್ರದೇಶವೂ ಸರ್ವಾಭೀಷ್ಟಪ್ರದಾಯಕವೂ ಆದ ಮಹಾಕಾಲವನಕ್ಕೆ ಬಂದು ಶುಭ್ರವಾದ ಶಿಪ್ರಾನದಿಯ ಜಲದಲ್ಲಿ ಮಿಂದು ಆ ಮಹಾಲಿಂಗವನ್ನು ನೋಡಿದನು.

೪೬. ಕಾತ್ಯಾಯನಿಯೆ! ಆ ಲಿಂಗದ ದರ್ಶನವನ್ನು ಮಾಡಿದ ಕ್ಷಣದಲ್ಲಿಯೇ ಪಿಶಾಚನು ದಿವ್ಯಶರೀರವುಳ್ಳವನೂ, ದಿವ್ಯಭೂಷಣಾಲಂಕೃತನೂ ಆಗಿ ಬೆಳಗಿದನು.

೪೭. ಮತ್ತು ತನ್ನ ತಾಯಿತಂದೆಯರ ಕುಲಗಳೆರಡರಲ್ಲಿ ಎಲ್ಲರನ್ನೂ ಉದ್ಧಾರಮಾಡಿ ದಿವ್ಯವಿಮಾನದಲ್ಲಿ ಕುಳಿತು ಶಾಶ್ವತವಾದ ಲೋಕವನ್ನು ಸೇರಿದನು.

ದೃಷ್ಟ್ವಾ ತನ್ಮಹದಾಶ್ಚರ್ಯಂ ಮಾಹಾತ್ಮ್ಯಾತಿಶಯಂ ಪ್ರಿಯೇ ।
ಪ್ರೋಕ್ತಂ ದೇವೈರ್ವಿಮಾನಸ್ಥೈಃ ಸಿದ್ಧೈರಾಕಾಶಗೈಸ್ತಥಾ ॥ ೪೮ ॥
ಪಿಶಾಚೋಽಪಿ ಗತಃ ಸ್ವರ್ಗಮಸ್ಯ ಲಿಂಗಸ್ಯ ದರ್ಶನಾತ್ ।
ಅತೋ ದೇವಃ ಸ ವಿಖ್ಯಾತೋ ಭವಿಷ್ಯತಿ ಮಹೀತಲೇ ।
ಪಿಶಾಚೇಶ್ವರಸಂಜ್ಞಸ್ತು ಸರ್ವಪಾಪಪ್ರಣಾಶನಃ ॥ ೪೯ ॥
ಯೇ ಪಶ್ಯಂತಿ ನರಾ ದೇವಿ ಪಿಶಾಚೇಶ್ವರಸಂಜ್ಞಕಂ ।
ತೇಷಾಂ ಹಿ ಪಿತರಃ ಸದ್ಯೋ ಯೇ ಚಾಽಪಿ ನಿರಯೇ ಸ್ಥಿತಾಃ ।
ಪಿಶಾಚತ್ವಾದ್ವಿಮುಚ್ಯಂತೇ ಸ್ವರ್ಗಂ ಯಾಂತಿ ನ ಸಂಶಯಃ ॥ ೫೦ ॥
ಅಶ್ವಮೇಧಸ್ಯ ಯಜ್ಞಸ್ಯ ಸಮ್ಯಗಿಷ್ಟಸ್ಯ ಯತ್ಫಲಂ ।
ತತ್ಫಲಂ ಲಭತೇ ಸೋಽಪಿ ಪಿಶಾಚೇಶ್ವರದರ್ಶನಾತ್ ॥ ೫೧ ॥
ಗಯಾಯಾಂ ಪಿಂಡದಾನೇನ ಯತ್ಪುಣ್ಯಂ ಸಮುದಾಹೃತಂ ।
ತತ್ಪುಣ್ಯಮಧಿಕಂ ಜ್ಞೇಯಂ ಪಿಶಾಚೇಶ್ವರದರ್ಶನಾತ್ ॥ ೫೨ ॥
ಯೇ ಪಶ್ಯಂತಿ ಚತುರ್ದಶ್ಯಾಂ ಪಿಶಾಚೇಶ್ವರಸಂಜ್ಞಕಂ ।
ಪ್ರೇತತ್ವಂ ಚ ಪಿಶಾಚತ್ವಂ ಕುಲೇ ತೇಷಾಂ ನ ಜಾಯತೇ ॥ ೫೩ ॥

---

೪೮. ಈ ಮಹಾಶ್ಚರ್ಯವನ್ನೂ, ಲಿಂಗದ ಮಹಿಮಾತಿಶಯವನ್ನೂ ನೋಡಿ ವಿಮಾನಗಳಲ್ಲಿ ಕುಳಿತಿದ್ದ ದೇವತೆಗಳೂ, ಆಕಾಶದಲ್ಲಿ ಸಂಚರಿಸುತ್ತಿದ್ದ ಸಿದ್ಧರೂ ಹೇಳಿದರು.

೪೯. "ಈ ಮಹಾಲಿಂಗದ ದರ್ಶನದಿಂದ ಪಿಶಾಚನೂ ಸ್ವರ್ಗಲೋಕಕ್ಕೆ ಹೊರಟುಹೋದುದರಿಂದ ಈ ಮಹಾದೇವನು ಇನ್ನುಮೇಲೆ ಭೂಲೋಕದಲ್ಲಿ ಪಿಶಾಚೇಶ್ವರನೆಂಬ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆದು ಭಕ್ತರ ಸಮಸ್ತ ಪಾತಕಗಳನ್ನೂ ಕಳೆಯುವನು."

೫೦. ದೇವಿಯೆ! ಯಾವ ಮಾನವರು ಈ ಪಿಶಾಚೇಶ್ವರಮಹಾಲಿಂಗವನ್ನು ನೋಡುವರೊ, ಅವರ ಪಿತೃಗಳು ಮಹಾ ನರಕಗಳಲ್ಲಿದ್ದರೂ, ಪಿಶಾಚಜನ್ಮಗಳನ್ನು ಪಡೆದಿದ್ದರೂ ತತ್ಕ್ಷಣದಲ್ಲಿಯೇ ಮುಕ್ತರಾಗಿ ಸ್ವರ್ಗಲೋಕಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ.

೫೧. ಆ ಮನುಷ್ಯನೂ ಪಿಶಾಚೇಶ್ವರದರ್ಶನದಿಂದ ಅಶ್ವಮೇಧ ಮಹಾಯಜ್ಞವನ್ನು ಸಾಂಗವಾಗಿ ನೆರವೇರಿಸಿದ ಪುಣ್ಯಕ್ಕೆ ಭಾಗಿಯಾಗುವನು.

೫೨. ಗಯೆಯಲ್ಲಿ ಪಿಂಡಗಳನ್ನೀಯುವುದರಿಂದ ಸತ್ಪುತ್ರನಿಗೆ ಯಾವ ಪುಣ್ಯವೆಂದು ಹೇಳಲ್ಪಟ್ಟಿರುವುದೊ, ಅದನ್ನೇ ಈ ಪಿಶಾಚೇಶ್ವರನ ದರ್ಶನದಿಂದಲೂ ಪಡೆಯಬಹುದು.

೫೩. ಯಾರು ಚತುರ್ದಶಿಯ ದಿನದಲ್ಲಿ ಈ ಪಿಶಾಚೇಶ್ವರನನ್ನು ನೋಡು-

ನ ವಿಯೋನಿಂ ನರೋ ಯಾತಿ ನರಕಂ ಚ ನ ಪಶ್ಯತಿ ।
ಪ್ರಸಂಗೇನಾಽಪಿ ಯಃ ಪಶ್ಯೇತ್ಪಿಶಾಚೇಶ್ವರಸಂಜ್ಞಕಂ ॥ ೫೪ ॥
ಸರ್ವೈಶ್ವರ್ಯಸಮಾಯುಕ್ತಃ ಸರ್ವಬಂಧುಸಮನ್ವಿತಃ ।
ಮೋದತೇ ಪಿತೃಲೋಕೇ ಸ ಪಿಶಾಚೇಶ್ವರದರ್ಶನಾತ್ ॥ ೫೫ ॥
ಕೀರ್ತನಾನ್ಮುಚ್ಯತೇ ಪಾಪಾದ್ದೃಷ್ಟ್ವಾ ಸ್ವರ್ಗಂ ಚ ಗಚ್ಛತಿ ।
ಸ್ಪರ್ಶನಾದಸ್ಯ ಲಿಂಗಸ್ಯ ಪುನಾತ್ಯಾಸಪ್ತಮಂ ಕುಲಂ ॥ ೫೬ ॥
ತದೈವ ಸ ನರೋ ಮುಕ್ತಃ ಸಂಸಾರನಿಗಡಾದಿಭಿಃ ।
ಯದೈವ ವೀಕ್ಷತೇ ಲಿಂಗಂ ಪಿಶಾಚೇಶ್ವರಸಂಜ್ಞಕಂ ॥ ೫೭ ॥
ಯಜ್ಞಾನಾಂ ತಪಸಾಂ ಚೈವ ದಾನಾನಾಂ ಚೈವ ಯತ್ಫಲಂ ।
ತತ್ಫಲಂ ಕೋಟಿಗುಣಿತಂ ಜಾಯತೇ ತಸ್ಯ ದರ್ಶನಾತ್ ॥ ೫೮ ॥
ಯದಿ ಪಶ್ಯೇಚ್ಚತುರ್ದಶ್ಯಾಂ ವೈಶಾಖೇ ಕಾರ್ತಿಕೇ ತಥಾ ।
ತಸ್ಯ ಪುಣ್ಯಮಸಂಖ್ಯಾತಂ ಜಾಯತೇ ನಾಽತ್ರ ಸಂಶಯಃ ॥ ೫೯ ॥

---

ವರೊ, ಅವರ ಕುಲದಲ್ಲೆಂದಿಗೂ ಯಾರೂ ಪ್ರೇತಗಳಾಗಲಿ ಪಿಶಾಚಗಳಾಗಲಿ ಆಗುವುದಿಲ್ಲ.

೫೪. ಯಾರು ಪಿಶಾಚೇಶ್ವರಮಹಾಲಿಂಗವನ್ನು ಪ್ರಸಂಗವಶದಿಂದ ನೋಡಿದರೂ ನೀಚಯೋನಿಗಳಲ್ಲಿ ಜನಿಸುವುದಿಲ್ಲ. ಮತ್ತು ನರಕವನ್ನೂ ನೋಡುವುದಿಲ್ಲ.

೫೫. ಇದರ ದರ್ಶನಲಾಭದಿಂದ ಮಾನವರು ಸರ್ವೈಶ್ವರ್ಯಗಳನ್ನು ಹೊಂದಿ ಸಮಸ್ತ ಬಂಧುಗಳಿಂದ ಪರಿವಾರಿತನಾಗಿ ಪಿತೃಲೋಕದಲ್ಲಿ ಆನಂದದಿಂದಿರುವನು.

೫೬. ಯಾವ ಮಾನವನೇ ಆದರೂ ಈ ಮಹಾಲಿಂಗವನ್ನು ಸ್ತೋತ್ರ ಮಾಡುವುದರಿಂದ ಪಾಪಗಳನ್ನು ಕಳೆದುಕೊಳ್ಳುವನು. ದರ್ಶನಮಾತ್ರದಿಂದಲೇ ಸ್ವರ್ಗಕ್ಕೆ ಹೋಗುವನು. ಮುಟ್ಟಿ ಸೇವಿಸುವುದರಿಂದ ಹಿಂದೆಯೂ ಮುಂದೆಯೂ ಏಳು ತಲೆಗಳವರೆಗೆ ತನ್ನ ಕುಲದವರನ್ನುದ್ಧರಿಸುವನು.

೫೭. ಈ ಪಿಶಾಚೇಶ್ವರಲಿಂಗವನ್ನು ಯಾವಾಗ ನರನು ನೋಡುವನೊ, ಆಗಲೇ ಅವನಿಗೆ ಸಂಸಾರಬಂಧನಾದಿ ದುಃಖಗಳಿಂದ ವಿಮೋಚನೆಯಾಗುವುದು.

೫೮. ಆ ಲಿಂಗದ ಒಂದು ದರ್ಶನದಿಂದಲೇ ಯಜ್ಞಗಳು, ತಪಸ್ಸುಗಳು, ದಾನಗಳು ಮುಂತಾದುವುಗಳ ಫಲವು ಕೋಟಿಗುಣಿತವಾಗಿ ಲಭಿಸುವುದು.

೫೯. ವೈಶಾಖ, ಕಾರ್ತಿಕಮಾಸಗಳ ಚತುರ್ದಶೀತಿಥಿಗಳಲ್ಲಿ ಈ ಪಿಶಾಚೇಶ್ವರನ ದರ್ಶನವನ್ನು ಮಾಡಲು ಮನುಷ್ಯನ ಪುಣ್ಯರಾಶಿಯು ಅಪಾರವಾಗುವುದರಲ್ಲಿ ಸಂದೇಹವಿಲ್ಲ.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪಿಶಾಚೇಶ್ವರದೇವಸ್ಯ ಶ್ರೂಯತಾಂ ಸಂಗಮೇಶ್ವರಂ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪಿಶಾಚೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಷಷ್ಟಿತಮೋಽಧ್ಯಾಯಃ

---

೬೦. ದೇವಿಯೆ! ಪಿಶಾಚೇಶ್ವರನ ಮಹಾಮಹಿಮೆಯನ್ನು ಕುರಿತ ಪಾತಕ ನಾಶಕವಾದ ಚರಿತ್ರೆಯನ್ನು ನಿನಗೆ ಹೇಳಿದೆನು. ಇನ್ನು ಸಂಗಮೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪಿಶಾಚೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಸಪ್ತತಿತಮೋಽಧ್ಯಾಯಃ

## ಸಂಗಮೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಏಕೋನಸಪ್ತತಿಂ ದೇವಿ ಶೃಣು ಪಾರ್ವತಿ ಯತ್ನತಃ ।
ಯಸ್ಯ ದರ್ಶನಮಾತ್ರೇಣ ಸಂಗಮೋ ಜಾಯತೇ ಸದಾ ॥ ೧ ॥
ಕಲಿಂಗವಿಷಯೇ ದೇವಿ ಸುಬಾಹುರ್ನಾಮ ಪಾರ್ಥಿವಃ ।
ಬಭೂವ ಭುವಿ ವಿಖ್ಯಾತೋ ಯಜ್ವಾ ಪರಮಧಾರ್ಮಿಕಃ ॥ ೨ ॥
ತಸ್ಯ ಪತ್ನೀ ವಿಶಾಲಾಕ್ಷೀ ದುಹಿತಾ ದೃಢಧನ್ವನಃ ।
ಕಾಂಚೀಪುರನಿವಾಸಸ್ಯ ಕ್ಷಾತ್ರವ್ರತರತಸ್ಯ ಚ ॥ ೩ ॥
ಪರಸ್ಪರಾನುರಾಗತ್ವಾತ್ಪರಾ ಪ್ರೀತಿರಭೂತ್ತಯೋಃ ।
ತಸ್ಯ ರಾಜ್ಞಃ ಶಿರೋರ್ತಿಸ್ತು ಮಧ್ಯಾಹ್ನೇ ಜಾಯತೇ ಸದಾ ॥ ೪ ॥
ಆಯುರ್ವೇದವಿದಾಂ ಮುಖ್ಯೈಃ ಶರೀರಸ್ಯ ಚಿಕಿತ್ಸಕೈಃ ।
ತೈಃ ಪ್ರಣೀತಾಃ ಪ್ರಿಯೇ ಯೋಗಾ ವ್ಯಥಾ ವೃದ್ಧಿರ್ದಿನೇದಿನೇ ॥ ೫ ॥

---

## ಕನ್ನಡದ ಅನುವಾದ

### ಸಂಗಮೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ ! ಇನ್ನು ಅರುವತ್ತೊಂಬತ್ತನೆಯ ಮಹಾಲಿಂಗದ ಪುಣ್ಯಕಥೆಯನ್ನು ಕೇಳು. ಅದನ್ನು ನೋಡುವುದರಿಂದ ಯಾವಾಗಲೂ ಇಷ್ಟಮಿತ್ರಾದಿಗಳ ಸಹವಾಸವೇ ಲಭಿಸುತ್ತಿರುವುದು.

೨. ದೇವಿಯೆ ! ಕಳಿಂಗದೇಶದಲ್ಲಿ ಸುಬಾಹುವೆಂಬ ಹೆಸರಿನ ಮಹಾರಾಜನಿದ್ದನು. ಆತನು ಯಜ್ಞಶೀಲನೆಂದೂ, ಮಹಾ ಧಾರ್ಮಿಕನೆಂದೂ ಭೂಲೋಕದಲ್ಲಿ ಪ್ರಖ್ಯಾತನಾಗಿದ್ದನು.

೩. ಆತನಿಗೆ ಕಾಂಚೀನಗರದ ನಿವಾಸಿಯೂ, ಮಹಾ ಕ್ಷತ್ರಿಯನೂ ಆದ ದೃಢಧನ್ವನೆಂಬವನ ಪುತ್ರಿಯಾದ ವಿಶಾಲಾಕ್ಷಿಯೆಂಬ ಸುದತಿಯು ಮಡದಿಯಾಗಿದ್ದಳು.

೪. ಅನ್ಯೋನ್ಯಾನುರಾಗದಿಂದ ಕೂಡಿದ್ದ ಅವರಲ್ಲಿ ಅಧಿಕವಾದ ಪ್ರೀತಿಯುಂಟಾಗಿದ್ದಿತು. ಆದರೆ ಆ ರಾಜನಿಗೆ ನಿತ್ಯವೂ ಮಧ್ಯಾಹ್ನಕಾಲದಲ್ಲಿ ತಲೆನೋವು ಬರುತ್ತಿದ್ದಿತು.

೫. ಆಯುರ್ವೇದದಲ್ಲಿ ಮಹಾ ನಿಪುಣರಾದ ಶರೀರವ್ಯಾಧಿಗಳ ಚಿಕಿತ್ಸಕರೆಲ್ಲರೂ ಅನೇಕ ವಿಧಗಳಾದ ಔಷಧಗಳನ್ನು ಮಾಡಿದರೂ ಆ ರೋಗವು ದಿನ ದಿನಕ್ಕೆ ಹೆಚ್ಚುತ್ತಲೇ ಇದ್ದಿತು.

ಏವಂ ಬಹುತರೇ ಕಾಲೇ ಗತೇ ದೇವಿ ಮಹೀಪತಿಂ ।
ಪ್ರತ್ಯುವಾಚ ವಿಶಾಲಾಕ್ಷೀ ಭರ್ತುರ್ದುಃಖೇನ ಪೀಡಿತಾ ॥ ೬ ॥
ಕಥಮೇಷಾ ಶಿರೋ ರೋಗೇ ಜರಾ ತೇ ಪೃಥಿವೀಪತೇ ।
ವೈದ್ಯಾಶ್ಚ ಬಹವೋ ದೇವ ನಾನಾಶಾಸ್ತ್ರವಿಶಾರದಾಃ ।
ಪ್ರಯತಂತೇಽಸ್ಯ ನಾಶಾಯ ತಥಾಪ್ಯೇಷ ನ ಶಾಮ್ಯತಿ ॥ ೭ ॥
ಏವಂ ಸ ಪ್ರಿಯಯಾ ಪ್ರೋಕ್ತಃ ಸುಬಾಹುಃ ಪೃಥಿವೀಪತಿಃ ।
ಪ್ರತ್ಯುವಾಚ ಪ್ರಿಯಾಂ ಭಾರ್ಯಾಂ ಪ್ರೇಮ್ಣಾ ಪ್ರಣಯವತ್ಸಲಾಂ ॥ ೮ ॥
ಸುಖದುಃಖಾಶ್ರಯಂ ದೇವಿ ಶರೀರಂ ಸರ್ವದೇಹಿನಾಂ ।
ಪೂರ್ವಕರ್ಮಾನುಸಾರೇಣ ಸುಖಂ ದುಃಖಂ ಚ ಜಾಯತೇ ॥ ೯ ॥
ಇತಿ ಸಂಬೋಧಿತಾ ರಾಜ್ಞೀ ತೇನ ರಾಜ್ಞಾ ವರಾಸನೇ ।
ಪುನಃ ಪ್ರೋವಾಚ ಪಾರ್ಥೇನ ತಮೇವಾರ್ಥಂ ಸುದುಃಖಿತಾ ॥ ೧೦ ॥
ಯದಾ ಸಾ ವಾರಿತಾಽತ್ಯರ್ಥಂ ಪೃಚ್ಛತ್ಯೇವ ಪುನಃ ಪುನಃ ।
ತದಾ ರಾಜಾ ಪ್ರಹಸ್ಯೈವ ತಾಂ ಚ ರಾಜ್ಞೀಮುವಾಚ ಹ ॥ ೧೧ ॥
ಯದಿ ತ್ವಂ ಶ್ರೋತುಕಾಮಾಽಸಿ ರೋಗಸ್ಯಾಸ್ಯ ಸಮುದ್ಭವಂ ।
ಕಾರಣಂ ತತ್ತ್ವತೋ ದೇವಿ ನಾಖ್ಯಾಸ್ಯಾಮ್ಯಹಮತ್ರ ವೈ ॥ ೧೨ ॥

---

೬. ದೇವಿಯೆ! ಇಂತು ಬಹಳ ಕಾಲವು ಕಳೆಯಲು ಒಮ್ಮೆ ಗಂಡನ ಆ ಬೇನೆಯಿಂದ ದುಃಖಿತಳಾದ ವಿಶಾಲಾಕ್ಷಿಯು ಆತನಿಗೆ ಹೇಳಿದಳು.

೭. "ಮಹಾರಾಜ! ಈ ಶಿರೋರೋಗದಿಂದಲೇ ನಿನಗೆ ಮುಪ್ಪು ಬರುವುದಲ್ಲ! ಬಹುಶಾಸ್ತ್ರವಿಶಾರದರಾದ ವೈದ್ಯರೆಲ್ಲರೂ ಇದರ ನಾಶಕ್ಕಾಗಿ ಪ್ರಯತ್ನಿಸುತ್ತಿದ್ದರೂ ಇದು ಶಮನವಾಗಲಿಲ್ಲ."

೮. ಇಂತು ಪ್ರಣಯಾನ್ವಿತೆಯಾಗಿ ಪ್ರಶ್ನೆಮಾಡಿದ ಪ್ರಿಯಪತ್ನಿಯನ್ನು ಕುರಿತು ಸುಬಾಹುಮಹಾರಾಜನು ಆಕೆಗೆ ಸಮಾಧಾನವನ್ನು ಹೇಳಿದನು.

೯. "ದೇವಿಯೆ! ಸಕಲ ಜೀವರಿಗೂ ದೇಹವು ಸುಖದುಃಖಗಳೆರಡನ್ನೂ ಕೊಡುತ್ತಿರುವುದು. ಪೂರ್ವಕರ್ಮದ ಫಲವಾಗಿ ಸುಖವೂ, ದುಃಖವೂ ಸಂಭವಿಸುವುವಷ್ಟೆ."

೧೦. ಇಂತೆಂದು ರಾಜನು ಸಮಾಧಾನವನ್ನು ಹೇಳಿದರೂ ರಾಜನಲ್ಲಿ ಸ್ನೇಹಾಧಿಕ್ಯದಿಂದ ಕೂಡಿದ್ದ ಪತ್ನಿಯು ಮತ್ತೆ ಮತ್ತೆ ಅದನ್ನೇ ಕೇಳುತ್ತಿದ್ದಳು.

೧೧. ರಾಜನು ಅನೇಕ ಸಲ ವಿಡಂಬಿಸಿದರೂ ಆಕೆಯು ಪುನಃ ಪುನಃ ಅದನ್ನೇ ಕೇಳುತ್ತಿರುವುದನ್ನು ಕಂಡು ಒಮ್ಮೆ ರಾಜನು ನಗುತ್ತ ಆಕೆಗೆ ಇಂತೆಂದನು.

೧೨. "ದೇವಿಯೆ! ಈ ಶಿರೋರೋಗವುಂಟಾದುದಕ್ಕೆ ಕಾರಣವನ್ನು ಕೇಳಲು ನಿನಗೆ ಅಷ್ಟು ಕುತೂಹಲವಿದ್ದರೆ, ಅದನ್ನು ನಾನು ಇಲ್ಲಿ ತಿಳಿಸಲಾರೆನು.

ಮಹಾಕಾಲವನಂ ಗತ್ವಾ ಸಿದ್ಧಗಂಧರ್ವಸೇವಿತಂ ।
ತತ್ರ ತೇ ಕಥಯಿಷ್ಯಾಮಿ ಯದಿ ಕೌತೂಹಲಂ ತವ ॥ ೧೩ ॥
ಶ್ವಃ ಪ್ರಭಾತೇ ಗಮಿಷ್ಯಾಮಿ ತ್ವಯಾ ಸಾರ್ಧಂ ಶುಚಿಸ್ಮಿತೇ ।
ಇತಿ ತಸ್ಯ ವಚಃ ಶ್ರುತ್ವಾ ಸಾ ರಾಜ್ಞೀ ವಿಸ್ಮಿತಾ ಸ್ಥಿತಾ ।
ಉತ್ಸುಕಾ ಗಮನಾರ್ಥಾಯ ಮಹಾಕಾಲವನಂ ಶುಭಂ ॥ ೧೪ ॥
ಅಥ ಸಾ ರಜನೀ ವೃತ್ತಾ ಪ್ರಭಾತೇ ನೃಪಸತ್ತಮಃ ।
ವ್ರತಸ್ಥೋ ಭಾರ್ಯಯಾ ಸಾರ್ಧಂ ಸೈನ್ಯೇನ ಮಹತಾ ವೃತಃ ॥ ೧೫ ॥
ಆಜಗಾಮ ಕ್ರಮೇಣೈವ ಮಹಾಕಾಲವನಂ ಶುಭಂ ।
ಆವಾಸಂ ವಿದಧೇ ಧೀಮಾಂಛಿಪ್ರಾತೀರೇ ನೃಪಸ್ತದಾ ॥ ೧೬ ॥
ಪಾತಾಲವಾಹಿನೀ ತತ್ರ ಗಂಗಾ ತ್ರಿಪಥಗಾಮಿನೀ ।
ದ್ವಿತೀಯಾ ನೀಲಗಂಗಾ ಚ ಶಿಪ್ರಯಾ ಸಹಸಂಗತಾ ॥ ೧೭ ॥
ತಾಸಾಂ ಚ ಸಂಗಮಸ್ತತ್ರ ತಲ್ಲಿಂಗಂ ಸಂಗಮೇಶ್ವರಂ ।
ಪೂಜಿತಂ ಗಂಗಯಾ ಸಾರ್ಧಂ ಶಿಪ್ರಯಾ ನೀಲಗಂಗಯಾ ॥ ೧೮ ॥

---

೧೩. ಸಿದ್ಧಗಂಧರ್ವಾದಿಗಳಿಂದ ಸಂಸೇವಿತವಾದ ಮಹಾಕಾಲವನಕ್ಕೆ ಹೋಗೋಣ. ನಿನಗೆ ಕುತೂಹಲವಿದ್ದರೆ ಅಲ್ಲಿ ಇದರ ಕಾರಣವನ್ನು ಹೇಳುತ್ತೇನೆ.

೧೪. ಮಂಗಳಮುಖಿಯೆ! ನಾನು ನಾಳೆ ಪ್ರಾತಃಕಾಲದಲ್ಲಿ ನಿನ್ನೊಡನೆ ಅಲ್ಲಿಗೆ ಹೊರಡುವವನಿದ್ದೇನೆ.'' ಇಂತೆಂದ ಮಹಾರಾಜನ ಮಾತನ್ನು ಕೇಳಿ ಆ ರಾಣಿಯು ಮತ್ತೂ ಉತ್ಸುಕಳಾಗಿ ಪವಿತ್ರವಾದ ಮಹಾಕಾಲವನಕ್ಷೇತ್ರಕ್ಕೆ ಹೊರಡಲನುವಾದಳು.

೧೫. ಆ ರಾತ್ರಿಯು ಕಳೆದು ಬೆಳಗಾಗಲು ಮಹಾರಾಜನು ದೊಡ್ಡ ಸೈನ್ಯದಿಂದ ಪರಿವಾರಿತನಾಗಿ ಹೆಂಡತಿಯನ್ನೂ ಕರೆದುಕೊಂಡು ಮಹಾಕಾಲವನಕ್ಕೆ ಪ್ರಯಾಣವನ್ನು ಬೆಳಸಿದನು.

೧೬. ದಿನದಿನಕ್ಕೂ ಸ್ವಲ್ಪ ಸ್ವಲ್ಪ ಮುಂದುವರೆದು ಕಾಲಕ್ರಮದಲ್ಲಿ ಮಹಾಮೇಧಾವಿಯಾದ ಆ ರಾಜೇಂದ್ರನು ಮಹಾಕಾಲವನಪ್ರದೇಶವನ್ನು ಸೇರಿ ಶಿಪ್ರಾನದಿಯ ದಡದಲ್ಲಿ ಬಿಡಾರಮಾಡಿದನು.

೧೭. ಅಲ್ಲಿ ಪಾತಾಲವಾಹಿನಿಯೂ, ತ್ರಿಪಥಗಾಮಿನಿಯೂ ಆದ ಗಂಗೆಯೂ, ನೀಲಗಂಗೆಯೂ ಶಿಪ್ರಾನದಿಯೊಡನೆ ಸೇರುವ ಪುಣ್ಯತೀರ್ಥವಿರುವುದು.

೧೮. ಅವುಗಳು ಮಿಲನವಾಗುವ ಸ್ಥಳದಲ್ಲಿಯೇ ಸಂಗಮೇಶ್ವರಮಹಾಲಿಂಗವಿರುವುದು. ಅದನ್ನು ಗಂಗಾ, ಶಿಪ್ರಾ, ನೀಲಗಂಗಾದೇವಿಯರೂ ಪೂಜಿಸುತ್ತಿರುವರು.

ಅಥ ಪ್ರಾಪ್ತೇ ಸುಬಾಹೌ ಚ ಸಾ ರಾಜ್ಞೀ ವಿಸ್ಮಯಾನ್ವಿತಾ ।
ಪಪ್ರಚ್ಛ ಪ್ರಣಯೋಪೇತಾ ಕಥ್ಯತಾಮತ್ರ ಕಾರಣಂ ।
ಯತ್ತ್ವಯೋಕ್ತಂ ಪುರಾ ದೇವ ಕಥಯಿಷ್ಯಾಮಿ ತತ್ರ ವೈ ॥ ೧೯ ॥
ಏವಮುಕ್ತಃ ಸುಬಾಹುಸ್ತು ಪ್ರಿಯಯಾ ಪೃಥಿವೀಪತಿಃ ।
ಪ್ರತ್ಯುವಾಚ ಪ್ರಿಯಾಂ ಪ್ರೇಮ್ಣಾ ಪ್ರಹಸ್ಯ ಚ ಪುನಃ ಪುನಃ ॥ ೨೦ ॥
ಸುಖಂ ಸ್ವಪಿಹಿ ಭದ್ರಾಂಗಿ ಶ್ರಾಂತಾ ವಯಮನಿಂದಿತೇ ।
ಪ್ರಭಾತೇ ಕಥಯಿಷ್ಯಾಮಿ ಶಿರೋರೋಗಸ್ಯ ಕಾರಣಂ ॥ ೨೧ ॥
ಅಥ ಸಾ ರಜನೀ ವೃತ್ತಾ ಪ್ರಭಾತೇ ನೃಪಸತ್ತಮಃ ।
ಕಥಯಾಮಾಸ ಮಾಹಾತ್ಮ್ಯಂ ದೇವಸ್ಯ ಪರಮೇಷ್ಠಿನಃ ॥ ೨೨ ॥
ಅಹಮಾಸಂ ಕುಶೂದ್ರಸ್ತು ಸರ್ವದಾ ವೇದನಿಂದಕಃ ।
ವಿಶ್ವಾಸಘಾತಕೋ ನಿತ್ಯಂ ತ್ವಮಪ್ಯೇವಂ ತಥಾ ವಿಧಾ ॥ ೨೩ ॥
ಪುತ್ರೋ ಜಾತಸ್ತು ದುಃಶೀಲೋ ದೇವಬ್ರಾಹ್ಮಣವಂಚಕಃ ।
ಕುರೂಪಃ ಕರ್ಕಶೋ ದುಷ್ಟಃ ಪ್ರಕೃತ್ಯಾ ಪಾಪಪೂರುಷಃ ॥ ೨೪ ॥

---

೧೯. ಸುಬಾಹುವು ಅಲ್ಲಿ ಬಿಡಾರವನ್ನು ಮಾಡಲು ಕುತೂಹಲಾನ್ವಿತೆಯಾದ ಆತನ ರಾಣಿಯು ಪ್ರೀತಿಯಿಂದ ಮತ್ತೆ ಕೇಳಿದಳು: "ಮಹಾರಾಜನೆ! ಹಿಂದೆ ನೀನು ನಿನ್ನ ಶಿರೋರೋಗಕ್ಕೆ ಕಾರಣವನ್ನು ಇಲ್ಲಿ ತಿಳಿಸುವೆನೆಂದು ಹೇಳಿರಲಿಲ್ಲವೆ. ಅದನ್ನು ದಯವಿಟ್ಟು ತಿಳಿಸು."

೨೦. ಇಂತು ಬೇಡಿದ ಆ ಪ್ರಿಯಪತ್ನಿಯ ಕುತೂಹಲವನ್ನು ಕಂಡು ಸುಬಾಹುವು ಮತ್ತೆ ಮತ್ತೆ ನಗುತ್ತ ಆಕೆಗೆ ಹೇಳಿದನು:

೨೧. "ಮಂಗಳಾಂಗಿಯೆ! ಇಂದು ಸುಖವಾಗಿ ನಿದ್ರೆಮಾಡು. ನಾನು ಬಹಳ ಆಯಾಸಗೊಂಡಿರುವೆನು. ನಾಳೆ ಬೆಳಗಾಗಲು ನನ್ನ ಶಿರೋರೋಗದ ಕಾರಣವನ್ನು ತಿಳಿಸುತ್ತೇನೆ."

೨೨. ಅಂದಿನ ರಾತ್ರಿಯೂ ಕಳೆದುಹೋಯಿತು. ಪ್ರಭಾತವಾಗಲು ಮಹಾರಾಜನು ಹೆಂಡತಿಗೆ ಮಹೇಶ್ವರನ ಮಾಹಾತ್ಮ್ಯವನ್ನೊಳಗೊಂಡಿರುವ ಕಥೆಯನ್ನು ಹೇಳಲುಪಕ್ರಮಿಸಿದನು.

೨೩. "ದೇವಿಯೆ! ಹಿಂದೆ ನಾನು ನಿತ್ಯವೂ ವೇದಶಾಸ್ತ್ರಗಳನ್ನು ನಿಂದಿಸುವವನೂ, ವಿಶ್ವಾಸಘಾತಕನೂ ಆದ ನೀಚವೃತ್ತಿಯ ಶೂದ್ರನಾಗಿದ್ದೆನು. ನೀನೂ ಆಗ ನನ್ನ ಪತ್ನಿಯೇ ಆಗಿದ್ದೆ.

೨೪. ನಮಗೆ ದುಶ್ಶೀಲನೂ, ದೇವಬ್ರಾಹ್ಮಣರನ್ನು ಹೀಯಾಳಿಸುವವನೂ, ಕುರೂಪಿಯೂ, ಕ್ರೂರನೂ, ದುಷ್ಟನೂ, ಸ್ವಭಾವದಿಂದಲೇ ಪಾಪಿಯೂ ಆದ ಮಗನೊಬ್ಬನಾದನು.

ಅಥ ದೀರ್ಘೇಣ ಕಾಲೇನ ದ್ವಾದಶಾಬ್ದಂ ಭಯಾವಹಾ ।
ಅನಾವೃಷ್ಟಿಸ್ತು ಸಂಜಾತಾ ಸರ್ವಪ್ರಾಣಿಭಯಂಕರೀ ॥ ೨೫ ॥
ವಿಯೋಗಸ್ತು ತ್ವಯಾ ಪ್ರಾಪ್ತೋ ಮಯಾ ಸಾರ್ಧಂ ಸುತೇನ ಚ ।
ತತೋಽಹಂ ದುಃಖಸಂತಪ್ತೋ ವೈರಾಗ್ಯಂ ಪರಮಂ ಗತಃ ॥ ೨೬ ॥
ಇಚ್ಛತಾ ನಿಧನಂ ಸದ್ಯೋ ಮಯಾ ಪ್ರೋಕ್ತಮಿದಂ ವಚಃ ।
ಮಮ ಪುಣ್ಯವಿಹೀನಸ್ಯ ಪಾಪಧ್ಯಾನರತಸ್ಯ ಚ ।
ಸುತೇನ ಭಾರ್ಯಯಾ ಸಾರ್ಧಂ ಸಂಗಮೋ ದುರ್ಲಭಃ ಪುನಃ ॥ ೨೭ ॥
ಕಥಂ ಸ್ವಪಿತಿ ಪಾಪಿಷ್ಠಃ ಕೃತ್ವಾ ಪಾಪಂ ಸುದಾರುಣಂ ।
ಕುಟುಂಬಾರ್ಥೇ ಕರೋತ್ಯೇವಮೇಕಾಕೀ ನಿಸ್ತರತ್ಯಸೌ ॥ ೨೮ ॥
ಧರ್ಮ ಏವ ಪರೋ ಬಂಧುರ್ಧರ್ಮ ಏವ ಪರಾಗತಿಃ ।
ಧರ್ಮೇಣ ಸಾಧ್ಯತೇ ಸರ್ವಂ ತಸ್ಮಾದ್ಧರ್ಮಂ ಸಮಾಶ್ರಯೇತ್ ॥ ೨೯ ॥
ಇತಿ ಚಿಂತಯತೋಽತ್ಯರ್ಥಂ ಮಮ ಪ್ರಾಣಾ ಗತಾಃ ಪ್ರಿಯೇ ।
ವಿವಿಧಾ ಯಾತನಾ ಪ್ರಾಪ್ತಾ ಮಯಾ ನರಕಕೋಟಿಷು ॥ ೩೦ ॥

---

೨೫. ಹೀಗೆ ಕೆಲವು ಕಾಲವು ಕಳೆಯಲು ಸಕಲಪ್ರಾಣಿಗಳಿಗೂ ಮಹಾ ಭಯವನ್ನುಂಟುಮಾಡುವ ಹನ್ನೆರಡುವರ್ಷಗಳ ಮಹಾಕ್ಷಾಮವು ಆ ದೇಶದಲ್ಲಿ ತಲೆದೋರಿತು.

೨೬. ಆಗ ನನಗೆ ನಿನ್ನಿಂದಲೂ, ಮಗನಿಂದಲೂ ವಿಯೋಗವು ಪ್ರಾಪ್ತ ವಾಯಿತು. ಅದರಿಂದ ನಾನು ದುಃಖಗೊಂಡು ತೀವ್ರವಾದ ವೈರಾಗ್ಯವನ್ನು ತಾಳಿದೆನು.

೨೭. ಬೇಗನೆಯೆ ಮರಣವನ್ನಪೇಕ್ಷಿಸುವವನಾಗಿ ನಾನು ಹೇಳತೊಡಗಿ ದೆನು. "ಪುಣ್ಯಲೇಶವಿಲ್ಲದವನೂ, ಪಾಪಗಳ ಚಿಂತನೆಯೆ ಇರುವವನೂ ಆದ ನನಗೆ ಮತ್ತೆ ಹೆಂಡತಿ ಮಕ್ಕಳೊಡನೆ ಸಂಗಮವು ದುರ್ಲಭವೇ ಸರಿ.

೨೮. ಭಯಂಕರವಾದ ಪಾತಕವನ್ನು ಮಾಡಿದ ನೀಚನು ಹೇಗೆ ಸುಖ ನಿದ್ರೆಯನ್ನು ಹೊಂದಿಯಾನು? ಕುಟುಂಬಭರಣಕ್ಕೋಸ್ಕರ ಮಾಡಿದ ಪಾಪ ರಾಶಿಯನ್ನು ಕಟ್ಟಿಕೊಂಡು ಏಕಾಕಿಯಾಗಿಯೇ ಲೋಕಾಂತರಗಳಿಗೆ ಹೋಗುವೆನು.

೨೯. ಧರ್ಮವೇ ಉತ್ತಮವಾದ ಬಂಧುವು. ಧರ್ಮವೇ ಸದ್ಗತಿ ದಾಯಕವು. ಧರ್ಮದಿಂದಲೇ ಸಕಲವನ್ನೂ ಸಾಧಿಸಬಹುದಾದುದರಿಂದ ಮಾನವನು ಧರ್ಮವನ್ನೇ ಆಶ್ರಯಿಸಬೇಕು."

೩೦. ಪ್ರಿಯಳೆ! ಇಂತೆಂದು ನಾನು ಬಹಳವಾಗಿ ಚಿಂತಿಸುತ್ತಿರುವಾಗಲೇ ನಾನೂ ದೇಹವನ್ನು ಬಿಟ್ಟೆನು. ಬಳಿಕ ಅನೇಕ ನರಕಗಳಲ್ಲಿ ಬಹು ವಿಧಗಳಾದ ಯಾತನೆಗಳನ್ನನುಭವಿಸಿದೆನು.

ಅಂತಕಾಲೇಽಪಿ ಧರ್ಮಸ್ಯ ಪ್ರಶಂಸಾ ಯಾ ಮಯಾ ಕೃತಾ ।
ಮತ್ಸ್ಯೋಽಹಂ ತೇನ ಪುಣ್ಯೇನ ಜಾತಃ ಶಿಪ್ರಾಜಲೇ ಶುಭೇ ॥ ೩೧ ॥
ತ್ವಂ ಚ ಶ್ಯೇನೀ ತತೋ ಜಾತಾ ತಸ್ಮಿನ್ನೇವ ವನೋತ್ತಮೇ ।
ಪ್ರಾವೃಟ್ಕಾಲೇಽಥ ಸಂಪ್ರಾಪ್ತೇ ಆಶ್ಲೇಷಾನುಗತೇ ರವೌ ॥ ೩೨ ॥
ನದೀತ್ರಯುರಯೇಣೈವ ನಿಃಸೃತೋಽಹಂ ಜಲಾತ್ತತಃ ।
ತ್ವಯಾ ಶಿರಸಿ ಸಂಪ್ರಾಪ್ತೋ ನಖೈರ್ವಿದ್ಧೋಽಸ್ಮಿ ಸುಂದರಿ ॥ ೩೩ ॥
ಆನೀತೋಽಹಂ ತ್ವಯಾ ದೇವಿ ಸಂಗಮೇಶ್ವರಸನ್ನಿಧೌ ।
ಕೈವರ್ತೈರ್ನಿಧನಂ ಪ್ರಾಪ್ತಂ ತ್ವಯಾ ಸಾರ್ಧಂ ವರಾನನೇ ॥ ೩೪ ॥
ಮ್ರಿಯಮಾಣೇನ ಮೇ ದೃಷ್ಟೋ ದೇವೋಽಸೌ ಸಂಗಮೇಶ್ವರಃ ।
ಶಿಪ್ರಯಾ ಸ್ನಾಪಿತೋಽತ್ಯರ್ಥಂ ಗಂಗಯಾ ನೀಲಗಂಗಯಾ ॥ ೩೫ ॥
ತಸ್ಯ ದರ್ಶನಮಾತ್ರೇಣ ಜಾತೋಽಹಂ ಪೃಥಿವೀಪತಿಃ ।
ಕಲಿಂಗವಿಷಯೇ ದೇವಿ ಸರ್ವಭೂಪಾಲವಂದಿತಃ ॥ ೩೬ ॥
ಸುತಾ ತ್ವಂ ವಲ್ಲಭಾ ಜಾತಾ ಕಾಂಚೀಪುರನಿವಾಸಿನಃ ।
ಕ್ಷಾತ್ರವ್ರತರತಸ್ಯೈವ ಸುಭಗಾ ದೃಢಧನ್ವನಃ ॥ ೩೭ ॥

---

೩೧. ದೇಹಾಂತ್ಯಕಾಲದಲ್ಲಿ ಧರ್ಮವನ್ನು ಪ್ರಶಂಸಿಸಿದ ಕಿಂಚಿತ್ಪುಣ್ಯಶೇಷದಿಂದ ನಾನು ಪಾವನವಾದ ಈ ಶಿಪ್ರಾನದಿಯಲ್ಲಿ ಮೀನಿನ ಜನ್ಮವನ್ನು ಪಡೆದೆನು.

೩೨. ನೀನೂ ಆ ನದೀತೀರದ ವನದಲ್ಲಿಯೇ ಹೆಣ್ಣುಗಿಡುಗನಾಗಿ ಜನಿಸಿದೆ. ಒಮ್ಮೆ ಸೂರ್ಯನು ಆಶ್ಲೇಷಾನಕ್ಷತ್ರಗತನಾಗಿರಲು ವರ್ಷಾಕಾಲವು ಪ್ರಾಪ್ತವಾಯಿತು.

೩೩–೩೪. ದೇವಿಯೆ! ಮೂರು ನದಿಗಳ ಪ್ರವಾಹಗಳ ರಭಸದಿಂದ ನಾನು ನೀರಿನಿಂದ ಹೊರಗೆ ಬಿದ್ದೆನು. ನೀನು ನನ್ನ ಮೇಲೆರಗಿ ನಖಗಳಿಂದ ನನ್ನನ್ನು ಗಾಯಗೊಳಿಸಿದೆ. ನನ್ನನ್ನು ಸಂಗಮೇಶ್ವರನ ಸನ್ನಿಧಿಗೆತ್ತಿಕೊಂಡುಬರಲು ನಮ್ಮಿಬ್ಬರನ್ನೂ ಬೆಸ್ತರು ಹಿಡಿದು ಕೊಂದರು.

೩೫. ಪ್ರಾಣೋತ್ಕ್ರಮಣಕಾಲದಲ್ಲಿ ನಾನು ಸಂಗಮೇಶ್ವರನ ದರ್ಶನವನ್ನು ಮಾಡಿದೆನು. ಶಿಪ್ರಾ, ಗಂಗಾ, ನೀಲಗಂಗಾ ನದಿಗಳ ಜಲದಲ್ಲಿಯೂ ಸ್ನಾನವನ್ನು ಮಾಡಿದ್ದೆನು.

೩೬. ದೇವಿಯೆ! ಆ ಪುಣ್ಯದ ಪ್ರಭಾವದಿಂದಲೇ ನಾನು ಕಳಿಂಗದೇಶಕ್ಕೆ ಮಹಾರಾಜನಾಗಿ ಜನಿಸಿ ಸಮಸ್ತ ರಾಜರಿಂದಲೂ ಮರ್ಯಾದೆಯನ್ನು ಸ್ವೀಕರಿಸುತ್ತಿರುವೆನು.

೩೭. ನೀನು ಕಾಂಚೀ ನಗರನಿವಾಸಿಯೂ, ಮಹಾಕ್ಷತ್ರಿಯನೂ ಆದ ದೃಢಧನ್ವನಿಗೆ ಪ್ರೀತ್ಯಾಸ್ಪದಳೂ ಸೌಭಾಗ್ಯವತಿಯೂ ಆದ ಮಗಳಾಗಿ ಜನಿಸಿದೆ.

ಆವಾಂ ರಾಜತ್ವಮಾಪನ್ನೌ ತಸ್ಯ ಲಿಂಗಸ್ಯ ದರ್ಶನಾತ್ ।
ತ್ವಯಾ ಕರರುಹೈರ್ವಿದ್ಧೋ ಮಾರಿತೋ ಲಗುಡೈಶ್ಚ ತೈಃ ॥ ೩೮ ॥
ಮಧ್ಯಾಹ್ನೇ ಕದನಂ ಸ್ಮೃತ್ವಾ ತತೋ ಮೇ ಶಿರಸಿ ವ್ಯಥಾ ।
ಸ್ಮರಾಮಿ ಜಾತಿಮಾತ್ಮೀಯಾಮಸ್ಯ ದೇವಸ್ಯ ದರ್ಶನಾತ್ ॥ ೩೯ ॥
ಏತತ್ತೇ ಕಥಿತಂ ದೇವಿ ಪೃಷ್ಟೋಽಹಂ ಯತ್ತ್ವಯಾ ಪುರಾ ।
ಗಚ್ಛ ಸುಂದರಿ ಭದ್ರಂ ತೇ ಯತ್ರ ತೇ ವರ್ತತೇ ಮನಃ ॥ ೪೦ ॥
ಸ್ಥಾತವ್ಯಂ ಚ ಮಯಾತ್ರೈವ ಸೇವ್ಯೋಽಸೌ ಸಂಗಮೇಶ್ವರಃ ॥ ೪೧ ॥
ತತಃ ಸಾ ನಿರವದ್ಯಾಂಗೀ ನೀಲೋತ್ಪಲವಿಲೋಚನಾ ।
ಕರುಣಂ ಸುಸ್ವರಂ ಕೃತ್ವಾ ಭರ್ತಾರಮಿದಮಬ್ರವೀತ್ ॥ ೪೨ ॥
ಮಯಾಽಪಿ ಸಂಸ್ಮೃತಂ ದೇವ ಪೂರ್ವಜನ್ಮನಿ ಚೇಷ್ಟಿತಂ ।
ಅಸ್ಯ ಲಿಂಗಸ್ಯ ಮಾಹಾತ್ಮ್ಯಾತ್ತಿರ್ಯಗ್ಯೋನಿಗತಾವಪಿ ॥ ೪೩ ॥
ಪ್ರಾಪ್ತಾವಾವಾಂ ಮನುಷ್ಯತ್ವಂ ನಿರ್ಮಲೇಷು ಕುಲೇಷು ಚ ।
ಪ್ರಾಪ್ತಾ ಶ್ರೀರತುಲಾ ಲೋಕೇ ಪ್ರಾಪ್ತಂ ರಾಜ್ಯಮಕಂಟಕಂ ॥ ೪೪ ॥

---

೩೮. ಆ ಲಿಂಗದ ದರ್ಶನದಿಂದಲೇ ನಮಗೆ ರಾಜಪದವಿಯು ಲಭಿಸಿತು. ನನ್ನನ್ನು ನೀನು ಉಗುರುಗಳಿಂದ ಸೀಳಿದೆ. ಆ ಬೆಸ್ತರು ಕೋಲುಗಳಿಂದ ಹೊಡೆದರು.

೩೯. ಮಧ್ಯಾಹ್ನದಲ್ಲಿ ಈ ಸಂಕಟವನ್ನು ಸ್ಮರಿಸುವುದರಿಂದ ನನಗೆ ಶಿರೋ ರೋಗವುಂಟಾಗುವುದು. ಈ ಮಹಾಲಿಂಗದ ದರ್ಶನದಿಂದ ನನಗೆ ಹಿಂದಿನ ಜನ್ಮದ ಸ್ಮೃತಿಯುಂಟಾಗುತ್ತಿರುವುದು.

೪೦. ದೇವಿಯೆ! ನೀನು ಪ್ರಶ್ನೆಮಾಡಿದ ವಿಷಯವನ್ನು ನಿನಗೆ ವಿಸ್ತಾರ ವಾಗಿ ತಿಳಿಸಿರುವೆನು. ಇನ್ನು ನಿನ್ನ ಮನಬಂದಲ್ಲಿಗೆ ಹೋಗು. ನಿನಗೆ ಮಂಗಳ ವಾಗಲಿ.

೪೧. ನಾನು ಮಾತ್ರ ಇಲ್ಲಿಯೇ ನಿಂತು ಈ ಸಂಗಮೇಶ್ವರನ ಸೇವೆಯನ್ನು ಮಾಡುತ್ತಿರುವೆನು.''

೪೨. ಆಗ ಸರ್ವಾಂಗಸುಂದರಿಯೂ, ನೀಲೋತ್ಪಲಗಳನ್ನು ಹೋಲುವ ನೇತ್ರಗಳುಳ್ಳವಳೂ ಆದ ಆ ರಾಣಿಯು ದುಃಖದಿಂದ ಕೂಡಿದ ಮಂದಧ್ವನಿಯಲ್ಲಿ ಮಹಾರಾಜನಿಗೆ ಹೇಳಿದಳು.

೪೩. "ಮಹಾರಾಜನೆ! ನನಗೂ ಈ ಲಿಂಗದ ಪ್ರಭಾವದಿಂದ ಪೂರ್ವಜನ್ಮದ ವೃತ್ತಾಂತವೆಲ್ಲ ಚೆನ್ನಾಗಿ ತಿಳಿಯಿತು. ನಾವಿಬ್ಬರೂ ನೀಚಯೋನಿಗಳಲ್ಲಿ ಜನಿಸಿದ್ದೆವು.

೪೪. ಈಗ ನಮಗೆ ಮನುಷ್ಯಜನ್ಮವೂ, ಪರಿಶುದ್ಧಕುಲಗಳಲ್ಲಿ ಉದ್ಭವವೂ,

ಪ್ರಾಪ್ತಾ ಭಾರ್ಯಾ ಪ್ರಿಯಾಽಹಂ ತೇ ತ್ವಂ ಚ ಪ್ರಾಪ್ತೋ ಮಯಾ ನೃಪ ।
ಖ್ಯಾತೋಽಯಂ ತ್ರಿಷು ಲೋಕೇಷು ನಾಮತಃ ಸಂಗಮೇಶ್ವರಃ ॥ ೪೫ ॥
ಅಸ್ಯ ಲಿಂಗಸ್ಯ ಮಾಹಾತ್ಮ್ಯಾದ್ವಿಯೋಗೋ ನ ಭವಿಷ್ಯತಿ ।
ಯಥಾ ಕೃಷ್ಣಸ್ಯ ಲಕ್ಷ್ಮ್ಯಾ ಚ ಪಾರ್ವತ್ಯಾ ಚ ಶಿವಸ್ಯ ಚ ॥ ೪೬ ॥
ಪುನಃ ಪ್ರಣಮ್ಯ ಪ್ರಣತಾ ಸಹಸಾ ಮನ್ಮಥಾಕುಲಾ ।
ಭರ್ತಾ ಸುಬಾಹುರ್ಮೇ ಭೂಯಾದನ್ಯಸ್ಮಿನ್ನಿಹ ಜನ್ಮನಿ ।
ತವ ದೇವ ಪ್ರಸಾದೇನ ಯದಿ ತ್ವಂ ಸಂಗಮೇಶ್ವರಃ ॥ ೪೭ ॥
ತತೋ ವಿಲೋಕ್ಯ ಸೋನ್ಮೇಷಂ ಕುಸುಮೇಷು ತರಂಗಿತಾಂ ।
ಕಾಂತಾಂ ಪಿಬನ್ನಿವ ದೃಶಾ ಪ್ರಾಹ ತಾಂ ತರಲೇಕ್ಷಣಾಂ ॥ ೪೮ ॥
ಸಹಜೇನಾಭಿಜನ್ಯೇನ ಗುಣೈಃ ಕಾಂತ್ಯಾ ವಿಭೂಷಿತಾ ।
ಮಯಾ ಪ್ರಾಪ್ತಾ ವಿಶಾಲಾಕ್ಷಿ ಪ್ರಾಪ್ತಂ ಮಜ್ಜನ್ಮನಃ ಫಲಂ ॥ ೪೯ ॥
ತತಸ್ತಾಂ ಭಯಸಂತ್ರಸ್ತಾಂ ಕಂಪಿತಾಧರಪಲ್ಲವಾಂ ।
ಗೃಹೀತ್ವಾ ಚ ಕರೇ ಕಾಂತಾಂ ಜಗಾಮಾಂತಃಪುರಂ ನಿಜಂ ॥ ೫೦ ॥

---

ಲೋಕದಲ್ಲಿ ಅಪ್ರತಿಮವಾದ ಐಶ್ವರ್ಯವೂ, ನಿಷ್ಕಂಟಕವಾದ ರಾಜ್ಯವೂ ಲಭಿಸಿರುವುವು.

೪೫–೪೬. ನಾನು ನಿನಗೆ ಪ್ರಿಯಳಾದ ಭಾರ್ಯೆಯಾಗಿರುವೆನು. ನನಗೂ ನೀನೇ ಪ್ರಾಣೇಶ್ವರನಾಗಿರುವೆ. ಆದುದರಿಂದ ಈ ಮಹಾಲಿಂಗವು ಮೂರುಲೋಕಗಳಲ್ಲಿಯೂ ಸಂಗಮೇಶ್ವರನೆಂದು ಪ್ರಖ್ಯಾತವಾಗಿರುವುದು. ಈ ದೇವದೇವನ ಮಾಹಾತ್ಮ್ಯದಿಂದ ಮಹಾವಿಷ್ಣುವಿಗೆ ಲಕ್ಷ್ಮಿಯೂ, ಶಿವನಿಗೆ ಪಾರ್ವತಿಯೂ ಅನಪಾಯಿನಿಯರಾಗಿರುವಂತೆ ಗಂಡನಿಗೆ ಹೆಂಡತಿಯು ಎಡಬಿಡದಿರುವಳು."

೪೭. ಇಂತೆಂದು ರಾಜಮಹಿಷಿಯು ಪುನಃ ಮಹಾಲಿಂಗಕ್ಕೆ ನಮಸ್ಕಾರವನ್ನು ಮಾಡಿ ಮನ್ಮಥಾವಿಷ್ಟಳಾಗಿ, "ಮಹಾದೇವನೆ! ನೀನು ಸಂಗಮೇಶ್ವರನೇ ಆಗಿದ್ದರೆ ನಿನ್ನ ಅನುಗ್ರಹದಿಂದ ನನಗೆ ಇಂದಿನಂತೆಯೇ ಬೇರೆ ಜನ್ಮದಲ್ಲಿಯೂ ಈ ಸುಬಾಹುವೇ ಪತಿಯಾಗಲಿ" ಎಂದು ಪ್ರಾರ್ಥಿಸಿಕೊಂಡಳು.

೪೮. ಆಗ ಮಹಾರಾಜನೂ ಕಾಮೋದ್ರೇಕದಿಂದ ಕೂಡಿದ ಚಪಲನೇತ್ರೆಯಾದ ಆ ತನ್ನ ಪತ್ನಿಯನ್ನು ಕಣ್ಣುಗಳಿಂದ ಪಾನಮಾಡುವವನಂತೆ ಎವೆಯಿಕ್ಕದೆ ನೋಡುತ್ತ ಇಂತೆಂದನು.

೪೯. "ವಿಶಾಲಾಕ್ಷಿಯೆ! ಸಹಜವಾದ ಸತ್ಕುಲದಿಂದಲೂ, ಗುಣರಾಶಿಯಿಂದಲೂ, ದೇಹಕಾಂತಿಯಿಂದಲೂ ಮೆರೆಯುತ್ತಿರುವ ನೀನು ಮಡದಿಯಾಗಿರುವುದು ನನ್ನ ಭಾಗ್ಯೋದಯವೇ ಸರಿ."

೫೦. ಇಂತೆಂದು ಭಯದಿಂದ ನಡುಗುತ್ತಿರುವವಳೂ, ಅದುರುತ್ತಿರುವ

ವದನ್ಕಂದರ್ಪಸರ್ಪೇಣ ದಷ್ಟೋಽಹಂ ದೈವತೋಽಧುನಾ ।
ಚಚಾರ ತತ್ರ ನಿಃಸಾರಂ ಸಂಸಾರಂ ಕಲಯನ್ಧಿಯಾ ॥ ೫೧ ॥
ಪುರೇ ಮಮ ವರಾರೋಹೇ ಚಿರಂ ರೇಮೇ ತಯಾ ಸಹ ।
ಏವಂ ರಾಜಾ ಪ್ರಿಯಾಂ ಪ್ರಾಪ್ಯ ನಿವೇದ್ಯ ಚ ನಿಜಾಂ ಕಥಾಂ ॥ ೫೨ ॥
ಭೇಜೇ ರಾಜ್ಯಂ ತಯಾ ಸಾರ್ಧಂ ವಿಸ್ತಾರಿತಮಹೋತ್ಸವಃ ।
ಅಶಾಶ್ವತಮಿದಂ ಜ್ಞಾತ್ವಾ ಅರ್ಥಿಭ್ಯೋಽಪಿ ದದೌ ಧನಂ ॥ ೫೩ ॥
ಅಪೂರ್ವತ್ಯಾಗಿನಾ ತೇನ ತ್ರೈಲೋಕ್ಯಂ ವಿಸ್ಮಯಂ ಯಯೌ ।
ರಾಜ್ಯಂ ಕೃತ್ವಾ ಚಿರಂ ಕಾಲಂ ಸಭಾರ್ಯೋ ನೃಪಸತ್ತಮಃ ॥ ೫೪ ॥
ಭುಕ್ತ್ವಾ ಚ ವಿಪುಲಾನ್ಭೋಗಾಂಸ್ತಸ್ಮಿಂಲ್ಲಿಂಗೇ ಲಯಂಗತಃ ।
ಅತೋ ದೇವಿ ಸುವಿಖ್ಯಾತೋ ದೇವೋಽಸೌ ಸಂಗಮೇಶ್ವರಃ ॥ ೫೫ ॥
ಯಃ ಪಶ್ಯೇತ್ಪರಯಾ ಭಕ್ತ್ಯಾ ತಲ್ಲಿಂಗಂ ಸಂಗಮೇಶ್ವರಂ ।
ನ ವಿಯೋಗೋ ಭವೇತ್ತಸ್ಯ ಪುತ್ರಭ್ರಾತೃಪ್ರಿಯಾದಿಭಿಃ ॥ ೫೬ ॥

---

ತುಟಿಗಳುಳ್ಳವಳೂ ಆದ ಆ ಕಾಂತೆಯನ್ನು ಕೈಹಿಡಿದು ಆ ರಾಜೇಂದ್ರನು ಅಂತಃಪುರವನ್ನು ಪ್ರವೇಶಿಸಿದನು.

೫೧. "ವಿಧಿವಿಲಾಸದಿಂದ ನಾನಿಂದು ಮನ್ಮಥಸರ್ಪದಿಂಗ ದಷ್ಟನಾಗಿರುವೆನು" ಎಂದು ಹೇಳುತ್ತ ಮನಸ್ಸಿನಲ್ಲಿ ಮಾತ್ರ ಸಂಸಾರವು ನಿಸ್ಸಾರವೆಂಬುದನ್ನು ಚೆನ್ನಾಗಿ ಮನಗಂಡು ವ್ಯವಹರಿಸುತ್ತಿದ್ದನು.

೫೨–೫೩. ಓ ಗಿರಿಜೆಯೆ! ಇಂತು ರಾಜನು ನನ್ನ ಪ್ರಿಯಕ್ಷೇತ್ರವಾದ ಮಹಾಕಾಲವನದಲ್ಲಿ ಹೆಂಡತಿಯೊಡನೆ ಆನಂದದಿಂದಿರುತ್ತ ಆಕೆಗೆ ತನ್ನ ಚರಿತ್ರೆಯೆಲ್ಲವನ್ನೂ ತಿಳಿಸಿದನು. ಅಲ್ಲದೆ ಆಕೆಯೊಡನೆ ವಿಶೇಷ ಮಹೋತ್ಸವಗಳಿಂದ ರಾಜ್ಯಭೋಗವನ್ನನುಭವಿಸುತ್ತಿದ್ದರೂ ಎಲ್ಲವನ್ನೂ ನಶ್ವರವೆಂದು ತಿಳಿದು ಬಡವರಿಗೆ ಯಥೇಚ್ಛವಾಗಿ ದ್ರವ್ಯದಾನವನ್ನು ಮಾಡುತ್ತಿದ್ದನು.

೫೪. ಅಸದೃಶನಾದ ಈ ಮಹಾತ್ಯಾಗಿಯನ್ನು ಕಂಡು ಮೂರುಲೋಕಗಳವರೂ ವಿಸ್ಮಯಗೊಂಡರು. ಇಂತು ಆ ರಾಜಶ್ರೇಷ್ಠನು ಬಹುಕಾಲದವರೆಗೂ ಪತ್ನಿಯೊಡನೆ ರಾಜ್ಯವನ್ನಾಳುತ್ತಿದ್ದನು.

೫೫. ಇಹಲೋಕದಲ್ಲಿ ಸಮಗ್ರಭೋಗಗಳನ್ನೂ ಅನುಭವಿಸಿ ಕಡೆಯಲ್ಲಿ ಆ ಲಿಂಗದಲ್ಲಿಯೇ ಐಕ್ಯವನ್ನು ಹೊಂದಿದನು. ಅಂದಿನಿಂದ ಸಂಗಮೇಶ್ವರಮಹಾದೇವನು ಬಹಳ ಪ್ರಸಿದ್ಧನಾಗಿರುವನು.

೫೬. ಯಾವನು ಅತ್ಯಂತಭಕ್ತಿಯಿಂದ ಈ ಸಂಗಮೇಶ್ವರನನ್ನು ನೋಡುವನೊ, ಅವನಿಗೆ ಮಕ್ಕಳು, ಅಣ್ಣತಮ್ಮಂದಿರು, ಇಷ್ಟಮಿತ್ರರು ಇವರ ವಿಯೋಗವಾಗುವುದಿಲ್ಲ.

ನಿಯಮೇನ ತು ಯಃ ಪಶ್ಯೇತ್ತಲ್ಲಿಂಗಂ ಸಂಗಮೇಶ್ವರಂ ।
ರಾಜಸೂಯಸಹಸ್ರಸ್ಯ ಫಲಂ ತಸ್ಮಾಽಧಿಕಂ ಭವೇತ್ ॥ ೫೭ ॥
ಗಾಂಗಂ ಚ ಸಫಲಂ ಪುಣ್ಯಂ ಯಾಮುನಂ ನಾರ್ಮದಂ ತಥಾ ।
ಜಾಯತೇ ಚಾಂದ್ರಭಾಗಂ ಚ ಸಂಗಮೇಶ್ವರದರ್ಶನಾತ್ ॥ ೫೮ ॥
ಯಃ ಪಶ್ಯೇಚ್ಛ್ರಾವಣೇ ಮಾಸಿ ತಲ್ಲಿಂಗಂ ಸಂಗಮೇಶ್ವರಂ ।
ಕಾರ್ತಿಕಸ್ವಾಮಿನೋ ಯಾತ್ರಾ ಕೃತಾ ತೇನ ನ ಸಂಶಯಃ ॥ ೫೯ ॥
ಮಾಸಿ ಚಾಶ್ವಯುಜೇ ದೇವಂ ಯಃ ಪಶ್ಯೇತ್ಸಂಗಮೇಶ್ವರಂ ।
ಕೃತಂ ತೇನ ಸಹಸ್ರಂ ತು ವಾಜಪೇಯಂ ವರಾನನೇ ॥ ೬೦ ॥
ಯಃ ಪಶ್ಯೇತ್ಕಾರ್ತಿಕೇ ಮಾಸಿ ತಲ್ಲಿಂಗಂ ಸಂಗಮೇಶ್ವರಂ ।
ರಾಜಸೂಯಸಹಸ್ರಂ ತು ಕೃತಂ ತೇನ ನ ಸಂಶಯಃ ॥ ೬೧ ॥
ಚತುರೋ ವಾರ್ಷಿಕಾನ್ಮಾಸಾನ್ಯಃ ಪಶ್ಯೇತ್ಸಂಗಮೇಶ್ವರಂ ।
ಸ ಯಾತಿ ಪರಮಂ ಸ್ಥಾನಂ ಮಮಾಽಭೀಷ್ಟತರಂ ಪ್ರಿಯೇ ॥ ೬೨ ॥

---

೫೭. ಯಾವನು ನಿಯಮಪೂರ್ವಕವಾಗಿ ಸಂಗಮೇಶ್ವರಲಿಂಗದ ದರ್ಶನವನ್ನು ಮಾಡುವನೊ, ಅವನಿಗೆ ಒಂದುಸಾವಿರ ರಾಜಸೂಯಯಜ್ಞಗಳ ಫಲಕ್ಕಿಂತಲೂ ಹೆಚ್ಚಿನ ಪುಣ್ಯವು ಲಭಿಸುವುದು.

೫೮. ಗಂಗಾ, ಯಮುನಾ, ನರ್ಮದಾ, ಚಂದ್ರಭಾಗಾ ಮುಂತಾದ ತೀರ್ಥಗಳನ್ನು ಸೇವಿಸಿದ ಫಲವೆಲ್ಲವೂ ಒಟ್ಟಿಗೆ ಸಂಗಮೇಶ್ವರನನ್ನು ಸೇವಿಸಿದವನಿಗೆ ಕೈಗೂಡುವುದು.

೫೯. ಯಾವನು ಶ್ರಾವಣಮಾಸದಲ್ಲಿ ಆ ಸಂಗಮೇಶ್ವರಲಿಂಗವನ್ನು ನೋಡುವನೊ, ಅವನು ಸುಬ್ರಹ್ಮಣ್ಯಯಾತ್ರೆಯನ್ನು ಮಾಡಿದವನೇ ಆಗುವುದರಲ್ಲಿ ಸಂದೇಹವಿಲ್ಲ.

೬೦. ಮಂಗಳಾಂಗಿಯೆ! ಆಶ್ವಯುಜಮಾಸದಲ್ಲಿ ಸಂಗಮೇಶ್ವರನ ದರ್ಶನವನ್ನು ಮಾಡಿದವನು ಒಂದುಸಾವಿರ ವಾಜಪೇಯಯಜ್ಞಗಳನ್ನು ಮಾಡಿದವನಿಗೆ ಸಮಾನನಾಗುವನು.

೬೧. ಯಾವನು ಕಾರ್ತಿಕಮಾಸದಲ್ಲಿ ಈ ಮಹಾಲಿಂಗವನ್ನು ನೋಡುವನೊ, ಅವನು ಒಂದುಸಾವಿರ ರಾಜಸೂಯಗಳನ್ನು ನಡೆಸಿದವನೆಂಬುದರಲ್ಲಿ ಸಂಶಯವಿಲ್ಲ.

೬೨. ಪ್ರಿಯಳೆ! ವರ್ಷಾಕಾಲದ ನಾಲ್ಕು ತಿಂಗಳುಗಳಲ್ಲಿ ನಿತ್ಯವೂ ಯಾವನು ಸಂಗಮೇಶ್ವರನ ದರ್ಶನವನ್ನು ಮಾಡುತ್ತಿರುವನೊ, ಅವನು ನನಗೆ ಪರಮಪ್ರಿಯವಾದ ಕೈಲಾಸಪದವಿಯನ್ನು ಪಡೆಯುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸಂಗಮೇಶ್ವರದೇವಸ್ಯ ಶೃಣು ದುರ್ಧರ್ಷನಿಾಶ್ವರಂ ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸಂಗಮೇಶ್ವರಮಾಹಾತ್ಮ್ಯವರ್ಣನಂ"
ನಾಮ್ನೈಕೋನಸಪ್ತತಿತಮೋಽಧ್ಯಾಯಃ

---

೬೩. ದೇವಿಯೆ! ಇಂತು ನಿನಗೆ ಪಾಪಾಪರಿಹಾರಕವಾದ ಸಂಗಮೇಶ್ವರನ ಮಾಹಾತ್ಮ್ಯದ ಕಥೆಯನ್ನು ಹೇಳಿದೆನು. ಇನ್ನು ದುರ್ಧರ್ಷೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಹಾತ್ಮ್ಯದಲ್ಲಿ "ಸಂಗಮೇಶ್ವರಮಾಹಾತ್ಮ್ಯವರ್ಣನ"ವೆಂಬ
ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತಿತಮೋಽಧ್ಯಾಯಃ

### ದುರ್ಧರ್ಷೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :–

ಶೃಣು ಸಪ್ತತಿಕಂ ದೇವಂ ದುರ್ಧರೇಶ್ವರಮೀಶ್ವರಂ ।
ಯಸ್ಯ ದರ್ಶನತೋ ದೇವಿ ನರಃ ಪಾಪೈಃ ಪ್ರಮುಚ್ಯತೇ ॥ ೧ ॥
ದುರ್ಧರ್ಷೋ ನಾಮ ರಾಜಾಽಭೂನ್ನೇಪಾಲವಿಷಯೇ ಪುರಾ ।
ಪುಣ್ಯಕೇತುರ್ಯಶಸ್ವೀ ಚ ಸಂತ್ಯಸಂಧೋ ದೃಢವ್ರತಃ ॥ ೨ ॥
ತಿಸ್ರಸ್ತಸ್ಯಾಽಭವನ್ಭಾರ್ಯಾಸ್ತತ್ತುಲ್ಯಾಃ ಸುಮನೋಹರಾಃ ।
ವಿಹರನ್ ಸ ವನೋದ್ಯಾನೇ ವಸಂತೇ ಪೃಥಿವೀಪತಿಃ ॥ ೩ ॥
ಕದಾ ಮೃಗರಸಾವಿಷ್ಟೋ ದೇವಾದ್ವೈ ವಾತರಂಹಸಾ ।
ತುರಗೇಣೋಹಿತಃ ಪ್ರಾಪ ವನಂ ರುಚಿರಪಾದಪಂ ॥ ೪ ॥
ಗಜೇಂದ್ರಮೃಗಶಾರ್ದೂಲಸಿಂಹಸಂಬರಸಂಕುಲಂ ।
ಋಕ್ಷವಾನರವಾರಾಹಗಂಡಕಾದಿವಿರಾಜಿತಂ ॥ ೫ ॥

---

### ಕನ್ನಡದ ಅನುವಾದ

#### ದುರ್ಧರ್ಷೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಇನ್ನು ಎಪ್ಪತ್ತನೆಯ ಮಹಾಲಿಂಗವಾದ ದುರ್ಧರ್ಷೇಶ್ವರನ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ಮನುಷ್ಯನ ಪಾಪಗಳೆಲ್ಲವೂ ತೊಲಗಿಹೋಗುವುವು.

೨. ಹಿಂದೆ ನೇಪಾಳದೇಶದಲ್ಲಿ ಪುಣ್ಯವಂತನೆಂದು ಯಶಸ್ಸನ್ನು ಪಡೆದವನೂ, ಸತ್ಯಸಂಧನೂ, ಮಹಾ ವ್ರತನಿಷ್ಠಾಪರನೂ ಆದ ದುರ್ಧರ್ಷನೆಂಬ ರಾಜನಿದ್ದನು.

೩. ಆತನಿಗೆ ಅನುರೂಪರೂ, ಪರಸ್ಪರಸದೃಶರೂ ಆದ ಮೂವರು ರಾಣಿಯರಿದ್ದರು. ಅವರೊಡನೆ ಆ ಮಹಾರಾಜನು ವಸಂತಕಾಲದಲ್ಲಿ ಉದ್ಯಾನವನಗಳಲ್ಲಿ ವಿಹರಿಸುತ್ತಿದ್ದನು.

೪. ಒಮ್ಮೆ ಬೇಟೆಯಲ್ಲಿ ಆಸಕ್ತನಾಗಿರಲು ದೈವವಶದಿಂದ ವಾಯುವೇಗದ ಆತನ ಕುದುರೆಯು ಮನೋಜ್ಞವೃಕ್ಷಗಳಿಂದ ರಂಜಿಸುತ್ತಿರುವ ಒಂದು ವನಕ್ಕೆ ಆತನನ್ನು ತೆಗೆದುಕೊಂಡುಹೋಯಿತು.

೫. ಆ ಅರಣ್ಯವು ಆನೆ, ಸಿಂಹ, ಹುಲಿ, ಜಿಂಕೆ ಮುಂತಾದ ಮೃಗಗಳಿಂದ ನಿಬಿಡಿತವಾಗಿ ಕರಡಿ, ಕೋತಿ, ಕಾಡುಹಂದಿ, ಗೇಂಡಾಮೃಗಗಳೇ ಮೊದಲಾದುವುಗಳಿಂದಲೂ ತುಂಬಿದ್ದಿತು.

ತಸ್ಮಿನ್ವನೇ ಸುವಿಸ್ತೀರ್ಣಂ ಕದಲೀಖಂಡಮಂಡಿತಂ ।
ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಂ ॥ ೬ ॥
ದದರ್ಶ ದರ್ಪಣಸ್ವಚ್ಛಂ ಸರೋ ನೀರಜರಾಜಿತಂ ।
ಸ್ನಾತಸಿದ್ಧವಧೂವೃಂದಕುಚಕುಂಕುಮಪಿಂಜರಂ ॥ ೭ ॥
ದದರ್ಶ ಕನ್ಯಾಂ ತತ್ರೈವ ಕಾನನಸ್ಯೇವ ದೇವತಾಂ ।
ಸ ತಾಂ ದೃಷ್ಟ್ವಾ ಸುಚಾರ್ವಂಗೀಂ ಮನ್ಮಥೇನ ಪ್ರಪೀಡಿತಃ ॥ ೮ ॥
ಚಿತ್ರನ್ಯಸ್ತ ಇವ ಕ್ಷಿಪ್ರಮಭೂದ್ವಿಸ್ಮಯನಿಶ್ಚಲಃ ।
ಸಾ ಭುಜಂಗೀವ ಸಂಕೃಷ್ಟಾ ಮಂತ್ರೇಣೇವಾಂತಿಕಂ ಯಯೌ ॥ ೯ ॥
ಕಂದರ್ಪಕೋಟಿಸದೃಶಂ ವಿಶ್ರಾಂತಂ ನೃಪಮಬ್ರವೀತ್ ।
ಸುತಾಂ ಮಾಂ ವಿದ್ಧಿ ರಾಜೇಂದ್ರ ಕಲ್ಪಸ್ಯ ಪ್ರಾಣವಲ್ಲಭಾಂ ॥ ೧೦ ॥
ತಪೋರತಸ್ಯ ಶಾಂತಸ್ಯ ಸರ್ವದಾ ಬ್ರಹ್ಮಚಾರಿಣಃ ।
ಮದರ್ಥೇ ಪ್ರಾರ್ಥ್ಯತಾಂ ವಿಪ್ರ ಸಮಾಂ ತುಭ್ಯಂ ಪ್ರದಾಸ್ಯತಿ ॥ ೧೧ ॥

---

೬–೭. ಆ ವನದಲ್ಲಿಯೇ ರಾಜನು ಅತಿ ವಿಶಾಲವೂ, ಬಾಳೆಯ ಮರಗಳಿಂದ ಶೋಭಿಸುತ್ತಿರುವುದೂ, ಹಂಸಕಾರಂಡಕಾದಿ ಜಲಪಕ್ಷಿಗಳಿಂದ ಸೇವಿತವೂ, ಚಕ್ರವಾಕಗಳ ನೆಲೆಯೂ, ಕಮಲಗಳಿಂದ ವಿರಾಜಿಸುತ್ತಿರುವುದೂ, ಕನ್ನಡಿ ಯಂತೆ ಶುಭ್ರವಾದ ನೀರುಳ್ಳುದೂ ಆದ ಸರೋವರವೊಂದನ್ನು ಕಂಡನು. ಅದರ ತೀರವು ಸ್ನಾನಮಾಡಿದ ಸಿದ್ಧಕನ್ಯೆಯರ ಕುಚಕುಂಕುಮಲೇಪಗಳಿಂದ ಕೆಸರಾದಂತಿದ್ದಿತು.

೮. ಅಲ್ಲಿಯೇ ವನದೇವತೆಯಂತಿದ್ದ ಒಬ್ಬ ಕನ್ಯೆಯನ್ನು ಆ ಮಹಾರಾಜನು ಕಂಡು ಸರ್ವಾಂಗಸುಂದರಿಯಾದ ಅವಳನ್ನು ನೋಡುತ್ತಲೇ ಕಾಮಬಾಣ ಪೀಡಿತನಾದನು.

೯. ಒಡನೆಯೆ ಆತನು ಒಂದು ಕ್ಷಣಕಾಲ ವಿಸ್ಮಯಗೊಂಡು ಚಿತ್ರದಲ್ಲಿ ಬರೆದ ಬೊಂಬೆಯಂತೆ ಸ್ತಬ್ಧನಾಗಿ ನಿಂತನು. ಆಕೆಯೂ ಮಂತ್ರದಿಂದ ಸೆಳೆಯಲ್ಪಟ್ಟ ಹಾವಿನಂತೆ ಆತನ ಸಮೀಪಕ್ಕೆ ಬಂದಳು.

೧೦. ಕೋಟಿಮನ್ಮಥರನ್ನು ಹೋಲುತ್ತ ಬಹಳವಾಗಿ ಬಳಲಿರುವ ಆ ಮಹಾ ರಾಜನಿಗೆ ಹೇಳಿದಳು. "ರಾಜೇಂದ್ರನೆ! ನಾನು ಕಲ್ಪಮಹಾಮುನಿಗೆ ಪರಮ ಪ್ರೇಮಾಸ್ಪದಳಾದ ಮಗಳೆಂದು ತಿಳಿ.

೧೧. ಆತನು ತಪೋನಿರತನೂ, ಇಂದ್ರಿಯಸಂಯಮವಂತನೂ, ಆಜನ್ಮ ಬ್ರಹ್ಮಚಾರಿಯೂ ಆಗಿರುವನು. ಅಯ್ಯಾ ಬ್ರಾಹ್ಮಣನೇ! ಆತನಲ್ಲಿ ನೀನು ನನಗಾಗಿ ಯಾಚನೆಯನ್ನು ಮಾಡಿದರೆ ನನ್ನನ್ನು ನಿನಗೇ ಮದುವೆಮಾಡಿ ಕೊಡುವನು."

ಇತಿ ತಸ್ಯಾ ವಚಃ ಶ್ರುತ್ವಾ ಮನ್ಮಥೇನಾಕುಲೀಕೃತಃ ।
ಲಜ್ಜಾಂ ತ್ಯಕ್ತ್ವಾ ಸ ಭೂಪಾಲೋ ಯಯಾಚೇ ವಿಜನೇ ಚ ತಾಂ॥ ೧೨ ॥
ಮಮ ಪ್ರಾಣವ್ಯಯಃ ಸುಭ್ರೂಸ್ತ್ವಾಂ ವಿನಾ ಸಮುಪಸ್ಥಿತಃ ।
ಕಾರ್ಯಾಕಾರ್ಯವಿಚಾರೋಹಿ ಕಸ್ಯ ಜೀವಿತಶಾಂತಯೇ ॥ ೧೩ ॥
ತ್ಯಜ್ಯತೇ ಪ್ರಾಪ್ತಮಮೃತಂ ಯದೇತದ್ಬುದ್ಧಿಲಾಘವಂ ।
ಕೋ ಜಾನೀತೇ ಪರೇ ಲೋಕೇ ಕಸ್ಯ ಕಿಂ ನು ಭವಿಷ್ಯತಿ ॥ ೧೪ ॥
ಭಜ ಮಾಮನವದ್ಯಾಂಗಿ ತವೈತದ್ವದನಾಮೃತಂ ।
ನ ಪಾಯಯಸಿ ಚೇನ್ಮಹ್ಯಂ ಮೃತಂ ಜಾನೀಹಿ ಮೇ ಪ್ರಿಯೇ ॥ ೧೫ ॥
ಸ್ವಯಂ ಪಿಬಾಮಿ ಚೇದ್ವಿದ್ಧಿ ಪರಲೋಕಗತಂ ಹಿ ಮಾಂ ।
ಶ್ರುತ್ವೇತಿ ಚಕಿತಾ ತನ್ವೀ ಪ್ರೋವಾಚ ವಿನಯಾನ್ವಿತಾ ॥ ೧೬ ॥
ಭ್ರಷ್ಟಾಯಾಂ ಮಯಿ ತಾತಸ್ಯ ವಿನಷ್ಟೇ ಕನ್ಯಕಾಫಲೇ ।
ಕುಲಂ ಪತತಿ ನಃ ಸರ್ವಂ ತಸ್ಮಾದೇತದ್ವಿಚಿಂತ್ಯತಾಂ ॥ ೧೭ ॥
ಯದಿ ತೇ ಪರಮಂ ಪ್ರೇಮ ಮಮೋಪರಿ ಮಹೀಪತೇ ।
ಮದರ್ಥೇ ಪ್ರಾರ್ಥ್ಯತಾಂ ವಿಪ್ರ ಸಮಾಂ ನೂನಂ ಪ್ರದಾಸ್ಯತಿ ॥ ೧೮ ॥

---

೧೨. ಇಂತೆಂದ ಆಕೆಯ ಮಾತನ್ನು ಕೇಳಿ ಕಾಮಪೀಡಿತನಾದ ಆ ಮಹಾರಾಜನು ಏಕಾಂತದಲ್ಲಿ ಕರೆದು ಲಜ್ಜೆಯನ್ನುಳಿದು ಪ್ರಾರ್ಥಿಸಿದನು.

೧೩. "ಸುಂದರಿಯೆ! ನಿನ್ನನ್ನುಳಿದು ನನ್ನ ಪ್ರಾಣಗಳೇ ಹೊರಟುಹೋಗುತ್ತಿರುವಂತಿರುವುದು. ನನ್ನ ಜೀವವನ್ನುಳಿಸುವ ವಿಷಯದಲ್ಲಿ ಕರ್ತವ್ಯಾಕರ್ತವ್ಯಗಳ ಗೊಡವೆಯು ಯಾರಿಗೆ ಬೇಕು?

೧೪. ಕೈಗೆ ಸಿಕ್ಕಿದ ಅಮೃತವನ್ನು ಕಳೆದುಕೊಳ್ಳುವುದು ತಿಳಿಗೇಡಿತನವೇ ಸರಿ. ಪರಲೋಕದಲ್ಲಿ ಯಾವನಿಗೆ ಏನಾಗುವುದೆಂಬುದನ್ನು ತಿಳಿದವನು ಯಾರು?

೧೫. ಚಾರುಶರೀರಿಯೆ! ನನ್ನನ್ನೀಗಲೇ ವರಿಸು. ನಿನ್ನ ಅಧರಾಮೃತವನ್ನು ನನಗುಣಿಸದಿದ್ದರೆ ನಾನು ಮಡಿದೆನೆಂದೇ ಖಂಡಿತವಾಗಿ ತಿಳಿ.

೧೬. ನಾನು ಪ್ರಯತ್ನಪಡಬೇಕೆಂದು ನಿಶ್ಚಯಿಸುವೆಯಾದರೆ ನಾನು ಪರಲೋಕಕ್ಕೆ ತೆರಳುವವನೇ ಆಗುವೆನು." ಇಂತೆಂದ ಮಹಾರಾಜನ ಮಾತಿಗೆ ದಿಗ್ಭ್ರಾಂತಳಾಗಿ ಆ ಕನ್ಯೆಯು ವಿನಯಪೂರ್ವಕವಾಗಿ ಇಂತೆಂದಳು.

೧೭. "ನಾನು ಸ್ವತಂತ್ರಿಸಿ ಕನ್ಯಾತ್ವವನ್ನು ಕಳೆದುಕೊಂಡರೆ ತಂದೆಗೆ ಕನ್ಯಾದಾನದ ಫಲವು ನಷ್ಟವಾಗುವುದು. ನಮ್ಮ ಕುಲವೆಲ್ಲವೂ ನಾಶವಾಗುವುದೆಂಬುದನ್ನು ನಾವು ಯೋಚಿಸಬೇಕು.

೧೮. ಮಹಾರಾಜ! ಆದುದರಿಂದ ನನ್ನಲ್ಲಿ ನಿನಗೆ ಅಷ್ಟು ಅಪಾರವಾದ ಪ್ರೇಮವಿದ್ದರೆ ನನ್ನನ್ನು ಕೊಡುವಂತೆ ತಂದೆಯನ್ನು ಪ್ರಾರ್ಥಿಸು. ಆತನು ನಿನಗೇ ದಾನಮಾಡುವನು."

ತಸ್ಯಾಸ್ತದ್ವಚನಂ ಶ್ರುತ್ವಾ ನಾಽನ್ಯಥಾ ಮೇ ಭವಿಷ್ಯತಿ ।
ಜ್ಞಾತ್ವಾ ಕನ್ಯಾಂ ದ್ವಿಜಸ್ಯೈವ ಕಲ್ಪಸ್ಯ ಬ್ರಹ್ಮಚಾರಿಣಃ ॥ ೧೯ ॥
ಗತ್ವಾ ಯಯಾಚೇ ಪ್ರಣತಃ ಸ್ಥಿತಂ ನಿಜತಪೋವನೇ ।
ಮುನೀಂದ್ರಶ್ಚಂದ್ರವದನಾಂ ಸ ಚಾಽಸ್ಮೈ ತಾಂ ದದೌ ಮುದಾ ॥ ೨೦ ॥
ತತ್ರೈವ ಸಂಗತೋ ರಾಜಾ ಮನ್ಮಥೇನ ವಶೀಕೃತಃ ।
ರೇಮೇ ರಮಣಕೈರ್ಯೋಗೈರ್ನ ಸಸ್ಮಾರ ನಿಜಂ ಪುರಂ ॥ ೨೧ ॥
ಕದಲೀಖಂಡಕುಂಜೇಷು ರಮ್ಯಾಸು ವನರಾಜಿಷು ।
ಬಹುಲಾಮ್ರಕದಂಬೇಷು ರಾಜಾ ಭೇಜೇ ನವಾಂ ವಧೂಂ ।
ಸಿಷೇವೇ ಚಾರು ಸುರತಂ ಸ ವಿದಗ್ಧೋಽತಿಮುಗ್ಧಯಾ ॥ ೨೨ ॥
ಏವಂ ಹಿ ವಸತಸ್ತಸ್ಯ ದುರ್ಧರ್ಷಸ್ಯ ವರಾನನೇ ।
ಆಜಗಾಮ ಸುದುರ್ಧರ್ಷೋ ರಾಕ್ಷಸೋಽತಿಭಯಂಕರಃ ॥ ೨೩ ॥
ಜ್ವಲಿತೋ ವಿಕಟಾಕಾರೋ ದಂಷ್ಟ್ರೋತ್ಕಟಕಟಾನನಃ ।
ತಂ ನೃಪಂ ಮೋಹಯಿತ್ವಾ ತು ತರಸಾ ತರಲೇಕ್ಷಣಾಂ ।
ಜಹಾರ ಮನ್ಮಥಾವಿಷ್ಟೋ ರೂಪಯೌವನಶಾಲಿನೀಂ ॥ ೨೪ ॥

---

೧೯. ಆಕೆಯ ಮಾತನ್ನು ಕೇಳಿ ಬ್ರಾಹ್ಮಣೋತ್ತಮನೂ, ಬ್ರಹ್ಮಚಾರಿಯೂ ಆದ ಕಲ್ಪನಿಗೆ ಪುತ್ರಿಯಾದ ಈಕೆಯು ಬೇರೆ ವಿಧದಿಂದ ತನ್ನ ವಶಳಾಗುವುದಿಲ್ಲ ವೆಂಬುದನ್ನು ರಾಜನು ತಿಳಿದನು.

೨೦. ತರುವಾಯ ಆತನು ತಪೋವನದಲ್ಲಿ ಸುಖಾಸೀನನಾಗಿದ್ದ ಆ ಋಷಿಯ ಬಳಿಗೆ ಹೋಗಿ ಯಾಚನೆಮಾಡಲು ಆತನು ಆ ಚಂದ್ರಮುಖಿಯನ್ನು ಸಂತೋಷ ದಿಂದ ಆತನಿಗೆ ದಾನಮಾಡಿದನು.

೨೧. ಮನ್ಮಥಪರವಶನಾದ ಆ ರಾಜೇಂದ್ರನು ಅಲ್ಲಿಯೇ ನಿಂತು ಅನೇಕ ಕಳಾಶಾಸ್ತ್ರೋಕ್ತಗಳಾದ ಯೋಗಗಳೊಡನೆ ಆಕೆಯಲ್ಲಿ ಸುಖಿಸುತ್ತ ತನ್ನ ರಾಜಧಾನಿಯನ್ನು ಸ್ಮರಿಸಲೇ ಇಲ್ಲವು.

೨೨. ಬಾಳೆಯಮರಗಳ ಗುಂಪುಗಳಲ್ಲಿಯೂ, ಮನೋಹರಗಳಾದ ವೃಕ್ಷ ಸಮೂಹಗಳಲ್ಲಿಯೂ, ಅನೇಕ ಮಾವಿನತೋಟಗಳಲ್ಲಿಯೂ ಆ ರಾಜನು ತನ್ನ ನೂತನ ಪತ್ನಿಯನ್ನು ಸಂತೋಷಗೊಳಿಸುತ್ತ ಮುಗ್ಧೆಯಾದ ಆಕೆಯೊಡನೆ ಸುರತ ಸುಖವನ್ನನುಭವಿಸುತ್ತಿದ್ದನು.

೨೩. ಇಂತು ಆ ದುರ್ಧರ್ಷಮಹಾರಾಜನು ಹೆಂಡತಿಯೊಡನೆ ವಿಹರಿಸು ತ್ತಿರಲು, ಒಂದು ದಿನ ಅಜೇಯನೂ, ಮಹಾಭಯಂಕರನೂ ಆದ ರಾಕ್ಷಸ ನೊಬ್ಬನು ಅಲ್ಲಿಗೆ ಬಂದನು.

೨೪. ಕೆಂಡದಂತೆ ಉರಿಯುತ್ತಿರುವವನೂ, ವಿಕಾರಸ್ವರೂಪನೂ, ಕೋರೆ ದಾಡೆಗಳ ಕ್ರೂರಮುಖದವನೂ ಆದ ಆ ರಾಕ್ಷಸನು ಯೌವನಸೌಂದರ್ಯಗಳಿಂದ

ರಾಜಾ ಚ ತಾಂ ಹೃತಾಂ ದೃಷ್ಟ್ವಾ ವಿಯೋಗವಿಷಮೂರ್ಛಿತಃ ।
ಸ್ಮೃತ್ವಾ ಸ್ಮೃತ್ವಾ ಸುಚಾರ್ವಂಗೀಂ ವಿಲಲಾಪಾಕುಲೇಂದ್ರಿಯಃ ॥ ೨೫ ॥
ಹಾ ಪ್ರಿಯೇ ಪ್ರೇಮಪೀಯೂಷೇ ಪ್ರಣಯಾಮೃತದೀರ್ಘಿಕೇ ।
ಹಾ ಸುಂದರಿ ವಿಶಾಲಾಕ್ಷಿ ಕ್ವ ಗತಾ ಮಾಂ ವಿಹಾಯ ವೈ ॥ ೨೬ ॥
ಪುನರಿಂದುಮಿವಾನಂದಂ ಕದಾ ದ್ರಕ್ಷ್ಯಾಮಿ ತೇ ಮುಖಂ ।
ಇತಿ ಪ್ರಲಾಪಮಕರೋತ್ ಸ್ಮರಂಸ್ತಾಂ ಚಾರುಹಾಸಿನೀಂ ।
ಉನ್ಮತ್ತ ಇವ ಬಭ್ರಾಮ ತತ್ರ ತತ್ರ ಸ್ಮರಾತುರಃ ॥ ೨೭ ॥
ಏವಂ ವಿಲಪತಸ್ತಸ್ಯ ದುರ್ಧರ್ಷಸ್ಯ ನೃಪಸ್ಯ ತು ।
ಆಜಗಾಮ ತಮುದ್ದೇಶಂ ಕಲ್ಪೋ ಬ್ರಾಹ್ಮಣಸತ್ತಮಃ ।
ದದರ್ಶ ನೃಪತಿಂ ತತ್ರ ಭ್ರಮಂತಂ ಭ್ರಮರಂ ಯಥಾ ॥ ೨೮ ॥
ಜ್ಞಾತ್ವಾ ಜಾಮಾತರಂ ಸಮ್ಯಕ್ಸಮಾಶ್ವಾಸ್ಯ ವಚೋಽಬ್ರವೀತ್ ।
ಏಹಿ ದುರ್ಧರ್ಷರಾಜೇಂದ್ರ ಗಹನಾ ಕರ್ಮಣೋ ಗತಿಃ ।
ಕ್ವ ಗತೋ ಹಿ ಮಹೀಪಾಲ ನೇಪಾಲವಿಷಯಸ್ತವ ॥ ೨೯ ॥

---

ಕೂಡಿದ ಆ ಚಪಲನೇತ್ರೆಯನ್ನು ಕಂಡು ಮದನಾವಿಷ್ಟನಾಗಿ ರಾಜನನ್ನು ಮೋಹಗೊಳಿಸಿ ಆಕೆಯನ್ನು ಅಪಹರಿಸಿಕೊಂಡುಹೋದನು.

೨೫. ಆಕೆಯು ಅಪಹೃತಳಾದುದನ್ನು ಕಂಡು ರಾಜನು ಅಗಲಿಕೆಯ ದುಃಖದಿಂದ ಮೂರ್ಛೆಗೊಂಡು ಎಚ್ಚತ್ತಮೇಲೆ ವ್ಯಾಕುಲಿತೇಂದ್ರಿಯನಾಗಿ ಪ್ರಲಾಪಿಸತೊಡಗಿದನು.

೨೬–೨೭. "ಓ ಪ್ರಿಯಳೆ! ಪ್ರೇಮಾಮೃತಸಾರೆ! ಪ್ರಣಯಪ್ರವಾಹರೂಪಿಣಿ! ಸುಂದರಿ! ವಿಶಾಲನೇತ್ರೆ! ನನ್ನನ್ನೊಬ್ಬನನ್ನೇ ಬಿಟ್ಟು ಎಲ್ಲಿಗೆ ಹೊರಟುಹೋದೆ? ಚಂದ್ರನಂತೆ ಆನಂದದಾಯಕವಾದ ನಿನ್ನ ಮುಖವನ್ನು ಮತ್ತೆ ಯಾವಾಗ ನೋಡುವೆನೋ?" ಇಂತೆಂದು ಮಂದಹಾಸಸಹಿತಳಾದ ಆಕೆಯನ್ನೇ ಸ್ಮರಿಸುತ್ತ ಪ್ರಲಾಪವನ್ನು ಮಾಡುತ್ತ ಮನ್ಮಥಬಾಧೆಗೂ ಒಳಗಾಗಿ ಅಲ್ಲಲ್ಲಿ ಸಂಚರಿಸುತ್ತಿದ್ದನು.

೨೮. ಇಂತು ವಿಲಾಪಗಳನ್ನು ಮಾಡುತ್ತಿದ್ದ ಆ ರಾಜನ ಬಳಿಗೆ ಬ್ರಾಹ್ಮಣೋತ್ತಮನಾದ ಕಲ್ಪನು ಪ್ರಾಪ್ತನಾಗಿ, ಭ್ರಮರದಂತೆ ದಿಕ್ಕುಗಾಣದೆ ಓಡಾಡುತ್ತಿದ್ದ ಆತನನ್ನು ಕಂಡನು.

೨೯. ಅವನು ತನ್ನ ಅಳಿಯನೆಂಬುದನ್ನು ತಿಳಿದೊಡನೆಯೇ ಅವನನ್ನು ಸಮಾಧಾನಗೊಳಿಸುವಂತೆ ಮೆಲ್ಲಗೆ ಮಾತನಾಡಿದನು. "ರಾಜೇಂದ್ರ! ಬಾ, ಹೋಗೋಣ. ಕರ್ಮದ ಗತಿಯು ತಿಳಿಯಲಶಕ್ಯವಾಗಿರುವುದು. ನಿನ್ನ ನೇಪಾಲದೇಶವು ಈಗ ಎಲ್ಲಿಗೆ ಹೊರಟುಹೋಯಿತು?

ಕುಲೀನಾ ರೂಪವತ್ಯಶ್ಚ ತಿಸ್ರೋ ಭಾರ್ಯಾಃ ಕ್ವ ವೈ ಗತಾಃ ।
ಕ್ವ ತೇ ರಾಜ್ಯಂ ಗತಂ ಭೂಪ ಕುತ್ರ ಪುತ್ರೀ ಗತಾ ಮಮ ॥ ೩೦ ॥
ಸರ್ವಂ ವಿನಶ್ವರಂ ಲೋಕೇ ಗಂಧರ್ವನಗರೋಪಮಮ್ ।
ಅನಿತ್ಯಂ ಜೀವಿತಂ ಭೂಪ ರಾಜ್ಯಂ ವೈ ಬುದ್ಬುದೋಪಮಮ್ ॥ ೩೧ ॥
ಏವಮಾಶ್ವಾಸಿತೋ ರಾಜಾ ಕಲ್ಪೇನ ಚ ಪುನಃ ಪುನಃ ।
ಸಸ್ಮಾರ ತಾಂ ಸುಚಾರ್ವಂಗೀಂ ಮನ್ಮಥೇನಪ್ರಪೀಡಿತಃ ॥ ೩೨ ॥
ಬ್ರೂಹಿ ಮೇ ಭಗವನ್ ಸಮ್ಯಗ್ಯದಿ ತೇಽಸ್ತಿ ದಯಾ ಮಯಿ ।
ಕಥಂ ರಾಜ್ಯಂ ಸ್ವಕೀಯಂ ಸ್ಯಾತ್ಕಥಂ ಮೇ ಸುಹೃದಾಗಮಃ ॥ ೩೩ ॥
ತಿಸ್ರೋ ಭಾರ್ಯಾಃ ಕಥಂ ವಿಪ್ರ ಪಶ್ಯಾಮಿ ಪೃಥಿವೀತಲೇ ।
ಲಾವಣ್ಯಾಮೃತಶಾಲಿನ್ಯಸ್ತವ ಪುತ್ರ್ಯಾ ದ್ವಿಜೋತ್ತಮ ।
ಕಥಂ ಸಮಾಗಮೋ ಭೂಯೋ ಭವಿಷ್ಯತಿ ಮಯಾ ಸಹ ॥ ೩೪ ॥
ಇತಿ ತಸ್ಯ ವಚಃ ಶ್ರುತ್ವಾ ವಿಪ್ರೇಣೋಕ್ತಂ ವರಾನನೇ ।
ಗಚ್ಛ ಭೂಪಾಲ ನೇಪಾಲಂ ಮಹಾಕಾಲಂ ತತೋ ವ್ರಜ ॥ ೩೫ ॥

---

೩೦. ಸತ್ಕುಲಪ್ರಸೂತೆಯರೂ, ಲಾವಣ್ಯವತಿಯರೂ ಆದ ನಿನ್ನ ಮೂವರು ರಾಣಿಯರೆಲ್ಲಿರುವರು? ನಿನ್ನ ರಾಜ್ಯವೆಲ್ಲಿಹೋಯಿತು? ನನ್ನ ಮಗಳೆಲ್ಲಿರುವಳು?

೩೧. ಭೂಪಾಲಕ! ಪ್ರಪಂಚದಲ್ಲಿ ಸಕಲವೂ ನಶ್ವರವಾಗಿ ಆಕಾಶನಗರದಂತೆ ತೋರುತ್ತಿರುವುದು. ನಮ್ಮ ಜೀವಿತವೇ ಅಶಾಶ್ವತವಾಗಿರುವುದು. ರಾಜ್ಯಾಧಿಕಾರಾದಿ ಭೋಗವೆಲ್ಲವೂ ನೀರಿನಮೇಲಿನ ಗುಳ್ಳೆಯಂತಿರುವುದು.''

೩೨. ಇಂತು ಕಲ್ಪನು ಸಮಾಧಾನವಾಕ್ಯಗಳನ್ನಾಡುತ್ತಿದ್ದರೂ ರಾಜನು ಮಾತ್ರ ಮನ್ಮಥವ್ಯಥೆಗೀಡಾಗಿ ಆ ಸುಂದರಿಯನ್ನೇ ಸ್ಮರಿಸುತ್ತಿದ್ದನು.

೩೩. ''ಓ ಬ್ರಾಹ್ಮಣೋತ್ತಮ! ನಿನಗೆ ನನ್ನಲ್ಲಿ ಕರುಣೆಯಿದ್ದರೆ ಇದನ್ನು ತಿಳಿಸು. ನನ್ನ ರಾಜ್ಯವು ಹೇಗೆ ದೊರಕೀತು? ನನಗೆ ಸ್ನೇಹಿತರ ಸಮಾಗಮವಾಗುವುದು ಹೇಗೆ?

೩೪. ದ್ವಿಜೋತ್ತಮನೆ! ನನ್ನ ಆ ಮೂವರು ಪತ್ನಿಯರನ್ನು ಪುನಃ ಭೂಲೋಕದಲ್ಲಿ ಹೇಗೆ ನೋಡುವೆನು? ಲಾವಣ್ಯವತಿಯರಾದ ಅವರಿಗೂ, ನಿನ್ನ ಪುತ್ರಿಗೂ ಪುನಃ ನನ್ನೊಡನೆ ಸಮಾಗಮವಾಗುವುದೆಂತು? ಯಾವಾಗ?''

೩೫. ಸುಂದರಿಯೆ! ಇಂತೆಂದ ರಾಜನ ಮಾತಿಗೆ ಆ ಬ್ರಾಹ್ಮಣನೆಂದನು. ''ಭೂಪಾಲಕನೆ! ನಿನ್ನ ದೇಶವಾದ ನೇಪಾಳವನ್ನು ಸೇರಿ ಅಲ್ಲಿಂದ ಮಹಾಕಾಲವನಕ್ಕೆ ಹೋಗು.

ತಸ್ಮಿನ್ಕ್ಷೇತ್ರೇ ತೀರ್ಥವರೇ ಲಿಂಗಂ ಸರ್ವಾರ್ಥಸಾಧಕಂ ।
ವಿದ್ಯತೇ ಯತ್ರ ಸೂರ್ಯೇಣ ತಪಸ್ತಪ್ತಂ ಸುದುಷ್ಕರಂ ॥ ೩೬ ॥
ಶಿಪ್ರಾಯಾಸ್ತು ತಟೇ ರಮ್ಯೇ ಪುಣ್ಯೇ ಬ್ರಹ್ಮೇಶಪಶ್ಚಿಮೇ ।
ತಸ್ಯ ದರ್ಶನಮಾತ್ರೇಣ ತವಾಽಭೀಷ್ಟಂ ಭವಿಷ್ಯತಿ ॥ ೩೭ ॥
ಕಲ್ಪಸ್ಯ ವಚನಂ ಶ್ರುತ್ವಾ ಸತ್ವರೋ ನೃಪಸತ್ತಮಃ ।
ನೇಪಾಲಂ ಚ ತತೋ ಗತ್ವಾ ಸಮಾಶ್ವಾಸ್ಯ ಸುಹೃಜ್ಜನಂ ॥ ೩೮ ॥
ಸಾಂತಃಪುರಪರೀವಾರೋ ಮಹಾಕಾಲವನಂ ಗತಃ ।
ಸರ್ವದಾ ಸರ್ವಸಿದ್ಧೀನಾಮಾಶ್ರಯಂ ವಿಷಯಂ ಶ್ರಿಯಃ ॥ ೩೯ ॥
ತತ್ರ ಸ್ನಾತ್ವಾ ಜಲೇ ಪುಣ್ಯೇ ಶಿಪ್ರಾಯಾಶ್ಚಾಶುಸಿದ್ಧಿದೇ ।
ಸೂರ್ಯೇಣಾರಾಧಿತಂ ಲಿಂಗಂ ದದರ್ಶ ನೃಪಸತ್ತಮಃ ॥ ೪೦ ॥
ಪೂಜಯಾಮಾಸ ರತ್ನೈಶ್ಚ ದಿವ್ಯೈರ್ವಸ್ತ್ರೈಃ ಸುಭೂಷಣೈಃ ।
ಕರ್ಪೂರೇಣ ಸುಗಂಧೇನ ಲಿಂಗಪೂಜಾ ಕೃತಾ ತದಾ ॥ ೪೧ ॥
ಮುಕ್ತಾಫಲೈಃ ಸುತಾರೈಶ್ಚ ಜಲಧಾರಾಭಿರೇವ ಚ ।
ಭಕ್ತ್ಯಾ ನನರ್ತ ತಸ್ಯಾಗ್ರೇ ಸಂಸ್ತುವನ್ವಿವಿಧೈಃ ಸ್ತವೈಃ ॥ ೪೨ ॥

---

೩೬. ಆ ಕ್ಷೇತ್ರದಲ್ಲಿ ಒಂದು ಉತ್ತಮತೀರ್ಥದ ಬಳಿಯಲ್ಲಿ ಸರ್ವಾಭೀಷ್ಟ ಸಾಧಕವಾದ ಒಂದಾನೊಂದು ಲಿಂಗವಿರುವುದು. ಅಲ್ಲಿ ಹಿಂದೆ ಸೂರ್ಯನು ಮಹಾ ತಪಸ್ಸನ್ನಾಚರಿಸಿರುವನು.

೩೭. ಆ ಲಿಂಗವು ಶಿಪ್ರಾನದಿಯ ತೀರದಲ್ಲಿ ಬ್ರಹ್ಮೇಶ್ವರನಿಗೆ ಪಶ್ಚಿಮಕ್ಕಿರುವುದು. ಅದನ್ನು ನೋಡುವುದರಿಂದಲೇ ನಿನ್ನ ಇಷ್ಟಾರ್ಥವು ನೆರವೇರುವುದು."

೩೮. ಕಲ್ಪನ ಈ ಮಾತನ್ನು ಕೇಳಿ ಆ ರಾಜನು ಬೇಗನೆದ್ದು ನೇಪಾಳದೇಶಕ್ಕೆ ಹೋಗಿ ಅಲ್ಲಿ ತನ್ನ ಬಂಧುಬಳಗದವರೆಲ್ಲರನ್ನೂ ಕಂಡು ಸಂತೋಷಗೊಳಿಸಿದನು.

೩೯. ಬಳಿಕ ಅಂತಃಪುರದವರನ್ನೂ, ಪರಿವಾರವನ್ನೂ ಕರೆದುಕೊಂಡು ನಿತ್ಯವೂ ಸಮಸ್ತಸಿದ್ಧಿಗಳ ನೆಲೆಮನೆಯೂ, ಐಶ್ವರ್ಯದ ಬೀಡೂ ಆದ ಮಹಾಕಾಲವನವನ್ನು ಸೇರಿದನು.

೪೦. ಕ್ಷಿಪ್ರವಾಗಿ ಕಾರ್ಯಸಿದ್ಧಿಯನ್ನು ಕೈಗೂಡಿಸುವ ಆ ಶಿಪ್ರಾಜಲದಲ್ಲಿ ಮಿಂದು ಆ ರಾಜಸತ್ತಮನು ಸೂರ್ಯನಿಂದ ಪೂಜೆಗೊಳ್ಳುತ್ತಿದ್ದ ಆ ಮಹಾಲಿಂಗವನ್ನು ಕಂಡನು.

೪೧. ಅದನ್ನು ನವರತ್ನಗಳಿಂದಲೂ, ದಿವ್ಯವಸ್ತ್ರಗಳಿಂದಲೂ, ಆಭರಣಗಳಿಂದಲೂ, ಕರ್ಪೂರ, ಸುಗಂಧದ್ರವ್ಯಗಳಿಂದಲೂ ಯಥಾವಿಧಿಯಾಗಿ ಪೂಜಿಸಿದನು.

೪೨. ಉಜ್ಜ್ವಲಗಳಾದ ಆಣಿಮುತ್ತುಗಳಿಂದಲೂ, ಜಲಧಾರೆಗಳಿಂದಲೂ

ಶುಶ್ರಾವ ಶ್ರೋತ್ರಪೀಯೂಷಂ ಗೀತಂ ದೇವಗೃಹೇ ಶುಭೇ ।
ತಚ್ಛ್ರುತ್ವಾ ಕೌತುಕಾವಿಷ್ಟೋ ಧ್ವನಿಂ ಶ್ರುತ್ವಾ ಮನೋರಮಾಂ ।
ಪ್ರಿಯಾಮಪಶ್ಯತ್ತತ್ರಸ್ಥಾಂ ಲಾವಣ್ಯಲಲನಾವಧಿಂ ॥ ೪೩ ॥
ತಾಂ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಸ್ತನ್ಮಯೋಽಭವತ್ ।
ಕ್ಷಿಪ್ರಂ ತದ್ದರ್ಶನೇನೈವ ಸ್ಮರೇಣ ತರಲೀಕೃತಃ ॥ ೪೪ ॥
ಜ್ಞಾತ್ವಾ ಮೇ ಸೈವ ಪತ್ನೀಯಂ ದೃಷ್ಟ್ವಾ ದೇವಪ್ರಸಾದತಃ ।
ಸಾಽಪಿ ಲಾವಣ್ಯನಲಿನೀಂ ರಾಜಹಂಸಂ ವಿಲೋಕ್ಯ ತಂ ॥ ೪೫ ॥
ಕ್ಷಿಪ್ರಂ ಪುಲಕಿತಾ ತಸ್ಯಾ ವಿರರಾಜ ಕುಚಸ್ಥಲೀ ।
ಏತಸ್ಮಿನ್ನಂತರೇ ದೇವಿ ವಾಣೀ ಲಿಂಗಾತ್ಸಮುತ್ಥಿತಾ ॥ ೪೬ ॥
ವಿಶ್ವಾವಸೋಃ ಸಿದ್ಧಪತೇಃ ಸುತೈಷಾ ಪ್ರಾಣವಲ್ಲಭಾ ।
ಕಲ್ಪೇನ ಪಾಲಿತಾ ಸಮ್ಯಕ್ತ್ವದರ್ಥಂ ನೃಪಸತ್ತಮ ॥ ೪೭ ॥
ಆನೀತಾ ತೇ ಮಯಾ ಪತ್ನೀ ಹತ್ವಾಂ ತಂ ರಾಕ್ಷಸಾಧಿಪಂ ।
ಗೃಹಾಣ ಚ ಮಯಾ ದತ್ತಾಂ ಭುಂಕ್ಷ್ವ ರಾಜ್ಯಮಕಂಟಕಂ ॥ ೪೮ ॥

---

ಆ ಲಿಂಗಕ್ಕೆ ಅಭಿಷೇಕಗಳನ್ನು ಮಾಡಿಸಿ ಭಕ್ತಿಯಿಂದ ಅನೇಕ ಸ್ತೋತ್ರಗಳನ್ನು ಪಠಿಸುತ್ತ ಅದರ ಮುಂದೆ ನರ್ತನಸೇವೆಯನ್ನರ್ಪಿಸಿದನು.

೪೩. ಅಷ್ಟರಲ್ಲಿ ದೇವಾಲಯದೊಳಗಿನಿಂದ ಕಿವಿಗೆ ಅಮೃತದಂತಿರುವ ಸಂಗೀತವನ್ನು ಕೇಳಿ ಮನವೊಲಿದು ಕೌತುಕದಿಂದ ಬಳಿಗೆ ಹೋಗಿ ನೋಡಲು ಅಲ್ಲಿ ಸೌಂದರ್ಯದ ಪರಾಕಾಷ್ಠೆಯಂತಿದ್ದ ತನ್ನ ಪತ್ನಿಯನ್ನು ಕಂಡನು.

೪೪. ಆಕೆಯನ್ನು ಕಂಡ ಕ್ಷಣದಲ್ಲಿಯೇ ಆತನು ವಿಸ್ಮಯದಿಂದ ಪರವಶನೂ, ಕಾಮಾಗ್ನಿಸಂತಪ್ತನೂ ಆದನು.

೪೫. "ಮಹಾದೇವನ ಪ್ರಸಾದದಿಂದ ಆ ನನ್ನ ಪತ್ನಿಯೇ ಇವಳು" ಎಂಬುದನ್ನು ತಿಳಿದನು. ಸರ್ವಾಂಗಸುಂದರಿಯಾದ ಆಕೆಯೂ ಮಹಾರಾಜನನ್ನು ನೋಡಿದಳು.

೪೬. ಆಗಲೇ ಆಕೆಯ ಕುಚಗಳು ರೋಮಾಂಚಿತಗಳಾದುವು. ಆಗ ಆ ಲಿಂಗದೊಳಗಿನಿಂದ ಅಶರೀರವಾಣಿಯು ಹೇಳಿತು.

೪೭. "ಮಹಾರಾಜ! ಈಕೆಯು ಸಿದ್ಧನಾಯಕನಾದ ವಿಶ್ವಾವಸುವಿನ ಪ್ರೀತಿಪಾತ್ರಳಾದ ಮಗಳು. ನಿನಗಾಗಿಯೇ ಈಕೆಯನ್ನು ಕಲ್ಪಬ್ರಾಹ್ಮಣನು ಪೋಷಿಸುತ್ತಿದ್ದನು.

೪೮. ನಾನು ಆ ನೀಚರಾಕ್ಷಸನನ್ನು ಕೊಂದು ನಿನ್ನ ಹೆಂಡತಿಯನ್ನು ಕರೆದುತಂದಿರುವೆನು. ನಾನು ಕೊಡುವ ಈಕೆಯನ್ನು ಪರಿಗ್ರಹಿಸಿ ನಿಷ್ಕಂಟಕವಾದ ರಾಜ್ಯಭೋಗವನ್ನನುಭವಿಸು."

ಇತ್ಯುಕ್ತ್ವೋಽಸೌ ಗತೋ ದೇವಿ ಲಬ್ಧ್ವಾ ಭಾರ್ಯಾಂ ಪ್ರಿಯಾಂ ತದಾ ।
ಸಾಂತಃಪುರಪರೀವಾರೋ ಲಿಂಗಸ್ಯಾಸ್ಯ ಪ್ರಭಾವತಃ ॥ ೪೯ ॥
ಆರಾಧಿತೋ ನರೇಂದ್ರೇಣ ದುರ್ಧರ್ಷೇಣ ಮಹಾತ್ಮನಾ ।
ತದಾ ಪ್ರಭೃತಿ ದೇವೋಽಯಂ ದುರ್ಧರ್ಷೇಶ್ವರಸಂಜ್ಞಕಃ ।
ತ್ರಿಷು ಲೋಕೇಷು ವಿಖ್ಯಾತೋ ವಾಂಛಿತಾರ್ಥಫಲಪ್ರದಃ ॥ ೫೦ ॥
ಯೇ ಪಶ್ಯಂತಿ ವಿಶಾಲಾಕ್ಷಿ ದುರ್ಧರ್ಷೇಶ್ವರಸಂಜ್ಞಕಂ ।
ತೇ ದುರ್ಧರ್ಷಾ ಭವಿಷ್ಯಂತಿ ಶತ್ರೂಣಾಂ ಸಮರೇ ಸದಾ ॥ ೫೧ ॥
ಸಂಕ್ರಾಂತೌ ರವಿವಾರೇ ಚ ಗ್ರಹಣೇ ಚಂದ್ರಸೂರ್ಯಯೋಃ ।
ಗತ್ವಾರ್ಚಯಂತಿ ಯೇ ದೇವಿ ದೇವಂ ದುರ್ಧರ್ಷನಿಶ್ವರಂ ।
ತೇ ಪ್ರಯಾಂತಿ ವಿಮಾನೇನ ಮದೀಯಂ ಸ್ಥಾನಮುತ್ತಮಂ ॥ ೫೨ ॥
ಪಾಪಾಚಾರಾಶ್ಚ ಯೇ ಜೀವಾ ದುಷ್ಕರ್ಮನಿರತಾ ನರಾಃ ।
ಮುಚ್ಯಂತೇ ಪಾತಕಾತ್ಸದ್ಯೋ ದುರ್ಧರ್ಷೇಶ್ವರ ದರ್ಶನಾತ್ ॥ ೫೩ ॥

---

೪೯. ಪಾರ್ವತಿಯೆ! ಇಂತೆಂದ ಆ ಲಿಂಗದ ಮಾತನ್ನು ಕೇಳಿ ಅದರ ಮಹಿಮೆಯಿಂದಲೇ ತನ್ನ ಪ್ರಿಯಪತ್ನಿಯನ್ನು ಪಡೆದ ಮಹಾರಾಜನು ತನ್ನ ಅಂತಃಪುರಕ್ಕೆ ಹೊರಟುಹೋದನು.

೫೦. ಮಹಾತ್ಮನಾದ ದುರ್ಧರ್ಷಮಹಾರಾಜನಿಂದ ಪೂಜಿತವಾದ ದಿನದಿಂದ ಈ ಲಿಂಗವು ದುರ್ಧರ್ಷೇಶ್ವರನೆಂದು ಹೆಸರನ್ನು ಪಡೆದು ಮೂರುಲೋಕಗಳಲ್ಲಿಯೂ ಪ್ರಖ್ಯಾತವಾಯಿತು. ಈ ಲಿಂಗವು ಸಕಲವಾಂಛಿತಗಳನ್ನೂ ಕೊಡುವುದಾಗಿರುವುದು.

೫೧. ವಿಶಾಲಾಕ್ಷಿಯೆ! ಯಾರು ಈ ದುರ್ಧರ್ಷೇಶ್ವರನನ್ನು ನೋಡುವರೊ, ಅವರು ಯುದ್ಧರಂಗದಲ್ಲಿ ಶತ್ರುಗಳಿಗೆ ಅಜೇಯರಾಗಿ ಜಯಿಸಲಸಾಧ್ಯರಾಗಿರುವರು.

೫೨. ದೇವಿಯೆ! ಸಂಕ್ರಮಣ, ಭಾನುವಾರ, ಚಂದ್ರಸೂರ್ಯರ ಗ್ರಹಣಗಳು ಮುಂತಾದ ದಿನಗಳಲ್ಲಿ ಯಾರು ಈ ಮಹಾಲಿಂಗದ ಪೂಜೆಯನ್ನು ಮಾಡುವರೊ, ಅವರು ದಿವ್ಯವಿಮಾನದಲ್ಲಿ ಕುಳಿತು ನನ್ನ ಉತ್ತಮಲೋಕವನ್ನು ಸೇರುವರು.

೫೩. ಪಾಪಚಾರಿಗಳೂ, ದುಷ್ಕರ್ಮಗಳಲ್ಲಿಯೇ ತೊಡಗಿರುವವರೂ ಸಹ ಈ ಲಿಂಗವನ್ನು ನೋಡುವುದರಿಂದ ತಮ್ಮ ಪಾಪಗಳನ್ನು ಕ್ಷಣಮಾತ್ರದಲ್ಲಿ ಕಳೆದುಕೊಳ್ಳುವರು.

ದರ್ಶನಾತ್ಸ್ಪರ್ಶನಾತ್ಸದ್ಯೋ ನಾಮಸಂಕೀರ್ತನಾದಪಿ ।
ಬ್ರಹ್ಮಹತ್ಯಾ ಸಹಸ್ರಂ ಹಿ ತತ್ಕ್ಷಣಾದೇವ ನಶ್ಯತಿ ॥ ೫೪ ॥
ಕೃತಘ್ನೋ ನಿಂದಕೋ ದುಷ್ಟಃ ಪಾಪಕರ್ಮಾ ದುರಾತ್ಮವಾನ್ ।
ಪರದಾರರತಶ್ಚೋರೋ ಬ್ರಹ್ಮಘ್ನೋ ಗುರುತಲ್ಪಗಃ ।
ಮುಚ್ಯತೇ ಸರ್ವಪಾಪೇಭ್ಯೋ ದುರ್ಧರ್ಷೇಶ್ವರದರ್ಶನಾತ್ ॥ ೫೫ ॥
ಅಯನೇ ವಿಷುವೇ ಚೈವ ಸಂಪ್ರಾಪ್ತೇ ಸೋಮಪರ್ವಣಿ ।
ಯೇ ಪಶ್ಯಂತಿ ಚ ದುರ್ಧರ್ಷಂ ಸ್ನಾತ್ವಾ ಶಿಪ್ರಾಜಲೇ ಶುಭೇ ।
ಗಂಗಾಯಾಸ್ತ್ರಿಗುಣಂ ಪುಣ್ಯಂ ಜಾಯತೇ ನಾಽತ್ರ ಸಂಶಯಃ ॥ ೫೬ ॥
ತತ್ರ ಯದ್ದೀಯತೇ ದಾನಂ ತಸ್ಯ ಸಂಖ್ಯಾ ನ ವಿದ್ಯತೇ ।
ಪಿತರಸ್ತೋಷಿತಾಸ್ತೇನ ಆತ್ಮಾ ವೈ ತೋಷಿತಸ್ತತಃ ॥ ೫೭ ॥
ಕಲ್ಪಕೋಟಿಸಹಸ್ರಂ ತು ಮತ್ಪುರೇ ಪೂಜಿತೋ ವಸೇತ್ ।
ಯದಾ ಯಾತಿ ಚ ಭೂಲೋಕೇ ತದಾಽಸೌ ಭೂಪತಿರ್ಭವೇತ್ ॥ ೫೮ ॥
ಅಧೃಷ್ಯಃ ಶತ್ರುವರ್ಗೇಣ ಫಲಂ ಪ್ರಾಪ್ನೋತಿ ಚಾಽಕ್ಷಯಂ ।
ಪದಂ ಯತ್ತ್ರಿದಶೈರ್ವಂದ್ಯಂ ಪುನರಾವೃತ್ತಿವರ್ಜಿತಂ ॥ ೫೯ ॥

---

೫೪. ಈ ಲಿಂಗದ ದರ್ಶನದಿಂದಲೂ, ಸ್ಪರ್ಶನದಿಂದಲೂ, ನಾಮಕೀರ್ತನದಿಂದಲೂ ಒಂದುಸಾವಿರ ಬ್ರಹ್ಮಹತ್ಯೆಗಳು ಸದ್ಯದಲ್ಲಿಯೇ ನಾಶವಾಗುವುವು.

೫೫. ದುರ್ಧರ್ಷೇಶ್ವರನ ದರ್ಶನದಿಂದ ಕೃತಘ್ನನೂ, ಪರನಿಂದಕನೂ, ದುಷ್ಟನೂ, ಪಾಪಕರ್ಮಪರನೂ, ದುಷ್ಟಬುದ್ಧಿಯೂ, ಪರಸ್ತ್ರೀಲಂಪಟನೂ, ಚೋರನೂ, ಬ್ರಾಹ್ಮಣಘಾತಕನೂ, ಗುರುತಲ್ಪಗಾಮಿಯೂ ಸಮಸ್ತಪಾಪಗಳಿಂದಲೂ ಮುಕ್ತರಾಗುವರು.

೫೬. ಅಯನಾದಿ ಪುಣ್ಯಕಾಲಗಳಲ್ಲಿಯೂ, ವಿಷುವತ್ಕಾಲದಲ್ಲಿಯೂ, ಚಂದ್ರನ ಪರ್ವತಿಥಿಗಳಲ್ಲಿಯೂ ಯಾರು ಪವಿತ್ರವಾದ ಶಿಪ್ರಾಜಲದಲ್ಲಿ ಸ್ನಾನವನ್ನು ಮಾಡಿ ದುರ್ಧರ್ಷೇಶ್ವರನನ್ನು ನೋಡುವರೊ, ಅವರಿಗೆ ಗಂಗಾಯಾತ್ರೆಯನ್ನು ಮಾಡಿದುದರ ಮೂರರಷ್ಟು ಪುಣ್ಯವುಂಟಾಗುವುದರಲ್ಲಿ ಸಂದೇಹವಿಲ್ಲ.

೫೭. ಅಲ್ಲಿ ಮಾಡಿದ ದಾನದ ಫಲವನ್ನಂತೂ ಗುಣಿಸಲಾಗುವುದಿಲ್ಲ. ಆ ದಾನಮಾಡಿದವನ ಪಿತೃಗಳೂ ಸಂತುಷ್ಟರಾಗುವರು. ದಾತೃವೂ ಸಂತೋಷಪಡುವನು.

೫೮. ಅವನು ಸಾವಿರಕೋಟಿ ಕಲ್ಪಗಳವರೆಗೂ ನನ್ನ ನಗರದಲ್ಲಿ ಪೂಜ್ಯನಾಗಿ ವಾಸಮಾಡಿ ಪುನಃ ಭೂಲೋಕಕ್ಕೆ ಬಂದರೆ ಮಹಾರಾಜನಾಗಿ ಜನಿಸುವನು.

೫೯. ಶತ್ರುಗಳಿಗೆ ಅಜೇಯನಾಗಿ ದೇವತೆಗಳಿಗೂ ಪೂಜ್ಯವೂ, ನಾಶರಹಿತವೂ, ಪುನರಾವೃತ್ತಿರಹಿತವೂ ಆದ ಮಹಾಪದವಿಯನ್ನು ಪಡೆಯುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ದುರ್ಧರ್ಷೇಶ್ವರದೇವಸ್ಯ ಪ್ರಯಾಗೇಶಮತಃ ಶೃಣು ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ದುರ್ಧರ್ಷೇಶ್ವರಮಾಹಾತ್ಮ್ಯವರ್ಣನಂ"
ನಾಮ ಸಪ್ತತಿತಮೋಽಧ್ಯಾಯಃ

---

೬೦. ದೇವಿಯೆ! ಇಂತು ನಿನಗೆ ದುರ್ಧರ್ಷೇಶ್ವರಮಹಾಲಿಂಗದ ಚರಿತ್ರೆಯನ್ನು ಹೇಳಿರುವೆನು. ಇನ್ನು ಪ್ರಯಾಗೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ದುರ್ಧರ್ಷೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಸಪ್ತತಿತಮೋಽಧ್ಯಾಯಃ

### ಪ್ರಯಾಗೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ:—

ಏಕಸಪ್ತತಿಕಂ ದೇವಂ ಪ್ರಯಾಗೇಶ್ವರ ಸಂಜ್ಞಕಂ ।
ಅದ್ವಿತೀಯಂ ವಿಜಾನೀಹಿ ಮಹಾಪಾತಕನಾಶನಂ ॥ ೧ ॥
ಹಾಸ್ತಿನೇಽಭೂತ್ಪುರೇ ಶ್ರೀಮಾಂಛಂತನುರ್ನೃಪಸತ್ತಮಃ ।
ವೈವಸ್ವತೇಂತರೇ ಕಲ್ಪೇ ಯುಗೇ ದ್ವಾಪರಸಂಜ್ಞಕೇ ॥ ೨ ॥
ಸಚಾಽದ್ಭುತಮಹಾವೀರ್ಯೋ ವಜ್ರಸಂಹನನೋ ಯುವಾ ।
ಸರ್ವಶಾಸ್ತ್ರೇಷು ಕುಶಲಃ ಕಲಾಪುಂಜವಿಚಕ್ಷಣಃ ॥ ೩ ॥
ಬಲೇನ ವಿಷ್ಣುಸದೃಶಸ್ತೇಜಸಾ ಭಾಸ್ಕರೋಪಮಃ ।
ಗಂಗಾಮೇಷ ಚಚಾರೈಕಃ ಸಿದ್ಧಚಾರಣಸೇವಿತಾಂ ॥ ೪ ॥
ಸ ಕದಾಚಿನ್ಮಹಾಬಾಹುಃ ಪ್ರಭೂತಬಲವಾಹನಃ ।
ವನಂ ಜಗಾಮ ಗಹನಂ ಹಯನಾಗಶತೈರ್ವೃತಃ ॥ ೫ ॥

---

### ಕನ್ನಡದ ಅನುವಾದ

#### ಪ್ರಯಾಗೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಎಪ್ಪತ್ತೊಂದನೆಯ ಮಹಾಲಿಂಗವೇ ಅದ್ವಿತೀಯವೂ, ಮಹಾಪಾಪಗಳನ್ನು ಕಳೆಯುವುದೂ ಆದ ಪ್ರಯಾಗೇಶ್ವರನೆಂದು ತಿಳಿ.

೨. ದ್ವಾಪರಯುಗದ ವೈವಸ್ವತಮನ್ವಂತರದಲ್ಲಿ ಹಸ್ತಿನಾನಗರವನ್ನು ಶಂತನುವೆಂಬ ಚಕ್ರವರ್ತಿಯು ಆಳುತ್ತಿದ್ದನು.

೩. ಅವನು ಅದ್ಭುತವಾದ ಪರಾಕ್ರಮವಂತನೂ, ವಜ್ರಕಾಯನೂ, ಪ್ರೌಢವಯಸ್ಕನೂ, ಸಮಸ್ತಶಾಸ್ತ್ರಗಳಲ್ಲಿ ನಿಪುಣನೂ, ಕಲಾವಿದ್ಯೆಗಳಲ್ಲಿ ವಿಚಕ್ಷಣನೂ ಆಗಿದ್ದನು.

೪. ಬಲದಲ್ಲಿ ಮಹಾವಿಷ್ಣುವಿಗೂ, ತೇಜಸ್ಸಿನಲ್ಲಿ ಸೂರ್ಯನಿಗೂ, ಸಮಾನನಾದ ಆತನೊಮ್ಮೆ ಸಿದ್ಧಚಾರಣರಿಂದ ಸೇವಿತವಾದ ಗಂಗಾನದಿಯ ಬಳಿಯಲ್ಲಿ ಸಂಚರಿಸುತ್ತಿದ್ದನು.

೫. ಮಹಾಬಲಶಾಲಿಯಾದ ಆತನು ಅಪಾರವಾದ ಸೈನ್ಯ ವಾಹನಗಳನ್ನು ಸೇರಿಸಿಕೊಂಡು ನೂರಾರು ಆನೆ ಕುದುರೆಗಳ ಸೈನ್ಯದೊಡನೆ ದುರ್ಗಮವಾದ ಅರಣ್ಯವನ್ನು ಪ್ರವೇಶಿಸಿದನು.

ಗತ್ವಾ ತತ್ರ ಮೃಗಾನ್ವ್ಯಾಘ್ರಾನ್ ಘಾತಯಾಮಾಸ ಲೀಲಯಾ ।
ಮಹಿಷಾಶ್ವವರಾಹಾಂಶ್ಚ ವಿನಿಘ್ನನ್ರಾಜಸತ್ತಮಃ ॥ ೬ ॥
ಸ ಕದಾಚಿದ್ವನೇ ತಸ್ಮಿನ್ದದರ್ಶ ಪರಮಾಂ ಸ್ತ್ರಿಯಂ ।
ಜಾಜ್ವಲ್ಯಮಾನಾಂ ವಪುಷಾ ಸಾಕ್ಷಾತ್ಪದ್ಮಾಮಿವಾಽಪರಾಂ ॥ ೭ ॥
ತಾಂ ದೃಷ್ಟ್ವಾ ಹೃಷ್ಟರೋಮಾಽಭೂದ್ವಿಸ್ಮಿತೋ ರೂಪಸಂಪದಾ ।
ಪಿಬನ್ನಿವ ಚ ನೇತ್ರಾಭ್ಯಾಂ ನಾಽತೃಪ್ಯತ ನರಾಧಿಪಃ ॥ ೮ ॥
ಸಾ ದೃಷ್ಟ್ವೈವಚ ರಾಜಾನಂ ವಿಚರಂತಂ ಮಹಾದ್ಯುತಿಂ ।
ಸ್ನೇಹಾದಾಗತಸೌಹಾರ್ದಾನ್ನಾಽತೃಪ್ಯತ ವಿಲಾಸಿನೀ ॥ ೯ ॥
ತಾಮುವಾಚ ತತೋ ರಾಜಾ ಸಾಂತ್ವಯಂಛ್ಲಕ್ಷ್ಣಯಾ ಗಿರಾ ।
ದೇವೀ ವಾ ದಾನವೀ ತ್ವಂ ಚ ಗಂಧರ್ವೀ ಯದಿ ವಾಽಪ್ಸರಾಃ ॥ ೧೦ ॥
ಯಕ್ಷೀ ವಾ ಪನ್ನಗೀ ವಾ ತ್ವಂ ಮಾನುಷೀ ವಾ ಸುಮಧ್ಯಮೇ ।
ಯಾಚೇ ತ್ವಾಂಽಂಭೋಜಗರ್ಭಾಭೇ ಭಾರ್ಯಾ ಮೇ ಭವಶೋಭನೇ॥೧೧॥

---

೬. ಅಲ್ಲಿ ಬೇಟೆಯಾಡುತ್ತ ಮಹಾರಾಜನು ಜಿಂಕೆಗಳು, ಹುಲಿಗಳು, ಕಾಡೆಮ್ಮೆಗಳು, ಕಾಡುಕುದುರೆಗಳು, ಕಾಡುಹಂದಿಗಳು ಮುಂತಾದುವನ್ನು ಲೀಲೆಯಿಂದಲೇ ಹೊಡೆದು ಸಾಯಿಸುತ್ತಿದ್ದನು.

೭. ಬರಬರುತ್ತ ಆ ವನದಲ್ಲಿ ಆತನು ಕಾಂತಿಯುಕ್ತವಾದ ಶರೀರ ದಿಂದೊಪ್ಪುತ್ತ ಎರಡನೆಯ ಮಹಾಲಕ್ಷ್ಮಿಯೋ ಎಂಬ ಭ್ರಾಂತಿಯನ್ನುಂಟು ಮಾಡುತ್ತಿರುವ ಒಬ್ಬ ಸ್ತ್ರೀಯನ್ನು ಕಂಡನು.

೮. ಆಕೆಯನ್ನು ಕಂಡೊಡನೆಯೇ ಆ ರಾಜೇಂದ್ರನು ಪುಳಕಿತಶರೀರನೂ, ಆಕೆಯ ಲಾವಣ್ಯಸಂಪತ್ತಿಗೆ ವಿಸ್ಮಯಗೊಂಡವನೂ ಆಗಿ ನೇತ್ರಗಳಿಂದ ಪಾನ ಮಾಡಿಯೂ ತೃಪ್ತಿಯಿಲ್ಲದವನಂತೆ ತೋರುತ್ತಿದ್ದನು.

೯. ಆ ಸುಂದರಾಂಗಿಯೂ ವನದಲ್ಲಿ ಸಂಚರಿಸುತ್ತಿರುವ ಮಹಾ ತೇಜಸ್ವಿ ಯಾದ ಆತನನ್ನು ಕಂಡು ಸ್ನೇಹದಿಂದಲೂ, ಒಡಮೂಡಿದ ಪ್ರೇಮದಿಂದಲೂ ಅತೃಪ್ತಳಾಗಿದ್ದಳು.

೧೦. ರಾಜನು ಆಕೆಯನ್ನು ಮೃದುವಾದ ಮಾತಿನಿಂದ ಮಾತನಾಡಿಸಿದನು. "ಸುಂದರಿಯೆ ! ನೀನು ದೇವತೆಯೊ, ರಾಕ್ಷಸಿಯೊ, ಗಂಧರ್ವಕನ್ಯೆಯೊ ಅಥವಾ ಅಪ್ಸರೆಯೊ ?

೧೧. ಬಡನಡುವಿನ ಓ ಬೆಡಗಿಯೆ! ನೀನು ಯಕ್ಷಿಯೊ, ನಾಗವಧುವೊ ಅಥವಾ ಮನುಷ್ಯಳೊ? ಕಮಲಗರ್ಭಸದೃಶಳೆ! ಇದೋ ನಾನು ನಿನ್ನನ್ನು ಬೇಡುತ್ತಿರುವೆನು. ನೀನು ನನ್ನ ಮಡದಿಯಾಗು."

ಏತಚ್ಛ್ರುತ್ವಾ ವಚೋ ರಾಜ್ಞಃ ಸಂಸ್ತುತಂ ಮೃದುವಲ್ಗು ಚ ।
ಅಂಗೀಕೃತಂ ತಯಾ ದೇವಿ ಸಮಯಂ ಪ್ರಾರ್ಥಿತೋ ನೃಪಃ ॥ ೧೨ ॥
ವಾರಿತಾ ವಿಪ್ರಿಯೇ ವಾಽಪಿ ತ್ಯಜೇಯಂ ತ್ವಾಮಸಂಶಯಂ ।
ನ ಪ್ರಷ್ಟವ್ಯಾ ತ್ವಯಾ ರಾಜನ್ಕಾಸಿ ಕಸ್ಯೇತಿ ಸರ್ವಥಾ ॥ ೧೩ ॥
ಏವಮಸ್ತ್ವಿತಿ ತೇನೋಕ್ತಂ ಸತ್ಯೇನ ಸುಕೃತೇನ ಚ ।
ಸ ತಸ್ಯಾಃ ಶೀಲವೃತ್ತೇನ ರೂಪೌದಾರ್ಯಗುಣೇನ ಚ ॥ ೧೪ ॥
ಉಪಚಾರೇಣ ಚ ರಹಸ್ತುತೋಽಷ ಜಗತೀಪತಿಃ ।
ದಿವ್ಯರೂಪಾ ಹಿ ಸಾ ದೇವೀ ಗಂಗಾ ತ್ರಿಪಥಗಾ ನದೀ ॥ ೧೫ ॥
ಮಾನುಷಂ ವಿಗ್ರಹಂ ಕೃತ್ವಾ ಶ್ರೀಮಂತಂ ವರವರ್ಣಿನಿ ।
ರಾಜಾನಂ ರಮಯಾಮಾಸ ಯಥಾ ರೇಮೇ ತಥೈವ ಚ ॥ ೧೬ ॥
ಸ ರಾಜಾ ರತಿಸಕ್ತತ್ವಾದುತ್ತಮಸ್ತ್ರೀಗುಣೈರ್ಹೃತಃ ।
ಸಂವತ್ಸರಾನೃತೂನ್ಮಾಸಾನ್ನ ಬುಬೋಧ ಬಹೂನ್ಗತಾನ್ ॥ ೧೭ ॥

---

೧೨. ರಾಜನು ಇಂತು ಮೃದುವಾಗಿಯೂ, ಮಧುರವಾಗಿಯೂ ಆಡಿದ ಮಾತುಗಳನ್ನು ಕೇಳಿ ಆಕೆಯೂ ಅಂಗೀಕರಿಸಿ ರಾಜನಲ್ಲಿ ಒಂದು ಒಪ್ಪಂದವನ್ನು ಮಾತ್ರ ಮಾಡಿಕೊಂಡಳು.

೧೩. "ರಾಜೇಂದ್ರ! ಎಂದಾದರೂ ನಾನು ಮಾಡುವ ಕೆಲಸವು ನಿನಗೆ ಅಪ್ರಿಯವಾಗಿ ನನ್ನನ್ನು ತಡೆದರೆ ಅಂದೇ ನಿನ್ನನ್ನು ತ್ಯಜಿಸುವೆನು. ಮತ್ತು ನನ್ನನ್ನು "ನೀನು ಯಾರು? ಯಾರ ಮಗಳು?" ಮುಂತಾಗಿ ಎಂದೂ ಕೇಳ ಕೂಡದು.

೧೪–೧೫. ಹಾಗೆಯೇ ಆಗಲೆಂದು ರಾಜನು ಸತ್ಯದಮೇಲೆಯೂ, ಪುಣ್ಯದ ಮೇಲೆಯೂ ಶಪಥವನ್ನು ಮಾಡಿದನು. ಆಕೆಯ ಶೀಲ, ನಡತೆ, ರೂಪ, ಔದಾರ್ಯ, ಸದ್ಗುಣಗಳಿಂದಲೂ, ಪತಿಶುಶ್ರೂಷೆಯಿಂದಲೂ ರಾಜನು ಬಹಳ ಸಂತೋಷಗೊಂಡನು. ಆಕೆಯು ನಿಜವಾಗಿ ದಿವ್ಯರೂಪವನ್ನು ತಾಳಿಬಂದ ತ್ರಿಪಥಗಾಮಿನಿಯಾದ ಗಂಗೆಯೇ ಆಗಿದ್ದಳು.

೧೬. ಪಾರ್ವತಿಯೆ! ಆಕೆಯು ಮನುಷ್ಯಾಕಾರವನ್ನು ತಾಳಿಬಂದು ಮಹೈಶ್ವರ್ಯವಂತನಾದ ಮಹಾರಾಜನನ್ನು ಸಂತೋಷಗೊಳಿಸುತ್ತಿದ್ದಳು.

೧೭. ಆ ರಾಜನೂ ಸುರತದಲ್ಲಿಯೇ ಆಸಕ್ತನಾಗಿ ಆ ಉತ್ತಮಪತ್ನಿಯ ಗುಣಗಳಿಂದ ಮೋಹಿತನಾಗಿ ಅನೇಕ ಸಂವತ್ಸರಗಳು, ಋತುಗಳು, ಮಾಸಗಳು ಕಳೆದುದನ್ನೂ ತಿಳಿಯಲೇ ಇಲ್ಲ.

ರಮಮಾಣಸ್ತಯಾ ಸಾರ್ಧಂ ಯಥಾ ಕಾಮಂ ನರೇಶ್ವರಃ ।
ಅಷ್ಟಾವಜನಯತ್ಪುತ್ರಾಂಸ್ತಸ್ಯಾಮಮರವರ್ಣಿನಃ ॥ ೧೮ ॥
ಜಾತಂ ಜಾತಂ ಚ ಸಾ ಪುತ್ರಂ ಕ್ಷಿಪತ್ಯಂಭಸಿ ಮುಕ್ತಯೇ ।
ಪ್ರೀಣಾಮಿ ತ್ವಾಮಹಮಿತಿ ಗಂಗಾಸ್ರೋತಸಿ ಪಾವನೇ ॥ ೧೯ ॥
ನಾಽಸ್ಯ ತತ್ತು ಪ್ರಿಯಂ ರಾಜ್ಞಃ ಶಂತನೋರ್ಹ್ಯಭವತ್ತದಾ ।
ನೋವಾಚ ಕಿಂಚಿತ್ತಾಂ ದೇವೀಂ ತ್ಯಾಗಾದ್ಭೀತೋ ಮಹೀಪತಿಃ ॥ ೨೦ ॥
ಅಥೈನಾಮಷ್ಟಮೇ ಪುತ್ರೇ ಜಾತೇ ಪ್ರಹಸತೀಮಿವ ।
ಉವಾಚ ರಾಜಾ ದುಃಖಾರ್ತಃ ಪರೀಪ್ಸನ್ಪುತ್ರಮಾತ್ಮನಃ ॥ ೨೧ ॥
ಮಾವಧೀಃ ಕಸ್ಯ ಕಾಸೀತಿ ಕಿಂ ವಿಧ್ವಂಸಿ ಸುತಾನಿತಿ ।
ಪುತ್ರಹಿಂಸಾ ಮಹತ್ಪಾಪಂ ಮಾಪ್ರಾಪ್ಸೀಸ್ತಿಷ್ಠ ಗರ್ಹಿತೇ ॥ ೨೨ ॥

ಗಂಗೋವಾಚ :—

ಪುತ್ರಕಾಮಾ ನ ತೇ ಹನ್ಮಿ ಪುತ್ರಂ ಪುತ್ರವತಾಂ ವರ ।
ಜೀರ್ಣಸ್ತು ಮಮ ವಾಸೋಽಯಂ ಯಥಾ ಮೇ ಸಮಯಃ ಕೃತಃ ॥ ೨೩ ॥

---

೧೮. ಇಂತು ಸ್ವೇಚ್ಛೆಯಾಗಿ ವಿಹರಿಸುತ್ತ ಮಹಾರಾಜನು ಆಕೆಯಲ್ಲಿ ದೇವತೆಗಳನ್ನು ಹೋಲುವ ಎಂಟುಮಂದಿ ಗಂಡುಮಕ್ಕಳನ್ನು ಪಡೆದನು.

೧೯. ಒಂದೊಂದು ಮಗುವು ಹುಟ್ಟಿದಾಗಲೂ ಆಕೆಯು, "ನಿನಗೆ ಪ್ರಿಯವನ್ನೇ ಮಾಡುವೆನು" ಎಂದು ಹೇಳುತ್ತ ಅದಕ್ಕೆ ಮೋಕ್ಷವನ್ನೀಯಲು ಪಾವನವಾದ ಗಂಗೆಯ ನೀರಿನಲ್ಲಿ ಹಾಕುತ್ತಿದ್ದಳು.

೨೦. ಇದು ಮಹಾರಾಜನಿಗೆ ಯಾವ ವಿಧದಲ್ಲಿಯೂ ಪ್ರಿಯವಾಗ ದಿದ್ದರೂ ಆಕೆಯು ತನ್ನನ್ನು ತ್ಯಜಿಸುವಳೆಂಬ ಭಯದಿಂದ ಯಾವ ಮಾತನ್ನೂ ಆಡದಿದ್ದನು.

೨೧. ಕಡೆಗೆ ಎಂಟನೆಯ ಮಗುವು ಹುಟ್ಟಲು, ನಗುತ್ತಿರುವ ಆ ಹೆಂಡತಿ ಯನ್ನು ಕಂಡು ರಾಜನು ಆ ಮಗುವನ್ನಾದರೂ ಕಾಪಾಡಲೆಳಸಿ ದುಃಖದಿಂದ ಹೇಳಿದನು.

೨೨. "ದುಷ್ಟಳೆ! ಇದನ್ನು ಕೊಲ್ಲಬೇಡ. ನೀನು ಯಾರು, ಯಾರ ಮಗಳು? ಮಕ್ಕಳನ್ನೇತಕ್ಕೆ ಕೊಲ್ಲುವೆ? ನಿಲ್ಲು, ನಿಲ್ಲು. ಇದು ಮಹಾ ಪಾತಕವು. ಪುತ್ರಹಿಂಸೆಯನ್ನು ಮಾಡಬೇಡ!"

೨೩. ಗಂಗೆಯು ಹೇಳುತ್ತಾಳೆ:—"ಮಹಾರಾಜನೆ! ನಾನೂ ಪುತ್ರ ಕಾಮಳೇ ಅಹುದು. ಈ ನಿನ್ನ ಮಗುವನ್ನು ಕೊಲ್ಲುವುದಿಲ್ಲ. ಹಿಂದೆ ನಾನು ಮಾಡಿಕೊಂಡ ಒಪ್ಪಂದದಂತೆ ಇಂದಿಗೆ ನಿನ್ನ ಮನೆಯ ವಾಸವು ನನಗೆ ಕೊನೆ ಗಂಡಿತು.

ಅಹಂ ಗಂಗಾ ಜಹ್ನುಸುತಾ ಮಹರ್ಷಿಗಣಸೇವಿತಾ ।
ದೇವಕಾರ್ಯಾರ್ಥಸಿಧ್ಯರ್ಥಮುಷಿತ್ವಾಽಹಂ ತ್ವಯಾ ಸಹ ॥ ೨೪ ॥
ಇಮೇಽಷ್ಟೌ ವಸವೋ ದೇವಾ ಮಹಾಭೀಮಾ ಮಹೌಜಸಃ ।
ವಸಿಷ್ಠಶಾಪದೋಷೇಣ ಮಾನುಷತ್ವಮುಪಾಗತಾಃ ॥ ೨೫ ॥
ತೇಷಾಮಾನಯಿತಾ ನಾನ್ಯಸ್ತ್ವದೃತೇ ಭುವಿ ವಿದ್ಯತೇ ।
ಮದ್ವಿಧಾ ಮಾನುಷೀ ಧಾತ್ರೀ ನ ಚೈವಾಽಸ್ತಿ ಕದಾಚನ ॥ ೨೬ ॥
ತಸ್ಮಾತ್ತಜ್ಜನನೀಹೇತೋರ್ಮಾನುಷತ್ವಮುಪಾಗತಾ ।
ಸ್ವಸ್ತಿ ತೇಽಸ್ತುಗಮಿಷ್ಯಾಮಿ ಪುತ್ರಂ ಪಾಹಿ ಮಹಾವ್ರತ ॥ ೨೭ ॥
ಸೈವಮುಕ್ತ್ವಾ ತದಾ ಗಂಗಾ ವಿಷ್ಣುಮಾಯಾವಿಮೋಹಿತಾ ।
ರುರೋದ ಮಾನುಷಂ ಭಾವಮಾಶ್ರಿತಾ ತನುಮಧ್ಯಮಾ ॥ ೨೮ ॥
ಅಹೋ ಬತಮಹತ್ಕಷ್ಟಂ ಯದಮೀ ಘಾತಿತಾಃ ಸುತಾಃ ।
ಮಯಾ ನೃಶಂಸಯಾ ಮೋಹಾಜ್ಜಲೇ ಕ್ಷಿಪ್ತಾಸ್ತುಬಾಲಕಾಃ ॥ ೨೯ ॥

---

೨೪. ನಾನೇ ಜಹ್ನುಮಹರ್ಷಿಯ ಪುತ್ರಿಯೂ, ಮಹರ್ಷಿಸಮೂಹ ಸೇವಿತೆಯೂ ಆದ ಗಂಗಾದೇವಿಯು. ದೇವತೆಗಳ ಕಾರ್ಯವೊಂದನ್ನು ನೆರವೇರಿಸಲು ನಾನು ನಿನ್ನೊಡನೆ ವಾಸಮಾಡಿದೆನು.

೨೫. ಈ ಎಂಟುಮಂದಿ ಮಕ್ಕಳೂ ಮಹಾಪರಾಕ್ರಮಿಗಳೂ, ಮಹಾತೇಜಸ್ವಿಗಳೂ ಆದ ವಸುಗಳು. ವಸಿಷ್ಠಮುನಿಯ ಶಾಪದ ಫಲವಾಗಿ ಇವರು ಮನುಷ್ಯಜನ್ಮಗಳನ್ನು ತಾಳಿದ್ದರು.

೨೬. ಭೂಲೋಕದಲ್ಲಿ ಅವರಿಗೆ ತಂದೆಯಾಗುವ ಯೋಗ್ಯತೆಯುಳ್ಳ ಪುರುಷನು ನೀನಲ್ಲದೆ ಬೇರೊಬ್ಬನಿಲ್ಲ. ಮತ್ತು ನನ್ನಂತಹ ತಾಯಿಯೂ ಸಹ ಎಲ್ಲಿಯೂ ಮತ್ತೊಬ್ಬಳಿಲ್ಲ.

೨೭. ಆದುದರಿಂದ ಅವರಿಗೆ ತಾಯಿಯಾಗಬೇಕೆಂದೇ ನಾನು ಮನುಷ್ಯ ರೂಪವನ್ನು ತಾಳಿದೆನು. ನಿನಗೆ ಒಳ್ಳೆಯದಾಗಲಿ. ಹೋಗಿಬರುವೆನು. ಮಹಾತ್ಮನೆ! ನಿನ್ನ ಮಗನನ್ನು ಸಂರಕ್ಷಿಸು.''

೨೮. ಇಂತೆಂದು ಹೇಳಿ ಮನುಷ್ಯರೂಪಳಾದ ಆ ಗಂಗೆಯು ಮಹಾವಿಷ್ಣುವಿನ ಮಾಯೆಗೆ ಅಧೀನಳಾಗಿ ಮನುಷ್ಯರಂತೆಯೇ ಮಗುವಿನ ಅಗಲಿಕೆಗಾಗಿ ರೋದನಮಾಡಿದಳು.

೨೯. "ಅಯ್ಯೋ! ಕಷ್ಟವು. ನನ್ನ ಮಕ್ಕಳನ್ನು ನಾನೇ ಕೊಂದೆನು. ಭ್ರಾಂತಳಾಗಿ ನಾನೇ ಬಾಲಕರನ್ನು ಕರುಣೆಯಿಲ್ಲದೆ ನದಿಯ ಜಲದಲ್ಲಿ ಹಾಕಿದೆನು.

ಹಾ ವತ್ಸಾ ಹಾ ಸುತಾಃ ಪುತ್ರಾ ಹಾ ತಾತಾಸ್ತನಯಾಃ ಕ್ವ ವೈ ।
ಮಾಂ ವಿಹಾಯ ಗತಾಃ ಕುತ್ರ ಹೃದಯಂ ಕಿಂ ನ ದೀರ್ಯತೇ ॥ ೩೦ ॥
ಮಾತರ್ಮಾತೇತಿ ಕರುಣಂ ಬ್ರುವಾಣಾಃ ಸ್ವಯಮಾಗತಾಃ ।
ಉಪಗುಹ್ಯೇ ಕದಾ ಪುತ್ರಾನ್ ವತ್ಸವತ್ಸೇತಿ ಸೌಹೃದಾತ್ ॥ ೩೧ ॥
ಕಸ್ಯ ಜಾತು ಪ್ರಣೀತೇನ ಪಿಂಗೇನ ಕ್ಷಿತಿರೇಣುನಾ ।
ಮಮೋತ್ತರೀಯಮುತ್ಸಂಗಂ ಕದಾಂಗ ಮಲಯಿಷ್ಯತಿ ॥ ೩೨ ॥
ಅಂಗಪ್ರತ್ಯಂಗ ಸಂಭೂತಾ ಮನೋಹೃದಯನಂದನಾಃ ।
ಮಯಾ ತು ಮಾತ್ರಾ ಹಾ ವತ್ಸಾ ಮಾರಿತಾ ನಿಧನಂ ಗತಾಃ ॥ ೩೩ ॥
ಕಾಂಲ್ಲೋಕಾನ್ನು ಗಮಿಷ್ಯಾಮಿ ಕೃತ್ವಾ ಕರ್ಮ ಸುದಾರುಣಂ ।
ಕಥಂ ಪುಣ್ಯಾ ಭವಿಷ್ಯಾಮಿ ಪುತ್ರಘ್ನೀ ನಿರ್ದಯಾ ಸತೀ ॥ ೩೪ ॥
ಇತ್ಯೇವಂ ಕರುಣಂ ಕೃತ್ವಾ ರುದಿತ್ವಾ ಚ ಪುನಃ ಪುನಃ ।
ಮೂರ್ಛಿತಾ ಪತಿತಾಪ್ಯಾರ್ತಾ ನಿಶ್ಚೇಷ್ಟಾ ಧರಣೀತಲೇ ॥ ೩೫ ॥

---

೩೦. ಹಾ! ಮಕ್ಕಳಿರಾ! ಅಪ್ಪಂದಿರಾ! ನೀವೀಗೆಲ್ಲಿರುವಿರಿ? ನನ್ನನ್ನಿಲ್ಲಿ ಬಿಟ್ಟು ನೀವು ಹೊರಟುಹೋದುದೆಲ್ಲಿಗೆ? 'ನನ್ನ ಹೃದಯವು ಇದರಿಂದ ಒಡೆಯಲಾರದೇಕೆ?

೩೧. "ಅಮ್ಮಾ! ಅಮ್ಮಾ!" ಎಂದು ಕರೆಯುತ್ತ ತೊದಲ್ನುಡಿಗಳಿಂದ ತಾವೇ ಬಳಿಗೆ ಬರುವ ಮಕ್ಕಳನ್ನು ಸ್ನೇಹದಿಂದ "ಅಪ್ಪಾ" ಎಂದು ತಬ್ಬಿಕೊಂಡು ಎಂದಿಗೆ ಸಂತೋಷಪಡುವೆನೊ!

೩೨. ಮಕ್ಕಳು ಎಳೆದಾಡಿಕೊಂಡು ಕೆಂಪಾದ ಧೂಳಿನ ಕಣಗಳಿಂದ ನನ್ನ ಸೆರಗನ್ನೂ ತೊಡೆಯನ್ನೂ ಯಾವಾಗ ಮಲಿನಗೊಳಿಸುವರೊ!

೩೩. ನನ್ನ ಅಂಗಾಂಗಳಿಂದ ಹುಟ್ಟಿದವರೂ, ಮನಸ್ಸಿಗೂ ಹೃದಯಕ್ಕೂ ಆನಂದವನ್ನುಂಟುಮಾಡುವವರೂ ಆದ ನಿಮ್ಮನ್ನು ತಾಯಿಯಾದ ನಾನೇ ಕೈಬಿಡಲು ಮರಣವನ್ನು ಹೊಂದಿದಿರಿ.

೩೪. ಇಂತಹ ಮಹಾಪಾತಕವನ್ನು ಮಾಡಿರುವ ನಾನು ಯಾವ ಲೋಕಗಳಿಗೆ ಹೋಗುವೆನು? ಪುತ್ರರನ್ನೇ ಕೊಂದ ನಿರ್ದಯಸ್ತ್ರೀಯಾದ ನಾನು ಹೇಗೆ ಪುನಃ ಪವಿತ್ರಳಾಗುವೆನೋ?"

೩೫. ಇಂತೆಂದು ಬಹಳ ದೀನಳಾಗಿ ಮತ್ತೆ ಮತ್ತೆ ರೋದನವನ್ನು ಮಾಡುತ್ತ ಗಂಗೆಯು ದುಃಖಾಧಿಕ್ಯದಿಂದ ಸಂತಪ್ತಳಾಗಿ ಮೂರ್ಛೆಗೊಂಡು ನಿಶ್ಚೇಷ್ಟತೆಯಿಂದ ಭೂಮಿಯಲ್ಲಿ ಬಿದ್ದಳು.

ಏತಸ್ಮಿನ್ನಂತರೇ ದೇವಿ ನಾರದೋ ಮುನಿಸತ್ತಮಃ ।
ತಸ್ಯಾ ವಿಲಾಪಶಬ್ದಂ ತಮಾಕರ್ಣ್ಯ ಸಹಸಾ ತದಾ ॥ ೩೬ ॥
ವಿಸ್ಮಯೋತ್ಫುಲ್ಲನಯನಃ ಕಿಮೇತದಿತಿ ಚಿಂತಯತ್ ।
ಏಷಾ ಸಾ ಜಾಹ್ನವೀ ಗಂಗಾ ಪಾವನೀ ದೇವವಂದಿತಾ ॥ ೩೭ ॥
ಸಮುದ್ರಮಹಿಷೀ ದಿವ್ಯಾ ಪುಣ್ಯಾ ತ್ರಿಪಥಗಾ ನದೀ ।
ಮಾನುಷಂ ಭಾವಮಾಶ್ರಿತ್ಯ ಕಸ್ಮಾದ್ರೋದಿತಿ ವಿಹ್ವಲಾ ॥ ೩೮ ॥
ಇತ್ಯೇವಂ ಚಿಂತಯಿತ್ವಾ ಚ ಸಮೀಪಮುಗಮುಸ್ಮುನಿಃ ।
ಗಂಗಾಯಾ ವಿಲಪಂತ್ಯಾಶ್ಚ ಬ್ರಹ್ಮಪುತ್ರಸ್ತು ನಾರದಃ ।
ಉವಾಚೋಚ್ಚೈರ್ವಿಯತ್ಸ್ಥೋಽಸೌ ದೇವಿ ಗಂಗೇ ನಮೋಽಸ್ತು ತೇ॥ ೩೯ ॥
ನಾರದೋಽಹಂ ಮಹಾಪುಣ್ಯೇ ಕಸ್ಮಾದ್ರೋದಿಷಿ ಪಾವನಿ ।
ಹಿಮಾದ್ರಿಪುತ್ರೀ ವಿಖ್ಯಾತಾ ದೇವಗಂಧರ್ವಸೇವಿತಾ ॥ ೪೦ ॥
ಧೃತಾ ಶಿರಸಿ ದೇವೇನ ಶಿವೇನ ಪರಮೇಷ್ಠಿನಾ ॥ ೪೧ ॥

---

೩೬. ದೇವಿಯೆ! ಈ ಸಮಯದಲ್ಲಿಯೇ ಮುನಿಶ್ರೇಷ್ಠನಾದ ನಾರದನು ಬರುತ್ತ ದಾರಿಯಲ್ಲಿ ಆಕೆಯ ಪ್ರಲಾಪದ ಧ್ವನಿಯನ್ನು ಕೇಳಿ ಕುತೂಹಲ ಗೊಂಡನು.

೩೭. ವಿಸ್ಮಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಇದೇನೆಂದು ತನ್ನಲ್ಲಿಯೇ ಚಿಂತಿಸಿದನು. "ಇವಳೇ ಪರಮಪವಿತ್ರೆಯೂ, ದೇವತೆಗಳಿಗೂ ವಂದ್ಯಳೂ ಆದ ಗಂಗಾದೇವಿಯು.

೩೮. ತ್ರಿಪಥಗಾಮಿನಿಯಾದ ಈ ಗಂಗೆಯು ಪುಣ್ಯವಂತಳೂ, ಸಮುದ್ರ ರಾಜನ ಮಡದಿಯೂ ಆಗಿದ್ದರೂ ಮನುಷ್ಯರೂಪವನ್ನು ಸ್ವೀಕರಿಸಿ ಹೀಗೇಕೆ ಪ್ರಲಾಪವನ್ನು ಮಾಡುತ್ತಿರುವಳು?"

೩೯. ಇಂತೆಂದು ಯೋಚಿಸುತ್ತಲೇ ಆ ಮುನಿಯು ಆಕೆಯ ಬಳಿಗೆ ಬಂದನು. ಬ್ರಹ್ಮಮಾನಸಪುತ್ರನಾದ ನಾರದನು ಅಳುತ್ತಿರುವ ಆ ಗಂಗಾದೇವಿಯ ಬಳಿಯಲ್ಲಿ ಆಕಾಶಮಾರ್ಗದಿಂದಲೇ ಉಚ್ಚಧ್ವನಿಯಿಂದ "ಗಂಗಾದೇವಿಯೆ! ನಿನಗೆ ನಮಸ್ಕಾರವು" ಎಂದನು.

೪೦. "ಮಹಾಪವಿತ್ರಳೆ! ನಾನು ನಾರದಮುನಿಯು. ಪಾವನೆಯಾದ ನೀನು ಅಳುತ್ತಿರಲು ಕಾರಣವೇನು? ನೀನು ಹಿಮವಂತನ ಮಗಳೂ, ದೇವಗಂಧರ್ವರಿಗೆ ಪರಮಪೂಜ್ಯಳೂ ಆಗಿರುವೆಯಲ್ಲವೆ.

೪೧. ಪರಮೇಶ್ವರನಾದ ಮಹಾದೇವನು ನಿನ್ನನ್ನು ತನ್ನ ತಲೆಯಲ್ಲಿಯೇ ಧರಿಸಿರುವನು."

ನಾರದಸ್ಯ ವಚಃ ಶ್ರುತ್ವಾ ದಿವ್ಯಾ ದೇವನದೀ ತಥಾ ।
ಅವಲೋಕ್ಯ ವಿಮಾನಸ್ಥಂ ಪ್ರತ್ಯುವಾಚ ಮಹಾಮುನಿಂ ॥ ೪೨ ॥
ಮಯಾ ನಾರದಮೋಹೇನ ಕೃತೋಽಧರ್ಮೋ ಜುಗುಪ್ಸಿತಃ ।
ಜಾನಂತ್ಯಾ ಸುಮಹತ್ಪಾಪಂ ಸಪ್ತಪುತ್ರಾ ಹತಾ ಮಯಾ ॥ ೪೩ ॥
ಸಮುದ್ರೇಣ ವಿಯೋಗಸ್ತು ಸಂಜಾತೋ ಮಮ ದೈವತಃ ।
ಭಾರ್ಯಾ ಜಾತಾ ಮನುಷ್ಯಸ್ಯ ಪುತ್ರಾ ಜಾತಾ ಹತಾಶ್ಚ ಮೇ ॥ ೪೪ ॥
ಅತೋ ಮಯಾ ವಿಲಪಿತಂ ಮಗ್ನಯಾ ಶೋಕಸಾಗರೇ ।
ಕಥ್ಯತಾಂ ಮಮ ದೇವರ್ಷೇ ಯೇನ ಪುಣ್ಯಾ ಭವಾಮಿ ವೈ ॥ ೪೫ ॥
ಇತಿ ತಸ್ಯಾ ವಚಃ ಶ್ರುತ್ವಾ ನಾರದೋ ಮುನಿಸತ್ತಮಃ ।
ತ್ರಿಕಾಲವೇದೀ ಶುದ್ಧಾತ್ಮಾ ಗಂಗಾಂ ವಚನಮಬ್ರವೀತ್ ॥ ೪೬ ॥

ನಾರದ ಉವಾಚ:—

ಕಿಂ ವಿಸ್ಮೃತೋ ಜಗದ್ವಂದ್ಯೇ ದೇವಾನಾಂ ಸಮಯಃ ಶುಭಃ ।
ಪ್ರತಿಜ್ಞಾತಂ ತ್ವಯಾ ದೇವಿ ವಸೂನಾಂ ಮೋಕ್ಷಕಾರಣೇ ॥ ೪೭ ॥

---

೪೨. ಇಂತೆಂದ ನಾರದನ ಮಾತನ್ನು ಕೇಳಿ ದೇವನದ್ಯಭಿಮಾನದೇವತೆಯಾದ ಗಂಗೆಯು ವಿಮಾನದಲ್ಲಿ ಕುಳಿತಿರುವ ಮಹಾಮುನಿಯನ್ನು ತಲೆಯೆತ್ತಿ ನೋಡಿ ಪ್ರತಿವಚನವನ್ನಾಡಿದಳು.

೪೩. "ನಾರದ! ನಾನು ಮೋಹಪರವಶಳಾಗಿ ಅತಿ ನಿಂದಿತವಾದ ಅಧರ್ಮವನ್ನು ಮಾಡಿರುವೆನು. ಮಹಾ ಪಾತಕವೆಂದು ತಿಳಿದೂ ಏಳುಮಂದಿ ಮಕ್ಕಳನ್ನು ಕೊಂದೆನು.

೪೪—೪೫. ಅದೃಷ್ಟವಶದಿಂದ ನನಗೆ ಸಮುದ್ರರಾಜನಿಂದ ವಿಯೋಗವೂ ಸಂಭವಿಸಿತು. ನಾನು ಮನುಷ್ಯಮಾತ್ರನಾದವನಿಗೆ ಹೆಂಡತಿಯಾದೆನು. ಹಡೆದ ಮಕ್ಕಳನ್ನೂ ಕೊಂದೆನು. ಆದುದರಿಂದ ದುಃಖಸಮುದ್ರದಲ್ಲಿ ಮುಳುಗಿ ನಾನು ಅಳುತ್ತಿರುವೆನು. ದೇವರ್ಷಿಯೆ! ನಾನು ಪುನಃ ಪವಿತ್ರಳಾಗುವುದು ಹೇಗೆಂಬುದನ್ನು ಹೇಳುವವನಾಗು."

೪೬. ಇಂತೆಂದ ಗಂಗೆಯ ಮಾತನ್ನು ಕೇಳಿ ಮುನಿಶ್ರೇಷ್ಠನೂ, ತ್ರಿಕಾಲ ಜ್ಞಾನಿಯೂ ಪವಿತ್ರಾಂತಃಕರಣನೂ ಆದ ನಾರದನು ಆಕೆಗೆ ಉಪಾಯವನ್ನು ಹೇಳತೊಡಗಿದನು.

೪೭. ನಾರದನು ಹೇಳುತ್ತಾನೆ:—"ಲೋಕಪೂಜಿತಳಾದ ದೇವಿಯೆ! ಹಿಂದೆ ನೀನು ದೇವತೆಗಳೊಡನೆ ಮಾಡಿಕೊಂಡ ಪವಿತ್ರವಾದ ಒಪ್ಪಂದವನ್ನು ಮರೆತು ಬಿಟ್ಟೆಯಾ? ಅಷ್ಟವಸುಗಳಿಗೆ ಮನುಷ್ಯಜನ್ಮದಿಂದ ಬಿಡುಗಡೆಯನ್ನು ಮಾಡಲು ನೀನು ಪ್ರತಿಜ್ಞೆಯನ್ನು ಮಾಡಲಿಲ್ಲವೆ!

ಸ್ಪ್ರಾಪ್ತಾಸ್ತೇ ವಸವೋ ಲೋಕಾನ್ಪ್ರಸಾದಾತ್ತವ ಸುವ್ರತೇ ।
ತ್ವಯಾಽವತಾರಿತೋ ದೇವಿ ಸಮುದ್ರಃ ಶಂತನುಃ ಸ್ಮೃತಃ ॥ ೪೮ ॥
ಇತಿ ತಸ್ಯ ವಚಃ ಶ್ರುತ್ವಾ ನಾರದಸ್ಯ ಮಹಾತ್ಮನಃ ।
ಗಂಗಾ ತ್ರಿಪಥಗಾ ಪುಣ್ಯಾ ಪ್ರತ್ಯುವಾಚ ಮಹಾಮುನಿಂ ॥ ೪೯ ॥
ಸತ್ಯಮುಕ್ತಂ ತ್ವಯಾ ಬ್ರಹ್ಮನ್ ಜ್ಞಾತಂ ಸರ್ವಂ ಮಯಾಽಧುನಾ ।
ಕಿಂ ತು ಯೋನಿರ್ಯತೋ ಲಬ್ಧಾ ಮಾನುಷೀ ತೇನ ಮೋಹಿತಾ ॥ ೫೦ ॥
ಅಪವಾದಭಯಾದ್ಭೀತಾ ಭವಂತಂ ಶರಣಂ ಗತಾ ।
ದೀಯತಾಮುಪದೇಶೋ ಮೇ ಕಥ್ಯತಾಂ ಸ್ಥಾನಮುತ್ತಮಂ ॥ ೫೧ ॥

ನಾರದ ಉವಾಚ:–

ಕಿಂ ವಿಸ್ಮೃತೋ ಜಗದ್ವಂದ್ಯೇ ದೇವಾನಾಂ ಸಮಯಃ ಕೃತಃ ।
ಅಪವಾದಭಯಾದ್ಭೀತಾ ಯದಿ ತ್ವಂ ದೇವಿ ಪುಣ್ಯದೇ ।
ಮಾಂ ಪೃಚ್ಛಸಿ ಪರಂ ಸ್ಥಾನಂ ಶೃಣು ತ್ವಂ ವಚ್ಮಿ ಸುವ್ರತೇ ॥ ೫೨ ॥
ಅವಂತೀ ತು ಸಮಾಖ್ಯಾತಾ ಸಪ್ತಕಲ್ಪಸನಾತನೀ ।
ತಸ್ಯಾಂ ಸಖೀ ತ್ವದೀಯಾ ತು ಶಿಪ್ರಾ ವಿಪ್ರಪ್ರಿಯಾ ಸದಾ ॥ ೫೩ ॥

---

೪೮. ಮಂಗಳಾಂಗಿಯೆ! ನಿನ್ನ ಅನುಗ್ರಹದಿಂದ ಆ ವಸುಗಳು ತಮ್ಮ ಲೋಕಗಳನ್ನು ಸೇರಿರುವರು. ಈ ಶಂತನುವೂ ನಿನಗಾಗಿ ಅವತರಿಸಿದ ಸಮುದ್ರ ರಾಜನೆಂದೇ ಹೇಳುವರು.''

೪೯. ಪರಮಪಾವನೆಯಾದ ಗಂಗೆಯು ಮಹಾತ್ಮನಾದ ನಾರದನ ಈ ಮಾತುಗಳನ್ನು ಕೇಳಿ ಆ ಮಹಾಮುನಿಗೆ ಇಂತೆಂದಳು.

೫೦–೫೧. "ಬ್ರಹ್ಮಜ್ಞನೆ! ನೀನೆಂದುದೆಲ್ಲವೂ ಸರಿಯೆ. ಈಗ ನಾನೆಲ್ಲವನ್ನೂ ತಿಳಿದೆನು. ಆದರೆ ಮನುಷ್ಯ ಜನ್ಮವನ್ನು ತಾಳಿರುವುದರಿಂದ ಇದುವರೆಗೂ ಭ್ರಾಂತಿಗೊಳಗಾಗಿದ್ದೆನು. ಲೋಕಾಪವಾದದ ಭಯದಿಂದ ತ್ರಸ್ತಳಾಗಿ ನಿನ್ನನ್ನು ಶರಣುಹೊಂದಿರುವೆನು. ನನಗೆ ಉಪದೇಶವನ್ನಿತ್ತು ಉತ್ತಮವಾದ ಸ್ಥಾನ ವೊಂದನ್ನು ತೋರಿಸಿಕೊಡು.''

೫೨. ನಾರದನು ಹೇಳುತ್ತಾನೆ:—ಲೋಕನಮಸ್ಕೃತಳೆ! ದೇವತೆಗಳೊಡನೆ ಮಾಡಿಕೊಂಡ ನಿಯಮವನ್ನು ಮರೆತುಬಿಟ್ಟೆಯ! ಪುಣ್ಯಪ್ರದಳೆ! ಲೋಕಾಪ ವಾದಕ್ಕೆ ಮಾತ್ರ ಭಯಗೊಳ್ಳುತ್ತಿರುವೆಯಾದರೆ ನೀನು ಕೇಳಿದ ಉತ್ತಮಸ್ಥಾನ ವೊಂದನ್ನು ಹೇಳುವೆನು, ಕೇಳು.

೫೩. ಏಳುಕಲ್ಪಗಳಿಂದಲೂ ಅವ್ಯಯವಾಗಿ ನೆಲಸಿರುವ ಅವಂತೀನಾಮಕ ವಾದ ಕ್ಷೇತ್ರವೊಂದಿರುವುದಷ್ಟೆ. ಅಲ್ಲಿ ನಿನ್ನ ಸಖಿಯೂ ಬ್ರಾಹ್ಮಣಪ್ರಿಯಳೂ ಆದ ಶಿಪ್ರಾದೇವಿಯಿರುವಳು.

ತಸ್ಯಾಸ್ತೀರೇ ಶುಭಂ ಲಿಂಗಂ ದುರ್ಧರ್ಷೇಶ್ವರದಕ್ಷಿಣೇ ।
ವಿದ್ಯತೇ ತ್ರಿದಶೈಃ ಪೂಜ್ಯಂ ಸರ್ವತೀರ್ಥೈಶ್ಚ ಸೇವಿತಂ ॥ ೫೪ ॥
ತಸ್ಯ ದರ್ಶನಮಾತ್ರೇಣ ಕೃತಕೃತ್ಯಾ ಭವಿಷ್ಯಸಿ ।
ತಸ್ಮಾದ್ಗಚ್ಛ ಮಹಾಪುಣ್ಯೇ ಗಂಗೇ ದೇವರ್ಷಿಸೇವಿತೇ ॥ ೫೫ ॥
ಇತ್ಯುಕ್ತಾ ಸಾ ತ್ರಿಪಥಗಾ ನಾರದೇನ ಮಹಾತ್ಮನಾ ।
ಗತಾ ತತ್ರ ಮಹಾಪುಣ್ಯಾ ಸಖೀಂ ಶಿಪ್ರಾಂ ದದರ್ಶ ಹ ॥ ೫೬ ॥
ಸಂಶ್ಲೇಷಂ ಚ ತದಾ ಕೃತ್ವಾ ಲಿಂಗಂ ದೃಷ್ಟ್ವಾ ಸುಪಾವನಂ ।
ಪೂಜಯಾಮಾಸ ಭಾವೇನ ತತ್ರೈವ ಚ ಸ್ಥಿರಂ ಸ್ಥಿತಾ ॥ ೫೭ ॥
ಅಥ ಸೂರ್ಯಸುತಾ ದೇವೀ ಯಮುನಾ ಪಾಪನಾಶಿನೀ ।
ತತ್ರಾಯಾತಾ ಸುಹಾರ್ದೇನ ಯತ್ರ ಗಂಗಾ ವ್ಯವಸ್ಥಿತಾ ॥ ೫೮ ॥
ದದರ್ಶ ದೇವೀ ತಾಂ ಗಂಗಾಂ ಧ್ಯಾಯಂತೀಂ ಶಂಕರಂ ಶಿವಂ ।
ಸಾಽಪಿ ತತ್ರೈವ ತಿಷ್ಠಂತೀ ಪೂಜಯಂತೀ ಪರಂ ಶಿವಂ ॥ ೫೯ ॥
ಅಥ ತೇನೈವ ಕಾಲೇನ ಪ್ರಾಚೀ ದೇವೀ ಸರಸ್ವತೀ ।
ಸಮಾಯಾತಾ ಸುಗುಪ್ತಾ ಚ ಗಂಗಾ ಯಮುನಯೋರ್ಜಲೇ ॥ ೬೦ ॥

---

೫೪. ಆ ನದಿಯ ತೀರಪ್ರದೇಶದಲ್ಲಿ ದುರ್ಧರ್ಷೇಶ್ವರನಿಗೆ ದಕ್ಷಿಣಕ್ಕೆ ಅಮರ ಪೂಜಿತವೂ, ಸಮಸ್ತತೀರ್ಥಗಳಿಂದ ಸೇವಿತವೂ ಆದ ಮಹಾಲಿಂಗವೊಂದಿರುವುದು.

೫೫. ಮಹಾ ಪುಣ್ಯವತಿಯೂ, ದೇವರ್ಷಿಸೇವಿತೆಯೂ ಆದ ಓ ಗಂಗೆಯೆ ! ಅದನ್ನು ನೋಡುವುದರಿಂದಲೇ ನೀನು ಕೃತಾರ್ಥಳಾಗುವೆಯಾದುದರಿಂದ ಆ ಕ್ಷೇತ್ರಕ್ಕೆ ಹೋಗು.''

೫೬. ಇಂತೆಂದ ಮಹಾತ್ಮನಾದ ನಾರದನ ಮಾತನ್ನು ಕೇಳಿ ಮಹಾ ಪುಣ್ಯಪ್ರದೆಯಾದ ಗಂಗಾದೇವಿಯು ಆ ಕ್ಷೇತ್ರಕ್ಕೆ ಹೋಗಿ ಸಖಿಯಾದ ಶಿಪ್ರಾದೇವಿಯನ್ನು ಕಂಡಳು.

೫೭. ಅಲ್ಲಿ ಆಕೆಯೊಡಗೂಡಿ ಪರಮಪವಿತ್ರವಾದ ಆ ಲಿಂಗದ ದರ್ಶನವನ್ನು ಮಾಡಿಕೊಂಡು ಅಲ್ಲಿಯೇ ಬಹುಕಾಲ ನಿಂತು ಪರಮಭಕ್ತಿಯಿಂದ ಅದನ್ನು ಸೇವಿಸುತ್ತಿದ್ದಳು.

೫೮. ಬಳಿಕ ಆ ಗಂಗೆಯಿದ್ದೆಡೆಗೇ ಆಕೆಯಲ್ಲಿ ಸ್ನೇಹಭಾವದಿಂದ ಪ್ರೇರಿತಳಾಗಿ ಸೂರ್ಯಕುಮಾರಿಯಾದ ಯಮುನೆಯೂ ಬಂದು ಸೇರಿದಳು.

೫೯. ಗಂಗಾದೇವಿಯು ಪರಮೇಶ್ವರನನ್ನು ಕುರಿತು ಧ್ಯಾನಿಸುತ್ತಿರುವುದನ್ನು ಕಂಡು ತಾನೂ ಅಲ್ಲಿಯೇ ನಿಂತು ಆ ಮಹಾಶಿವಲಿಂಗದ ಪೂಜೆಯನ್ನು ಮಾಡುತ್ತಿದ್ದಳು.

೬೦. ಆ ಸಮಯದಲ್ಲಿಯೇ ಪೂರ್ವವಾಹಿನಿಯಾದ ಸರಸ್ವತಿಯೂ ಅಲ್ಲಿಗೆ

ಏತಸ್ಮಿನ್ನಂತರೇ ದೇವಿ ಶಕ್ರಂ ಪ್ರಾಹ ಸ ನಾರದಃ ।
ನ ದೃಶ್ಯತೇ ಪ್ರಯಾಗಸ್ತು ಮಹಾಕಾಲವನಂ ಗತಃ ॥ ೬೧ ॥
ಗಂಗಾಯಮುನಯೋರ್ಮಧ್ಯೇ ಯತ್ರ ಗುಪ್ತಾ ಸರಸ್ವತೀ ।
ಪ್ರಯಾಗಃ ಸ ತು ವಿಜ್ಞೇಯಃ ಸರ್ವಪಾಪಪ್ರಣಾಶನಃ ॥ ೬೨ ॥
ಸ ಸಾಂಪ್ರತಂ ಪ್ರಯಾಗಸ್ತು ಮಹಾಕಾಲವನೋತ್ತಮೇ ।
ಕೇನಾಽಪಿ ಕಾರಣೇನೈವ ಗತೋ ನ ಜ್ಞಾಯತೇ ಮಯಾ ॥ ೬೩ ॥
ಇತಿ ತಸ್ಯ ವಚಃ ಶ್ರುತ್ವಾ ನಾರದಸ್ಯ ಮಹಾತ್ಮನಃ ।
ಶಕ್ರೇಣ ಸಹಿತಾಃ ಸರ್ವೇ ಹ್ಯವಂತೀಂ ತು ಸಮಾಗತಾಃ ॥ ೬೪ ॥
ಸ್ತುವಂತೋ ವಿವಿಧೈಃ ಸ್ತೋತ್ರೈರ್ಗಂಗಾಂ ತ್ರಿಪಥಗಾಂ ಶುಭಾಂ ।
ಗಂಗೇ ದೇವಿ ನಮುಸ್ತುಭ್ಯಂ ಸರ್ವಪಾಪಪ್ರಣಾಶಿನಿ ॥ ೬೫ ॥
ವಸೂನಾಂ ಜನನೀ ದೇವಿ ವಸೂನಾಂ ಮೋಕ್ಷದಾಯಿನೀ ।
ತ್ರೈಲೋಕ್ಯಪಾವನೀ ನಿತ್ಯಂ ಹರೇಣ ಶಿರಸಾ ಧೃತಾ ॥ ೬೬ ॥

---

ಪ್ರಾಪ್ತಳಾಗಿ ಗುಪ್ತಳಾಗಿದ್ದುಕೊಂಡೇ ಗಂಗಾ ಯಮುನೆಯರೊಡನೆ ಸೇರಿ ಹೋದಳು.

೬೧. ಈ ವೇಳೆಯಲ್ಲಿಯೇ ನಾರದನು ಮಹೇಂದ್ರನ ಬಳಿಗೆ ಹೋಗಿ ಇಂತೆಂದನು. "ಪ್ರಯಾಗವು ಕಾಣುವುದೇ ಇಲ್ಲವಲ್ಲ! ಆ ಕ್ಷೇತ್ರವು ಮಹಾಕಾಲ ವನಕ್ಕೆ ಹೊರಟುಹೋಗಿರುವುದು.

೬೨. ಗಂಗಾ ಯಮುನೆಯರೊಡನೆ ಗುಪ್ತಗಾಮಿನಿಯಾದ ಸರಸ್ವತಿಯೆಲ್ಲಿರುವಳೊ, ಆ ಪ್ರದೇಶವೇ ಸಕಲ ಪಾತಕಗಳನ್ನು ನಾಶಗೊಳಿಸುವ ಪ್ರಯಾಗಕ್ಷೇತ್ರವಾಗಿರುವುದು.

೬೩. ಆ ಪ್ರಯಾಗಕ್ಷೇತ್ರವು ಈಗ ಉತ್ತಮವಾದ ಮಹಾಕಾಲವನಕ್ಕೆ ಹೋಗಿರುವುದಕ್ಕೆ ಕಾರಣವನ್ನು ನಾನು ತಿಳಿಯೆನು."

೬೪. ಇಂತೆಂದ ನಾರದನ ಮಾತುಗಳನ್ನು ಕೇಳಿ ಮಹೇಂದ್ರನೊಡಗೂಡಿ ದೇವತೆಗಳೆಲ್ಲರೂ ಅವಂತೀಕ್ಷೇತ್ರಕ್ಕೆ ಬಂದು ಸೇರಿದರು.

೬೫. ಅವರು ತ್ರಿಪಥಗಾಮಿನಿಯಾದ ಗಂಗೆಯನ್ನು ಅನೇಕ ಸ್ತೋತ್ರಗಳಿಂದ ಸ್ತುತಿಸುತ್ತಿದ್ದರು. "ಗಂಗಾದೇವಿಯೆ! ಸಮಸ್ತ ಪಾತಕಗಳನ್ನು ನಾಶಮಾಡುವವಳಾದ ನಿನ್ನನ್ನು ನಮಸ್ಕರಿಸುವೆವು.

೬೬. ದೇವಿಯೆ! ನೀನು ವಸುಗಳಿಗೆ ತಾಯಿಯಾಗಿರುವೆ. ಅವರಿಗೆ ಶಾಪ ಮೋಕ್ಷವನ್ನೂ ಅನುಗ್ರಹಿಸಿದೆ. ಮೂರು ಲೋಕಗಳನ್ನೂ ಪಾವನಗೊಳಿಸುವ ನಿನ್ನನ್ನು ಮಹಾದೇವನೂ ತಲೆಯಲ್ಲಿ ಧರಿಸಿರುವನು.

ಸೇವಿತಾ ವಾಲಖಿಲ್ಯೈಶ್ಚ ಕೃಷ್ಣಸ್ಯ ಪರಮಾ ಕಲಾ ।
ಯಮುನೇ ತ್ವಾಂ ನಮಸ್ಯಾಮಃ ಕಾಲಿಂದೀಂ ವರವಾಹಿನೀಂ ॥ ೬೭ ॥
ಸುತಾ ತ್ವಂ ಪಾವನೀ ದೇವಿ ಮಾರ್ತಂಡಸ್ಯ ದಿವಸ್ಪತೇಃ ।
ಶಿಪ್ರೇ ದೇವಿ ನಮಸ್ತುಭ್ಯಂ ಬ್ರಹ್ಮದೇಹೋದ್ಭವೇ ಶುಭೇ ॥ ೬೮ ॥
ಪ್ರಾಚೀ ತ್ವಮೇವ ವಿಖ್ಯಾತಾ ಪುಣ್ಯದೇಹಾ ಸರಸ್ವತೀ ।
ಯಾ ಪ್ರಾಚೀ ಕೌರವಕ್ಷೇತ್ರೇ ಪುಷ್ಕರೇ ಯಾ ಮಹಾಲಯೇ ।
ಸಾ ತ್ವಂ ಶಿಪ್ರಾ ಪ್ರಸಿದ್ಧಾ ಚ ಸರ್ವಪಾತಕನಾಶಿನೀ ॥ ೬೯ ॥
ತ್ವಂ ದಯಾ ಸರ್ವಜಂತೂನಾಂ ತ್ವಂ ಸ್ವರ್ಗಃ ಶರಣಂ ನೃಣಾಂ ।
ತ್ವಂ ಮಾತಾ ಸರ್ವಜಂತೂನಾಂ ತ್ವಂ ಪ್ರಾಚೀ ಭುವಿ ಗೀಯಸೇ ॥ ೭೦ ॥
ಬಹುಜನ್ಮಕಲಂಕಾಂಕಂ ದೃಷ್ಟ್ವಾ ಯಾ ದೇಹಿನಾಂ ಭುವಿ ।
ಕರೋಷಿ ಕ್ಷಾಲನಂ ದೇವಿ ಸಾ ತ್ವಂ ತ್ರೈಲೋಕ್ಯಸಂಸ್ಥಿತಾ ॥ ೭೧ ॥
ಆಸಾಂ ಚ ಸಂಗಮೋ ಯಸ್ತು ಸ ಪ್ರಯಾಗೋ ಬುಧೈಃ ಸ್ಮೃತಃ ।
ಅತ್ರಾಗತ್ಯ ತು ಯುಷ್ಮಾಭಿಃ ಸ್ಥಾಪಿತಃ ಸ್ನಾಪಿತೋಽಧುನಾ ॥ ೭೨ ॥

---

೬೭. ಯಮುನಾದೇವಿಯೆ! ನೀನು ವಾಲಖಿಲ್ಯರಿಗೆ ಪೂಜಾರ್ಹಳಾಗಿ ಕೃಷ್ಣನ ಒಂದಂಶದಿಂದ ಕೂಡಿರುವೆ. ಶುಭಪ್ರವಾಹಿನಿಯಾದ ಕಾಳಿಂದಿಯೆಂದು ಹೆಸರುಗೊಂಡಿರುವ ನಿನಗೆ ನಮಸ್ಕಾರವು.

೬೮. ಎಲೌ ಪಾವನೆಯೆ! ನೀನು ದಿವಸಾಧಿಪತಿಯಾದ ಸೂರ್ಯದೇವನಿಗೆ ಮಗಳಾಗಿರುವೆ. ಬ್ರಹ್ಮನ ದೇಹದಿಂದ ಹುಟ್ಟಿದವಳೂ, ಪವಿತ್ರಳೂ ಆಗಿರುವೆ.

೬೯. ಎಲೌ ಸರಸ್ವತಿಯೆ! ಪುಣ್ಯಶರೀರಿಣಿಯಾದ ನಿನ್ನನ್ನೇ ಪ್ರಾಚೀದೇವಿ ಯೆಂದು ಕರೆಯುವರು. ಕುರುಕ್ಷೇತ್ರದಲ್ಲಿಯೂ, ಪುಷ್ಕರತೀರ್ಥದಲ್ಲಿಯೂ, ಮಹಾಲಯದಲ್ಲಿಯೂ ಪೂರ್ವವಾಹಿನಿಯಾಗಿ ಹರಿಯುತ್ತಿರುವ ನೀನೇ ಇಲ್ಲಿ ಸಮಸ್ತಪಾಪನಾಶಕಳಾದ ಶಿಪ್ರಾದೇವಿಯಾಗಿರುವೆ.

೭೦. ನೀನು ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವಳಾಗಿರುವೆ. ನಿನ್ನನ್ನು ಸೇವಿಸುವ ನರರಿಗೆ ಸ್ವರ್ಗವನ್ನು ಕೊಡುವ ಶರಣಸ್ಥಾನವಾಗಿರುವೆ. ಸಕಲ ಜೀವರಿಗೂ ತಾಯಿಯಾದ ನಿನ್ನನ್ನೇ ಭೂಲೋಕದಲ್ಲಿ ಪ್ರಾಚೀದೇವಿಯೆಂದು ಕರೆಯುತ್ತಿರುವರು.

೭೧. ಜೀವರಿಗೆ ಅಸಂಖ್ಯಾತ ಜನ್ಮಗಳಿಂದ ಅಂಟಬಂದಿರುವ ಪಾಪಲೇಪವನ್ನು ತೊಳೆಯಲೊ ಎಂಬಂತೆ ನೀನು ಮೂರು ಲೋಕಗಳಲ್ಲಿಯೂ ಪ್ರವಹಿಸುತ್ತಿರುವೆ.

೭೨. ಈ ಮೂರು ನದಿಗಳ ಸಂಗಮವಾವುದೊ, ಆದನ್ನೇ ಜ್ಞಾನಿಗಳು ಪ್ರಯಾಗಕ್ಷೇತ್ರವೆಂದು ಕರೆಯುವರು. ಇಂಥ ನೀವೀಗ ಇಲ್ಲಿ ಬಂದು ಈ ಮಹಾ ಲಿಂಗವನ್ನು ಸ್ಥಾಪಿಸಿ ಅಭಿಷೇಕ ಮಾಡಿರುವಿರಿ.

ಸೋಽದ್ಯಪ್ರಭೃತಿ ದೇವೋಽಯಂ ಪ್ರಯಾಗೇಶ್ವರಸಂಜ್ಞಕಃ ।
ತ್ರಿಷು ಲೋಕೇಷು ವಿಖ್ಯಾತಃ ಸ್ಮರಣಾತ್ಪಾಪನಾಶನಃ ॥ ೭೩ ॥
ಅತ್ರಾಗತ್ಯ ಪ್ರಪಶ್ಯಂತಿ ಯೇ ಪ್ರಯಾಗೇಶ್ವರಂ ತತಃ ।
ತೇ ಕೃತಾರ್ಥಾ ಭವಿಷ್ಯಂತಿ ಸರ್ವಪಾತಕವರ್ಜಿತಾಃ ॥ ೭೪ ॥
ಕುಲಂ ಚ ತಾರಿತಂ ತೇಷಾಂ ಪೈತೃಕಂ ಮಾತೃಕಂ ತಥಾ ।
ಗಂಗಾಯಾಸ್ತ್ರಿಯುಗಂ ಪುಣ್ಯಂ ಚತುರ್ವರ್ಗಫಲಪ್ರದಂ ।
ಜಾಯತೇ ನಾಽತ್ರ ಸಂದೇಹಃ ಪ್ರಯಾಗೇಶ್ವರದರ್ಶನಾತ್ ॥ ೭೫ ॥
ಗಂಗಾಯಾಂ ಚ ಪ್ರಯಾಗೇ ಚ ದೇವದಾರುವನೇ ಶುಭೇ ।
ನೈಮಿಷೇ ಪುಷ್ಕರೇ ಚೈವ ಶ್ರೀಶೈಲೇ ಚ ತ್ರಿಪುಷ್ಕರೇ ॥ ೭೬ ॥
ತ್ರ್ಯಂಬಕೇ ಧೌತಪಾಪೇ ಚ ಮಹೇಂದ್ರೇ ಭೈರವೇ ತಥಾ ।
ಗೋಕರ್ಣೇ ಚ ಸುವರ್ಣಾಖ್ಯೇ ರೇವಾಕಪಿಲಸಂಗಮೇ ॥ ೭೭ ॥
ಏತೇಷಾಂ ದರ್ಶನೇನೈವ ಯಾ ಸಿದ್ಧಿರ್ದ್ವಾದಶಾಬ್ದಿಕಾ ।
ಸಾ ಲಭ್ಯಾ ಮಾಸಮಾತ್ರೇಣ ಪ್ರಯಾಗೇಶ್ವರದರ್ಶನಾತ್ ॥ ೭೮ ॥
ಯೇ ಪಶ್ಯಂತಿ ಚತುರ್ದಶ್ಯಾಮಷ್ಟಮ್ಯಾಂ ಚ ವಿಶೇಷತಃ ।
ಭಕ್ತ್ಯಾ ಚ ನಿಯಮಂ ಕೃತ್ವಾ ಪ್ರಯಾಗೇಶ್ವರಸಂಜ್ಞಕಂ ॥ ೭೯ ॥

---

೭೩. ಈ ಲಿಂಗವು ಇಂದಿನಿಂದ ಪ್ರಯಾಗೇಶ್ವರವೆಂಬ ಹೆಸರಿನಿಂದ ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿ ಸ್ಮರಿಸಿದಮಾತ್ರದಿಂದಲೇ ಜನರ ಪಾಪಗಳನ್ನು ನಾಶಮಾಡುವುದು.

೭೪. ಇಲ್ಲಿಗೆ ಬಂದು ಯಾರು ಈ ಪ್ರಯಾಗೇಶ್ವರನ ದರ್ಶನವನ್ನು ಮಾಡುವರೊ, ಅವರು ತಮ್ಮ ಪಾಪಗಳೆಲ್ಲವನ್ನೂ ಕಳೆದುಕೊಂಡು ಕೃತಕೃತ್ಯರಾಗುವರು.

೭೫. ಅವರ ತಾಯಿತಂದೆಯರ ಕುಲವೆಲ್ಲವೂ ಉದ್ಧೃತವಾಗುವುದು. ಪ್ರಯಾಗೇಶ್ವರನ ದರ್ಶನದಿಂದ ಗಂಗೆಯನ್ನು ಮೂರು ಯುಗಗಳ ಕಾಲ ಸೇವಿಸಿದ ಪುಣ್ಯವೂ, ಧರ್ಮಾರ್ಥಕಾಮಮೋಕ್ಷಗಳೂ ಕೈಗೂಡುವುದರಲ್ಲಿ ಸಂದೇಹವಿಲ್ಲ.

೭೬–೭೮. ಗಂಗಾ, ಪ್ರಯಾಗ, ದೇವದಾರುವನ, ನೈಮಿಷಾರಣ್ಯ, ಪುಷ್ಕರ ಕ್ಷೇತ್ರ, ಶ್ರೀಶೈಲ, ತ್ರಿಪುಷ್ಕರ, ತ್ರ್ಯಂಬಕೇಶ್ವರ, ಧೂತಪಾಪ, ಮಹೇಂದ್ರ, ಭೈರವ, ಗೋಕರ್ಣ, ರೇವಾಕಪಿಲೆಗಳು ಸಂಗಮವಾಗುವ ಸುವರ್ಣತೀರ್ಥ ಇವುಗಳೆಲ್ಲವನ್ನೂ ಹನ್ನೆರಡು ವರ್ಷಗಳಕಾಲ ಸೇವಿಸುವುದರಿಂದ ಯಾವ ಫಲವುಂಟೊ, ಅದನ್ನೇ ಒಂದು ಮಾಸಮಾತ್ರ ಪ್ರಯಾಗೇಶ್ವರನನ್ನು ಸಂದರ್ಶಿಸುವುದರಿಂದ ಪಡೆಯಬಹುದು.

೭೯–೮೦. ಚತುರ್ದಶಿ ಅಥವ ಅಷ್ಟಮಿ ದಿನಗಳಲ್ಲಿ ಯಾರು ವಿಶೇಷ ನಿಯಮಗಳಿಂದ ಈ ಪ್ರಯಾಗೇಶ್ವರಮಹಾಲಿಂಗವನ್ನು ಭಕ್ತಿಭರಿತರಾಗಿ

ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ಭೋಗದಂ ಮೋಕ್ಷದಂ ಲಿಂಗಂ ಭವಿಷ್ಯತಿ ಮಹೀತಲೇ ॥ ೪೦ ॥
ಕಲಾಸ್ತಿಸ್ರೋ ಭವಿಷ್ಯಂತಿ ಲಿಂಗೇಽಸ್ಮಿನ್ಮೋಕ್ಷದೇ ಶುಭೇ ।
ಗಂಗಾ ಚ ಯಮುನಾ ಪ್ರಾಚೀ ಸರ್ವಪಾತಕನಾಶಿನೀ ॥ ೪೧ ॥
ಏವಮುಕ್ತ್ವಾ ಸ್ತುತಾ ಗಂಗಾ ಯಮುನಾ ಚ ಸರಸ್ವತೀ ।
ದೇವ್ಯೈಃ ಪ್ರಣತಿಪೂರ್ವೇಣ ಗತಾಃ ಸ್ಥಾನಂ ಸ್ವಕಂ ತದಾ ॥ ೪೨ ॥
ದೇವಾಃ ಪ್ರಹೃಷ್ಟಾಃ ಶಕ್ರಾದ್ಯಾಃ ಪ್ರಯಾಗೇಶ್ವರಸಂಜ್ಞಕಂ ।
ಸ್ತುತ್ವಾ ಚ ವಿವಿಧೈಃ ಸ್ತೋತ್ರೈಃ ಪೂಜಯಿತ್ವಾ ದಿವಂಗತಾಃ ॥ ೪೩ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪ್ರಯಾಗೇಶ್ವರದೇವಸ್ಯ ಚಂದ್ರಾದಿತ್ಯೇಶ್ವರಂ ಶೃಣು ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
ಉಮಾಮಹೇಶ್ವರ ಸಂವಾದೇ—"ಪ್ರಯಾಗೇಶ್ವರಮಾಹಾತ್ಮ್ಯವರ್ಣನಂ"
ನಾಮ್ನೈಕಸಪ್ತತಿತಮೋಽಧ್ಯಾಯಃ

---

ನೋಡುವರೊ, ಅವರಿಗೆ ನೂರುಕೋಟಿ ಕಲ್ಪಗಳಾದರೂ ಸಂಸಾರದಲ್ಲಿ ಪುನರಾವೃತ್ತಿಯಿರುವುದಿಲ್ಲ. ಈ ಲಿಂಗವು ಭೂಮಂಡಲದಲ್ಲಿ ಸಕಲ ಭೋಗಗಳನ್ನೂ ಮೋಕ್ಷವನ್ನೂ ಕೊಡುತ್ತಿರುವುದು.

೪೧. ಮುಕ್ತಿಪ್ರದವಾದ ಈ ಪಾವನಲಿಂಗದಲ್ಲಿ ಗಂಗಾ, ಯಮುನಾ, ಸಕಲ ಪಾತಕಗಳನ್ನೂ ನಾಶಗೊಳಿಸುವ ಸರಸ್ವತಿ ಇವುಗಳ ಮೂರು ಕಲೆಗಳೂ ಸನ್ನಿಹಿತಗಳಾಗಿರುವುವು."

೪೨. ದೇವತೆಗಳೆಲ್ಲರೂ ಇಂತೆಂದು ಪ್ರಣಾಮಪೂರ್ವಕವಾಗಿ ಸ್ತೋತ್ರವನ್ನು ಮಾಡಲು ಗಂಗಾ, ಯಮುನಾ, ಸರಸ್ವತಿಯರು ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

೪೩. ದೇವತೆಗಳೂ ಪರಮಸಂತುಷ್ಟರಾಗಿ ಪ್ರಯಾಗೇಶ್ವರಲಿಂಗವನ್ನು ಬಹುವಿಧವಾಗಿ ಸ್ತೋತ್ರಮಾಡಿ ಅರ್ಚಿಸಿ ಸ್ವರ್ಗಲೋಕಕ್ಕೆ ತೆರಳಿದರು.

೪೪. ದೇವಿಯೆ! ಇಂತು ನಿನಗೆ ಪ್ರಯಾಗೇಶ್ವರಮಹಾದೇವನ ಪವಿತ್ರವಾದ ಚರಿತ್ರೆಯನ್ನು ಹೇಳಿದೆನು. ಇನ್ನು ಚಂದ್ರಾದಿತ್ಯೇಶ್ವರಲಿಂಗದ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪ್ರಯಾಗೇಶ್ವಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತಿತಮೋಽಧ್ಯಾಯಃ

### ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ದ್ವಿಸಪ್ತತೀಶ್ವರಂ ವಿದ್ಧಿ ಚಂದ್ರಾದಿತ್ಯೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೧ ॥
ಶಂಬರೇಣ ಪುರಾ ದೇವಿ ನಿರ್ಜಿತಾಃ ಸಂಗರೇ ಸುರಾಃ ।
ನಷ್ಟಾ ರಣಂ ಪರಿತ್ಯಜ್ಯ ಪ್ರಾಣತ್ರಾಣಪರಾಯಣಾಃ ॥ ೨ ॥
ಗ್ರಸ್ತಂ ಚ ರಾಹುಣಾ ದೃಷ್ಟ್ವಾ ಶಶಾಂಕಂ ಭಯವಿಹ್ವಲಂ ।
ವಿನತಾಯಾಃ ಸುತೋ ಜ್ಯೇಷ್ಠಃ ಪ್ರೋಕ್ತಃ ಸೂರ್ಯೇಣ ಸಾರಥಿಃ ॥ ೩ ॥
ವಹಾಽರುಣ ರಥಂ ಶೀಘ್ರಂ ಯತ್ರ ಯುದ್ಧಂ ನ ವಿದ್ಯತೇ ।
ಶ್ರೂಯತೇ ಚಂದ್ರಸೂರ್ಯೌ ತೌ ದೈತ್ಯಾನಾಂ ಬಲವತ್ತರೌ ॥ ೪ ॥
ರಾಹುರ್ದಂಷ್ಟ್ರಾಕರಾಲಸ್ತು ಸ ತೃತೀಯೋ ಭಯಂಕರಃ ।
ನ ಜ್ಞಾಯತೇ ಸ ಚಂದ್ರೋ ವೈ ಮೃತೋ ನಷ್ಟೋಽಥವಾ ಪುನಃ ॥ ೫ ॥

---

### ಕನ್ನಡದ ಅನುವಾದ

#### ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಪ್ರಿಯಳೆ! ಎಪ್ಪತ್ತೆರಡನೆಯ ಮಹಾಲಿಂಗವೇ ಚಂದ್ರಾದಿತ್ಯೇಶ್ವರವೆಂದು ತಿಳಿ. ಇದನ್ನು ನೋಡುವಮಾತ್ರದಿಂದಲೇ ಮಾನವನು ಕೃತಕೃತ್ಯನಾಗುವನು.

೨. ದೇವಿಯೆ! ಹಿಂದೆ ಶಂಬರಾಸುರನಿಂದ ಯುದ್ಧದಲ್ಲಿ ದೇವತೆಗಳೆಲ್ಲರೂ ಜಯಿಸಲ್ಪಟ್ಟರು. ತಮ್ಮ ಪ್ರಾಣಗಳನ್ನುಳಿಸಿಕೊಳ್ಳುವುದರಲ್ಲಿಯೇ ಆಸಕ್ತರಾಗಿ ಅವರೆಲ್ಲರೂ ಓಡಿಹೋದರು.

೩. ಭಯಭ್ರಾಂತನಾದ ಚಂದ್ರನು ರಾಹುವಿನಿಂದ ಹಿಡಿಯಲ್ಪಟ್ಟುದನ್ನು ಕಂಡು ಸೂರ್ಯನು ವಿನತಾದೇವಿಯ ಜ್ಯೇಷ್ಠಪುತ್ರನೂ, ತನ್ನ ಸಾರಥಿಯೂ ಆದ ಅರುಣನಿಗಿಂತೆಂದನು.

೪. "ಅರುಣ! ನನ್ನ ರಥವನ್ನು ಯುದ್ಧವಿಲ್ಲದೆಡೆಗೆ ತೆಗೆದುಕೊಂಡು ಹೋಗು. ಚಂದ್ರಸೂರ್ಯರೇ ಮಹಾಬಲಶಾಲಿಗಳೆಂದು ರಾಕ್ಷಸಸಮೂಹದಲ್ಲಿ ಕೇಳಿಬರುತ್ತಿರುವುದು.

೫. ಆದರೆ ಕೋರೆದಾಡೆಗಳಿಂದ ಭಯಂಕರನಾದ ಈ ರಾಹುವು ಭಯಕಾರಕರಲ್ಲಿ ಮೂರನೆಯವನಾಗಿರುವನು. ರಣರಂಗದಲ್ಲಿ ಚಂದ್ರನು ಕಾಣುವುದಿಲ್ಲ. ಅವನು ಮೃತನಾದನೊ ಅಥವ ಓಡಿಹೋದನೊ!

ಸ ಚ ನ ಜ್ಞಾಯತೇ ಶಕ್ರಃ ಕ್ವ ಗತೋ ವರುಣೋ ರಣೇ ।
ಯಮೋ ನ ಜ್ಞಾಯತೇ ಕುತ್ರ ಧನದಸ್ಯ ಚ ಕಾ ಕಥಾ ॥ ೬ ॥
ಏವಮುಕ್ತೋಽರುಣೋ ರುಗ್ಣೋ ರವಿಣಾ ರಣಮಧ್ಯತಃ ।
ರಥಂ ಸಂಪ್ರೇರಯಾಮಾಸ ಯತ್ರ ಯುದ್ಧಂ ನ ವಿದ್ಯತೇ ॥ ೭ ॥
ಏತಸ್ಮಿನ್ನಂತರೇ ಚಂದ್ರಃ ಸಮಾಯಾತಸ್ತು ತತ್ಕ್ಷಣಾತ್ ।
ರಾಹುಗ್ರಹಗೃಹೀತೋಽಪಿ ಯತ್ರ ದೇವೋ ದಿವಸ್ಪತಿಃ ॥ ೮ ॥
ಸಂತ್ರಸ್ತಃ ಸ ವಿಲೋಲಾಕ್ಷಃ ಕ್ಷಣಮಾತ್ರಮಚೇತನಃ ।
ಬಭೂವ ಸಹಸಾ ಚಂದ್ರೋ ದೃಷ್ಟ್ವಾ ದೇವಂ ದಿವಾಕರಂ ॥ ೯ ॥
ಶಂಬರೇಣ ರಣೇ ರುದ್ಧಾ ರುದ್ರಾಶ್ಚ ಭಯವಿದ್ರುತಾಃ ।
ಜಗ್ಮುರ್ದಿಶೋ ದಶ ಭಯಾದಸುರೇಂದ್ರವಿಧರ್ಷಿತಾಃ ॥ ೧೦ ॥
ಸಾಧ್ಯಾಃ ಸರ್ವೇ ಭಯತ್ರಸ್ತಾ ಗತಾ ಯತ್ರ ನ ದಾನವಾಃ ।
ತೇಷು ಭಗ್ನೇಷು ದೇವೇಷು ಹತಶಿಷ್ಟೇಷು ಸಂಗರೇ ॥ ೧೧ ॥
ಪೃಥಮುತ್ಸರ್ವಗಾತ್ರಾಣಿ ವರ್ಮಾಣಿ ಚ ಜನಕ್ಷಯೇ ।
ಪಲಾಯಮಾನದೇವಾನಾಮಸುರೋ ಬಲವಚ್ಛರೈಃ ॥ ೧೨ ॥

---

೬. ಆ ಮಹೇಂದ್ರನೂ ಕಾಣಿಸಲಿಲ್ಲ. ವರುಣನು ಯುದ್ಧಭೂಮಿಯಲ್ಲಿ ಎಲ್ಲಿರುವನೊ! ಯಮನು ಎಲ್ಲಿರುವನೆಂಬುದೇ ತಿಳಿಯದು. ಇನ್ನು ಕುಬೇರನ ಮಾತನ್ನು ಕೇಳಬೇಕೆ!''

೭. ಇಂತೆಂದ ಸೂರ್ಯನ ಮಾತುಗಳನ್ನು ಕೇಳಿ ಖತಿಗೊಂಡ ಅರುಣನು ರಣಾಂಗಣಮಧ್ಯದಿಂದ ರಥವನ್ನು ಯುದ್ಧವಿಲ್ಲದ ಪ್ರದೇಶಕ್ಕೆ ತೆಗೆದುಕೊಂಡು ಹೋದನು.

೮-೯. ಈ ಸಮಯದಲ್ಲಿಯೇ ರಾಹುಗ್ರಹಪೀಡಿತನಾಗಿದ್ದರೂ ಚಂದ್ರನು ಸೂರ್ಯನಿದ್ದಲ್ಲಿಗೆ ಪ್ರಾಪ್ತನಾದನು. ಭಯಗೊಂಡವನೂ, ಚಕಿತನೇತ್ರನೂ ಆದ ಚಂದ್ರನು ಒಂದು ನಿಮಿಷಮಾತ್ರದವರೆಗೂ ನಿಶ್ಚೇಷ್ಟನಾಗಿ ಬಿದ್ದಿದ್ದು ಸೂರ್ಯನನ್ನು ನೋಡಿದಕೂಡಲೆ ಎಚ್ಚತ್ತು ಹೇಳಿದನು.

೧೦. ''ಶಂಬರನಿಂದ ಯುದ್ಧದಲ್ಲಿ ಎದುರಿಸಲ್ಪಟ್ಟ ಏಕಾದಶರುದ್ರರೂ ಭಯದಿಂದ ಓಡಿಹೋದರು. ಅವರೆಲ್ಲರೂ ಆ ರಾಕ್ಷಸೇಂದ್ರನಿಂದ ಭಯಗೊಳಿಸಲ್ಪಟ್ಟು ಹತ್ತುದಿಕ್ಕುಗಳಿಗೂ ಚದುರಿದರು.

೧೧. ಸಾಧ್ಯರೆಲ್ಲರೂ ಭಯದಿಂದ ನಡುಗುತ್ತ ದಾನವರ ಸುಳಿವಿಲ್ಲದೆಡೆಗಳಿಗೆ ಹೊರಟುಹೋದರು. ಇಂತು ದೇವತೆಗಳ ಸೈನ್ಯವು ಭಗ್ನವಾಗಲು ರಣರಂಗದಲ್ಲಿ ಬಹಳ ಅಲ್ಪಸಂಖ್ಯಾತರುಳಿದರು.

೧೨. ಓಡಿಹೋಗುತ್ತಿರುವ ಅವರನ್ನೂ ನಾಶಗೊಳಿಸಲೆಳಸಿ ಆ ರಾಕ್ಷಸನು ಅವರ ದೇಹಗಳಲ್ಲಿದ್ದ ಕವಚಗಳನ್ನೂ ತೀಕ್ಷ್ಣಗಳಾದ ಬಾಣಗಳಿಂದ ಕತ್ತರಿಸಿದನು.

ಪೃಷ್ಠತೋ ನಿಜಘಾನಾಽಥ ನಿಕೃತ್ತಾಶ್ಚ ಸಹಸ್ರಶಃ ।
ಅಹಂ ನಷ್ಟಶ್ಛಲೇನೈವ ವ್ಯಗ್ರೀಭೂತೇಽಸುರೇ ತದಾ ॥ ೧೩ ॥
ಆಸುರಂ ರೂಪಮಾಸ್ಥಾಯ ಪ್ರಾಣತ್ರಾಣಪರಾಯಣಃ ।
ಶೀಘ್ರಂ ಚ ಗಮ್ಯತೇ ತಾವದ್ಯಾವನ್ನಾಯಾತಿ ಶಂಬರಃ ॥ ೧೪ ॥
ಇತ್ಯುಕ್ತಂ ನಿಶಿನಾಥೇನ ಭಯಭೀತೇನ ಪಾರ್ವತಿ ।
ಚಂದ್ರಾದಿತ್ಯೌ ಕ್ಷಣಾನ್ನೀತಾವರುಣೇನ ರಥೇನ ವೈ ।
ಯತ್ರ ದೇವೋ ಜಗನ್ನಾಥೋ ಗರುಡಸ್ಥೋ ಜನಾರ್ದನಃ ॥ ೧೫ ॥
ಸುರಸಂಘಾತಸಂಕೇತೇ ಕಿನ್ನರಾಕೀರ್ಣಕಂದರೇ ।
ಮಂದರೇ ಸುರನಾರೀಣಾಂ ಸಂದನೇ ವರಚಂದನೇ ॥ ೧೬ ॥
ದೃಷ್ಟ್ವಾ ತತ್ರ ಜಗನ್ನಾಥಂ ಶಂಖಚಕ್ರಗದಾಧರಂ ।
ಸ್ತುತಿಂ ತೌ ಚಕ್ರತುರ್ದೇವೌ ಚಂದ್ರಸೂರ್ಯೌ ಯಶಸ್ವಿನಿ ॥ ೧೭ ॥
ನಮೋ ಲೋಕತ್ರಯಾಧ್ಯಕ್ಷ ಸ್ವಪ್ರಭಾಜಿತಭಾಸ್ಕರ ।
ನಮೋ ವಿಷ್ಣೋ ನಮೋ ಜಿಷ್ಣೋ ನಮಸ್ತೇ ಕೈಟಭಾಂತಕ ॥ ೧೮ ॥

---

೧೩–೧೪. ಹಿಂದಿನಿಂದಲೇ ಅವರನ್ನು ಹೊಡೆದು ಸಾವಿರಗಟ್ಟಲೆಯಾಗಿ ನೆಲಕ್ಕೆ ಕೆಡವಿದನು. ನಾನೂ ಸತ್ತವನಂತೆಯೇ ಬಿದ್ದಿರಲು, ಆ ರಾಕ್ಷಸನು ಅನ್ಯಮನಸ್ಕನಾದನು. ಆಗ ನಾನು ರಾಕ್ಷಸರೂಪವನ್ನು ಧರಿಸಿ ಪ್ರಾಣಗಳನ್ನು ಕಾಪಾಡಿಕೊಳ್ಳಲು ಓಡಿಬಂದೆನು. ಎಲೈ ದಿನವಾಣಿಯೆ! ಆ ಶಂಬರನು ಇಲ್ಲಿಗೆ ಬರುವಷ್ಟರಲ್ಲಿಯೇ ನಾವು ಓಡಿಹೋಗೋಣ.''

೧೫. ಪಾರ್ವತಿಯೆ! ಭಯಭ್ರಾಂತನಾದ ಚಂದ್ರನು ಇಂತೆಂದು ಹೇಳಿದ ಮೇಲೆ ಅರುಣನು ಇಬ್ಬರನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಲೋಕೇಶ್ವರನೂ, ಗರುಡವಾಹನನೂ ಆದ ಮಹಾವಿಷ್ಣುವಿದ್ದೆಡೆಗೆ ಕರೆದುಕೊಂಡುಹೋದನು.

೧೬. ಆ ಮಂದರಪರ್ವತವು ದೇವಸಮೂಹಗಳ ಸಂಕೇತಸ್ಥಾನವೂ, ಕಿನ್ನರಗಣಗಳ ಆವಾಸಗಳಾದ ತಪ್ಪಲುಗಳುಳ್ಳುದೂ, ದೇವಕನ್ಯೆಯರಿಗೆ ಆನಂದವನ್ನುಂಟುಮಾಡುವುದೂ, ಚಂದನವೃಕ್ಷಮಂಡಿತವೂ ಆಗಿದ್ದಿತು.

೧೭. ಮಂಗಳೆಯೆ! ಅಲ್ಲಿ ಶಂಖಚಕ್ರಾದ್ಯಾಯುಧಗಳಿಂದ ಮೆರೆಯುತ್ತಿರುವ ಶ್ರೀಮನ್ನಾರಾಯಣನನ್ನು ಕಂಡು ಚಂದ್ರಸೂರ್ಯರು ಆತನನ್ನು ಸ್ತೋತ್ರ ಮಾಡತೊಡಗಿದರು.

೧೮. ''ಮೂರುಲೋಕಗಳಿಗೊಡೆಯನೂ, ತೇಜಸ್ಸಿನಿಂದ ಸೂರ್ಯನನ್ನೂ ಜಯಿಸಿರುವವನೂ, ಸರ್ವವ್ಯಾಪಿಯೂ, ಜಯಶೀಲನೂ, ಕೈಟಭಮರ್ದನನೂ ಆದ ಓ ವಿಷ್ಣುವೆ! ನಿನಗೆ ನಮಸ್ಕಾರವು.

ನಮಃ ಸರ್ವಕ್ರಿಯಾಕರ್ತ್ರೇ ಜಗತ್ತ್ರಾತ್ರೇ ಚ ತೇ ನಮಃ ।
ನಮಶ್ಚಕ್ರಾಯುಧಾಽಧೃಷ್ಯ ನಮೋ ದಾನವಘಾತಿನೇ ॥ ೧೯ ॥
ನಮಃ ಕ್ರಮತ್ರಯಾಕ್ರಾಂತ ತ್ರೈಲೋಕ್ಯಾಂತರ್ಹಿತೋದ್ಭವ ।
ನಮಃ ಪ್ರಚಂಡದೈತ್ಯೇಂದ್ರಕುಲಕಾಲಮಹಾಬಲ ॥ ೨೦ ॥
ನಮೋ ನಾಭಿಹ್ರದೋದ್ಭೂತಪದ್ಮಗರ್ಭ ಮಹಾಪ್ರಭೋ ।
ಜನಿತಾಶೇಷಲೋಕೇಶ ವಿರಂಚಾರ ಮಹಾದ್ಯುತೇ ॥ ೨೧ ॥
ಅಮರಾರಿವಿನಾಶಾಯ ಮಹಾಸಮರಶಾಲಿನೇ ।
ನಮಸ್ತೇ ವಿಬುಧಾಧೀಶ ಶರಣಂ ಭವ ನಃ ಪ್ರಭೋ ॥ ೨೨ ॥
ಚಂದ್ರಸೂರ್ಯಕೃತಂ ಸ್ತೋತ್ರಂ ಶ್ರುತ್ವಾ ದೇವೋ ಜನಾರ್ದನಃ ।
ಆಶ್ವಾಸ್ಯ ಸ್ತುತಿಪೂರ್ವೇಣ ಪ್ರಾಹ ದೇವೋ ಹ್ಯಧೋಕ್ಷಜಃ ॥ ೨೩ ॥

ವಿಷ್ಣುರುವಾಚ :—

ಸ್ವಾಗತಂ ಚಂದ್ರಸೂರ್ಯೌ ಭೋ ಭವಂತೌ ಸ್ತುತಿಭಾಜನೌ ।
ಕಿಂ ಕಾರಣಮಿಹ ಪ್ರಾಪ್ತೌ ತದ್ಬ್ರೂತಾಂ ವಿಗತಜ್ವರೌ ॥ ೨೪ ॥

---

೧೯. ಅಂತರ್ಯಾಮಿಯಾಗಿ ಎಲ್ಲ ಕೆಲಸಗಳನ್ನು ಮಾಡುವವನೂ, ಲೋಕಪಾಲಕನೂ, ಚಕ್ರಾಯುಧಧಾರಿಯೂ, ಅಜೇಯನೂ, ರಾಕ್ಷಸರನ್ನು ನಿರ್ಮೂಲಗೊಳಿಸುವವನೂ ಆದ ನಿನಗೆ ನಮಸ್ಕಾರವು.

೨೦. ಮೂರು ಪಾದಗಳಿಂದ ಸಮಸ್ತ ಬ್ರಹ್ಮಾಂಡವನ್ನೂ ಆಕ್ರಮಿಸಿ ಒಳಗೆ ಅಂತರ್ಯಾಮಿಯಾಗಿರುವವನೂ, ಪ್ರಚಂಡರಾದ ದಾನವಶ್ರೇಷ್ಠರ ವಂಶಕ್ಕೆ ಯಮನೂ, ಮಹಾಪರಾಕ್ರಮಿಯೂ ಆದ ನಿನ್ನನ್ನು ನಮಸ್ಕರಿಸುವೆವು.

೨೧. ನಾಭೀಕಮಲದಲ್ಲಿ ಚತುರ್ಮುಖಬ್ರಹ್ಮನನ್ನು ಪಡೆದವನೂ, ಲೋಕೈಕನಾಥನೂ, ಸಮಸ್ತಲೋಕಗಳ ಸೃಷ್ಟಿಕರ್ತನಾದ ಬ್ರಹ್ಮನಿಗೂ ಕಾರಣನೂ, ತೇಜೋರಾಶಿಯೂ ಆದ ನಿನಗೆ ನಮೋ ನಮಃ.

೨೨. ದೇವತೆಗಳ ಶತ್ರುಗಳನ್ನು ನಾಶಮಾಡುವವನೂ, ಮಹಾ ಯುದ್ಧದಲ್ಲಿ ಶೂರನೂ, ದೇವತೆಗಳಿಗೆ ಸರ್ವೇಶ್ವರನೂ, ಸ್ವಾಮಿಯೂ ಆದ ನಿನ್ನನ್ನು ನಮಸ್ಕರಿಸುವೆವು. ನಮಗೆ ಅಭಯವನ್ನು ಕೊಡುವವನಾಗು.''

೨೩. ಇಂತು ಚಂದ್ರಸೂರ್ಯರು ಮಾಡಿದ ಸ್ತೋತ್ರವನ್ನು ಕೇಳಿ ಲೋಕಶಾಸಕನಾದ ನಾರಾಯಣನು ಅವರನ್ನು ಹೊಗಳಿ ಸಮಾಧಾನಗೊಳಿಸಿ ಪ್ರಶ್ನೆ ಮಾಡಿದನು.

೨೪. ವಿಷ್ಣುವು ಹೇಳುತ್ತಾನೆ :—ಎಲೈ ಚಂದ್ರಸೂರ್ಯರಿರಾ! ನಿಮಗೆ ಸುಖಾಗಮನವೆ! ನೀವಿಬ್ಬರೂ ಜನರ ಸ್ತೋತ್ರಕ್ಕೆ ಪಾತ್ರರಾಗಿರುವಿರಿ. ಇಲ್ಲಿಗೇತಕ್ಕೆ ಬಂದಿರುವಿರೆಂಬುದನ್ನು ನಿರ್ಭಯರಾಗಿ ತಿಳಿಸಿರಿ.

ನಾರಾಯಣೇನೈವಮುಕ್ತೌ ಪ್ರೋಚತುಶ್ಚಂದ್ರಭಾಸ್ಕರೌ ।
ಸಮರೇ ನಿರ್ಜಿತಾ ದೇವಾಃ ಶಂಬರೇಣ ದುರಾತ್ಮನಾ ॥ ೨೫ ॥
ನ ಜ್ಞಾತಾಃ ಕ್ವ ಗತಾಸ್ತೇ ಚ ಆವಾಂ ನಷ್ಟೌ ಪ್ರಯತ್ನತಃ ।
ಅರುಣೇನ ಇಹಾನೀತೌ ದೃಷ್ಟಸ್ತ್ವಂ ದೇವ ದೈವತಃ ॥ ೨೬ ॥
ಶಂಬರೇಣ ಜಿತಾ ದೇವಾಃ ಸ ಚ ಸರ್ವತ್ರ ದೃಶ್ಯತೇ ।
ಸ್ಥಲೇ ಚೈವ ಜಲೇ ಚೈವ ಶಂಬರಃ ಕ್ರೂರಪೌರುಷಃ ॥ ೨೭ ॥
ನಶ್ಯತಾಂ ತ್ರಿದಶೇಂದ್ರಾಣಾಂ ಪೃಷ್ಠತಃ ಶರವೃಷ್ಟಿಭಿಃ ।
ಚಿಚ್ಛೇದ ನರವರ್ಮಾಣಿ ಛತ್ರಾಣಿ ಚ ಧನೂಂಷಿ ಚ ॥ ೨೮ ॥
ವರ್ಮಾಣಿ ಚ ವಿಚಿತ್ರಾಣಿ ಮುಕುಟಾನಿ ಮಹಾಂತಿ ಚ ।
ಪೃಥೂನಿ ಚಾಽಪಿ ಚಾಪಾನಿ ಚರ್ಮಾಣಿ ವಿವಿಧಾನಿ ಚ ॥ ೨೯ ॥
ಗಜಾಶ್ಚ ಮದಸಂಭಿನ್ನಕಪೋಲಾಃ ಕೋಟಿಶಃ ಸುರಾಃ ।
ವಾಜಿನಶ್ಚಾಮರಾಪೀಡಾ ರತ್ನಪರ್ಯಾಣಭೂಷಣಾಃ ॥ ೩೦ ॥

---

೨೫. ನಾರಾಯಣನ ಮಾತನ್ನು ಕೇಳಿ ಚಂದ್ರಸೂರ್ಯರು ಹೇಳಿದರು. "ದೇವದೇವ! ದುರಾತ್ಮನಾದ ಆ ಶಂಬರಾಸುರನಿಂದ ದೇವತೆಗಳೆಲ್ಲರೂ ಜಿತರಾದರು.

೨೬. ಅವರೆಲ್ಲರೂ ಎಲ್ಲಿಹೋದರೆಂಬುದೇ ತಿಳಿಯದು. ನಾವಿಬ್ಬರೂ ಪರಾಜಿತರಾದರೂ, ಅರುಣನು ಪ್ರಯತ್ನದಿಂದ ನಮ್ಮನ್ನಿಲ್ಲಿಗೆ ಕರೆದುತಂದನು. ದೈವಯೋಗದಿಂದ ಇದೀಗ ನಿನ್ನನ್ನು ಕಂಡೆವು.

೨೭. ಶಂಬರನು ದೇವತೆಗಳನ್ನು ಗೆದ್ದನು. ಅವನೇ ಎಲ್ಲೆಲ್ಲಿಯೂ ಕಾಣುತ್ತಿರುವನು. ಕ್ರೂರಸ್ವಭಾವದವನಾದ ಅವನೇ ಭೂಮಿಯಲ್ಲಿಯೂ ನೀರಿನಲ್ಲಿಯೂ ಕಾಣುತ್ತಿರುವನು.

೨೮. ಅವನು ಓಡಿಹೋಗುತ್ತಿರುವ ಮಹಾದೇವತೆಗಳನ್ನೂ ಬಿಡದೆ ಹಿಂದಿನಿಂದಲೇ ಬಾಣಗಳ ಮಳೆಗಳನ್ನು ಸುರಿಸುತ್ತ ಅವರ ಕವಚಗಳನ್ನೂ, ಶ್ವೇತ ಛತ್ರಗಳನ್ನೂ, ಬಿಲ್ಲುಗಳನ್ನೂ ಕತ್ತರಿಸಿದನು.

೨೯. ಅವರ ಕವಚಗಳು ವಿಚಿತ್ರಗಳಾಗಿದ್ದುವು. ಕಿರೀಟಗಳು ಮಹಾರ್ಘಗಳಾದುವು. ಬಿಲ್ಲುಗಳು ಬಲವಾದವು. ಗುರಾಣಿಗಳೂ ಬಹುವಿಧಗಳಾದ ಚರ್ಮಗಳಿಂದ ಮಾಡಲ್ಪಟ್ಟಿದ್ದುವು.

೩೦. ಆನೆಗಳು ಒಡೆದ ಕಪೋಲಗಳಿಂದ ಮದೋದಕವನ್ನು ಸುರಿಸುತ್ತಿದ್ದುವು. ದೇವತೆಗಳೂ ಕೋಟಿಗಟ್ಟಲೆಯಾಗಿದ್ದರು. ಕುದುರೆಗಳು ಚಾಮರ ಭಾರಕ್ಕೆ ಕುಗ್ಗಿ ನವರತ್ನಖಚಿತಗಳಾದ ಜೀನುಗಳಿಂದ ರಂಜಿಸುತ್ತಿದ್ದುವು.

ವಿಬುಧಾ ಧ್ವಸ್ತಸನ್ನಾಹಾ ವಿಗಜಾ ವಿಪದಾತಿನಃ ।
ವಿಪದಾ ಮಾಕರಾಕಾರಾ ಬಭೂವ ಸುರವಾಹಿನೀ ॥ ೩೧ ॥
ತತೋ ದೈತ್ಯಾಧಿಪೋ ಮಾನೀ ಪರಿವೃತ್ತೋ ಮಹಾರಣಾತ್ ।
ನಿರ್ಜಿತಾರಿರ್ಮಹಾತೇಜಾ ಜ್ವಾಲಾವಾನಿವ ಪಾವಕಃ ॥ ೩೨ ॥
ವಂದ್ಯಮಾನೋ ಮುನಿಗಣೈಃ ಸ್ತೂಯಮಾನೋ ಮಹರ್ಷಿಭಿಃ ।
ಆನಂದಿತೋ ಜಯಾಶೀರ್ಭಿಃ ಪ್ರವರೈರ್ದೈತ್ಯಪುಂಗವೈಃ ॥ ೩೩ ॥
ತತ್ರ ಸರ್ವಾರ್ಥಸಂಪೂರ್ಣಮಾಸನಂ ಹೇಮಭೂಷಣಂ ।
ಅಧ್ಯತಿಷ್ಠತ ದೈತ್ಯೇಂದ್ರಸ್ತತ್ರ ಮಂಗಲವೇಶ್ಮನಿ ।
ತತ್ರೋಪವಿಷ್ಟಃ ಶುಶುಭೇ ದೈತ್ಯರಾಜೋ ಮಹಾಯಶಾಃ ॥ ೩೪ ॥
ದಿವ್ಯಚಂದನಪುಷ್ಪಾಂಗಃ ಸುರಪುಷ್ಪಸಮುಜ್ಜ್ವಲಃ ।
ಮುಕುಟಾಕಾರಜುಷ್ಟಾಂಗಃ ಸಿತಚಾಮರವೀಜಿತಃ ।
ಮೃತೋತ್ಥಿತೈಸ್ತದಾ ದೈತ್ಯೈರ್ದೈತ್ಯಾಧೀಶೈರಧಿಷ್ಠಿತಃ ॥ ೩೫ ॥

---

೩೧. ಇಂತಹ ದೇವತೆಗಳ ಸನ್ನಾಹವೂ ನಾಶವಾಯಿತು. ಅವರು ಆನೆಗಳನ್ನು ಕಳೆದುಕೊಂಡು ಕಾಲಾಳುಗಳಾದರು. ಅವರ ಸೈನ್ಯವು ಎಲ್ಲ ಆಪತ್ತುಗಳಲ್ಲಿಯೂ ನೆಲೆಯಾಗಿ ಕಾಣುತ್ತಿದ್ದಿತು.

೩೨. ಬಳಿಕ ಮಹಾ ಗರ್ವಿಯೂ, ರಾಕ್ಷಸಾಧಿಪತಿಯೂ, ಉರಿಯುತ್ತಿರುವ ಬೆಂಕಿಯಂತೆ ಮಹಾ ತೇಜಸ್ವಿಯೂ ಆದ ಆ ಶಂಬರಾಸುರನು ಶತ್ರುಗಳೆಲ್ಲರನ್ನೂ ಸೋಲಿಸಿ ಯುದ್ಧರಂಗದಿಂದ ಹಿಂದಿರುಗಿದನು.

೩೩. ಮುನಿಗಣಗಳು ಆತನನ್ನು ನಮಸ್ಕರಿಸಿದರು. ಮಹರ್ಷಿಗಳು ಆತನನ್ನು ಸ್ತುತಿಸಿದರು. ಪ್ರಮುಖರಾದ ಮಹಾ ದೈತ್ಯರು ಜಯ ಜಯಕಾರಗಳಿಂದಲೂ, ಆಶೀರ್ವಚನಗಳಿಂದಲೂ ಸಂತೋಷಗೊಳಿಸುತ್ತಿದ್ದರು.

೩೪. ಅತನು ತನ್ನ ಮಂಗಳಗೃಹದಲ್ಲಿ ಸಕಲ ಭೋಗಗಳಿಂದ ಕೂಡಿದುದೂ, ಚಿನ್ನದಿಂದ ಮಾಡಲ್ಪಟ್ಟುದೂ ಆದ ಉತ್ತಮಾಸನವನ್ನಲಂಕರಿಸಿ ರಾಕ್ಷಸರಾಜನೆಂಬ ವಿಶಾಲಕೀರ್ತಿಯನ್ನು ಪಡೆದು ಶೋಭಿಸುತ್ತಿದ್ದನು.

೩೫. ದಿವ್ಯಚಂದನದಿಂದ ಲೇಪಿತವಾದ ದೇಹವುಳ್ಳವನೂ, ದೇವಕುಸುಮಗಳಿಂದಲಂಕೃತನೂ, ಕಿರೀಟದಿಂದಲಂಕೃತವಾದ ತಲೆಯುಳ್ಳವನೂ, ಬಿಳಿಯ ಚಾಮರಗಳ ಸೇವೆಯನ್ನು ಪಡೆಯುವವನೂ, ಸತ್ತು ಮತ್ತೆ ಬದುಕಿದ ರಾಕ್ಷಸರಿಂದಲೂ, ಸೇನಾನಾಯಕರಿಂದಲೂ ಪರಿವಾರಿತನೂ ಆಗಿ ಸಿಂಹಾಸನವನ್ನು ಅಲಂಕರಿಸಿ ಕುಳಿತಿದ್ದನು.

ಕ್ರತುಭಿರ್ಮೂರ್ತಿಮದ್ಭಿಶ್ಚ ಸೇವ್ಯಮಾನೋ ಮಹಾಬಲಃ ।
ಸರ್ವಪುಷ್ಪೋತ್ಕರಯುತೈರ್ನಾನಾವಿಹಗನಾದಿಭಿಃ ॥ ೩೬ ॥
ತತ್ರ ಶ್ರೀರತುಲಾ ಲೋಕೇ ತತ್ರ ಲಕ್ಷ್ಮೀರ್ನಿರರ್ಗಲಾ ।
ತತ್ರ ಕಾಂತಿರ್ದ್ಯುತಿಃ ಶೋಭಾ ಶಂಬರೋ ಯತ್ರ ದಾನವಃ ॥ ೩೭ ॥
ಏವಂ ಸ ದೈತ್ಯನೃಪತಿಃ ಸ ಭೃತ್ಯಸ್ತತ್ರ ಮೋದತೇ ।
ಸ್ವಯಮಿಂದ್ರಸ್ತು ಸಂಜಾತಶ್ಚಂದ್ರಸೂರ್ಯೌ ಕೃತೌ ಸ್ವಕೌ ॥ ೩೮ ॥
ತಯೋರಿತಿ ವಚಃ ಶ್ರುತ್ವಾ ಸ ದೇವಃ ಪುರುಷೋತ್ತಮಃ ।
ಚಿರಂ ಧ್ಯಾತ್ವಾ ಸ್ವಮನಸಿ ತದಾವೋಚದಿದಂ ಪ್ರಿಯೇ ॥ ೩೯ ॥
ಚಂದ್ರಸೂರ್ಯೌ ಮಯಾ ಜ್ಞಾತಂ ಶಂಬರಸ್ಯ ವಿಚೇಷ್ಟಿತಂ ।
ಬ್ರಹ್ಮಣೋ ವರದಾನೇನ ಭೋಕ್ತವ್ಯಂ ತಪಸಃ ಫಲಂ ॥ ೪೦ ॥
ಶಂಬರಾಯ ಪುರಾ ಕ್ಷಿಪ್ತಂ ವಜ್ರಂ ಕುಲಿಶಪಾಣಿನಾ ।
ಹೃದಯೇ ನಿಹತಃ ಸೋಽಪಿ ತಥಾಽಪಿ ನ ಮೃತೋಽಸುರಃ ॥ ೪೧ ॥

---

೩೬. ಸಮಸ್ತ ಪುಷ್ಪಸಮೂಹಗಳಿಂದಲೂ, ಸಕಲ ಪಕ್ಷಿಗಳ ಕಲಕಲನಾದಗಳಿಂದಲೂ ಕೂಡಿದ ಆರು ಋತುಗಳೂ ದೇಹಗಳನ್ನು ತಾಳಿ ಆ ಮಹಾಪರಾಕ್ರಮಿಯನ್ನು ಸೇವಿಸುತ್ತಿದ್ದುವು.

೩೭. ಆತನ ಆಳ್ವಿಕೆಯಲ್ಲಿ ಅತುಲೈಶ್ವರ್ಯವೂ, ಅವಿರಳವಾದ ಧನಧಾನ್ಯಸಮೃದ್ಧಿಯೂ, ಕಾಂತಿಯೂ, ತೇಜಸ್ಸೂ, ಪ್ರಕಾಶವೂ ಆತನೊಡನೆ ಮಾತ್ರ ಕಾಣಲ್ಪಡಬಹುದಾಗಿದ್ದಿತು.

೩೮. ಆ ರಾಕ್ಷಸೇಂದ್ರನು ಭೃತ್ಯಪರಿವಾರ ಸಮೇತನಾಗಿ ಅಲ್ಲಿ ಆನಂದಿಸುತ್ತಿರುವನು. ಆತನೇ ಮಹೇಂದ್ರನಾಗಿರುವನು. ಆತನು ಚಂದ್ರಸೂರ್ಯರ ಸ್ಥಾನಗಳಿಗೂ ತನ್ನವರನ್ನೇ ನೇಮಿಸಿರುವನು.''

೩೯. ಪಾರ್ವತಿಯೆ! ಇಂತೆಂದ ಆ ಇಬ್ಬರ ವಿಜ್ಞಾಪನೆಯನ್ನು ಕೇಳಿ ಶ್ರೀಮನ್ನಾರಾಯಣನು ತನ್ನ ಮನಸ್ಸಿನಲ್ಲಿಯೇ ಬಹಳಕಾಲ ಚಿಂತಿಸಿ ಅವರಿಗೆ ಹೇಳಿದನು.

೪೦. '' ಎಲೈ ಚಂದ್ರಸೂರ್ಯರಿರಾ! ಈ ಶಂಬರಾಸುರನ ವ್ಯವಹಾರವೆಲ್ಲವನ್ನೂ ನಾನು ಚೆನ್ನಾಗಿ ತಿಳಿದಿರುವೆನು. ಬ್ರಹ್ಮನು ಕೊಟ್ಟ ವರದಿಂದ ಅವನು ತನ್ನ ತಪಸ್ಸಿನ ಫಲವನ್ನು ಅನುಭವಿಸುತ್ತಿರುವನು.

೪೧. ಮಹೇಂದ್ರನು ಹಿಂದೆ ವಜ್ರಾಯುಧದಿಂದ ಈ ಶಂಬರಾಸುರನನ್ನು ಹೊಡೆದರೂ ಹೃದಯಪ್ರದೇಶದಲ್ಲಿ ಆ ಪೆಟ್ಟನ್ನು ತಿಂದ ಅವನು ಸಾಯಲಿಲ್ಲ.

ಗಮ್ಯತಾಂ ಚ ಮಯಾಜ್ಞಪ್ತೌ ಮಹಾಕಾಲವನೋತ್ತಮೇ ।
ಚಂದ್ರಸೂರ್ಯೌ ಮಮಾದೇಶಾತ್ತತ್ರ ಸಿದ್ಧಿಂ ಚ ಲಪ್ಸ್ಯಥ ॥ ೪೨ ॥
ತತ್ರಾಽನಂತೋ ಮಹಾಕಾಲೋ ಲಿಂಗರೂಪೋ ಮಹೇಶ್ವರಃ ।
ತಸ್ಯ ಚೋತ್ತರತೋ ದೇಶೇ ಲಿಂಗಂ ಕಾಮಪ್ರದಂ ಶಿವಂ ॥ ೪೩ ॥
ತಸ್ಯ ದರ್ಶನಮಾತ್ರೇಣ ಕೃತಕೃತ್ಯೌ ಭವಿಷ್ಯಥಃ ।
ತಸ್ಯ ಜ್ವಾಲಾಸಮೂಹೇನ ಮರಣಂ ಶಂಬರಸ್ಯ ಚ ।
ಭವಿಷ್ಯತಿ ನ ಸಂದೇಹಸ್ತಸ್ಮಾತ್ತತ್ರೈವ ಗಮ್ಯತಾಂ ॥ ೪೪ ॥
ಇತ್ಯುಕ್ತೌ ವಾಸುದೇವೇನ ಚಂದ್ರಸೂರ್ಯೌ ಯಶಸ್ವಿನಿ ।
ಸತ್ವರಂ ಹೃಷ್ಟರೋಮಾಣೌ ಮಹಾಕಾಲವನಂಗತೌ ॥ ೪೫ ॥
ತತ್ರ ದೃಷ್ಟ್ವಾ ಮಹಾದೇವಂ ತೇಜಸೋ ರಾಶಿಮವ್ಯಯಂ ।
ಸ್ತುತಂ ಚ ವಿವಿಧೈಃ ಸ್ತೋತ್ರೈಃ ಪೂಜಿತಂ ಕುಸುಮೈಃ ಶುಭೈಃ ॥ ೪೬ ॥
ಏತಸ್ಮಿನ್ನಂತರೇ ವಾಣೀ ಲಿಂಗಮಧ್ಯಾತ್ಸಮುತ್ಥಿತಾ ।
ಆಶ್ವಾಸಯಂತೀ ತರಸಾ ಚಂದ್ರಸೂರ್ಯೌ ಹಿಮಾತ್ಮಜೇ ॥ ೪೭ ॥

---

೪೨. ಈಗ ನನ್ನ ಅಪ್ಪಣೆಯಂತೆ ನೀವಿಬ್ಬರೂ ಉತ್ತಮವಾದ ಮಹಾಕಾಲ ವನಕ್ಕೆ ಹೋಗಿರಿ. ನಾನು ಹೇಳಿದಂತೆ ಮಾಡಲು ನೀವು ಅಲ್ಲಿ ಕಾರ್ಯಸಿದ್ಧಿಯನ್ನು ಪಡೆಯುವಿರಿ.

೪೩. ಅಲ್ಲಿ ಮಹಾದೇವನು ಲಿಂಗರೂಪವನ್ನು ತಾಳಿ, ಮಹಾಕಾಲೇಶ್ವರನೆಂಬ ಅಭಿದಾನದಿಂದ ಅನಾದಿಯಾಗಿ ನೆಲಸಿರುವನು. ಅದಕ್ಕೆ ಉತ್ತರದಿಕ್ಕಿನಲ್ಲಿಯೇ ಸರ್ವಾಭೀಷ್ಟಪ್ರದವೂ, ಮಂಗಳಕರವೂ ಆದ ಲಿಂಗವೊಂದಿರುವುದು.

೪೪. ಅದನ್ನು ನೋಡುವಮಾತ್ರದಿಂದಲೇ ನೀವು ಕೃತಾರ್ಥರಾಗುವಿರಿ. ಶಂಬರಾಸುರನೂ ಆ ಲಿಂಗದ ಜ್ವಾಲೆಗಳಿಂದಲೇ ನಾಶವಾಗುವುದರಲ್ಲಿ ಸಂಶಯವಿಲ್ಲವು. ಆದುದರಿಂದ ನೀವು ಅಲ್ಲಿಗೆ ಪ್ರಯಾಣಮಾಡಿರಿ.

೪೫. ಓ ಸರ್ವಮಂಗಳೆಯೆ! ವಾಸುದೇವನಾಡಿದ ಈ ಮಾತುಗಳನ್ನು ಕೇಳಿ ಚಂದ್ರಸೂರ್ಯರಿಬ್ಬರೂ ರೋಮಾಂಚವನ್ನು ಹೊಂದಿ ಸಂಭ್ರಮದಿಂದ ಮಹಾಕಾಲವನವನ್ನು ಸೇರಿದರು.

೪೬. ಅಲ್ಲಿ ಅನಾದಿಯೂ, ಶಾಶ್ವತವೂ, ತೇಜೋರಾಶಿಯೂ ಆದ ದಿವ್ಯ ಲಿಂಗವನ್ನು ಕಂಡು ಅನೇಕವಿಧಗಳಾದ ಸ್ತೋತ್ರಗಳಿಂದ ಸ್ತುತಿಸಿ ಅದನ್ನು ಪವಿತ್ರ ಪುಷ್ಪಗಳಿಂದ ಪೂಜಿಸಿದರು.

೪೭. ಎಲೌ ಹಿಮಗಿರಿಜಾತೆಯೆ! ಇಷ್ಟರಲ್ಲಿಯೇ ಚಂದ್ರಸೂರ್ಯರನ್ನು ಸಮಾಧಾನಗೊಳಿಸುತ್ತ ಆ ಲಿಂಗದ ಮಧ್ಯದಿಂದ ಒಂದು ದಿವ್ಯವಾಣಿಯು ಹೊರಟುಬಂದಿತು.

ಹತಃ ಸ ಶಂಬರೋ ದೈತ್ಯೋ ಗತೌ ತೌ ಚಂದ್ರಭಾಸ್ಕರೌ ।
ದೈತ್ಯಾನಾಂ ನಿರ್ಜಿತೌ ದುಷ್ಟೌ ಪಾತಾಲಾಂತರಸಂಸ್ಥಿತೌ ॥ ೪೮ ॥
ರಾಹುಕೇತೂ ಗ್ರಹಾಂತೇತು ಕೃತೌ ಸಮಯಪೂರ್ವಕೌ ।
ಸ್ಥಾಪಿತಃ ಸ್ವಪದೇ ಶಕ್ರೋ ದೇವೈಃ ಸಹ ನ ಸಂಶಯಃ ॥ ೪೯ ॥
ಸ್ವಂ ಸ್ವಂ ಸ್ಥಾನಂ ಗತಾಃ ಸರ್ವೇ ಲೋಕಪಾಲಾ ಮುದಾಯುತಾಃ ।
ಕಾಂತಿಪ್ರತಾಪಸಂಯುಕ್ತೌ ಭವಂತೌ ಭುವನತ್ರಯೇ ॥ ೫೦ ॥
ಗಗನೇ ಗ್ರಹನಕ್ಷತ್ರೈಃ ಸಹಿತೌ ವಿಚರಿಷ್ಯಥಃ ।
ಪೂರ್ವವತ್ಪುಣ್ಯಪಾಪಾನಾಂ ಸಾಕ್ಷಿಭೂತೌ ಭವಿಷ್ಯಥಃ ॥ ೫೧ ॥
ಇತ್ಯುಕ್ತೌ ಚಂದ್ರಸೂರ್ಯೌ ತು ತಯಾ ವಾಣ್ಯಾ ವರಾನನೇ ।
ಸಂತುಷ್ಟೌ ಕೃತಕೃತ್ಯೌ ತು ಸಂಜಾತೌ ಲಿಂಗದರ್ಶನಾತ್ ॥ ೫೨ ॥
ಏತಸ್ಮಿನ್ನಂತರೇ ದೇವಾ ವಿಮಾನಸ್ಥಾಃ ಸಮಾಗತಾಃ ।
ಯತ್ರ ಚಂದ್ರಶ್ಚ ಸೂರ್ಯಶ್ಚ ಮಹಾಕಾಲವನೇ ಶುಭೌ ॥ ೫೩ ॥
ಜ್ಞಾತ್ವಾ ಲಿಂಗಸ್ಯ ಮಾಹಾತ್ಮ್ಯಂ ನಾಮ ಚಕ್ರುಃ ಸಮಾಹಿತಾಃ ।
ಸೇವಿತಂ ಚಂದ್ರಸೂರ್ಯಾಭ್ಯಾಂ ಲಿಂಗಂ ತೇಜೋಮಯಂ ಪರಂ ॥ ೫೪ ॥

---

೪೮–೪೯. "ಎಲೈ ದೇವತೆಗಳಿರಾ! ಶಂಬರಾಸುರನು ಹತನಾದನು. ಚಂದ್ರಸೂರ್ಯರೂ ಹೊರಟುಹೋದರು. ದೈತ್ಯರಿಂದ ನಿರ್ಜಿತರೂ, ದುಷ್ಟರೂ, ಪಾತಾಳತಲದಲ್ಲಿ ವಾಸಿಸುತ್ತಿದ್ದವರೂ ಆದ ಆ ರಾಹುಕೇತುಗಳಿಬ್ಬರೂ ನಿಯಮ ಕ್ಕೊಳಗಾಗಿ ನವಗ್ರಹಗಳ ಕೊನೆಯಲ್ಲಿ ಸ್ಥಾನವನ್ನು ಪಡೆಯುವರು. ನೀವೂ ಮಹೇಂದ್ರನೂ ತಮ್ಮತಮ್ಮ ಸ್ಥಾನಗಳನ್ನು ಮತ್ತೆ ಪಡೆಯುವಿರಿ.

೫೦. ಲೋಕಪಾಲಕರೆಲ್ಲರೂ ಸಂತೋಷದಿಂದ ತಮ್ಮ ತಮ್ಮ ಲೋಕಗಳಿಗೆ ಹೊರಟುಹೋಗುವರು. ನೀವಿಬ್ಬರೂ ಕಾಂತಿಯಿಂದಲೂ, ಪರಾಕ್ರಮದಿಂದಲೂ ಕೂಡಿದವರಾಗಿ ಮೂರು ಲೋಕಗಳಲ್ಲಿಯೂ ಪ್ರಖ್ಯಾತರಾಗುವಿರಿ.

೫೧. ಆಕಾಶದಲ್ಲಿ ಗ್ರಹಗಳೊಡನೆಯೂ ನಕ್ಷತ್ರಗಳೊಡನೆಯೂ ಕೂಡಿ ಸಂಚರಿಸುತ್ತಿರುವಿರಿ. ಹಿಂದಿನಂತೆಯೇ ಜೀವರು ಮಾಡುವ ಸಮಸ್ತ ಪಾಪಪುಣ್ಯ ಗಳಿಗೂ ಸಾಕ್ಷಿಗಳಾಗಿರುವಿರಿ."

೫೨. ದೇವಿಯೆ! ಆ ವಾಣಿಯು ಇಂತು ಹೇಳಲು, ಆ ಮಹಾಲಿಂಗದ ದರ್ಶನದಿಂದ ಚಂದ್ರಸೂರ್ಯರು ಸಂತುಷ್ಟರೂ ಕೃತಕೃತ್ಯರೂ ಆದರು.

೫೩. ಇಷ್ಟರಲ್ಲಿಯೇ ಮಹಾಕಾಲವನಕ್ಷೇತ್ರದಲ್ಲಿ ಚಂದ್ರಸೂರ್ಯರಿದ್ದೆಡೆಗೆ ದೇವತೆಗಳೆಲ್ಲರೂ ವಿಮಾನಗಳಲ್ಲಿ ಕುಳಿತು ಪ್ರಾಪ್ತರಾದರು.

೫೪. ಅವರು ಈ ಮಹಾಲಿಂಗದ ಮಾಹಾತ್ಮ್ಯವನ್ನು ತಿಳಿದು ದೀರ್ಘಾ ಲೋಚನೆಯನ್ನು ಮಾಡಿ ಅದಕ್ಕೆ ಹೆಸರನ್ನಿಟ್ಟರು. ತೇಜೋಮಯವೂ, ಸರ್ವೋ

ಚಂದ್ರಾದಿತ್ಯೇಶ್ವರಂ ನಾಮ ಖ್ಯಾತಿಂ ಯಾಸ್ಯತಿ ಭೂತಲೇ ।
ಲಿಂಗಸ್ಯಾಽಸ್ಯ ಸಮುತ್ಥೇನ ಜ್ವಾಲಾಸಂಘೇನ ಶಂಬರಃ ।
ದಗ್ಧೋ ಭೃತ್ಯಜನ್ಯೈಃ ಸಾರ್ಧಂ ಚಂದ್ರಸೂರ್ಯಾನುಸೇವನಾತ್ ॥ ೫೫ ॥
ಇತ್ಯುಕ್ತ್ವಾ ತ್ರಿದಶಾಃ ಸರ್ವೇ ಸಮೀಪೇ ಸರ್ವತಃ ಸ್ಥಿತಾಃ ।
ಸ್ತುವಂತೋ ವಿವಿಧೈಃ ಸ್ತೋತ್ರೈಶ್ಚಂದ್ರಾದಿತ್ಯೇಶ್ವರಂ ಶಿವಂ ॥ ೫೬ ॥
ಚಂದ್ರಾದಿತ್ಯೌ ಚ ತತ್ರಸ್ಥೌ ಸ್ಥಿತೌ ಲಿಂಗಸಮೀಪತಃ ।
ಆರಾಧಯಂತೌ ದೇವೇಶಂ ಪದಂ ಪ್ರಾಪ್ತೌ ಚ ಪೂರ್ವವತ್ ॥ ೫೭ ॥
ಯೇ ಪಶ್ಯಂತಿ ನರಾ ಭಕ್ತ್ಯಾ ಚಂದ್ರಾದಿತ್ಯೇಶ್ವರಂ ಶಿವಂ ।
ತೇ ಯಾಂತಿ ಸೂರ್ಯಲೋಕಂ ತು ಚಂದ್ರಲೋಕಂ ತಥೈವ ಚ ॥ ೫೮ ॥
ವಿಮಾನೈಃ ಸೂರ್ಯಸಂಕಾಶೈಸ್ತಥಾ ಚಂದ್ರಪ್ರಭೈಃ ಶುಭೈಃ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವತ್ತೇಷಾಂ ಸುಖಂ ಭವೇತ್ ॥ ೫೯ ॥
ಚಂದ್ರಸೂರ್ಯೋಪರಾಗೇ ತು ಚಂದ್ರಾದಿತ್ಯೇಶ್ವರಂ ಶಿವಂ ।
ಯೇ ಪಶ್ಯಂತಿ ನರಾ ಭಕ್ತ್ಯಾ ಸ್ನಾತ್ವಾ ಶಿಪ್ರಾಂ ಚ ಪಾವನೀಂ ॥ ೬೦ ॥

---

ತ್ತಮವೂ ಆದ ಈ ಲಿಂಗವನ್ನು ಚಂದ್ರಸೂರ್ಯರು ಸೇವಿಸಿರುವುದರಿಂದ ಭೂಮಂಡಲದಲ್ಲಿ ಇದು ಚಂದ್ರಾದಿತ್ಯೇಶ್ವರನೆಂದೇ ಪ್ರಖ್ಯಾತಿಯನ್ನು ಪಡೆಯುವುದು.

೫೫. ಚಂದ್ರಸೂರ್ಯರು ಇದನ್ನು ಸೇವಿಸಿದುದರಿಂದ ಈ ಲಿಂಗವು ಜ್ವಾಲೆಗಳನ್ನುಗುಳಿ ಪರಿವಾರಸಮೇತನಾದ ಶಂಬರಾಸುರನನ್ನು ಸುಟ್ಟುಹಾಕಿತು.''

೫೬. ಇಂತೆಂದು ಚಂದ್ರಾದಿತ್ಯೇಶ್ವರಮಹಾಲಿಂಗವನ್ನು ಅನೇಕ ವಿಧವಾಗಿ ಸ್ತೋತ್ರಮಾಡಿ ಸಮಸ್ತದೇವತೆಗಳೂ ಅದರ ಸಮೀಪದಲ್ಲಿಯೇ ಸುತ್ತಲೂ ನೆಲಸಿದರು.

೫೭. ಸೂರ್ಯಚಂದ್ರರೂ ಆ ಲಿಂಗದ ಸಮೀಪದಲ್ಲಿಯೇ ನಿಂತವರಾಗಿ ಮಹಾದೇವನನ್ನು ಪೂಜಿಸುತ್ತ ಮೊದಲಿನ ಪದವಿಗಳನ್ನೇ ಪಡೆದರು.

೫೮. ಯಾರು ಈ ಚಂದ್ರಾದಿತ್ಯೇಶ್ವರಮಹಾಲಿಂಗವನ್ನು ನೋಡುವರೊ, ಅವರು ಸೂರ್ಯಲೋಕಕ್ಕೂ ಚಂದ್ರಲೋಕಕ್ಕೂ ಹೋಗುವರು.

೫೯. ಸೂರ್ಯನನ್ನೂ ಚಂದ್ರನನ್ನೂ ಹೋಲುವ ದಿವ್ಯವಿಮಾನಗಳಲ್ಲಿ ಕುಳಿತು ಪ್ರಯಾಣಮಾಡಿ ಅವರು ಆ ಲೋಕಗಳಲ್ಲಿ ಚಂದ್ರಸೂರ್ಯರಿರುವವರೆಗೂ ಸುಖವಾಗಿ ವಾಸಮಾಡುವರು.

೬೦. ಸೂರ್ಯಚಂದ್ರರ ಗ್ರಹಣಸಮಯದಲ್ಲಿ ಎಲ್ಲರೂ ಶಿಪ್ರಾನದಿಯ ಪವಿತ್ರವಾದ ಜಲದಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಚಂದ್ರಾದಿತ್ಯೇಶ್ವರನ ದರ್ಶನವನ್ನು ಮಾಡಬೇಕು.

ತೇಷಾಂ ಕುಲಶತಂ ಯಾವತ್ಪೈತೃಕಂ ಮಾತೃಕಂ ತಥಾ ।
ಲೋಕೇ ಚಂದ್ರಸ್ಯ ಸೂರ್ಯಸ್ಯ ಮೋದತೇ ಶಾಶ್ವತೀಃ ಸಮಾಃ ॥ ೬೧ ॥
ಅಮಾಸೋಮಸಮಾಯೋಗೇ ಯೇ ಪಶ್ಯಂತಿ ಪ್ರಸಂಗತಃ ।
ಚಂದ್ರಾದಿತ್ಯೇಶ್ವರಂ ದೇವಂ ನ ತೇ ಯಾಂತಿ ಯಮಾಲಯಂ ॥ ೬೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಚಂದ್ರಾದಿತ್ಯೇಶ್ವರೇಶಸ್ಯ ಶ್ರೂಯತಾಂ ಕರಭೇಶ್ವರಂ ॥ ೬೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ ಉಮಾಮಹೇಶ್ವರಸಂವಾದೇ "ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನಂ" ನಾಮ ದ್ವಿಸಪ್ತತಿತಮೋಽಧ್ಯಾಯಃ

---

೬೧. ಹಾಗೆ ಮಾಡಿದವರ ತಾಯಿತಂದೆಗಳ ಹಿಂದುಮುಂದಿನ ಒಂದು ನೂರು ತಲೆಯವರೆಲ್ಲರೂ ಚಂದ್ರಸೂರ್ಯರ ಲೋಕಗಳಲ್ಲಿ ಅನಂತಕಾಲದವರೆಗೂ ವಾಸಮಾಡುವರು.

೬೨. ಅಮಾವಾಸ್ಯೆಯು ಸೋಮವಾರದೊಡನೆ ಕೂಡಿದ ದಿನದಲ್ಲಿ ಪ್ರಸಂಗ ವಶದಿಂದಲಾದರೂ ಯಾರು ಚಂದ್ರಾದಿತ್ಯನನ್ನು ನೋಡುತ್ತಾರೆಯೊ, ಅವರು ಯಮಲೋಕಕ್ಕೆ ಹೋಗುವುದಿಲ್ಲ.

೬೩. ದೇವಿಯೆ! ಇಂತು ನಿನಗೆ ಚಂದ್ರಾದಿತ್ಯೇಶ್ವರಮಹಾಲಿಂಗದ ಪ್ರಭಾವವು ಹೇಳಲ್ಪಟ್ಟಿತು. ಪಾಪಪರಿಹಾರಕವಾದ ಈ ಕಥೆಯಾದಮೇಲೆ ಕರಭೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನ"ವೆಂಬ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಸಪ್ತತಿತಮೋಽಧ್ಯಾಯಃ

## ಕರಭೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ತ್ರಿಸಪ್ತತೀಶ್ವರಂ ವಿದ್ಧಿ ಕರಭೇಶಂ ವರಾನನೇ ।
ಯಸ್ಯ ದರ್ಶನಮಾತ್ರೇಣ ಕುಯೋನಿರ್ನೈವ ಲಭ್ಯತೇ ॥ ೧ ॥
ವೀರಕೇತುರಭೂದ್ಧೀಮಾನಯೋಧ್ಯಾಯಾಂ ಮಹೀಪತಿಃ ।
ವಿದ್ಯಾವಿನಯಸೌಭಾಗ್ಯಲಾವಣ್ಯಾಮೃತಪೂರಿತಃ ॥ ೨ ॥
ಸ ಸಮ್ಯಕ್ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ।
ಅತೀತಾನಾಗತಜ್ಞಾನಸಪರಿನಿಶ್ಚಿತಮಾನಸಃ ॥ ೩ ॥
ಅಥೈಕಸ್ಮಿನ್ದಿನೇ ರಾಜಾ ಜಗಾಮ ಗಹನಂ ವನಂ ।
ಮೃಗಸಿಂಹಗಜಾಕೀರ್ಣಂ ವ್ಯಾಘ್ರಸಂಬರಸಂಕುಲಂ ॥ ೪ ॥
ಸ ತತ್ರ ವಿವಿಧಾನ್ಸನ್ಯಾನ್ಸ್ವಿವ್ಯಾಧ ಪರವೀರಹಾ ।
ಮೃಗಾಂಶ್ಚ ಮಹಿಷಾಂಶ್ಚೈವ ವರಾಹಾಂಶ್ಚ ಸಹಸ್ರಶಃ ॥ ೫ ॥

---

## ಕನ್ನಡದ ಅನುವಾದ

### ಕರಭೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಪಾರ್ವತಿಯೆ ! ಎಪ್ಪತ್ತಮೂರನೆಯ ಮಹಾಲಿಂಗವಾದ ಕರಭೇಶ್ವರವನ್ನು ನೋಡಿದವನೆಂದಿಗೂ ನೀಚಯೋನಿಗಳಲ್ಲಿ ಜನಿಸುವುದಿಲ್ಲ.

೨. ಹಿಂದೆ ಅಯೋಧ್ಯಾನಗರದಲ್ಲಿ ವಿದ್ಯಾ, ವಿನಯ, ಐಶ್ವರ್ಯ, ಸೌಂದರ್ಯಾದಿ ಸದ್ಗುಣಗಳಿಂದಲಂಕೃತನಾದ ವೀರಕೇತುವೆಂಬ ಮಹಾಬುದ್ಧಿಶಾಲಿಯೊಬ್ಬನು ರಾಜನಾಗಿದ್ದನು.

೩–೪. ತ್ರಿಕಾಲಜ್ಞಾನಿಯಾದ ಆತನು ದೃಢತರವಾದ ಮನಸ್ಸಿನಿಂದ ಪ್ರಜೆಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆಯೇ ಕಾಣುತ್ತ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಒಂದು ದಿನ ರಾಜನು ಬೇಟೆಗಾಗಿ ಹೊರಟು ಜಿಂಕೆಗಳು, ಸಿಂಹಗಳು, ಆನೆಗಳು, ಹುಲಿಗಳು, ಕಾಡುಕೋಣಗಳು ಮುಂತಾದ ಪ್ರಾಣಿಗಳಿಂದ ತುಂಬಿದ್ದ ಒಂದು ದಟ್ಟಡವಿಯನ್ನು ಸೇರಿದನು.

೫. ಶತ್ರುಸಂಹಾರಕನಾದ ಆ ರಾಜನು ಅಲ್ಲಿ ಬಹುವಿಧಗಳಾದ ಜಿಂಕೆಗಳನ್ನೂ, ಕಾಡೆಮ್ಮೆಗಳನ್ನೂ, ಕಾಡುಹಂದಿಗಳನ್ನೂ ಸಾವಿರಗಟ್ಟಲೆಯಾಗಿ ಹೊಡೆದು ಕೆಡವಿದನು.

ಲೋಡಿತಂ ತದ್ವನಂ ಸರ್ವಂ ಪಶುಪಕ್ಷಿಮೃಗಾಕುಲಂ ।
ರಹಿತಂ ಶ್ವಾಪದೈಃ ಸರ್ವೈಃ ಕೃತಂ ತೇನ ಮಹೀಭೃತಾ ॥ ೬ ॥
ಯದಾ ನಶ್ವಾಪದಾಸ್ತಸ್ಮಿನ್ ದೃಶ್ಯಂತೇ ಗಹನೇ ವನೇ ।
ತದಾ ವಿದ್ಧಸ್ತು ಕರಭೋ ಬಾಣೇನಾಸತಪರ್ವಣಾ ॥ ೭ ॥
ಸ ಚಾಽಪಿ ಕರಭೋ ದೇವಿ ಬಾಣಮಾದಾಯ ಸತ್ವರಂ ।
ವಿದ್ಧೋಽಪಿ ನಿಃಸೃತೋಽತ್ಯರ್ಥಂ ರಾಜ್ಞಸ್ತಸ್ಯೈವ ಪಶ್ಯತಃ ।
ಸ ಚ ರಾಜಾ ಬಲೀ ತೂರ್ಣಂ ಸಸಾರ ಕರಭಂ ಪ್ರತಿ ॥ ೮ ॥
ತತೋ ನಿಮ್ನಸ್ಥಲಂ ಚೈವ ಸ ಚೋಽಷ್ಟ್ರೋಽದ್ರವದಾಶುಗಃ ।
ಮುಹೂರ್ತೇನ ತತೋ ದೇವಿ ಯೋಜನಾನಿ ಬಹೂನ್ಯಪಿ ॥ ೯ ॥
ತತಃ ಸ ರಾಜಾ ತಾರುಣ್ಯಾದೌರಸೇನ ಬಲೇನ ಚ ।
ಸಸಾರ ಬಾಣಾಸನಧೃಕ್ಸಖಡ್ಗಃ ಸಹಯೋ ನೃಪಃ ॥ ೧೦ ॥
ತತೋ ನದಾನ್ನದೀಶ್ಚೈವ ಪಲ್ವಲಾನಿ ವನಾನಿ ಚ ।
ಅನತಿಕ್ರಮ್ಯಾಽನತಿಕ್ರಮ್ಯ ಸಸ್ಕಾರೈವ ವನೇಚರಂ ॥ ೧೧ ॥

---

೬. ಮೃಗಗಳಿಂದಲೂ, ಪಕ್ಷಿಗಳಿಂದಲೂ, ಪಶುಗಳಿಂದಲೂ ಭರಿತವಾಗಿದ್ದ ಆ ವನವೆಲ್ಲವೂ ಅಲ್ಲಕಲ್ಲೋಲವಾಯಿತು; ಮಹಾರಾಜನ ದೆಸೆಯಿಂದ ಸಕಲ ಹಿಂಸ್ರಜಂತುಗಳಿಂದಲೂ ರಹಿತವಾಯಿತು.

೭. ಗಹನವಾದ ಆ ಅಡವಿಯಲ್ಲಿ ಯಾವ ಹಿಂಸ್ರಜಂತುವೂ ಕಾಣದಂತೆ ಆಗಲು ರಾಜನು ಬಲವಾದ ಬಾಣದಿಂದ ಒಂದು ಒಂಟೆಯನ್ನು ಹೊಡೆದನು.

೮. ದೇವಿಯೆ! ಆ ಒಂಟೆಯು ಪೆಟ್ಟನ್ನು ತಿಂದರೂ ಆ ಬಾಣವನ್ನು ಧರಿಸಿಕೊಂಡು ರಾಜನು ನೋಡುತ್ತಿದ್ದಂತೆಯೇ ವೇಗವಾಗಿ ಓಡತೊಡಗಿತು. ಮಹಾ ಪರಾಕ್ರಮಿಯಾದ ಆ ರಾಜನೂ ಒಂಟೆಯನ್ನೇ ಹಿಂಬಾಲಿಸಿ ಹೊರಟನು.

೯. ಬಳಿಕ ಆ ಒಂಟೆಯು ಹಳ್ಳಗಳನ್ನೂ, ಗುಡ್ಡಗಳನ್ನೂ ದಾಟಿಕೊಂಡು ಓಡುತ್ತ ವೇಗದಿಂದ ಮುಹೂರ್ತಮಾತ್ರದಲ್ಲಿಯೆ ಅನೇಕ ಯೋಜನಗಳ ದೂರಕ್ಕೆ ಓಡಿಹೋಯಿತು.

೧೦. ಯೌವನದಿಂದಲೂ, ದೇಹಶಕ್ತಿಯಿಂದಲೂ ಕೂಡಿದ್ದ ರಾಜನಾದರೊ ಬಿಲ್ಲುಕತ್ತಿಗಳನ್ನು ತೆಗೆದುಕೊಂಡು ಕುದುರೆಯನ್ನೇರಿ ಆ ಒಂಟೆಯನ್ನೇ ಅಟ್ಟಿಸಿಕೊಂಡುಹೋದನು.

೧೧. ಆತನು ದಾಟಲಸಾಧ್ಯವಾದ ಅನೇಕ ನದಿಗಳನ್ನೂ, ಕುಂಟೆಗಳನ್ನೂ, ವನಗಳನ್ನೂ ದಾಟಿಕೊಂಡು ಆ ಕಾಡುಮೃಗವನ್ನೇ ಬೆನ್ನಟ್ಟಬರುತ್ತಿದ್ದನು.

ಸ ಚಾಽಪಿ ಕರಭೋ ದೇವಿ ಆಸಾದ್ಯಾಸಾದ್ಯ ತಂ ನೃಪಂ ।
ಪುನರಪ್ಯೇತಿ ಜವನೋ ಜವೇನ ಮಹತಾ ತತಃ ॥ ೧೨ ॥
ಸ ತಸ್ಯ ಬಾಣೈರ್ಬಹುಭಿಃ ಕರಭೋ ವಿಹ್ವಲೀಕೃತಃ ।
ಪೃಷ್ಠತಃ ಪಾರ್ಶ್ವತಶ್ಚೈವ ಪುನರಭ್ಯೇತಿ ಚಾಂತಿಕಂ ।
ಪುನಶ್ಚ ಜವಮಾಸ್ಥಾಯ ಪಾರ್ಶ್ವೇಽಚಾಽಗ್ರೇ ಚ ದೃಶ್ಯತೇ ॥ ೧೩ ॥
ಅಥಾಽರಣ್ಯಂ ಮಹಾರೌದ್ರಂ ಪ್ರವಿಷ್ಟಃ ಕರಭಸ್ತದಾ ।
ಅಂತರ್ಧಾನಂ ಜಗಾಮಾಶು ಸ ಚ ರಾಜಾ ವನೇಽವಿಶತ್ ॥ ೧೪ ॥
ಪ್ರವಿಶ್ಯ ಚ ಮಹಾರಣ್ಯಂ ತಾಪಸಾನಾಮಥಾಶ್ರಮಂ ।
ಆಸಸಾದ ತತೋ ರಾಜಾ ಶ್ರಾಂತಾಶ್ವೋಽಪಾವಿಶತ್ಪುನಃ. ॥ ೧೫ ॥
ತಂ ಕಾರ್ಮುಕಕರಂ ದೃಷ್ಟ್ವಾ ಶ್ರಮಾರ್ತಂ ಕ್ಷುಧಿತಂ ತದಾ ।
ಸಮಭ್ಯೇತ್ಯರ್ಷಯಸ್ತಸ್ಮೈ ಪೂಜಾಂ ಚಕ್ರುರ್ಯಥಾವಿಧಿ ॥ ೧೬ ॥
ಸ ಪೂಜಾಮೃಷಿಭಿರ್ದತ್ತಾಂ ಪ್ರತಿಗೃಹ್ಯ ಯಥಾವಿಧಿ ।
ಅಪೃಚ್ಛತ್ತಾಪಸಾನ್ ಸರ್ವಾಂಸ್ತಪಸೋ ವೃದ್ಧಿಮುತ್ತಮಾಂ ॥ ೧೭ ॥

---

೧೨. ಪಾರ್ವತಿಯೆ! ಆ ಒಂಟೆಯಾದರೊ ರಾಜನ ಹತ್ತಿರಕ್ಕೆ ಬಂದಂತೆ ಕಾಣಿಸಿಕೊಳ್ಳುತ್ತ ಪುನಃ ಪುನಃ ಮಹತ್ತರವಾದ ವೇಗದಿಂದ ಓಡಿಹೋಗುತ್ತಿದ್ದಿತು.

೧೩. ಅದು ರಾಜನ ಅನೇಕ ಬಾಣಗಳಿಂದ ಬೆನ್ನಿನಲ್ಲಿಯೂ ಪಕ್ಕಗಳಲ್ಲಿಯೂ ಗಾಯಗಳನ್ನು ತಾಳಿದ್ದರೂ ಮತ್ತೆ ಮತ್ತೆ ಹತ್ತಿರಕ್ಕೆ ಬರುತ್ತಲೂ, ಮತ್ತೆ ಮತ್ತೆ ಓಡಿಹೋಗಿ ಪಕ್ಕದಲ್ಲಿಯೊ, ಎದುರಿನಲ್ಲಿಯೊ ಕಾಣಿಸುತ್ತಲೂ ಇದ್ದಿತು.

೧೪. ಕಡೆಗೆ ಆ ಒಂಟೆಯು ಮಹಾ ಭಯಂಕರವಾದ ಒಂದು ಅರಣ್ಯವನ್ನು ಪ್ರವೇಶಿಸಿ ಅಲ್ಲಿ ರಾಜನ ಕಣ್ಣುಗಳಿಗೆ ಕಾಣಿಸದಂತಾಯಿತು. ರಾಜನೂ ಆ ಕಾಡನ್ನು ಪ್ರವೇಶಿಸಿದನು.

೧೫. ಆ ಅರಣ್ಯವನ್ನು ಪ್ರವೇಶಿಸಿ ಬರುತ್ತ ಮಹಾ ತಪಸ್ವಿಗಳ ಒಂದು ಆಶ್ರಮವನ್ನು ಕಂಡು ತನ್ನ ಕುದುರೆಯು ಬಹಳ ಆಯಾಸಗೊಂಡಿರಲು ಅಲ್ಲಿ ಕುಳಿತುಕೊಂಡನು.

೧೬. ಬಿಲ್ಲನ್ನು ಕೈಯಲ್ಲಿಹಿಡಿದು ಆಯಾಸಗೊಂಡಿರುವವನೂ, ಕ್ಷುಧಾರ್ತನೂ ಆಗಿ ಕುಳಿತಿರುವ ರಾಜನನ್ನು ಕಂಡು ಆಶ್ರಮದ ಮಹರ್ಷಿಗಳೆಲ್ಲರೂ ಯಥಾವಿಧಿಯಾಗಿ ಆತನಿಗೆ ಅತಿಥಿಪೂಜೆಯನ್ನು ಮಾಡಿದರು.

೧೭. ಆತನೂ ವಿಧ್ಯುಕ್ತರೀತಿಯ ಆ ಪೂಜೆಯನ್ನು ಸ್ವೀಕರಿಸಿ ಮಹರ್ಷಿಗಳೆಲ್ಲರನ್ನೂ "ನಿಮ್ಮ ತಪಸ್ಸು ಉತ್ತಮರೀತಿಯಿಂದ ವೃದ್ಧಿಹೊಂದುತ್ತಿರುವುದೇ?" ಎಂದು ಪ್ರಶ್ನೆಮಾಡಿದನು.

ತೇಷಾಂ ಕುಲಶತಂ ಯಾವತ್ಪೈತೃಕಂ ಮಾತೃಕಂ ತಥಾ ।
ಲೋಕೇ ಚಂದ್ರಸ್ಯ ಸೂರ್ಯಸ್ಯ ಮೋದತೇ ಶಾಶ್ವತೀಃ ಸಮಾಃ ॥ ೬೧ ॥
ಅಮಾಸೋಮಸಮಾಯೋಗೇ ಯೇ ಪಶ್ಯಂತಿ ಪ್ರಸಂಗತಃ ।
ಚಂದ್ರಾದಿತ್ಯೇಶ್ವರಂ ದೇವಂ ನ ತೇ ಯಾಂತಿ ಯಮಾಲಯಂ ॥ ೬೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಚಂದ್ರಾದಿತ್ಯೇಶ್ವರೇಶಸ್ಯ ಶ್ರೂಯತಾಂ ಕರಭೇಶ್ವರಂ ॥ ೬೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
ಉಮಾಮಹೇಶ್ವರಸಂವಾದೇ "ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನಂ" ನಾಮ
ದ್ವಿಸಪ್ತತಿತಮೋಽಧ್ಯಾಯಃ

---

೬೧. ಹಾಗೆ ಮಾಡಿದವರ ತಾಯಿತಂದೆಗಳ ಹಿಂದುಮುಂದಿನ ಒಂದು ನೂರು ತಲೆಯವರೆಲ್ಲರೂ ಚಂದ್ರಸೂರ್ಯರ ಲೋಕಗಳಲ್ಲಿ ಅನಂತಕಾಲದವರೆಗೂ ವಾಸಮಾಡುವರು.

೬೨. ಅಮಾವಾಸ್ಯೆಯು ಸೋಮವಾರದೊಡನೆ ಕೂಡಿದ ದಿನದಲ್ಲಿ ಪ್ರಸಂಗ ವಶದಿಂದಲಾದರೂ ಯಾರು ಚಂದ್ರಾದಿತ್ಯನನ್ನು ನೋಡುತ್ತಾರೆಯೊ, ಅವರು ಯಮಲೋಕಕ್ಕೆ ಹೋಗುವುದಿಲ್ಲ.

೬೩. ದೇವಿಯೆ! ಇಂತು ನಿನಗೆ ಚಂದ್ರಾದಿತ್ಯೇಶ್ವರಮಹಾಲಿಂಗದ ಪ್ರಭಾವವು ಹೇಳಲ್ಪಟ್ಟಿತು. ಪಾಪಪರಿಹಾರಕವಾದ ಈ ಕಥೆಯಾದಮೇಲೆ ಕರಭೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಚಂದ್ರಾದಿತ್ಯೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಸಪ್ತತಿತಮೋಽಧ್ಯಾಯಃ

### ಕರಭೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ತ್ರಿಸಪ್ತತೀಶ್ವರಂ ವಿದ್ಧಿ ಕರಭೇಶಂ ವರಾನನೇ ।
ಯಸ್ಯ ದರ್ಶನಮಾತ್ರೇಣ ಕುಯೋನಿರ್ನೈವ ಲಭ್ಯತೇ ॥ ೧ ॥
ವೀರಕೇತುರಭೂದ್ಧೀಮಾನಯೋಧ್ಯಾಯಾಂ ಮಹೀಪತಿಃ ।
ವಿದ್ಯಾವಿನಯಸೌಭಾಗ್ಯಲಾವಣ್ಯಾಮೃತಪೂರಿತಃ ॥ ೨ ॥
ಸ ಸಮ್ಯಕ್ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್ ।
ಅತೀತಾನಾಗತಜ್ಞಾನಪರಿನಿಷ್ಠಿತಮಾನಸಃ ॥ ೩ ॥
ಅಥೈಕಸ್ಮಿನ್ದಿನೇ ರಾಜಾ ಜಗಾಮ ಗಹನಂ ವನಂ ।
ಮೃಗಸಿಂಹಗಜಾಕೀರ್ಣಂ ವ್ಯಾಘ್ರಸಂಬರಸಂಕುಲಂ ॥ ೪ ॥
ಸ ತತ್ರ ವಿವಿಧಾನ್ವನ್ಯಾನ್ನಿವ್ಯಾಧ ಪರವೀರಹಾ ।
ಮೃಗಾಂಶ್ಚ ಮಹಿಷಾಂಶ್ಚೈವ ವರಾಹಾಂಶ್ಚ ಸಹಸ್ರಶಃ ॥ ೫ ॥

---

### ಕನ್ನಡದ ಅನುವಾದ

#### ಕರಭೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಪಾರ್ವತಿಯೆ ! ಎಪ್ಪತ್ತಮೂರನೆಯ ಮಹಾಲಿಂಗವಾದ ಕರಭೇಶ್ವರವನ್ನು ನೋಡಿದವನೆಂದಿಗೂ ನೀಚಯೋನಿಗಳಲ್ಲಿ ಜನಿಸುವುದಿಲ್ಲ.

೨. ಹಿಂದೆ ಅಯೋಧ್ಯಾನಗರದಲ್ಲಿ ವಿದ್ಯಾ, ವಿನಯ, ಐಶ್ವರ್ಯ, ಸೌಂದರ್ಯಾದಿ ಸದ್ಗುಣಗಳಿಂದಲಂಕೃತನಾದ ವೀರಕೇತುವೆಂಬ ಮಹಾಬುದ್ಧಿ ಶಾಲಿಯೊಬ್ಬನು ರಾಜನಾಗಿದ್ದನು.

೩–೪. ತ್ರಿಕಾಲಜ್ಞಾನಿಯಾದ ಆತನು ದೃಢತರವಾದ ಮನಸ್ಸಿನಿಂದ ಪ್ರಜೆಗಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆಯೇ ಕಾಣುತ್ತ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಒಂದು ದಿನ ರಾಜನು ಬೇಟೆಗಾಗಿ ಹೊರಟು ಜಿಂಕೆಗಳು, ಸಿಂಹಗಳು, ಆನೆಗಳು, ಹುಲಿಗಳು, ಕಾಡುಕೋಣಗಳು ಮುಂತಾದ ಪ್ರಾಣಿಗಳಿಂದ ತುಂಬಿದ್ದ ಒಂದು ದಟ್ಟಡವಿಯನ್ನು ಸೇರಿದನು.

೫. ಶತ್ರುಸಂಹಾರಕನಾದ ಆ ರಾಜನು ಅಲ್ಲಿ ಬಹುವಿಧಗಳಾದ ಜಿಂಕೆಗಳನ್ನೂ, ಕಾಡೆಮ್ಮೆಗಳನ್ನೂ, ಕಾಡುಹಂದಿಗಳನ್ನೂ ಸಾವಿರಗಟ್ಟಲೆಯಾಗಿ ಹೊಡೆದು ಕೆಡವಿದನು.

ಲೋಡಿತಂ ತದ್ವನಂ ಸರ್ವಂ ಪಶುಪಕ್ಷಿಮೃಗಾಕುಲಂ ।
ರಹಿತಂ ಶ್ವಾಪದೈಃ ಸರ್ವೈಃ ಕೃತಂ ತೇನ ಮಹೀಭೃತಾ ॥ ೬ ॥
ಯದಾ ನಶ್ವಾಪದಾಸ್ತಸ್ಮಿನ್ ದೃಶ್ಯಂತೇ ಗಹನೇ ವನೇ ।
ತದಾ ವಿದ್ಧಸ್ತು ಕರಭೋ ಬಾಣೇನಾಸತಪರ್ವಣಾ ॥ ೭ ॥
ಸ ಚಾಽಪಿ ಕರಭೋ ದೇವಿ ಬಾಣಮಾದಾಯಸತ್ವರಂ ।
ವಿದ್ಧೋಽಪಿ ನಿಃಸೃತೋಽತ್ಯರ್ಥಂ ರಾಜ್ಞಸ್ತಸ್ಯೈವ ಪಶ್ಯತಃ ।
ಸ ಚ ರಾಜಾ ಬಲೀ ತೂರ್ಣಂ ಸಸಾರ ಕರಭಂ ಪ್ರತಿ ॥ ೮ ॥
ತತೋ ನಿಮ್ನಸ್ಥಲಂ ಚೈವ ಸ ಚೋಷ್ಟ್ರೋಽದ್ರವದಾಶುಗಃ ।
ಮುಹೂರ್ತೇನ ತತೋ ದೇವಿ ಯೋಜನಾನಿ ಬಹೂನ್ಯಪಿ ॥ ೯ ॥
ತತಃ ಸ ರಾಜಾ ತಾರುಣ್ಯಾದೌರಸೇನ ಬಲೇನ ಚ ।
ಸಸಾರ ಬಾಣಾಸನಧೃಕ್ಸಖಡ್ಗಃ ಸಹಯೋ ನೃಪಃ ॥ ೧೦ ॥
ತತೋ ನದಾನ್ನದೀಶ್ಚೈವ ಪಲ್ವಲಾನಿ ವನಾನಿ ಚ ।
ಅನತಿಕ್ರಮ್ಯಾಽನತಿಕ್ರಮ್ಯ ಸಸ್ಸಾರೈವ ವನೇಚರಂ ॥ ೧೧ ॥

---

೬. ಮೃಗಗಳಿಂದಲೂ, ಪಕ್ಷಿಗಳಿಂದಲೂ, ಪಶುಗಳಿಂದಲೂ ಭರಿತವಾಗಿದ್ದ ಆ ವನವೆಲ್ಲವೂ ಅಲ್ಲಕಲ್ಲೋಲವಾಯಿತು; ಮಹಾರಾಜನ ದೆಸೆಯಿಂದ ಸಕಲ ಹಿಂಸ್ರಜಂತುಗಳಿಂದಲೂ ರಹಿತವಾಯಿತು.

೭. ಗಹನವಾದ ಆ ಅಡವಿಯಲ್ಲಿ ಯಾವ ಹಿಂಸ್ರಜಂತುವೂ ಕಾಣದಂತೆ ಆಗಲು ರಾಜನು ಬಲವಾದ ಬಾಣದಿಂದ ಒಂದು ಒಂಟೆಯನ್ನು ಹೊಡೆದನು.

೮. ದೇವಿಯೆ! ಆ ಒಂಟೆಯು ಪೆಟ್ಟನ್ನು ತಿಂದರೂ ಆ ಬಾಣವನ್ನು ಧರಿಸಿಕೊಂಡು ರಾಜನು ನೋಡುತ್ತಿದ್ದಂತೆಯೇ ವೇಗವಾಗಿ ಓಡತೊಡಗಿತು. ಮಹಾ ಪರಾಕ್ರಮಿಯಾದ ಆ ರಾಜನೂ ಒಂಟೆಯನ್ನೇ ಹಿಂಬಾಲಿಸಿ ಹೊರಟನು.

೯. ಬಳಿಕ ಆ ಒಂಟೆಯು ಹಳ್ಳಗಳನ್ನೂ, ಗುಡ್ಡಗಳನ್ನೂ ದಾಟಿಕೊಂಡು ಓಡುತ್ತ ವೇಗದಿಂದ ಮುಹೂರ್ತಮಾತ್ರದಲ್ಲಿಯೆ ಅನೇಕ ಯೋಜನಗಳ ದೂರಕ್ಕೆ ಓಡಿಹೋಯಿತು.

೧೦. ಯೌವನದಿಂದಲೂ, ದೇಹಶಕ್ತಿಯಿಂದಲೂ ಕೂಡಿದ್ದ ರಾಜನಾದರೊ ಬಿಲ್ಲುಕತ್ತಿಗಳನ್ನು ತೆಗೆದುಕೊಂಡು ಕುದುರೆಯನ್ನೇರಿ ಆ ಒಂಟೆಯನ್ನೇ ಅಟ್ಟಿಸಿಕೊಂಡುಹೋದನು.

೧೧. ಆತನು ದಾಟಲಸಾಧ್ಯವಾದ ಅನೇಕ ನದಿಗಳನ್ನೂ, ಕುಂಟೆಗಳನ್ನೂ, ವನಗಳನ್ನೂ ದಾಟಿಕೊಂಡು ಆ ಕಾಡುಮೃಗವನ್ನೇ ಬೆನ್ನಟ್ಟಿಬರುತ್ತಿದ್ದನು.

ಸ ಚಾಽಪಿ ಕರಭೋ ದೇವಿ ಆಸಾದ್ಯಾಸಾದ್ಯ ತಂ ನೃಪಂ ।
ಪುನರಪ್ಯೇತಿ ಜವನೋ ಜವೇನ ಮಹತಾ ತತಃ ॥ ೧೨ ॥
ಸ ತಸ್ಯ ಬಾಣೈರ್ಬಹುಭಿಃ ಕರಭೋ ವಿಹ್ವಲೀಕೃತಃ ।
ಪೃಷ್ಠತಃ ಪಾರ್ಶ್ವತಶ್ಚೈವ ಪುನರಭ್ಯೇತಿ ಚಾಂತಿಕಂ ।
ಪುನಶ್ಚ ಜವಮಾಸ್ಥಾಯ ಪಾರ್ಶ್ವೇ ಚಾಽಗ್ರೇ ಚ ದೃಶ್ಯತೇ ॥ ೧೩ ॥
ಅಥಾಽರಣ್ಯಂ ಮಹಾರೌದ್ರಂ ಪ್ರವಿಷ್ಟಃ ಕರಭಸ್ತದಾ ।
ಅಂತರ್ಧಾನಂ ಜಗಾಮಾಶು ಸ ಚ ರಾಜಾ ವನೇಽವಿಶತ್ ॥ ೧೪ ॥
ಪ್ರವಿಶ್ಯ ಚ ಮಹಾರಣ್ಯಂ ತಾಪಸಾನಾಮಥಾಶ್ರಮಂ ।
ಆಸಸಾದ ತತೋ ರಾಜಾ ಶ್ರಾಂತಾಶ್ಚೋಪಾವಿಶತ್ಪುನಃ. ॥ ೧೫ ॥
ತಂ ಕಾರ್ಮುಕಕರಂ ದೃಷ್ಟ್ವಾ ಶ್ರಮಾರ್ತಂ ಕ್ಷುಧಿತಂ ತದಾ ।
ಸಮುಭ್ಯೇತ್ಯರ್ಷಯಸ್ತಸ್ಮೈ ಪೂಜಾಂ ಚಕ್ರುರ್ಯಥಾವಿಧಿ ॥ ೧೬ ॥
ಸ ಪೂಜಾಮೃಷಿಭಿರ್ದತ್ತಾಂ ಪ್ರತಿಗೃಹ್ಯ ಯಥಾವಿಧಿ ।
ಅಪೃಚ್ಛತ್ತಾಪಸಾನ್ ಸರ್ವಾಂಸ್ತಪಸೋ ವೃದ್ಧಿಮುತ್ತಮಾಂ ॥ ೧೭ ॥

---

೧೨. ಪಾರ್ವತಿಯೆ! ಆ ಒಂಟೆಯಾದರೊ ರಾಜನ ಹತ್ತಿರಕ್ಕೆ ಬಂದಂತೆ ಕಾಣಿಸಿಕೊಳ್ಳುತ್ತ ಪುನಃ ಪುನಃ ಮಹತ್ತರವಾದ ವೇಗದಿಂದ ಓಡಿಹೋಗುತ್ತಿದ್ದಿತು.

೧೩. ಅದು ರಾಜನ ಅನೇಕ ಬಾಣಗಳಿಂದ ಬೆನ್ನಿನಲ್ಲಿಯೂ ಪಕ್ಕಗಳಲ್ಲಿಯೂ ಗಾಯಗಳನ್ನು ತಾಳಿದ್ದರೂ ಮತ್ತೆ ಮತ್ತೆ ಹತ್ತಿರಕ್ಕೆ ಬರುತ್ತಲೂ, ಮತ್ತೆ ಮತ್ತೆ ಓಡಿಹೋಗಿ ಪಕ್ಕದಲ್ಲಿಯೊ, ಎದುರಿನಲ್ಲಿಯೊ ಕಾಣಿಸುತ್ತಲೂ ಇದ್ದಿತು.

೧೪. ಕಡೆಗೆ ಆ ಒಂಟೆಯು ಮಹಾ ಭಯಂಕರವಾದ ಒಂದು ಅರಣ್ಯವನ್ನು ಪ್ರವೇಶಿಸಿ ಅಲ್ಲಿ ರಾಜನ ಕಣ್ಣುಗಳಿಗೆ ಕಾಣಿಸದಂತಾಯಿತು. ರಾಜನೂ ಆ ಕಾಡನ್ನು ಪ್ರವೇಶಿಸಿದನು.

೧೫. ಆ ಅರಣ್ಯವನ್ನು ಪ್ರವೇಶಿಸಿ ಬರುತ್ತ ಮಹಾ ತಪಸ್ವಿಗಳ ಒಂದು ಆಶ್ರಮವನ್ನು ಕಂಡು ತನ್ನ ಕುದುರೆಯು ಬಹಳ ಆಯಾಸಗೊಂಡಿರಲು ಅಲ್ಲಿ ಕುಳಿತುಕೊಂಡನು.

೧೬. ಬಿಲ್ಲನ್ನು ಕೈಯಲ್ಲಿಹಿಡಿದು ಆಯಾಸಗೊಂಡಿರುವವನೂ, ಕ್ಷುಧಾರ್ತನೂ ಆಗಿ ಕುಳಿತಿರುವ ರಾಜನನ್ನು ಕಂಡು ಆಶ್ರಮದ ಮಹರ್ಷಿಗಳೆಲ್ಲರೂ ಯಥಾವಿಧಿಯಾಗಿ ಆತನಿಗೆ ಅತಿಥಿಪೂಜೆಯನ್ನು ಮಾಡಿದರು.

೧೭. ಆತನೂ ವಿಧ್ಯುಕ್ತರೀತಿಯ ಆ ಪೂಜೆಯನ್ನು ಸ್ವೀಕರಿಸಿ ಮಹರ್ಷಿಗಳೆಲ್ಲರನ್ನೂ "ನಿಮ್ಮ ತಪಸ್ಸು ಉತ್ತಮರೀತಿಯಿಂದ ವೃದ್ಧಿಹೊಂದುತ್ತಿರುವುದೇ?" ಎಂದು ಪ್ರಶ್ನೆಮಾಡಿದನು.

ತೇ ತಸ್ಯ ರಾಜ್ಞೋ ವಚನಂ ಪ್ರತಿಗೃಹ್ಯ ತಪೋಧನಾಃ ।
ಋಷಯೋ ರಾಜಶಾರ್ದೂಲಂ ಪಪ್ರಚ್ಛುಸ್ತತ್ಪ್ರಯೋಜನಂ ॥ ೧೮ ॥
ಕೇನ ಭದ್ರ ಸುಖಾರ್ಥೇನ ಸಂಪ್ರಾಪ್ತೋಽಸಿ ತಪೋವನಂ ।
ಪದಾತಿರ್ಬದ್ಧನಿಸ್ತ್ರಿಂಶೋ ಧನ್ವೀ ಬಾಣೀ ನರೇಶ್ವರ ॥ ೧೯ ॥
ಏತದಿಚ್ಛಾಮಹೇ ಶ್ರೋತುಂ ಕುತಃ ಪ್ರಾಪ್ತೋಽಸಿ ಮಾನದ ।
ಕಸ್ಮಿನ್ಕುಲೇ ಚ ಜಾತಸ್ತ್ವಂ ಕಿಂ ನಾಮಾ ಬ್ರೂಹಿ ಪಾರ್ಥಿವ ॥ ೨೦ ॥
ತತಃ ಸ ರಾಜಾ ಸರ್ವೇಭ್ಯೋ ದ್ವಿಜೇಭ್ಯಃ ಪುರುಷರ್ಷಭಃ ।
ಆಚಖ್ಯೌ ತದ್ಯಥಾನ್ಯಾಯಂ ಕುಲಂ ಗೋತ್ರಂ ಚ ತತ್ತ್ವತಃ ॥ ೨೧ ॥
ಇಕ್ಷ್ವಾಕೂಣಾಂ ಕುಲೇ ಜಾತೋ ವೀರಕೇತುರ್ದ್ವಿಜರ್ಷಭಾಃ ।
ಚರಾಮಿ ಮೃಗಯೂಥಾನಿ ನಿಘ್ನನ್ ಬಾಣೈಃ ಸಹಸ್ರಶಃ ॥ ೨೨ ॥
ಬಲೇನ ಮಹತಾ ಯುಕ್ತಃ ಸಾಮಾತ್ಯಃ ಸಪರಿಚ್ಛದಃ ।
ಯದಾ ನ ಲಬ್ಧೋ ಗಹನೇ ಮೃಗೋ ವಾ ಸೂಕರೋಽಪಿ ವಾ ॥ ೨೩ ॥
ಮಹಿಷಶ್ಚಿತ್ತಲೋವಾಽಪಿ ಶಶೋ ವಾ ಶಂಬರೋ ವನೇ ।
ತದಾ ಮೇ ಕರಭೋ ವಿದ್ಧೋ ಬಾಣೇನಾನತಪರ್ವಣಾ ॥ ೨೪ ॥

---

೧೮. ರಾಜನ ಕುಶಲಪ್ರಶ್ನೆಯನ್ನು ಅಂಗೀಕರಿಸಿ, ಆ ತಪೋನಿರತರೂ ಮಹಾರಾಜನನ್ನು ವನಕ್ಕೆ ಬಂದ ಕಾರಣವನ್ನು ಕೇಳತೊಡಗಿದರು.

೧೯. "ಮಂಗಳಕರನಾದ ಓ ಮಹಾರಾಜನೆ! ಯಾವ ಸುಖವನ್ನಪೇಕ್ಷಿಸಿ ನೀನು ಪಾದಚಾರಿಯಾಗಿ ಕವಚವನ್ನು ತೊಟ್ಟು ಧನುರ್ಬಾಣಗಳನ್ನು ಹಿಡಿದು ಇಲ್ಲಿಗೆ ಬರುವವನಾದೆ?

೨೦. ಭೂಪತಿಯೆ! ನಿನ್ನ ಆಗಮನಕ್ಕೆ ಕಾರಣವನ್ನು ಕೇಳಲು ನಾವು ಕುತೂಹಲಿಗಳಾಗಿರುವೆವು. ನೀನು ಯಾವ ಕುಲದಲ್ಲಿ ಜನಿಸಿದವನು? ನಿನ್ನ ಹೆಸರೇನು?"

೨೧. ಆಗ ರಾಜನು ಆ ಬ್ರಾಹ್ಮಣರನ್ನು ನಮಸ್ಕರಿಸಿ ನಡೆದ ವೃತ್ತಾಂತ ವನ್ನು ತಿಳಿಸಿ ತನ್ನ ಕುಲಗೋತ್ರಗಳನ್ನೂ ಹೇಳಿದನು.

೨೨. "ಬ್ರಾಹ್ಮಣೋತ್ತಮರಿರಾ! ನಾನು ಇಕ್ಷ್ವಾಕುವಂಶದಲ್ಲಿ ಜನ್ಮವನ್ನು ತಾಳಿದ ವೀರಕೇತುವೆಂಬ ಮಹಾರಾಜನು. ಬಾಣಗಳಿಂದ ಸಾವಿರಾರು ಕಾಡು ಮೃಗಗಳನ್ನು ಕೊಲ್ಲುತ್ತ ಅರಣ್ಯದಲ್ಲಿ ಸಂಚರಿಸುತ್ತಿದ್ದೆನು.

೨೩–೨೪. ಅಪಾರವಾದ ಸೈನ್ಯದಿಂದಲೂ, ಮಂತ್ರಿಸಮೂಹದಿಂದಲೂ, ಸಕಲ ಸಾಧನಗಳಿಂದಲೂ ಕೂಡಿ ನಾನು ಬೇಟೆಯಾಡುತ್ತಿರಲು, ಆ ದಟ್ಟಡವಿ ಯಲ್ಲಿ ಜಿಂಕೆಯಾಗಲಿ, ಹಂದಿಯಾಗಲಿ, ಎಮ್ಮೆಯಾಗಲಿ, ಚಿರತೆಯಾಗಲಿ, ಮೊಲವಾಗಲಿ, ಕಾಡುಕೋಣವಾಗಲಿ ಸಿಕ್ಕಲಿಲ್ಲ. ಆದುದರಿಂದ ನಾನು ಋಜು ವಾದ ಬಾಣದಿಂದ ಒಂದು ಮರಿಯೊಂಟೆಯನ್ನು ಹೊಡೆದೆನು.

ಸ ಪ್ರಣಷ್ಟಃ ಕ್ಷಣೇನೈವ ಸ ಬಾಣೋ ಮಮ ಪಶ್ಯತಃ ।
ತಂ ದ್ರವಂತಮನುಪ್ರಾಪ್ತೋ ವನಮೇತದ್ಯದೃಚ್ಛಯಾ ।
ಭವತ್ಸಕಾಶಂ ನಷ್ಟಶ್ರೀರ್ಹತಾಶಃ ಶ್ರಮಕರ್ಶಿತಃ ॥ ೨೫ ॥
ಭವತಾಂ ವಿದಿತಂ ಸರ್ವಂ ಸರ್ವಜ್ಞಾ ಹಿ ತಪೋಧನಾಃ ।
ಭವಂತಃ ಸುಮಹಾಭಾಗಾಸ್ತಸ್ಮಾತ್ಪೃಚ್ಛಾಮಿ ಸಂಶಯಂ ॥ ೨೬ ॥
ಕ್ವ ಗತಃ ಕರಭೋ ವಿದ್ಧೋ ಮಯಾ ಬಾಣೇನ ಸಾಂಪ್ರತಂ ।
ಕ್ವ ಚ ಪ್ರಾಪ್ಸ್ಯಾಮಿ ಸಹಸಾ ಬ್ರೂತ ತತ್ಸುಸಮಾಹಿತಾಃ ॥ ೨೭ ॥
ತತಸ್ತೇಷಾಂ ಸಮಸ್ತಾನಾಮೃಷೀಣಾಮೃಷಿಸತ್ತಮಃ ।
ಋಷಭೋ ದೇವಿ ಕರಭಂ ಸ್ಮರನ್ನಿದಮಥಾಽಬ್ರವೀತ್ ॥ ೨೮ ॥
ಗತಃ ಸ ಕರಭೋ ಭೂಪ ಮಹಾಕಾಲವನೇ ಶುಭೇ ।
ಗಚ್ಛ ತ್ವಂ ಚ ಮಹಾರಾಜ ಮಹಾಕಾಲವನೇ ಶುಭೇ ॥ ೨೯ ॥
ಯತ್ರ ದೇವೋ ಮಹಾದೇವಃ ಕಾರಭಂ ರೂಪಮಾಸ್ಥಿತಃ ।
ವಿನೋದಾರ್ಥಂ ಚ ದೇವಾನಾಂ ಲಿಂಗಮೂರ್ತಿರಭೂತ್ಪುರಾ ॥ ೩೦ ॥

---

೨೫. ಆ ಒಂಟೆಯು ಬಾಣವನ್ನು ಮೈಯಲ್ಲಿ ಸಿಕ್ಕಿಸಿಕೊಂಡೇ ಕ್ಷಣಮಾತ್ರದಲ್ಲಿ ಓಡಿಹೋಯಿತು. ಅದನ್ನು ಅಟ್ಟಿಸಿಕೊಂಡು ಬರುತ್ತ ಆಕಸ್ಮಿಕವಾಗಿ ಈ ತಪೋವನವನ್ನು ಸೇರಿದೆನು. ವೈಭವರಹಿತನೂ, ಆಶಾಹೀನನೂ, ಆಯಾಸದಿಂದ ಬಸವಳಿದವನೂ ಆಗಿ ಈಗ ನಿಮ್ಮನ್ನು ಹೊಂದಿರುವೆನು.

೨೬. ನಿಮಗೆಲ್ಲವೂ ತಿಳಿದೇ ಇರುವುದು. ತಪೋನಿರತರು ಸರ್ವಜ್ಞರೇ ಅಲ್ಲವೆ. ನೀವೆಲ್ಲರೂ ಮಹಾ ಪುಣ್ಯವಂತರಾಗಿರುವಿರಾದುದರಿಂದ ನಿಮ್ಮಲ್ಲಿ ಒಂದು ಸಂದೇಹವನ್ನು ತಿಳಿಸುತ್ತೇನೆ.

೨೭. ಈಗ ನಾನು ಬಾಣದಿಂದ ಹೊಡೆದ ಆ ಒಂಟೆಯು ಎಲ್ಲಿಗೆ ಹೋಯಿತು? ಅದನ್ನು ನಾನೆಲ್ಲಿ ಪಡೆಯುವೆನೆಂಬುದನ್ನು ಏಕಾಗ್ರಚಿತ್ತದಿಂದ ತಿಳಿದು ನನಗೆ ಹೇಳಿರಿ.''

೨೮. ಪಾರ್ವತಿಯೆ! ಆಗ ಆ ಮಹರ್ಷಿಗಳಿಗೆಲ್ಲ ಮುಂದಾಳೆನಿಸಿದ್ದ ಋಷಭನೆಂಬ ತಾಪಸೋತ್ತಮನು ಆ ಒಂಟೆಯನ್ನೇ ಜ್ಞಾಪಿಸಿಕೊಂಡು ರಾಜನಿಗೆ ಹೇಳಲುಪಕ್ರಮಿಸಿದನು.

೨೯. ''ಮಹಾರಾಜ! ಆ ಕರಭವು ಮಹಾಕಾಲವನವೆಂಬ ಪವಿತ್ರ ಕ್ಷೇತ್ರಕ್ಕೆ ಹೋಗಿರುವುದು. ನೀನೂ ಅಲ್ಲಿಗೇ ಹೋಗು.

೩೦. ದೇವತೆಗಳ ವಿನೋದಕ್ಕಾಗಿ ದೇವೋತ್ತಮನಾದ ಮಹಾದೇವನು ಹಿಂದೆ ಒಂಟೆಯ ರೂಪವನ್ನು ತಾಳಿದ ಸ್ಥಳದಲ್ಲಿ ಲಿಂಗವಾಗಿ ನೆಲಸಿರುವನು.

ಪಶ್ಚಿಮೇ ಕ್ಷೇತ್ರಪಾಲಸ್ಯ ಕೈಲಾಸಸ್ಯ ಮಹೀಪತೇ ।
ಸಮೀಪೇ ತಸ್ಯ ವಿಘ್ನೇಶೋ ಮೋದಕಪ್ರಿಯಸಂಜ್ಞಕಃ ॥ ೩೧ ॥
ಬ್ರಹ್ಮಣಾ ಪೂಜಿತೋ ರಾಜನ್ದೇವಾನಾಮರ್ಥಸಿದ್ಧಯೇ ।
ಸ ಚ ಧರ್ಮಧ್ವಜೋ ರಾಜಾ ಹೈಹಯಾನಾಂ ಕುಲೋದ್ವಹಃ ॥ ೩೨ ॥
ತುರಗೇಣ ಕದಾಚಿತ್ತು ನೀತೋ ಬದರಿಕಾಶ್ರಮಂ ।
ಪ್ರಸಿದ್ಧಂ ತ್ರಿಷು ಲೋಕೇಷು ನರನಾರಾಯಣಾಶ್ರಮಂ ॥ ೩೩ ॥
ತತ್ರ ವೀರಾಽಜಿನಧರಂ ಕೃಶಂ ವಿಪ್ರಂ ದದರ್ಶ ಹ ।
ಶರೀರಮಪಿ ರಾಜೇಂದ್ರ ನ ಕೇನಾಽಪಿ ಸಮಂ ತದಾ ।
ದೃಷ್ಟ್ವಾ ಚ ಹಸಿತೋ ವಿಪ್ರಸ್ತೇನ ರಾಜ್ಞಾ ಪ್ರಮಾದತಃ ॥ ೩೪ ॥
ಯಸ್ಮಾದ್ಧಸಸಿ ಮಾಂ ದೃಷ್ಟ್ವಾ ತಸ್ಮಾದುಷ್ಟ್ರೋ ಭವಿಷ್ಯಸಿ ।
ಲಂಬೋಷ್ಠೋ ಲಂಬದಂತಶ್ಚ ವಿಸ್ವರೋ ವಿಕೃತಾಕೃತಿಃ ॥ ೩೫ ॥
ಇತ್ಯುಕ್ತಸ್ತೇನ ವಿಪ್ರೇಣ ಶಪ್ತೋಽಪಿ ನೃಪಸತ್ತಮಃ ।
ತಂ ವಿಪ್ರಂ ಪ್ರಾರ್ಥಯಾಮಾಸ ಸ ಚ ತುಷ್ಟೋಽಬ್ರವೀದಿದಂ ॥ ೩೬ ॥

---

೩೧. ಮಹಾರಾಜನೆ! ಆ ಲಿಂಗವು ಕ್ಷೇತ್ರಪಾಲಕನಾದ ಕೈಲಾಸೇಶ್ವರನಿಗೆ ಪಶ್ಚಿಮದಲ್ಲಿರುವುದು. ಅದರ ಬಳಿಯಲ್ಲಿಯೇ ಮೋದಕಪ್ರಿಯನೆಂಬ ಹೆಸರಿನ ಗಣಪತಿಯಿರುವನು.

೩೨. ರಾಜೇಂದ್ರ! ದೇವತೆಗಳ ಕಾರ್ಯಸಿದ್ಧಿಗಾಗಿ ಬ್ರಹ್ಮದೇವನೂ ಆ ಲಿಂಗವನ್ನು ಪೂಜಿಸಿದನು. ಹಿಂದೆ ಹೈಹಯರಾಜನ ವಂಶದಲ್ಲಿ ಧರ್ಮಧ್ವಜ ನೆಂಬವನು ದೊರೆಯಾದನು.

೩೩. ಆತನನ್ನೊಮ್ಮೆ ಆತನ ಕುದುರೆಯು ಆಕಸ್ಮಿಕವಾಗಿ ನರನಾರಾಯಣರ ನಿವಾಸವೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಬದರಿಕಾಶ್ರಮಕ್ಕೆ ಕರೆದುಕೊಂಡುಹೋಯಿತು.

೩೪. ಮಹಾರಾಜನೆ! ಅಲ್ಲಿ ಜಿಂಕೆಯ ಚರ್ಮವನ್ನು ಹೊದ್ದವನೂ, ಅಸ್ಥಿಚರ್ಮಾವಶಿಷ್ಟನೂ ಆದ ಬ್ರಾಹ್ಮಣೋತ್ತಮನನ್ನು ಕಂಡನು. ಆತನ ಅಂತಹ ಕೃಶದೇಹವನ್ನು ಯಾವುದಕ್ಕೂ ಹೋಲಿಸಲಾಗುತ್ತಿರಲಿಲ್ಲ. ಆತನನ್ನು ಕಂಡು ರಾಜನು ಪ್ರಮಾದಕ್ಕೊಳಗಾಗಿ ಅಪಹಾಸ್ಯಮಾಡಿ ನಕ್ಕನು.

೩೫. "ನೀನು ನನ್ನನ್ನು ಕಂಡು ನಕ್ಕಿಯಾದುದರಿಂದ ಜೋಲುವ ತುಟಿಗಳುಳ್ಳದುದೂ, ಉದ್ದವಾದ ಹಲ್ಲುಗಳಿಂದ ಕೂಡಿ ಅಸಹ್ಯಧ್ವನಿಯುಕ್ತವೂ, ವಿಕಾರರೂಪವುಳ್ಳದುದೂ ಆದ ಒಂಟೆಯಾಗು."

೩೬. ಇಂತು ಆ ತಪಸ್ವಿಯು ರಾಜೇಂದ್ರನಿಗೆ ಶಾಪವನ್ನೀಯಲು ರಾಜನು ಬಹಳವಾಗಿ ಆತನಿಗೆ ಮೊರೆಯಿಟ್ಟನು. ಆತನೂ ಕ್ಷಿಪ್ರದಲ್ಲಿಯೇ ಸಮಾಹಿತ ಮನಸ್ಕನಾಗಿ ಇಂತೆಂದನು.

ನ ಮೇ ವಾಗನೃತಾ ಭೂಪ ಕದಾಚಿದಪಿ ವಿದ್ಯತೇ ।
ಅವಶ್ಯಂ ಕರಭೋ ಭೂತ್ವಾ ಪಶ್ಚಾನ್ಮುಕ್ತಿಮವಾಪ್ಸ್ಯಸಿ ॥ ೩೭ ॥
ಯದಾ ತ್ವಂ ಕರಭೋ ಭೂತ್ವಾ ವಿದ್ಧೋ ವೈ ವೀರಕೇತುನಾ ।
ಅಯೋಧ್ಯಾಧಿಪಭೂಪೇನ ಗಮಿಷ್ಯಸಿ ಶರಾಹತಃ ॥ ೩೮ ॥
ಮಹಾಕಾಲವನಂ ದಿವ್ಯಂ ತತ್ರ ತ್ವಂ ಲಿಂಗದರ್ಶನಾತ್ ।
ಗಮಿಷ್ಯಸಿ ಪರಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೩೯ ॥
ಸ ಚೇಕ್ಷ್ವಾಕುಕುಲೋದ್ಭೂತೋ ವೀರಕೇತುರ್ಮಹಾಬಲಃ ।
ಲಿಂಗದರ್ಶನತೋ ಭೂಪ ಚಕ್ರವರ್ತಿತ್ವಮಾಪ್ಸ್ಯಸಿ ॥ ೪೦ ॥
ಇತ್ಯುಕ್ತೋ ನೃಪ ಭೂಪಾಲಃ ಕರಭತ್ವಂ ಸಮಾಗತಃ ।
ಸ ತ್ವಯಾಽಭಿಹತೋ ಭೂಪ ಬಾಣೇನಾನತಪರ್ವಣಾ ।
ದ್ರಕ್ಷ್ಯಸಿ ತ್ವಂ ವಿಮಾನಸ್ಥಂ ವಿಮುಕ್ತಂ ಲಿಂಗದರ್ಶನಾತ್ ॥ ೪೧ ॥
ಇತ್ಯುಕ್ತೋ ನೃಪತಿಸ್ತೇನ ಋಷಭೇಣ ದ್ವಿಜೇನ ತು ।
ಆಜಗಾಮ ತ್ವರಾಯುಕ್ತೋ ಮಹಾಕಾಲವನಂ ಶುಭಂ ॥ ೪೨ ॥

---

೩೭. "ಭೂಪಾಲಕನೆ! ನನ್ನ ಈ ಮಾತೆಂದಿಗೂ ಸುಳ್ಳಾಗುವುದೇ ಇಲ್ಲವು. ನೀನು ಖಂಡಿತವಾಗಿಯೂ ಒಂಟೆಯಾಗುವೆ. ಆದರೆ ಅದರಿಂದಲೂ ನಿನಗೆ ಬಿಡುಗಡೆಯಾಗುವುದು.

೩೮. ನೀನು ಒಂಟೆಯಾಗಿರಲು ಅಯೋಧ್ಯಾನಗರಕ್ಕೆ ಅಧಿಪತಿಯಾದ ವೀರಕೇತುವು ನಿನ್ನನ್ನು ಬಾಣಗಳಿಂದ ಹೊಡೆಯುವನು. ಆ ಪೆಟ್ಟುಗಳಿಂದ ನೀನು ಓಡಿಹೋಗುವೆ.

೩೯–೪೦. ನೀನು ದಿವ್ಯಕ್ಷೇತ್ರವಾದ ಮಹಾಕಾಲವನವನ್ನು ಸೇರಿ ಅಲ್ಲಿರುವ ಮಹಾಲಿಂಗದ ದರ್ಶನದ ಪುಣ್ಯದಿಂದ ಮಹಾದೇವನ ಪ್ರಿಯಾವಾಸವೆನಿಸಿದ ಕೈಲಾಸವನ್ನು ಸೇರುವೆ." ಎಲೈ ರಾಜನೆ! ಇಕ್ಷ್ವಾಕುವಂಶಸಂಭೂತನಾದ ಆ ವೀರಕೇತು ಮಹಾರಾಜನೂ ಅಲ್ಲಿಗೆ ಬಂದು ಆ ಲಿಂಗವನ್ನು ನೋಡುವುದರಿಂದ ಚಕ್ರವರ್ತಿ ಪದವಿಯನ್ನು ಹೊಂದುವನು.

೪೧. ವೀರಕೇತುವೆ! ಇಂತು ಆ ರಾಜನು ಒಂಟೆಯ ಜನ್ಮವನ್ನು ತಾಳಿ ಬಂಡನು. ಆತನನ್ನು ನೀನು ಲಕ್ಷ್ಯಭೇದಕವಾದ ಬಾಣದಿಂದ ಹೊಡೆದೆ. ನೀನು ಮಹಾಕಾಲವನಕ್ಕೆ ಹೋದರೆ ಲಿಂಗದರ್ಶನದಿಂದ ಆತನು ಮೋಕ್ಷವನ್ನು ಹೊಂದಿ ದಿವ್ಯವಿಮಾನದಲ್ಲಿ ಕುಳಿತಿರುವುದನ್ನು ನೋಡುವೆ."

೪೨. ಇಂತೆಂದ ಋಷಭಮಹರ್ಷಿಯ ಮಾತನ್ನು ಕೇಳಿ ವೀರಕೇತು ಮಹಾರಾಜನು ತಾನೂ ವೇಗದಿಂದ ಪವಿತ್ರಕ್ಷೇತ್ರವಾದ ಮಹಾಕಾಲವನವನ್ನು ಸೇರಿದನು.

ದದರ್ಶ ತತ್ರ ತಲ್ಲಿಂಗಂ ಪೂಜಿತಂ ತ್ರಿದಶೈಃ ಸದಾ ।
ಏತಸ್ಮಿನ್ನಂತರೇ ವಾಣೀ ಶ್ರುತಾ ತೇನ ಮಹೀಭೃತಾ ॥ ೪೩ ॥
ವಿಮಾನಸ್ಥೇನ ಯಾ ಪ್ರೋಕ್ತಾ ತೂಷ್ಟ್ರೇಣ ಮಧುರಸ್ವರಾ ।
ಭೋ ಭೋ ರಾಜೇಂದ್ರ ಮಾಂ ಪಶ್ಯ ವಿಮಾನೇ ಚೋದ್ಧೃತೇ ಶುಭೇ ।
ದರ್ಶನಾದಸ್ಯ ಲಿಂಗಸ್ಯ ಪ್ರಾಪ್ತಾ ಮೇ ಪರಮಾ ಗತಿಃ ॥ ೪೪ ॥
ತ್ವಯಾ ಹತೋಽಹಂ ಬಾಣೇನ ತೇನಾಽಹಂ ತ್ವಾಗತೋ ವನೇ ।
ಸಮೀಪಮಸ್ಯ ಲಿಂಗಸ್ಯ ತ್ವಂ ಮೇ ಬಂಧುಃ ಪರೋ ಯತಃ ॥ ೪೫ ॥
ಇತ್ಯುಕ್ತ್ವಾ ಸ ನೃಪಂ ದೇವಿ ವಚಃ ಸ ಮಧುರಾಕ್ಷರಂ ।
ಗತಸ್ತು ಪರಮಂ ಸ್ಥಾನಂ ನಿತ್ಯಮವ್ಯಯಮಕ್ಷಯಂ ॥ ೪೬ ॥
ತತೋ ದೇವಗಣಾ ವ್ಯೋಮ್ನಿ ಸಕಿನ್ನರಮಹೋರಗಾಃ ।
ಯಕ್ಷರಾಕ್ಷಸಗಂಧರ್ವಾಃ ಸ ಪಿಶಾಚಾಪ್ಸರೋಗಣಾಃ ॥ ೪೭ ॥
ಬ್ರಹ್ಮೇಂದ್ರಹರಿಮುಖ್ಯಾಶ್ಚ ವಿಮಾನೈರ್ದೇವಿ ಸಂಸ್ಥಿತಾಃ ।
ಆಜಗ್ಮುರ್ಮುದಿತಾಸ್ತತ್ರ ದ್ರಷ್ಟುಂ ಕೌತುಕಮಾನಸಾಃ ॥ ೪೮ ॥

---

೪೩. ಅಲ್ಲಿ ದೇವತೆಗಳಿಂದ ಪೂಜೆಯನ್ನು ಸ್ವೀಕರಿಸುತ್ತಿದ್ದ ಮಹಾಲಿಂಗವನ್ನು ನೋಡುತ್ತಿದ್ದಂತೆಯೇ ಆತನು ಒಂದು ಅಶರೀರವಾಣಿಯನ್ನು ಕೇಳಿದನು.

೪೪. ಕರಭನು ವಿಮಾನದಲ್ಲಿ ಕುಳಿತು ಮಧುರವಾದ ಧ್ವನಿಯಿಂದ ಹೇಳತೊಡಗಿತು. "ಎಲೈ ರಾಜೇಂದ್ರನೆ! ಆಕಾಶದಲ್ಲಿರುವ ದಿವ್ಯವಿಮಾನದಲ್ಲಿ ಕುಳಿತಿರುವ ನನ್ನನ್ನು ನೋಡು. ಈ ಲಿಂಗವನ್ನು ನೋಡುವುದರಿಂದಲೇ ನನಗೆ ಉತ್ತಮಗತಿಯು ಲಭಿಸಿತು.

೪೫. ನಿನ್ನಿಂದ ಬಾಣದ ಪೆಟ್ಟನ್ನು ತಿಂದು ಆರ್ತನಾಗಿ ಓಡುತ್ತ ನಾನು ಈ ಮಹಾಕಾಲವನದಲ್ಲಿ ಲಿಂಗದ ಸಾನ್ನಿಧ್ಯವನ್ನು ಸೇರಿದೆನು. ನೀನೇ ನನಗೆ ಪರಮಮಿತ್ರನಾಗಿರುವೆ."

೪೬. ಪಾರ್ವತಿಯೆ! ಉಷ್ಟ್ರವು ಮೃದುಮಧುರವಾದ ವಾಣಿಯಿಂದ ಇಂತೆಂದು ಹೇಳಿ ಶಾಶ್ವತವೂ, ಅನಾದಿನಿಧನವೂ ಆದ ಪರಮಪದವನ್ನು ಕುರಿತು ಹೊರಟುಹೋಯಿತು.

೪೭. ಬಳಿಕ ದೇವತೆಗಳೂ, ಕಿನ್ನರರೂ, ನಾಗಪ್ರಮುಖರೂ, ಯಕ್ಷಶ್ರೇಷ್ಠರೂ, ರಾಕ್ಷಸರೂ, ಗಂಧರ್ವರೂ, ಪಿಶಾಚರೂ, ಅಪ್ಸರೋಗಣಗಳೂ ಆಕಾಶದಲ್ಲಿ ಸೇರಿದರು.

೪೮. ಬ್ರಹ್ಮ, ಮಹೇಂದ್ರ, ನಾರಾಯಣಾದಿ ಮುಖ್ಯದೇವತೆಗಳೂ ಕುತೂಹಲಿತಮನಸ್ಸುಳ್ಳವರಾಗಿ ತಮ್ಮ ವಿಮಾನಗಳಲ್ಲಿ ಕುಳಿತು ಆ ಲಿಂಗವನ್ನು ನೋಡಲು ಸಂತೋಷದಿಂದ ಬಂದರು.

ವಿಲೋಕ್ಯ ಕರಭಂ ಮುಕ್ತಂ ವಿಮಾನಸ್ಥಂ ವಿರಾಜಿತಂ ।
ಲಿಂಗದರ್ಶನಮಾತ್ರೇಣ ಸಂಸ್ತುತಂ ವಿವಿಧೈಃ ಸ್ತವೈಃ ॥ ೪೯ ॥
ಅಚ್ಛರತ್ನಸಮೂಹೇನ ಮುಕುಟೇನೋಜ್ಜ್ವಲತ್ತ್ವಿಷಾ ।
ಭಾಸಂತಂ ರವಿಕೋಟೀನಾಂ ಜಗದಾನಂದಕಾರಕಂ ॥ ೫೦ ॥
ನಾಮ ಚಕ್ರುಸ್ತತೋ ದೇವಾ ದೃಷ್ಟ್ವಾ ಮಾಹಾತ್ಮ್ಯಮುತ್ತಮಂ ।
ದರ್ಶನಾದಸ್ಯ ಲಿಂಗಸ್ಯ ಮುಕ್ತೋಽಯಂ ಕರಭೋ ಯತಃ ॥ ೫೧ ॥
ತಸ್ಮಾತ್ತ್ರಿಷ್ವಪಿ ಲೋಕೇಷು ವಿಖ್ಯಾತಃ ಕರಭೇಶ್ವರಃ ।
ಭವಿಷ್ಯತಿ ಸ ಸಂದೇಹಃ ಪಶುಯೋನಿವಿಮೋಚಕಃ ॥ ೫೨ ॥
ಇತ್ಯುಕ್ತ್ವಾ ತ್ರಿದಶಾಃ ಸರ್ವೇ ಗತಾಃ ಸ್ವಂ ಧಿಷ್ಣ್ಯಮುತ್ತಮಂ ।
ಅಯೋಧ್ಯಾಧಿಪತಿರ್ವೀರೋ ವೀರಕೇತುಃ ಸ್ವಮಾಲಯಂ ।
ಸಮೃದ್ಧಂ ನಿಃಸಪತ್ನಂ ಚ ತತೋ ರಾಜ್ಯಂ ಚಕಾರ ಸಃ ॥ ೫೩ ॥
ಯಃ ಪಶ್ಯತಿ ನರೋ ದೇವಿ ಕರಭೇಶ್ವರಸಂಜ್ಞಕಂ ।
ಸ ಪ್ರಯಾತ್ಯಕ್ಷಯಾಂಲ್ಲೋಕಾನ್ಪೂಜ್ಯಮಾನೋ ಗಣಾಧಿಪೈಃ ॥ ೫೪ ॥

---

೪೯. ಆ ಮಹಾಲಿಂಗವನ್ನು ನೋಡಿದಮಾತ್ರದಿಂದಲೇ ಮೋಕ್ಷವನ್ನು ಪಡೆದು ವಿರಾಜಿಸುತ್ತ ಬಹುವಿಧ ಸ್ತೋತ್ರಗಳಿಂದ ಹೊಗಳಿಸಿಕೊಳ್ಳುತ್ತಿದ್ದ ಆ ಕರಭವನ್ನು ಎಲ್ಲರೂ ಕಂಡರು.

೫೦. ಸ್ವಚ್ಛವಾದ ನವರತ್ನಗಳ ರಾಶಿಯಿಂದ ಮಾಡಲ್ಪಟ್ಟ ಕಿರೀಟದ ಕಾಂತಿಯಿಂದ ಕೋಟಿಸೂರ್ಯರಂತೆ ಉಜ್ಜ್ವಲವಾದ ತೇಜಸ್ಸಿನಿಂದ ಕೂಡಿ ಆ ಕರಭವು ಲೋಕಕ್ಕೇ ಆನಂದವನ್ನುಂಟುಮಾಡುತ್ತಿದ್ದಿತು.

೫೧–೫೨. ಈ ಮಹಾಲಿಂಗದ ಅಮೋಘವಾದ ಮಾಹಾತ್ಮ್ಯವನ್ನು ಕಂಡು ದೇವತೆಗಳು ಅದಕ್ಕೆ ಹೆಸರನ್ನು ಕೊಟ್ಟರು. "ಈ ಲಿಂಗದ ದರ್ಶನದಿಂದ ಕರಭನು ಮೋಕ್ಷಭಾಗಿಯಾದನು. ಆದುದರಿಂದ ಈ ಮಹೇಶ್ವರನು ಮೂರು ಲೋಕಗಳಲ್ಲಿಯೂ ಕರಭೇಶ್ವರನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲವು. ಇದನ್ನು ನೋಡಿದವರಿಗೆ ಪಶುಯೋನಿಗಳಲ್ಲಿ ಜನ್ಮವಾಗುವುದಿಲ್ಲ."

೫೩. ಇಂತು ನುಡಿದು ದೇವತೆಗಳೆಲ್ಲರೂ ತಮ್ಮ ತಮ್ಮ ಉತ್ತಮಲೋಕಗಳಿಗೆ ಹೊರಟುಹೋದರು. ಅಯೋಧ್ಯಾನಾಥನೂ, ಮಹಾಪರಾಕ್ರಮಿಯೂ ಆದ ವೀರಕೇತುವು ತನ್ನ ರಾಜಧಾನಿಗೆ ಬಂದು ಸರ್ವಭೋಗಸಹಿತವೂ, ನಿಷ್ಕಂಟಕವೂ ಆದ ರಾಜ್ಯವನ್ನು ಪಾಲಿಸುತ್ತಿದ್ದನು.

೫೪. ದೇವಿಯೆ! ಯಾವನು ಈ ಕರಭೇಶ್ವರಮಹಾಲಿಂಗವನ್ನು ನೋಡುವನೊ, ಅವನು ಗಣನಾಯಕರಿಂದಲೂ, ಸಮಸ್ತದೇವತೆಗಳಿಂದಲೂ ಪೂಜಿತನಾಗಿ ಶಾಶ್ವತಲೋಕಗಳನ್ನು ಸೇರುವನು.

ಯದಾ ಕಾಲಾದಿಹಾಯಾತೋ ರಾಜರಾಜೇಶ್ವರೋ ಮಹಾನ್ ।
ಪೃಥಿವ್ಯಾಮೇಕರಾಡ್ ಭೂತ್ವಾ ಕ್ರಮಾನ್ಮೋಕ್ಷಮವಾಪ್ನುಯಾತ್ ॥೫೫॥
ನ ದುಃಖಂ ಜಾಯತೇ ತಸ್ಯ ವ್ಯಾಧಿಶೋಕಭಯಂ ತಥಾ ।
ಯೇ ಪಶ್ಯಂತಿ ಪ್ರಸಂಗೇನ ತಲ್ಲಿಂಗಂ ಕರಭೇಶ್ವರಂ ॥ ೫೬ ॥
ಸರ್ವಮೇಧೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ।
ತತ್ಫಲಂ ತ್ವಧಿಕಂ ದೇವಿ ಕರಭೇಶ್ವರದರ್ಶನಾತ್ ॥ ೫೭ ॥
ವ್ಯಾಧಯೋ ನೋಪಜಾಯಂತೇ ದಾರಿದ್ರ್ಯಂ ನ ಕದಾಚನ ।
ಐಶ್ವರ್ಯಂ ಚಾತುಲಂ ತೇಷಾಂ ಜಾಯತೇ ದರ್ಶನಾತ್ಸದಾ ॥ ೫೮ ॥
ಪಶುಯೋನಿಗತಾ ಯೇ ಚ ಪಿತರೋ ದುಃಖಿತಾಸ್ತು ಯೇ ।
ತಿಷ್ಠಂತಿ ಚಾಂಬರೇ ತೇ ತು ಚಿಂತಯಂತಃ ಸ್ವಗೋತ್ರಜಂ ॥ ೫೯ ॥
ಆಗಮಿಷ್ಯತಿ ನಃ ಪುತ್ರೋ ನಪ್ತಾ ವಾ ಸಂತತಾವಿಹ ।
ಕದಾ ಪಶ್ಯತಿ ದೇವೇಶಂ ಕರಭೇಶ್ವರಮೀಶ್ವರಂ ।
ತೇನ ದರ್ಶನಮಾತ್ರೇಣ ಮುಕ್ತಿರ್ನೋ ಭವಿತಾ ಧ್ರುವಂ ॥ ೬೦ ॥

---

೫೫. ರಾಜನಾಗಲಿ, ಮಹಾರಾಜನಾಗಲಿ ಯಾವನು ಕಾಲಕ್ರಮದಲ್ಲಿ ಇಲ್ಲಿಗೆ ಬರುವನೊ, ಅವನು ಭೂಮಂಡಲಕ್ಕೆಲ್ಲ ಏಕಚ್ಛತ್ರಾಧಿಪತಿಯೆನಿಸಿ ಕ್ರಮವಾಗಿ ಮೋಕ್ಷವನ್ನೂ ಪಡೆಯುವನು.

೫೬-೫೭. ಅವನಿಗೆ ದುಃಖವಾಗಲಿ, ರೋಗಶೋಕಗಳ ಭಯಗಳಾಗಲಿ ಸಂಭವಿಸುವುದಿಲ್ಲ. ಪ್ರಸಂಗದಿಂದಾದರೂ ಯಾರು ಈ ಕರಭೇಶ್ವರಲಿಂಗವನ್ನು ನೋಡುವರೊ, ಅವರಿಗೆ ಸಮಸ್ತ ಯಜ್ಞಗಳನ್ನೂ, ಸಕಲ ದಾನಗಳನ್ನೂ ಮಾಡಿದುದಕ್ಕಿಂತಲೂ ಅಧಿಕವಾದ ಫಲವು ಲಭಿಸುವುದು.

೫೮. ಅವನಿಗೆ ವ್ಯಾಧಿಗಳು ಬರುವುದಿಲ್ಲ. ದಾರಿದ್ರ್ಯವೆಂದಿಗೂ ಉಂಟಾಗಲಾರದು. ಲಿಂಗದರ್ಶನದಿಂದ ನಿತ್ಯವೂ ಅವರ ಐಶ್ವರ್ಯವು ಅಭಿವೃದ್ಧಿಯನ್ನೇ ಹೊಂದುತ್ತಿರುವುದು.

೫೯. ಪಶುಜನ್ಮಗಳನ್ನು ಪಡೆದವರೂ, ದುಃಖಪೀಡಿತರಾದವರೂ ಆದ ಪಿತೃಗಳೆಲ್ಲರೂ ತಮ್ಮ ಗೋತ್ರದಲ್ಲಿ ಯಾವನಾದರೂ ಹುಟ್ಟುವನೇ ಎಂದೇ ಚಿಂತಿಸುತ್ತ ಅಂತರಿಕ್ಷದಲ್ಲಿ ಕಾದು ನಿಂತಿರುವರು.

೬೦. "ನಮ್ಮ ಮಗನೊ, ಮೊಮ್ಮಗನೊ, ನಮ್ಮ ಸಂತತಿಯಲ್ಲಿ ಯಾವನಾದರೂ ಇಲ್ಲಿಗೆ ಬಂದು ಕರಭೇಶ್ವರಮಹಾಲಿಂಗವನ್ನು ಯಾವಾಗ ನೋಡುವನೊ! ಅವನು ಈ ಮಹಾಲಿಂಗವನ್ನು ನೋಡಿದಮಾತ್ರದಿಂದಲೇ ನಮಗೆ ಮೋಕ್ಷವು ಸಿದ್ಧಿಸುವುದು ಖಂಡಿತವು.

ಯೋ ಯಮುದ್ದಿಶ್ಯ ವೈ ಕಾಮಂ ದರ್ಶನಂ ತು ಕರಿಷ್ಯತಿ ।
ತಸ್ಯ ತಜ್ಜಾಯತೇ ಸರ್ವಂ ಮೃತಸ್ಯ ಪರಮಾಗತಿಃ ॥ ೬೧ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕರಭೇಶಸ್ಯ ದೇವಸ್ಯ ಶೃಣು ರಾಜಸ್ಥಲೇಶ್ವರಂ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
ಉಮಾಮಹೇಶ್ವರ ಸಂವಾದೇ "ಕರಭೇಶ್ವರಮಾಹಾತ್ಮ್ಯವರ್ಣನಂ"ನಾಮ
ತ್ರಿಸಪ್ತತಿತಮೋಽಧ್ಯಾಯಃ

---

೬೧. ಯಾವನು ಯಾವ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಕರಭೇಶ್ವರನ ದರ್ಶನವನ್ನು ಮಾಡುವನೊ, ಅವನ ಇಷ್ಟಾರ್ಥವೆಲ್ಲವೂ ನೆರವೇರುವುದಲ್ಲದೆ ದೇಹವನ್ನು ಬಿಡುವಾಗ ಸದ್ಗತಿಯನ್ನೂ ಪಡೆಯುವನು.

೬೨. ದೇವಿಯೆ! ಇಂತು ನಿನಗೆ ಪಾಪನಾಶಕವಾದ ಕರಭೇಶ್ವರನ ಮಾಹಾತ್ಮ್ಯದೋತಕವಾದ ಚರಿತ್ರೆಯನ್ನು ಹೇಳಿದೆನು. ಇನ್ನು ರಾಜಸ್ಥಲೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕರಭೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಸಪ್ತತಿತಮೋಽಧ್ಯಾಯಃ

### ರಾಜಸ್ಥಲೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ:—

ಚತುಃಸಪ್ತತಿಕಂ ವಿದ್ಧಿ ಶಿವಂ ರಾಜಸ್ಥಲೇಶ್ವರಂ ।
ಯಸ್ಯ ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥
ವಿಷ್ಣುಕಲ್ಪೇ ಪುರಾವೃತ್ತೇ ಮನ್ವಂತರಮುಖೇ ಪ್ರಿಯೇ ।
ಅರಾಜಕೇ ಮಹೀಪೃಷ್ಠೇ ಬ್ರಹ್ಮಾ ಚಿಂತಾಪರೋಽಭವತ್ ॥ ೨ ॥
ನ ಮನುಷ್ಯೈರ್ವಿನಾ ದೇವಾಃ ಸಮರ್ಥಾ ಲೋಕಧಾರಣೇ ।
ದಾನೇಜ್ಯಾಜಪತೋ ದೇವಾ ಭಜಂತೇ ಪುಷ್ಟಿಮುತ್ತಮಾಂ ॥ ೩ ॥
ಯೋಗ್ಯೋ ರಾಜಾ ಪ್ರಜಾಪಾಲಃ ಕೋ ಭವೇಜ್ಜನವತ್ಸಲಃ ।
ಸೋಽಪಶ್ಯದಥ ರಾಜರ್ಷಿಸ್ತಪಸ್ಯಂತಂ ರಿಪುಂಜಯಂ ॥ ೪ ॥
ಪೃಥ್ವ್ಯಾಂ ಸರ್ವಗುಣಾಕೀರ್ಣಂ ಧರ್ಮನಿಷ್ಠಂ ಮಹಾವ್ರತಂ ।
ತಮುವಾಚಾಽಥ ದೇವೇಶೋ ಬ್ರಹ್ಮಾ ಲೋಕಪಿತಾಮಹಃ ॥ ೫ ॥

---

### ಕನ್ನಡದ ಅನುವಾದ

#### ರಾಜಸ್ಥಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ! ಎಪ್ಪತ್ತನಾಲ್ಕನೆಯ ಶಿವಲಿಂಗವೇ ರಾಜಸ್ಥಲೇಶ್ವರವೆಂದು ತಿಳಿ. ಅದನ್ನು ನೋಡುವುದರಿಂದಲೇ ಮನುಜನು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

೨. ಹಿಂದೆ ವಿಷ್ಣುಕಲ್ಪದಲ್ಲಿ ಮನ್ವಂತರಗಳ ಸಂಧಿಕಾಲವೊದಗಲು ಭೂಲೋಕವೆಲ್ಲವೂ ಅರಾಜಕವಾದುದನ್ನು ಕಂಡು ಚತುರ್ಮುಖನು ಚಿಂತಾಕ್ರಾಂತನಾದನು.

೩. "ಮನುಷ್ಯರಿಲ್ಲದೆ ದೇವತೆಗಳು ಲೋಕಗಳನ್ನು ಪರಿಪಾಲಿಸಲು ಶಕ್ತರಾಗುವುದಿಲ್ಲ. ದಾನ, ಯಜ್ಞ, ಜಪಗಳಿಂದಲೇ ದೇವತೆಗಳು ಉತ್ತಮವಾದ ಪುಷ್ಟಿಯನ್ನು ಪಡೆಯುವರು.

೪. ಪ್ರಜೆಗಳನ್ನು ಪರಿಪಾಲಿಸುವವನೂ, ಅವರಲ್ಲಿ ಅನುರಾಗವನ್ನು ಸಂಪಾದಿಸುವವನೂ ಆದ ಯೋಗ್ಯನಾದ ಚಕ್ರವರ್ತಿಯೆಲ್ಲಿರುವನು" ಎಂದು ಚಿಂತಿಸುತ್ತಲೇ ಆ ಬ್ರಹ್ಮನು ತಪಸ್ಸಿನಲ್ಲಿ ನಿರತನಾಗಿದ್ದ ರಿಪುಂಜಯನೆಂಬ ರಾಜರ್ಷಿಯನ್ನು ಕಂಡನು.

೫. ಭೂಮಂಡಲದಲ್ಲೆಲ್ಲ ಆತನು ಸಕಲಸದ್ಗುಣಭರಿತನೂ, ಧರ್ಮ

ಬ್ರಹ್ಮೋವಾಚ :—

ರಿಪುಂಜಯ ನಿಬೋಧೇದಂ ವಚನಂ ಮಮ ಪುತ್ರಕ ।
ರಾಜ್ಯಂ ಚ ಪಾಲ್ಯತಾಂ ವತ್ಸ ಏಕಕಲ್ಪೇನ ಚೇತಸಾ ॥ ೬ ॥
ಅಲಂ ತೇ ತಪಸಾ ತಾತ ಕಷ್ಟೇನಾಽನೇನ ಸಾಂಪ್ರತಂ ।
ಧರ್ಮೇಣ ವಿಜಿತಾಃ ಸರ್ವೇ ತ್ವಯಾ ಲೋಕಾ ನರೋತ್ತಮ ॥ ೭ ॥
ಕ್ರಿಯತಾಮಧುನಾ ಲೋಕಪಾಲನಂ ತು ಮಮಾಜ್ಞಯಾ ।
ಯತಃ ಪರೋಪಕಾರೋ ಹಿ ಫಲಂ ದೇಹಸ್ಯ ದೇಹಿನಃ ॥ ೮ ॥
ನ ಧರ್ಮಸ್ತಾದೃಶೋಽನ್ಯೋಽಸ್ತಿ ನ ಚಾಽನ್ಯೋಽರ್ಥಸ್ಯ ಸಾಧಕಃ ।
ನಿರಯಾಪ್ತಿರಪಿ ಶ್ರೇಯ ಉಪಕೃತ್ಯ ಪರಸ್ಯ ವೈ ॥ ೯ ॥
ನಾಽಪಕಾರೇಣ ಭೂತಾನಾಮಪಿ ಸ್ಯಾದ್ಭುವನೇಶತಾ ।
ಸತತಂ ಲೋಕಕಾರ್ಯಾರ್ಥಂ ಮದಾಜ್ಞಾಗೌರವೇಣ ಚ ।
ಪೃಥ್ವೀಂ ಸಮುದ್ರವಸನಾಂ ಪ್ರಜಾಶ್ಚೈವ ಪ್ರಪಾಲಯ ॥ ೧೦ ॥
ಇತ್ಯುಕ್ತಃ ಸ ತು ರಾಜರ್ಷಿರ್ಬ್ರಹ್ಮಣಾ ಪರ್ವತಾತ್ಮಜೇ ।
ಪ್ರೋವಾಚ ಪ್ರಾಂಜಲಿರ್ಭೂತ್ವಾ ಬ್ರಹ್ಮಾಣಂ ತು ರಿಪುಂಜಯಃ ॥ ೧೧ ॥

---

ತತ್ಪರನೂ, ಮಹಾವ್ರತಧಾರಿಯೂ ಆದ ಆತನಿಗೆ ಲೋಕಪಿತಾಮಹನಾದ ಬ್ರಹ್ಮನಿಂತೆಂದನು.

೬. ಬ್ರಹ್ಮನು ಹೇಳುತ್ತಾನೆ:—"ಪುತ್ರ! ರಿಪುಂಜಯ! ನನ್ನ ಮಾತನ್ನು ಕೇಳು. ನೀನು ಪ್ರಕೃತದಲ್ಲಿ ಏಕಾಗ್ರವಾದ ಮನಸ್ಸಿನಿಂದ ರಾಜ್ಯಭಾರವನ್ನು ಮಾಡುತ್ತಿರು.

೭-೯. ರಾಜೇಂದ್ರ! ಬಹಳ ಕಷ್ಟದಿಂದ ಆಚರಿಸುತ್ತಿರುವ ಈ ತಪಸ್ಸನ್ನು ಇನ್ನು ಸಾಕುಮಾಡು. ನೀನು ಈವರೆಗೆ ಮಾಡಿದ ತಪಸ್ಸಿನಿಂದಲೇ ಸಕಲಲೋಕಗಳನ್ನೂ ಜಯಿಸಿರುವೆ. ಈಗ ನನ್ನ ಅಪ್ಪಣೆಯಂತೆ ರಾಜ್ಯಪರಿಪಾಲನವನ್ನು ಮಾಡು. ಜೀವನಿಗೆ ದೇಹವು ಬಂದಿಗಲು ಪರೋಪಕಾರವನ್ನೇ ಫಲವನ್ನಾಗಿ ತಿಳಿದು ಸಾಧಿಸಬೇಕು. ಅದಕ್ಕೆ ಸಮಾನವಾದ ಬೇರೊಂದು ಧರ್ಮವಾಗಲಿ, ಪುರುಷಾರ್ಥಸಾಧಕವಾದ ಕಾರ್ಯವಾಗಲಿ ಬೇರೊಂದಿಲ್ಲ. ಪರರಿಗೆ ಉಪಕಾರವನ್ನು ಮಾಡುವುದಕ್ಕಾಗಿ ನರಕವನ್ನು ಪಡೆಯುವುದೂ ಶ್ರೇಯಸ್ಕರವೇ.

೧೦. ಪ್ರಾಣಿಗಳಿಗೆ ದ್ರೋಹವನ್ನು ಮಾಡಿ ಸಂಪಾದಿಸಿದ ಲೋಕಾಧಿಪತ್ಯವೂ ನಿಂದ್ಯವಾದುದು. ಲೋಕವನ್ನು ಸಂರಕ್ಷಿಸುವುದಕ್ಕೆ ನನ್ನ ಅನುಜ್ಞೆಯನ್ನು ಅಂಗೀಕರಿಸಿ ಸಮುದ್ರಪರ್ಯಂತವಾದ ಭೂಮಂಡಲವನ್ನೂ, ಅದರಲ್ಲಿನ ಜನರನ್ನೂ ಪಾಲಿಸುತ್ತಿರು."

೧೧. ಪರ್ವತರಾಜಪುತ್ರಿಯೆ! ಇಂತೆಂದ ಬ್ರಹ್ಮದೇವನಿಗೆ ರಾಜರ್ಷಿಶ್ರೇಷ್ಠನಾದ ಆ ರಿಪುಂಜಯನು ಕೈಗಳನ್ನು ಮುಗಿದುಕೊಂಡು ಬಿನ್ನವಿಸಿದನು.

ಸ್ವಭಾವೇನಾಽಚಲಾ ಪೃಥ್ವೀ ತ್ವಯಾ ಪೂರ್ವಂ ವಿನಿರ್ಮಿತಾ ।
ವಿನೈವ ಪಾಲಕಂ ಹ್ಯೇಷಾ ಕುತ್ರ ಯಾಸ್ಯತಿ ಮೇದಿನೀ ॥ ೧೨ ॥
ಯದ್ಯವಶ್ಯಂ ಮಯಾ ಪೃಥ್ವೀ ಪಾಲನೀಯಾ ಪಿತಾಮಹ ।
ದೇಹಿ ಮೇ ನಗರೀಂ ರಮ್ಯಾಮವಂತೀಂ ಸಪ್ತಕಲ್ಪಗಾಂ ॥ ೧೩ ॥
ಮನುಷ್ಯಲೋಕೇ ವಿಖ್ಯಾತಾ ಸಕಲೇ ಸಾಽಮರಾವತೀ ।
ಸ್ವರ್ಗಚ್ಯುತಾನಾಂ ದೇವಾನಾಂ ನಿವಾಸಾರ್ಥಂ ಪ್ರತಿಷ್ಠಿತಾ ॥ ೧೪ ॥
ಮರ್ಯಾದಾಮನುವರ್ತೇಯುರ್ಯದಿ ಮೇ ನಾಕವಾಸಿನಃ ।
ಅದತ್ತೇ ಚ ಮಯಾ ಸ್ಥಾನೇ ನ ವಾಸಃ ಕಸ್ಯಚಿದ್ಭವೇತ್ ।
ಅನೇನ ವಿಧಿನಾ ಪೃಥ್ವೀಂ ಪಾಲಯಿಷ್ಯಾಮ್ಯಹಂ ಪ್ರಭೋ ॥ ೧೫ ॥

ಬ್ರಹ್ಮೋವಾಚ :—

ಭವಿಷ್ಯತ್ಯೇಷ ತೇ ಕಾಮೋ ಯಸ್ತ್ವಯೋಕ್ತೋ ನರೋತ್ತಮ ।
ಯೇ ಕೇಚಿತ್ತ್ರಿದಶಾಃ ಸಂತಿ ಮದ್ಗೌರವವಶೇನ ತೇ ।
ತವಾದೇಶಂ ಕರಿಷ್ಯಂತಿ ಸದಾ ತ್ವದ್ವಂಶವರ್ತಿನಃ ॥ ೧೬ ॥

---

೧೨. "ನೀನು ಹಿಂದೆಯೇ ಭೂಮಿಯನ್ನು ನಿಶ್ಚಲವಾದ ಸ್ವಭಾವವುಳ್ಳುದನ್ನಾಗಿಯೇ ಮಾಡಿರುವೆ. ಇದು ರಕ್ಷಕನಿಲ್ಲದಿದ್ದಮಾತ್ರಕ್ಕೆ ಎಲ್ಲಿಗೆ ಹೋಗಲಾದೀತು ?

೧೩. ಅಯ್ಯಾ ಚತುರ್ಮುಖನೆ! ನಾನೇ ಭೂಮಂಡಲವನ್ನು ಪಾಲಿಸಬೇಕೆಂಬುದು ಅವಶ್ಯಕವಾಗಿದ್ದರೆ ಏಳುಕಲ್ಪಗಳಿಂದ ನೆಲಸಿರುವ ಅವಂತೀಕ್ಷೇತ್ರವನ್ನು ನನಗೆ ರಾಜಧಾನಿಯನ್ನಾಗಿ ದೊರಕಿಸಿಕೊಡು.

೧೪. ಅಮರಾವತಿಯೆಂದು ಪ್ರಸಿದ್ಧವಾಗಿರುವ ಈ ನಗರವು ಮನುಷ್ಯಲೋಕದಲ್ಲಿಯೇ ಪ್ರಖ್ಯಾತವಾಗಿರುವುದು. ಸ್ವರ್ಗಚ್ಯುತರಾದ ದೇವತೆಗಳ ನಿವಾಸಕ್ಕಾಗಿ ಇದನ್ನು ಸ್ಥಾಪಿಸಲಾಯಿತು.

೧೫. ಸ್ವರ್ಗವಾಸಿಗಳಾದ ದೇವತೆಗಳೂ ನಾನು ಮಾಡಿದ ಕಟ್ಟಳೆಗಳನ್ನು ಅನುಸರಿಸಿ ನಡೆಯಬೇಕು. ನಾನು ಕೊಡದಿರುವ ಸ್ಥಾನದಲ್ಲಿ ಯಾವ ಪ್ರಾಣಿಯೂ ವಾಸಮಾಡಲಾಗದು. ಎಲೈ ಬ್ರಹ್ಮನೆ! ಈ ಒಪ್ಪಂದಗಳಿಗೆ ನಿನ್ನ ಅನುಮತಿಯಿರುವುದಾದರೆ ನಾನು ಈ ಭೂಮಂಡಲದ ರಾಜ್ಯಭಾರವನ್ನು ಸ್ವೀಕರಿಸುವೆನು."

೧೬. ಬ್ರಹ್ಮನು ಹೇಳುತ್ತಾನೆ:—"ಮಹಾರಾಜನೆ! ನೀನು ಹೇಳಿದಂತೆಯೇ ಎಲ್ಲವೂ ನಡೆಯುವುದು. ದೇವತೆಗಳು ಎಷ್ಟುಮಂದಿ ಇರುವರೊ, ಅವರೆಲ್ಲರೂ ನನ್ನ ಮಾತಿನಲ್ಲಿಯ ಗೌರವದಿಂದ ನಿನ್ನ ಅಧೀನದಲ್ಲಿದ್ದುಕೊಂಡೆ ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುವರು.

ದೇವನಾಥೇತಿ ವೈ ನಾಮ ಭವಿಷ್ಯತಿ ಚ ಸುವ್ರತ ।
ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ಹಂಸಯಾನಂ ಸಮಾಸ್ಥಿತಃ ॥ ೧೭ ॥
ಅಥ ರಾಜಾ ಪ್ರತಿಜ್ಞಾಯ ಬ್ರಹ್ಮಣಾ ಭೂಮಿಪಾಲನಂ ।
ಪೃಥ್ವ್ಯಾಮುದ್ಘೋಷಯಾಮಾಸ ಪ್ರೋವಾಚ ತ್ರಿದಿವೌಕಸಾಂ ॥ ೧೮ ॥
ಭವತಾಂ ವಿಹಿತಃ ಸ್ವರ್ಗೋ ಮನುಜಾನಾಂ ಚ ಭೂತಲಂ ।
ಯೇ ಚಾತ್ರ ಕಂದರರತಾಃ ಸ್ಥಲೇ ವಾ ಭೂಧರೇಷು ಚ ।
ಯೇ ಸ್ಥಿತಾ ಯಾಂತು ತೇ ದೇವಾ ಮನುಜಾನಾಮಿಯಂ ಧರಾ ॥ ೧೯ ॥
ತಚ್ಛ್ರುತ್ವಾ ಘೋಷಿತಂ ತಸ್ಯ ರಾಜ್ಞೋ ಭಯನಿಪೀಡಿತಾಃ ।
ತ್ರಿದಶಾ ಬ್ರಹ್ಮಣೋ ವಾಕ್ಯಾದ್ಗೌರವಾತ್ತ್ರಿದಿವಂ ಗತಾಃ ॥ ೨೦ ॥
ಅಥ ಪ್ರಜಾಃ ಸ ನೃಪತಿರ್ಧರ್ಮೇಣಾಽವರ್ಧಯತ್ತದಾ ।
ಪುತ್ರವತ್ಸ್ನೇಹಯುಕ್ತೇನ ಹೃದಯೇನಾತಿನಿರ್ವೃತಾಃ ॥ ೨೧ ॥
ಪ್ರಜಾಸ್ತತ್ಸುಖಸಂವೃದ್ಧಾ ಜರಾಮೃತ್ಯುವಿವರ್ಜಿತಾಃ ।
ಪುತ್ರಿಣೋ ಧನಧಾನ್ಯಾಢ್ಯಾಃ ಸರ್ವಕಾಮಸಮನ್ವಿತಾಃ ॥ ೨೨ ॥

---

೧೭. ಮಹಾ ತಪಸ್ವಿಯಾದ ನಿನಗೆ ಈ ಕಾರಣದಿಂದ ದೇವನಾಥನೆಂಬ ಹೆಸರುಂಟಾಗುವುದು.'' ಇಂತೆಂದು ನುಡಿದು ಆ ಚತುರ್ಮುಖನು ಹಂಸವಾಹನ ವನ್ನೇರಿ ತನ್ನ ಲೋಕಕ್ಕೆ ಹೊರಟುಹೋದನು.

೧೮. ಇತ್ತ ರಾಜನು ಭೂಮಿಯನ್ನು ಪಾಲಿಸುವೆನೆಂದು ಬ್ರಹ್ಮದೇವನಿಗೆ ವಚನವನ್ನಿತ್ತು ಭೂಮಿಯಲ್ಲಿದ್ದ ದೇವತೆಗಳೆಲ್ಲರಿಗೂ ತಿಳಿಯುವಂತೆ ಈ ರೀತಿ ಯಾಗಿ ಡಂಗುರವನ್ನು ಹೊಡಿಸಿದನು.

೧೯. ''ನಿಮಗೆ ಸ್ವರ್ಗಲೋಕವೇ ವಾಸಸ್ಥಾನವಾಗಿ ವಿಹಿತವಾಗಿರುವುದು. ಈ ಭೂಲೋಕವು ಮನುಷ್ಯರಿಗೆಮಾತ್ರ ನಿವಾಸವಾಗಿರುವುದು. ಬೆಟ್ಟಗಳಲ್ಲಿಯೂ, ಕಣಿವೆಗಳಲ್ಲಿಯೂ, ಮೈದಾನಗಳಲ್ಲಿಯೂ ಯಾವ ದೇವತೆಗಳು ವಾಸಮಾಡು ತ್ತಿರುವರೊ, ಅವರೆಲ್ಲರೂ ಈಗಲೆ ಹೊರಟುಹೋಗಬೇಕು. ಮನುಷ್ಯರು ಮಾತ್ರ ಈ ಭೂಲೋಕವನ್ನನುಭವಿಸಬೇಕು.''

೨೦. ಮಹಾರಾಜನ ಈ ಘೋಷಣೆಯನ್ನು ಕೇಳಿ ದೇವತೆಗಳು ಬ್ರಹ್ಮ ದೇವನ ಮಾತಿನಲ್ಲಿಯ ಗೌರವದಿಂದಲೂ, ಚಕ್ರವರ್ತಿಯಾದ ಆ ಪುರಂಜಯನ ಭಯದಿಂದಲೂ ಸ್ವರ್ಗಲೋಕಕ್ಕೆ ಹೊರಟುಹೋದರು.

೨೧. ಬಳಿಕ ಆ ರಿಪುಂಜಯನು ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತ ಮಕ್ಕಳಲ್ಲಿನ ವಾತ್ಸಲ್ಯಕ್ಕೆ ಸಮಾನವಾದ ಮನಸ್ಸಿನ ಅಭಿಮಾನದಿಂದ ನೋಡಲು ಅವರು ಆನಂದಭರಿತರಾಗಿದ್ದರು.

೨೨. ಪ್ರಜೆಗಳಲ್ಲಿ ಸುಖವು ದಿನ ದಿನಕ್ಕೆ ವೃದ್ಧಿಯನ್ನೈದುತ್ತಿದ್ದಿತು. ಅವರಲ್ಲಿ

ಯೌವನಸ್ಥಾಶ್ಚ ನಿರ್ದ್ವಂದ್ವಾಃ ಸತತಂ ಧರ್ಮಸಂಶ್ರಯಾಃ ।
ನಾಸೀತ್ಪೃಥಿವ್ಯಾಂ ಶೈಲಸ್ತು ಸ್ಥಲೋ ವಾ ದ್ವೀಪ ಏವ ಚ ॥ ೨೩ ॥
ಅಕೃಷ್ಟಪಚ್ಯಾ ಪೃಥಿವೀ ಸ್ವಾದುವದ್ಭಿಃ ಫಲೈರ್ಯುತಾ ।
ದೇವಲೋಕ ಇವಾಽಽಸೀದ್ಭೂಃ ಸರ್ವಕಾಮಗುಣೋಜ್ವಲಾ ॥ ೨೪ ॥
ಏವಂ ವ್ರಜತಿ ಕಾಲೇ ವೈ ರಾಜ್ಞಿ ರಾಜ್ಯಂ ಪ್ರಕುರ್ವತಿ ।
ಮಹಾಮರ್ಷಪರಾ ದೇವಾ ವಿಪ್ರಕಾರ್ಯಾರ್ಥಮುದ್ಯತಾಃ ॥ ೨೫ ॥
ಪ್ರಜಾನಾಂ ಬಹುದುಃಖಾನಿ ಮುಹುಃ ಕುರ್ವಂತ್ಯನೇಕಶಃ ।
ಅಥಾಽನಾವೃಷ್ಟಿಮಕರೋತ್ಸುದೀರ್ಘಾಂ ಪಾಕಶಾಸನಃ ॥ ೨೬ ॥
ತಥಾ ಸಂಹ್ರಿಯಮಾಣೇಷು ಲೋಕೇಷು ನೃಪಸತ್ತಮಃ ।
ಮೇಘೋ ಭೂತ್ವಾ ದಿವಂ ಪ್ರಾಪ್ಯ ಸುವೃಷ್ಟಿಮಕರೋನ್ನೃಪಃ ॥ ೨೭ ॥
ತೇನೈವಾಪ್ಯಾಯಿತೋ ಲೋಕಃ ಸುಖೀ ಜಾತೋ ಯಶಸ್ವಿನಿ ।
ತತಃ ಕಾಲೇತು ಕಸ್ಮಿಂಶ್ಚಿದವರ್ಷತ್ಪಾಕಶಾಸನಃ ।
ಸಂವರ್ತೋ ವಾರಿದೋ ಭೂತ್ವಾ ಮೇಘಾನ್ಸೈ ವಿಸ್ಯಪಾತಯತ್ ॥ ೨೮ ॥

---

ಮುಪ್ಪು ಸಾವುಗಳೆಂಬುವೇ ಇರಲಿಲ್ಲ. ಎಲ್ಲರೂ ಬಹುಪುತ್ರವಂತರೂ, ಧನಧಾನ್ಯ ಸಮೃದ್ಧಿಯುಳ್ಳವರೂ, ಸಕಲಾಭೀಷ್ಟಗಳನ್ನು ಪಡೆದವರೂ ಆಗಿದ್ದರು.

೨೩. ಎಲ್ಲರೂ ಯೌವನವಂತರೂ, ರಾಗದ್ವೇಷರಹಿತರೂ, ನಿತ್ಯವೂ ಧರ್ಮಕಾರ್ಯದಲ್ಲಿ ನಿರತರೂ ಆಗಿದ್ದರು. ಭೂಮಿಯಲ್ಲಿ ಮಲೆನಾಡಾಗಲಿ, ಮೈದಾನವಾಗಲಿ, ದ್ವೀಪಗಳಾಗಲಿ ಇರಲಿಲ್ಲ.

೨೪. ಸಾಗುವಳಿಯಿಲ್ಲದೆಯೇ ಭೂಮಿಯು ಬೆಳೆಯನ್ನು ಕೊಡುತ್ತಿದ್ದಿತು. ಮರಗಳು ರುಚಿಕರಗಳಾದ ಹಣ್ಣುಗಳಿಂದ ತುಂಬಿದ್ದುವು. ಹೀಗೆ ಸಕಲಾಭೀಷ್ಟಗಳಿಂದ ತುಂಬಿದುದಾಗಿ ಭೂಲೋಕವು ದೇವಲೋಕವನ್ನೇ ಹೋಲುತ್ತಿದ್ದಿತು.

೨೫. ಹೀಗೆ ರಾಜನು ರಾಜ್ಯವನ್ನಾಳುತ್ತ ಬಹುಕಾಲವು ಕಳೆಯಲು ದೇವತೆಗಳು ಅಸೂಯಾಪರರಾಗಿ ಸುಖಮಯವಾದ ಈ ಸ್ಥಿತಿಯನ್ನು ಕೆಡಿಸಲೆಳಸಿದರು.

೨೬. ಬಹು ವಿಧಗಳಿಂದ ಮತ್ತೆಮತ್ತೆ ಭೂಲೋಕದ ಜನರಿಗೆ ದುಃಖಗಳನ್ನು ತಂದೊಡ್ಡಿದರು. ಮಹೇಂದ್ರನೂ ಬಹಳಕಾಲದವರೆಗೂ ಮಳೆಯನ್ನು ಕರೆಯಲಿಲ್ಲ.

೨೭. ಹೀಗೆ ಲೋಕವು ಕ್ಷಯಿಸುವ ಪ್ರಸಂಗವೊದಗಲು ಮಹಾರಾಜನೇ ಮೇಘವಾಗಿ ಆಕಾಶಕ್ಕೆ ಹೋಗಿ ಯಥೇಚ್ಛವಾಗಿ ಮಳೆಯನ್ನು ಸುರಿಸಿದನು.

೨೮. ಇದರಿಂದ ಲೋಕವು ಸಮಾಧಾನವನ್ನು ಹೊಂದಿ ಆನಂದದಿಂದಿದ್ದಿತು. ಮತ್ತೊಮ್ಮೆ ಇಂದ್ರನು ಪ್ರಳಯಕಾಲದ ಮೇಘವಾಗಿ ಬಂದು ಅನೇಕ ಮೇಘಗಳೊಡನೆ ಪ್ರಚಂಡವಾದ ಮಳೆಯನ್ನು ಕರೆದನು.

ತತಸ್ತು ಮಾರಕೋ ಭೂತ್ವಾ ನೃಪತಿಸ್ತಾಮಧಾರಯತ್ ।
ತತೋಽನಲಃ ಪ್ರಣಷ್ಟೋಽಭೂತ್ಸರ್ವತಃ ಪೃಥಿವೀತಲಾತ್ ॥ ೨೯ ॥
ನ ಯಜ್ಞಾ ನ ಜಪೋ ಹೋಮೋ ನ ಚ ಪಕ್ತಿರವರ್ತತ ।
ಲೋಕಶ್ಚ ವ್ಯಾಧಿಸಂಕ್ಷುಬ್ಧಸ್ತದಾಽಭೂದ್ವಿಷಮೇ ಸ್ಥಿತಃ ॥ ೩೦ ॥
ತತಃ ಸ ರಾಜಾ ತಂ ದೃಷ್ಟ್ವಾ ತ್ವಭವದ್ಧವ್ಯವಾಹನಃ ।
ಸೋಽಧಾರಯತ್ಪ್ರಜಾಃ ಸರ್ವಾ ಯಜ್ಞಾಂಶ್ಚ ತ್ರಿದಿವೌಕಸಃ ॥ ೩೧ ॥
ಏತಸ್ಮಿನ್ನಂತರೇ ದೇವಿ ತ್ವಯಾ ಸಾರ್ಧಂ ಸಮಾಗತಃ ।
ದರ್ಶನಾರ್ಥಂ ಸ್ವನಗರೀಮಹಂ ಭೂತಗಣೈರ್ವೃತಃ ॥ ೩೨ ॥
ತತೋ ದೇವಗಣಾಃ ಸರ್ವೇ ಸಕಿನ್ನರಮಹೋರಗಾಃ ।
ಸಯಕ್ಷರಕ್ಷೋ ಗಂಧರ್ವಾಃ ಸಿದ್ಧವಿದ್ಯಾಧರೋರಗಾಃ ॥ ೩೩ ॥
ಭೂತಾಃ ಪ್ರೇತಾಃ ಪಿಶಾಚಾಶ್ಚ ಯೇ ಚಾನ್ಯೇ ಗಗನೇಚರಾಃ ।
ಚತ್ವಾರಃ ಸಾಗರಾಶ್ಚೈವ ಕ್ಷಾರಕ್ಷೀರಾದಿಸಿಂಧವಃ ॥ ೩೪ ॥
ಗಂಗಾ ಚ ಯಮುನಾ ಸಿಂಧುಶ್ಚಂದ್ರಭಾಗಾ ಸರಸ್ವತೀ ।
ಚರ್ಮಣ್ವತೀ ಭೀಮರಥೀ ಪುಣ್ಯಾ ಗೋದಾವರೀ ನದೀ ॥ ೩೫ ॥

---

೨೯. ಆ ಮಹಾರಾಜನು ದೊಡ್ಡ ಬಿರುಗಾಳಿಯಾಗಿ ಆ ಮೇಘಪಙ್ಕ್ತಿಯನ್ನು ಚೆದುರಿಸಿದನು. ಈ ಮಹಾವರ್ಷದಿಂದ ಭೂಮಿಯಲ್ಲೆಲ್ಲಿಯೂ ಬೆಂಕಿಯೇ ಕಾಣದಂತಾಯಿತು.

೩೦–೩೧. ಯಜ್ಞಗಳಾಗಲಿ, ಜಪಗಳಾಗಲಿ, ಹೋಮಗಳಾಗಲಿ, ಪಾಕ ಕರ್ಮಗಳಾಗಲಿ ನಡೆಯಲಿಲ್ಲ. ಲೋಕವೆಲ್ಲವೂ ರೋಗಪೀಡಿತವಾಗಿ ಬಹಳ ಸಂಕಟಕ್ಕೊಳಗಾಯಿತು. ಅದನ್ನು ಕಂಡು ಮಹಾರಾಜನು ತಾನೇ ಅಗ್ನಿಯಾದನು. ಅಲ್ಲದೆ ತಾನೊಬ್ಬನೇ ಪ್ರಜೆಗಳನ್ನೂ, ಯಜ್ಞಯಾಗಾದಿಗಳನ್ನೂ, ದೇವತೆಗಳನ್ನೂ ಪೋಷಿಸುತ್ತಿದ್ದನು.

೩೨. ಎಲೌ ಪಾರ್ವತಿಯೆ! ಈ ಸಮಯದಲ್ಲಿಯೇ ನಾನೂ ನಿನ್ನೊಡಗೂಡಿ ಭೂತಗಣಗಳಿಂದ ಪರಿವಾರಿತನಾಗಿ ನನ್ನ ಪಟ್ಟಣವನ್ನು ನೋಡುವುದಕ್ಕಾಗಿ ಅಲ್ಲಿಗೆ ಹೋದೆನು.

೩೩–೩೭. ಆಗ ಸಮಸ್ತ ದೇವತಾಗಣಗಳೂ, ಕಿನ್ನರರೂ, ಮಹಾನಾಗರೂ, ಯಕ್ಷರೂ, ರಾಕ್ಷಸರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ, ಭೂತಗಳೂ, ಪಿಶಾಚರೂ, ಪ್ರೇತರೂ, ಇತರ ಆಕಾಶಸಂಚಾರಿಗಳೂ, ನಾಲ್ಕು ಸಮುದ್ರಗಳ ಅಧಿದೇವತೆಗಳೂ, ಲವಣ, ಕ್ಷೀರಗಳೇ ಮುಂತಾದ ಸಪ್ತಸಮುದ್ರಗಳೂ, ಗಂಗಾ, ಯಮುನಾ, ಸಿಂಧು, ಚಂದ್ರಭಾಗಾ, ಸರಸ್ವತಿ, ಚರ್ಮಣ್ವತಿ, ಭೀಮರಥಿ, ಪುಣ್ಯಪ್ರದವಾದ ಗೋದಾವರಿ, ವಿಪಾಶಾ, ದೇವಿಕಾ, ಸರಯು,

ವಿಪಾಶಾ ವೇವಿಕಾ ಪುಣ್ಯಾ ಶರಯೂಃ ಕೌಶಿಕೀ ತಥಾ ।
ಗೋಮತೀ ಧೂತಪಾಪಾ ಚ ಬಾಹುದಾ ಚ ದೃಷದ್ವತೀ ॥ ೩೭ ॥
ಪರಾ ವೇದಸ್ಮೃತಿಶ್ಚೈವ ನೇತ್ರಕೃಷ್ಣೀ ನರ್ಮದಾ ಶಿವಾ ।
ತಾಪೀ ಪಯೋಷ್ಣೀ ನಿರ್ವಿಂಧ್ಯಾ ಸರ್ವಾಸ್ತತ್ರ ಸಮಾಗತಾಃ ॥ ೩೭ ॥
ಪುಷ್ಕರಶ್ಚ ಪ್ರಯಾಗಶ್ಚ ಪ್ರಭಾಸೋ ನೈಮಿಷಸ್ತಥಾ ।
ಪೃಥುತೀರ್ಥೋದಕಶ್ಚೈವ ತಥೈವಾಽಮರಕಂಟಿಕಃ ॥ ೩೮ ॥
ಗಂಗಾದ್ವಾರಃ ಕುಶಾವರ್ತೋ ಬಿಲ್ವಕೋ ನೀಲಪರ್ವತಃ ।
ವಾರಾಹಪರ್ವತಶ್ಚೈವ ತೀರ್ಥಂ ಕನಖಲಂ ತಥಾ ॥ ೩೯ ॥
ಭೃಗುತುಂಗಃ ಸುಕುಕ್ಷಿಶ್ಚಾಪ್ಯಜಗಂಧಶ್ಚ ಪಾರ್ವತಿ ।
ಕಾಲಿಂಜರಃ ಸ ಕೇದಾರೋ ರುದ್ರಕೋಟಿರ್ಮಹಾಲಯಃ ॥ ೪೦ ॥
ಸ್ಥಾನಾನಿ ಚ ಸಮಸ್ತಾನಿ ಪುಣ್ಯಾನ್ಯಾಯತನಾನಿ ಚ ।
ಮೇರುರ್ಮಹೇಂದ್ರೋ ಮಲಯೋ ಮಂದರೋ ಗಂಧಮಾದನಃ॥ ೪೧ ॥
ಮುನಯೋ ವಾಲಖಿಲ್ಯಾಶ್ಚ ವೇದಾಶ್ಚತ್ವಾರ ಏವ ಚ ।
ಏತೇ ಚಾಽನ್ಯೇ ಚ ಬಹವಃ ಸಮಾಯಾತಾ ಮಯಾ ಸಹ ॥ ೪೨ ॥
ಅನಂತರಂ ಮಯಾ ಮೇರುಃ ಸ್ಥಲಾಕಾರಃ ಕೃತಸ್ತತಃ ।
ತಸ್ಮಿನ್‌ಸ್ಥಲೇ ಸ್ಥಿತೋ ದೇವಿ ಉಪವಿಷ್ಟಃ ಸುರೈರ್ವೃತಃ ।
ನಿಯುಕ್ತಾಃ ಸಾಗರಾಃ ಪಾರ್ಶ್ವೇ ಚತ್ವಾರೋ ಲವಣಾದಯಃ ॥ ೪೩ ॥

---

ಕೌಶಿಕಿ, ಗೋಮತಿ, ಧೂತಪಾಪಾ, ಬಾಹುದಾ, ದೃಷದ್ವತಿಗಳೆಂಬ ನದಿಗಳೂ, ಪರಾ, ವೇದಸ್ಮೃತಿ, ನೇತ್ರಕೃಷ್ಣೀ, ನರ್ಮದಾ, ತಾಪೀ, ಪಯೋಷ್ಣಿ, ನಿರ್ವಿಂಧ್ಯಾ ಮುಂತಾದ ತೀರ್ಥಗಳೂ ಅಲ್ಲಿಗೆ ಬಂದು ಸೇರಿದುವು.

೩೮–೪೧. ಪುಷ್ಕರ, ಪ್ರಯಾಗ, ಪ್ರಭಾಸ, ನೈಮಿಷ, ಪೃಥುತೀರ್ಥ, ಅಮರಕಂಟಕ, ಗಂಗಾದ್ವಾರ, ಕುಶಾವರ್ತ, ಬಿಲ್ವಕ್ಷೇತ್ರ, ನೀಲಪರ್ವತ, ವರಾಹಪರ್ವತ, ಕನಖಲತೀರ್ಥ, ಭೃಗುತುಂಗ, ಸುಕುಕ್ಷಿ, ಅಜಗಂಧ, ಕಾಲಿಂಜರ, ಕೇದಾರ, ರುದ್ರಕೋಟಿ, ಮಹಾಲಯ, ಮುಂತಾದ ಸಮಸ್ತ ಕ್ಷೇತ್ರಗಳೂ, ಪುಣ್ಯಧಾಮಗಳೂ, ಮೇರು, ಮಹೇಂದ್ರ, ಮಲಯ, ಮಂದರ, ಗಂಧಮಾದನ ಮುಂತಾದ ಪರ್ವತಗಳೂ ಬಂದುವು.

೪೨. ಮಹಾಮುನಿಗಳೂ, ವಾಲಖಿಲ್ಯರೂ, ನಾಲ್ಕು ವೇದಗಳ ಅಭಿಮಾನಿ ದೇವತೆಗಳೂ ಬಂದರು. ಇವರೂ ಇತರ ಅನೇಕ ದೇವಪ್ರಮುಖರೂ ನನ್ನೊಡನೆ ಅಮರಾವತಿಗೆ ಪ್ರಯಾಣಮಾಡಿದರು.

೪೩. ಬಳಿಕ ನಾನು ಆ ಸ್ಥಳವನ್ನೇ ಮೇರುಪರ್ವತದ ಆಕಾರವುಳ್ಳುದನ್ನಾಗಿ ಮಾಡಿ ಸಮಸ್ತದೇವತೆಗಳೊಡಗೂಡಿ ಅಲ್ಲಿಯೇ ವಾಸವನ್ನು ಮಾಡಿದೆನು.

ಅಥ ವ್ಯಾಕುಲತಾಂ ಪ್ರಾಪ್ತಃ ಸ ಚ ರಾಜಾ ರಿಪುಂಜಯಃ ।
ಸ್ವಸ್ಥಲಸ್ಥಂ ಚ ಮಾಂ ದೃಷ್ಟ್ವಾ ಸಮಾಯಾತಸ್ತು ಮಾಂ ಪ್ರತಿ ॥ ೪೪ ॥
ತೇಜಸಾ ದಹ್ಯಮಾನೋಽಪಿ ಮದೀಯೇನ ವರಾನನೇ ।
ಭೀತೋಽಪಿ ತೋಷಯಾಮಾಸ ಕೋಽಸಿ ದೇವ ನಮೋಽಸ್ತು ತೇ ॥೪೫॥
ಸ್ಥಲೇಽಸ್ಮಿನ್ನೃಪ ರಾಜಾಽಹಂ ಮಯಾಪ್ಯುಕ್ತಂ ವಿನೋದತಃ ।
ಚತುರ್ವರ್ಗಶ್ಚತುರ್ಮೂರ್ತಿಶ್ಚತುರ್ಧಾ ಸಂಸ್ಥಿತೋ ನೃಪಃ ॥ ೪೬ ॥
ತೇನಾಽಹಂ ಸರ್ವತೋ ದೃಷ್ಟೋ ವಾಙ್ಮಯೇ ಸಚರಾಚರೇ ।
ಅನಂತರಂ ಸ್ತುತಸ್ತೇನ ಭಕ್ತ್ಯಾ ಪರಮಯಾ ಪ್ರಿಯೇ ॥ ೪೭ ॥
ಪ್ರಭಾವಮತುಲಂ ದೃಷ್ಟ್ವಾ ಮದೀಯಂ ವ್ಯಾಪಕಂ ಪರಂ ।
ಭಕ್ತ್ಯಾ ಪರಮಯಾ ದೇವಿ ಸ ಚ ಮಾಂ ಶರಣಂಗತಃ ॥ ೪೮ ॥
ಭೂಯಃ ಸ್ತುತೋಽಪಿ ತೇನಾಽಹಂ ತುಷ್ಟೋ ವೈ ತಸ್ಯ ಭೂಪತೇಃ ।
ತೇನೋಕ್ತಂ ಯದಿ ಮೇ ದೇವ ತುಷ್ಟಸ್ತ್ವಂ ಪರಮೇಶ್ವರ ॥ ೪೯ ॥

---

ಆ ಕ್ಷೇತ್ರದ ಪಕ್ಕದಲ್ಲಿಯೇ ಲವಣೋದಕವೇ ಮೊದಲಾದ ನಾಲ್ಕು ಸಮುದ್ರಗಳನ್ನೂ ನೆಲೆಗೊಳಿಸಿದೆನು.

೪೪. ಆಗ ರಾಜನಾದ ರಿಪುಂಜಯನು ವ್ಯಾಕುಲವನ್ನು ಹೊಂದಿದನು. ತನ್ನ ರಾಜಧಾನಿಯಲ್ಲಿ ನೆಲಸಿದ ನನ್ನನ್ನು ಕಂಡು ನನ್ನ ಬಳಿಗೆ ಬಂದನು.

೪೫. ಎಲೌ ಪಾರ್ವತಿಯೆ! ನನ್ನ ತೇಜಸ್ಸಿನಿಂದ ಸುಡಲ್ಪಡುವವನಂತಿದ್ದರೂ, ಭಯಚಕಿತನಾಗಿದ್ದರೂ ನನ್ನನ್ನು ಸಂತೋಷಪಡಿಸುವವನಾಗಿ ಕೇಳಿದನು. "ದೇವ! ನೀನು ಯಾರಾದರೂ ಆಗಲಿ ನಿನ್ನನ್ನು ನಮಸ್ಕರಿಸುವೆನು."

೪೬. ನಾನು ವಿನೋದದ ಮಾತುಗಳಿಂದಲೇ ಉತ್ತರವನ್ನಿತ್ತೆನು. "ರಿಪುಂಜಯ! ನಾನೇ ಈ ಪ್ರದೇಶಕ್ಕೆ ರಾಜನು. ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವ ನಾಲ್ಕುರೂಪಗಳನ್ನು ಧರಿಸಿ ಇಲ್ಲಿ ನಾನು ನಾಲ್ಕುಕಡೆಗಳಲ್ಲಿಯೂ ನೆಲಸಿರುವೆನು."

೪೭. ಆಗ ರಾಜನು ಆ ಮಾತಿಗೆ ವಿಷಯವಾದ ಚರಾಚರಾತ್ಮಕವೆನಿಸಿದ ಬ್ರಹ್ಮಾಂಡದಲ್ಲೆಲ್ಲಿಯೂ ನನ್ನನ್ನೇ ಕಾಣುತ್ತ, ಪರಮಭಕ್ತಿಯುಕ್ತನಾಗಿ ಸ್ತೋತ್ರ ಮಾಡತೊಡಗಿದನು.

೪೮. ದೇವಿಯೆ! ಸರ್ವವ್ಯಾಪಕವೂ, ಸರ್ವೋತ್ತಮವೂ ಆದ ನನ್ನ ಮಹಿಮೆಯನ್ನು ಕಂಡು ಮಹಾಭಕ್ತಿಯಿಂದ ಆತನು ನನ್ನನ್ನೇ ಶರಣು ಹೊಂದಿದನು.

೪೯–೫೦. ಇಂತು ಮತ್ತೆ ಮತ್ತೆ ಸ್ತೋತ್ರಮಾಡುತ್ತಿದ್ದ ಆ ಮಹಾರಾಜನಲ್ಲಿ ನಾನು ಸಂತುಷ್ಟನಾದೆನು. ಆಗ ಆತನಿಂತೆಂದನು. "ಓ ಪರಮೇಶ್ವರನೆ! ನನ್ನಲ್ಲಿ

ಭಕ್ತಿರ್ಮೇ ಸುದೃಢಾ ಭೂಯಾತ್ತ್ವಯಿ ಸರ್ವೇಶ ಶಾಶ್ವತೀ ।
ತುಷ್ಟೋಽಹಂ ತೇನ ವಾಕ್ಯೇನ ಪುನಃ ಪ್ರೋಕ್ತೋ ಮಯಾ ನೃಪ ॥ ೫೦ ॥
ಏವಂ ಭವಿಷ್ಯತೀತ್ಯುಕ್ತ್ವಾ ಪುನರ್ಮಾಂ ಬ್ರೂಹಿ ಪಾರ್ಥಿವ ।
ಹೃದಿ ಸ್ಥಿತಶ್ಚ ತೇ ಕಾಮಃ ಸರ್ವಕಾಲಂ ಭವಿಷ್ಯತಿ ॥ ೫೧ ॥
ಅಧೃಷ್ಯಃ ಸರ್ವದೇವಾನಾಂ ಸರ್ವದಾ ಸಂಭವಿಷ್ಯಸಿ ।
ತೇನಾಽಹಂ ಪ್ರಾರ್ಥಿತೋ ದೇವಿ ಭೂಯೋ ವರಮನುತ್ತಮಂ ॥ ೫೨ ॥
ಅತೀವ ರಾಜತೇ ದೇವ ಸ್ಥಲೋಽಯಂ ತವ ಸನ್ನಿಧೌ ।
ಮೇರುರೇಷ ನ ಸಂದೇಹೋ ವಲ್ಲಭಃ ಸರ್ವದಾ ತವ ॥ ೫೩ ॥
ರಾಜಸ್ಥಲೇಶ್ವರೋಽಸಿ ತ್ವಂ ವಿಖ್ಯಾತೋ ಭುವನತ್ರಯೇ ।
ಭವಿಷ್ಯಸಿ ಯಥಾ ದೇವ ತಥಾ ತ್ವಂ ಕರ್ತುಮರ್ಹಸಿ ॥ ೫೪ ॥
ಅತ್ರಾಗತ್ಯ ಚ ಯೋ ದೇವ ಭಕ್ತ್ಯಾ ಪರಮಯಾ ಯುತಃ ।
ಯಾತ್ರಾಂ ಕರೋತಿ ಭಾವೇನ ಪುರಾಣೋಕ್ತವಿಧಾನತಃ ॥ ೫೫ ॥
ತಸ್ಯ ತ್ವಯಾ ಪ್ರದಾತವ್ಯಂ ಸರ್ವಂ ಮನಸಿ ಚಿಂತಿತಂ ।
ಅಣಿಮಾದಿಗುಣಾಃ ಸರ್ವೇ ಘುಟಿಕಾಸಿದ್ಧಿರಂಜನಂ ॥ ೫೬ ॥

---

ನೀನು ಸಂತೋಷಗೊಂಡಿರುವೆಯಾದರೆ ನಿನ್ನಲ್ಲಿ ನನಗೆ ನಿಶ್ಚಲವೂ, ಶಾಶ್ವತವೂ ಆದ ಭಕ್ತಿಯುಂಟಾಗುವಂತೆ ಅನುಗ್ರಹಿಸು.'' ಈ ವಾಕ್ಯದಿಂದ ಸಂತುಷ್ಟನಾಗಿ ನಾನು ಪುನಃ ಹೇಳಿದೆನು.

೫೧. ''ಎಲೈ ಭೂಪಾಲಕನೆ! ನಿನ್ನ ಇಷ್ಟದಂತೆಯೇ ನಡೆಯುವುದು. ಈಗ ಮತ್ತೆ ನಿನ್ನ ಮನಸ್ಸಿನಲ್ಲಿರುವ ಇಷ್ಟಾರ್ಥವನ್ನು ತಿಳಿಸು. ಅದು ಶಾಶ್ವತವಾಗಿ ನಡೆದುಬರುವಂತೆ ಮಾಡುವೆನು.

೫೨. ನೀನು ಯಾವಾಗಲೂ ಸಕಲ ದೇವತೆಗಳಿಗೂ ಜಯಿಸಲಸಾಧ್ಯನಾಗಿರುವೆ.'' ಇಂತೆಂದ ನನ್ನಲ್ಲಿ ಆತನು ಪುನಃ ಉತ್ಕೃಷ್ಟವಾದ ವರವೊಂದನ್ನು ಯಾಚಿಸಿದನು.

೫೩. ''ದೇವದೇವ! ನಿನ್ನ ಸನ್ನಿಧಿಯಲ್ಲಿರುವ ಈ ಪ್ರದೇಶವು ಬಹಳವಾಗಿ ಶೋಭಿಸುತ್ತಿರುವುದು. ಇದು ಸರ್ವಕಾಲಗಳಲ್ಲಿಯೂ ನಿನಗೆ ಪ್ರಿಯವಾದ ಮೇರುವೆಂಬುದರಲ್ಲಿ ಸಂದೇಹವಿಲ್ಲ.

೫೪. ಈ ರಾಜಸ್ಥಳಕ್ಕೆ ನೀನು ಅಧಿಪತಿಯಾಗಿ ಮೂರು ಲೋಕಗಳಲ್ಲಿಯೂ ಹೇಗೆ ಪ್ರಖ್ಯಾತಿಯನ್ನು ಪಡೆಯುವೆಯೊ, ಹಾಗೆಯೆ ಮುಂದಿನ ಕಾರ್ಯವನ್ನೂ ಮಾಡಬೇಕಾಗಿರುವುದು.

೫೫–೫೬. ಮಹಾದೇವನೆ! ಇಲ್ಲಿಗೆ ಬಂದು ಯಾವನು ಅತ್ಯಂತ ಭಕ್ತಿಯುಳ್ಳವನಾಗಿ ಪುರಾಣಗಳಲ್ಲಿ ಹೇಳಿರುವ ವಿಧಿಯನ್ನನುಸರಿಸಿ ಯಾತ್ರೆಯನ್ನು

ಖಡ್ಗಂ ಚ ಪಾದುಕಾಂ ಚೈವ ಜಲವಾಸಂ ರಸಾಯನಂ ।
ರಾಜಸ್ಥಲೇಶ್ವರಂ ಯಸ್ತು ಭಕ್ತ್ಯಾ ಪಶ್ಯತಿ ಮಾನವಃ ॥ ೫೭ ॥
ದಶಮ್ಯಾಂ ತು ವಿಶೇಷೇಣ ಕೃತ್ವಾ ನಿಯಮಪೂರ್ವಕಂ ।
ದೇವಾನಾಮಪಿ ದೇವತ್ವಂ ಸಂಪ್ರಾಪ್ನೋತಿ ಮಹೇಶ್ವರಃ ॥ ೫೮ ॥
ಪೂಜನೀಯಸ್ತು ತ್ರಿದಿವೈರ್ಯಥಾ ದೇವಃ ಪುರಂದರಃ ।
ದೃಷ್ಟ್ವಾ ರಾಜಸ್ಥಲೇ ದೇವಂ ಯೋಽತ್ರ ಯಾತ್ರಾಂ ಕರಿಷ್ಯತಿ ॥ ೫೯ ॥
ತಸ್ಯ ಶ್ರೀರ್ವಿಜಯಶ್ಚೈವ ಭವತ್ಯೇವ ವರೋ ಮಮ ।
ಶತ್ರವಃ ಸಂಕ್ಷಯಂ ಯಾಂತು ಸಂಪದ್ಯಂತಾಂ ಮನೋರಥಾಃ ॥ ೬೦ ॥
ವೃದ್ಧಿರ್ಭವತು ವಂಶೇ ಚ ದರ್ಶನಾತ್ತವ ಶಂಕರ ।
ಸರ್ವೇಽತ್ರ ದೇವಾಸ್ತಿಷ್ಠಂತು ಮೇರುರತ್ರೈವ ತಿಷ್ಠತು ।
ತಿಷ್ಠಂತು ಸಾಗರಾಃ ಸರ್ವೇ ತವ ದೇವ ಸಮೀಪತಃ ॥ ೬೧ ॥
ಇತ್ಯುಕ್ತೋಽಹಂ ತದಾ ತೇನ ಮಯಾ ಚೋಕ್ತಂ ವರಾನನೇ ।
ಸುದ್ಯುಮ್ನೋ ನಾಮ ಭೂಪಾಲೋ ಯದಾಽತ್ರೈವಾಗಮಿಷ್ಯತಿ ॥ ೬೨ ॥

---

ಮಾಡುವನೊ, ಅವನಿಗೆ ನೀನು ಮನಸ್ಸಿನ ಸಮಸ್ತಾಭಿಲಾಷೆಗಳನ್ನೂ, ಅಣಿಮಾದಿ ಅಷ್ಟಸಿದ್ಧಿಗಳನ್ನೂ, ಘಟಿಕಾದ್ಯೌಷಧಸಿದ್ಧಿಯನ್ನೂ, ಅಂಜನಪ್ರಯೋಗವನ್ನೂ ಅನುಗ್ರಹಿಸಬೇಕು.

೫೭–೫೮. ಇಷ್ಟೆಯಲ್ಲದೆ ಖಡ್ಗಸಿದ್ಧಿಯನ್ನೂ, ಪಾದುಕಾಪ್ರಸಾದವನ್ನೂ, ರಸಾಯನಕಲ್ಪವನ್ನೂ ಕೃಪೆಮಾಡು. ಈ ರಾಜಸ್ಥಲೇಶ್ವರನನ್ನು ಯಾವ ಮಾನವನು ಭಕ್ತಿಯಿಂದ ಸಂದರ್ಶಿಸುವನೊ, ವಿಶೇಷವಾಗಿ ದಶಮಿಯ ತಿಥಿಯಲ್ಲಿ ನಿಯಮಸಹಿತವಾದ ಪೂಜೆಯನ್ನು ಮಾಡುವನೊ ಅವನು ದೇವತೆಗಳಿಗೂ ದೇವತೆಯೆನಿಸಿ ಮಾಹೇಶ್ವರಪದವನ್ನು ಪಡೆಯುವನು. ಮಹೇಂದ್ರನಂತೆಯೇ ಅವರಿಂದ ಪೂಜೆಗಳನ್ನು ಕೈಗೊಳ್ಳುತ್ತಿರುವನು.

೫೯. ಈ ಸ್ಥಳದಲ್ಲಿ ರಾಜಸ್ಥಲೇಶ್ವರನನ್ನು ನೋಡಿ ಯಾವನು ಯಾತ್ರೆಯನ್ನು ಮಾಡುವನೊ, ಅವನಿಗೆ ಐಶ್ವರ್ಯವೂ, ಕಾರ್ಯಜಯವೂ ಉಂಟಾಗುವುವೆಂದು ನನ್ನ ವರವಿರುವುದು.

೬೦. ಎಲೈ ಮಹೇಶ್ವರನೆ! ನಿನ್ನ ದರ್ಶನವನ್ನು ಮಾಡಿದವರಿಗೆ ಶತ್ರುಗಳು ನಾಶವಾಗಲಿ. ಸಕಲಾಭೀಷ್ಟಗಳೂ ಕೈಗೂಡಲಿ. ಸಂತಾನವು ವೃದ್ಧಿಯನ್ನೈದಲಿ.

೬೧. ದೇವದೇವನಾದ ನಿನ್ನ ಸಮೀಪದಲ್ಲಿಯೇ ಸಮಸ್ತದೇವತೆಗಳೂ ನೆಲಸಿರಲಿ. ಇದೇ ಮೇರುಸ್ಥಳವಾಗಲಿ. ಸಮಸ್ತಸಮುದ್ರಗಳೂ ಇಲ್ಲಿಯೇ ಸನ್ನಿಹಿತಗಳಾಗಲಿ.''

೬೨. ಇಂತೆಂದು ರಿಪುಂಜಯನು ನನ್ನನ್ನು ಪ್ರಾರ್ಥಿಸಿಕೊಳ್ಳಲು, ನಾನು

ಪುತ್ರಾರ್ಥಂ ಭಾರ್ಯಯಾ ಸಾರ್ಧಂ ತದಾ ದಾಸ್ಯಾಮಿ ವಾಂಛಿತಂ ।
ತದಾ ಸಮುದ್ರಾಶ್ಚತ್ವಾರಃ ಸ್ಥಾಸ್ಯಂತಿ ಸಫಲಾಃ ಸ್ವಯಂ ।
ತಸ್ಯಾರಾಧನತೋ ಭೂಪ ಪುತ್ರಂ ದಾಸ್ಯಾಮಿ ಶೋಭನಂ ॥ ೩೩ ॥
ಯೇ ಚಾsತ್ರ ಮಾನವಾ ರಾಜನ್ಯಾತ್ರಾಂ ಕುರ್ವಂತಿ ಭಕ್ತಿತಃ ।
ತೇಷಾಂ ಮನೋರಥಾವಾಪ್ತಿರ್ಭವಿಷ್ಯತಿ ನ ಸಂಶಯಃ ॥ ೩೪ ॥
ರಾಜಾ ರಿಪುಂಜಯೋ ಭಕ್ತ್ಯಾ ಗಣಾಧೀಶಃ ಕೃತೋ ಮಯಾ ॥ ೩೫ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ರಾಜಸ್ಥಲೇಶ್ವರೇಶಸ್ಯ ಶ್ರೂಯತಾಂ ವಡಲೇಶ್ವರಂ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ರಾಜಸ್ಥಲೇಶ್ವರಮಾಹಾತ್ಮ್ಯವರ್ಣನಂ" ನಾಮ
ಚತುಃಸಪ್ತತಿತಮೋsಧ್ಯಾಯಃ

---

ಆತನಿಗೆ ಹೇಳಿದೆನು. "ಮುಂದೆ ಮಹಾರಾಜನಾದ ಸುದ್ಯುಮ್ನನೆಂಬವನು ಇಲ್ಲಿಗೆ ಬರುವನು. ಪುತ್ರಕಾಮನಾಗಿ ಆತನು ಹೆಂಡತಿಯೊಡನೆ ಬರುವ ಸಮಯದಲ್ಲಿ ನಿನ್ನ ಅಭೀಷ್ಟವನ್ನು ನೆರವೇರಿಸಿಕೊಡುವೆನು.

೩೩. ಆಗ ಇಲ್ಲಿ ಚತುಸ್ಸಮುದ್ರಗಳೂ ನೆಲಸಿ ಸಜ್ಜನರಿಗೆ ಫಲದಾಯಕಗಳಾಗುವುವು. ಮಹಾರಾಜ! ಆತನ ಪೂಜೆಯಿಂದ ಸಂತೋಷಗೊಂಡು ಆತನಿಗೆ ಉತ್ತಮಪುತ್ರನನ್ನು ಅನುಗ್ರಹಿಸುವೆನು.

೩೪. ಯಾವ ಮಾನವರು ಭಕ್ತಿಯುತರಾಗಿ ಈ ಸ್ಥಳಕ್ಕೆ ಯಾತ್ರೆಬರುವರೊ, ಅವರ ಮನಸ್ಸಿನ ಬಯಕೆಗಳೆಲ್ಲವೂ ಕೈಗೂಡುವುದರಲ್ಲಿ ಸಂದೇಹವಿಲ್ಲ."

೩೫. ದೇವಿಯೆ! ತನ್ನ ಭಕ್ತಿಯ ಫಲವಾಗಿ ರಾಜನಾದ ರಿಪುಂಜಯನನ್ನೂ ನಾನು ಗಣನಾಯಕನನ್ನಾಗಿ ಮಾಡಿದೆನು.

೩೬. ಪಾರ್ವತಿಯೆ! ಇಂತು ರಾಜಸ್ಥಲೇಶ್ವರನ ಮಹಿಮೆಯನ್ನು ಕುರಿತ ಪಾಪನಾಶಕವಾದ ಕಥೆಯನ್ನು ಹೇಳಿದೆನು. ಇನ್ನು ವಡಲೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ರಾಜಸ್ಥಲೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಸಪ್ತತಿತಮೋಽಧ್ಯಾಯಃ

### ವಡಲೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ:—**

ಪಂಚಸಪ್ತತಿಕಂ ದೇವಂ ವಡಲೇಶ್ವರಸಂಜ್ಞಕಂ ।
ವಿದ್ಧಿ ಪಾಪಹರಂ ದೇವಿ ದರ್ಶನಾತ್ಕಾಮದಂ ನೃಣಾಂ ॥ ೧ ॥
ಧನದಸ್ಯ ಸಖಾ ದೇವಿ ಮಣಿಭದ್ರೋ ಬಭೂವ ಹ ।
ಈರ್ಷ್ಯಾಪ್ರಭಾವಸ್ತತ್ಪುತ್ರೋ ವಡಲೋ ನಾಮ ಕೋಪನಃ ॥ ೨ ॥
ರೂಪವಾನ್ ಸರ್ವದಾ ಕಾಮೀ ಸದಾ ಮತ್ತೋ ಬಲಾಧಿಕಃ ।
ಕದಾಚಿತ್ಸ ಗತೋ ರಮ್ಯಾಂ ನಲಿನೀಂ ಧನದಸ್ಯ ಚ ॥ ೩ ॥
ರತ್ಯರ್ಥಂ ಕಾಮಸೇವಾರ್ಥಂ ಗುಪ್ತಾಂ ರಹಸಿ ನಿರ್ಮಿತಾಂ ।
ದದರ್ಶ ಕುಸುಮೈಶ್ಛನ್ನಾಂ ವಜ್ರವೈಡೂರ್ಯಭೂಷಿತಾಂ ॥ ೪ ॥
ತಾಂ ವೈ ವಿದ್ರುಮಸಂಛನ್ನಾಂ ಮುಕ್ತಾದಾಮವಿರಾಜಿತಾಂ ।
ಸುರಮ್ಯಾಂ ವಿಪುಲಚ್ಛಾಯಾಂ ಸ್ವರ್ಣಪಂಕಜಶೋಭಿತಾಂ ॥ ೫ ॥

---

### ಕನ್ನಡದ ಅನುವಾದ

#### ವಡಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಎಪ್ಪತ್ತೈದನೆಯ ಮಹಾದೇವನೇ ವಡಲೇಶ್ವರಾಭಿದಾನವುಳ್ಳವನು. ದರ್ಶನಮಾತ್ರದಿಂದ ಈ ಮಹಾಲಿಂಗವು ಪಾಪಗಳನ್ನು ಪರಿಹರಿಸಿ ಜನರಿಗೆ ಸಕಲಾಭೀಷ್ಟಗಳನ್ನೂ ಕೊಡುವುದು.

೨. ಪಾರ್ವತಿಯೆ! ಹಿಂದೆ ಕುಬೇರನಿಗೆ ಪರಮಮಿತ್ರನಾದ ಮಣಿಭದ್ರನೆಂಬವನಿದ್ದನು. ಅವನಿಗೆ ಅಸೂಯಾಪರನೂ, ಕೋಪಪ್ರಕೃತಿಯವನೂ ಆದ ವಡಲನೆಂಬ ಮಗನಿದ್ದನು.

೩. ಆತನು ಸುಂದರನೂ, ಕಾಮಚಾರಿಯೂ, ಉನ್ಮತ್ತನೂ, ಮಹಾಬಲಶಾಲಿಯೂ ಆಗಿದ್ದನು. ಒಮ್ಮೆ ಆತನು ಕುಬೇರನ ಅಲಕಾನಗರಿಯ ಮನೋಹರವಾದ ಸರೋವರವನ್ನು ಹೋಗಿ ಸೇರಿದನು.

೪. ಆ ಸರೋವರವು ಮನಸ್ಸಂತೋಷಕ್ಕಾಗಿಯೂ, ಕಾಮಸೇವನೆಗಾಗಿಯೂ ಏಕಾಂತಪ್ರದೇಶದಲ್ಲಿ ನಿರ್ಮಿತವಾಗಿ ಹೂಮರಗಳ ಮಧ್ಯದಲ್ಲಿ ವಜ್ರವೈಡೂರ್ಯಗಳಿಂದಲಂಕೃತವೆನಿಸಿದ್ದಿತು.

೫. ಅಲ್ಲದೆ ಹವಳಗಳಿಂದ ತುಂಬಿದುದಾಗಿ, ಮುತ್ತುಗಳ ಸಾಲುಗಳಿಂದ ವಿರಾಜಿಸುತ್ತ, ವಿಶಾಲವಾದ ನೆರಳನ್ನು ಕೊಡುವ ಮರಗಳಿಂದಲೂ, ಚಿನ್ನದ ಬಣ್ಣದ ಕಮಲಗಳಿಂದಲೂ ರಮ್ಯವಾಗಿದ್ದಿತು.

ಕುಬೇರಭವನಾಭ್ಯಾಶೇ ವಲ್ಲಭಾಂ ಧನದಸ್ಯ ಚ ।
ಆಕ್ರೀಡಂ ರಾಜರಾಜಸ್ಯ ಕುಬೇರಸ್ಯ ಮಹಾತ್ಮನಃ ॥ ೬ ॥
ರಾಕ್ಷಸೈಃ ಕಿನ್ನರೈಶ್ಚೈವ ಗುಪ್ತಾಂ ಖಡ್ಗಧರೈಃ ಸದಾ ।
ತಾಂ ದೃಷ್ಟ್ವಾ ಪರಮಪ್ರೀತೋ ಬಭೂವ ನಡಲಸ್ತದಾ ॥ ೭ ॥
ಪ್ರಿಯಯಾ ಸಹಿತೋ ರೇಮೇ ಸ್ಥಾನೇ ಗುಪ್ತೇ ಮನೋಹರೇ ।
ರೇಮೇ ರಮಣಕೈರ್ಯೋಗೈರನಂಗೇನ ವಶೀಕೃತಃ ॥ ೮ ॥
ತತ್ರ ಗುಪ್ತಾ ರಣೇ ಶೂರಾ ರಾಕ್ಷಸಾ ರಣಕೋವಿದಾಃ ।
ರಕ್ಷಂತಿ ಶತಸಾಹಸ್ರಂ ಸರ್ವಾಯುಧಪರಿಚ್ಛದಾಃ ॥ ೯ ॥
ತೇ ತು ದೃಷ್ಟ್ವೈವ ನಡಲಂ ಮಣಿಭದ್ರಸುತಂ ಪ್ರಿಯೇ ।
ಭಕ್ಷ್ಯೈಃ ಸಂಪೂರಿತಮುಖಂ ದಿವ್ಯಚಂದನಭೂಷಿತಂ ॥ ೧೦ ॥
ಕೇತಕೀಗರ್ಭಪತ್ರಾಭೈರ್ದಂತೈರ್ದಿವ್ಯತರಾನನಂ ।
ಯುದ್ಧಾರ್ಥೇ ಬದ್ಧನಿಸ್ತ್ರಿಂಶಂ ಶಕ್ತಿಯುಕ್ತಮರಿಂದಮಂ ॥ ೧೧ ॥

---

೬. ಕುಬೇರನಿಗೆ ಪರಮಪ್ರಿಯವಾದ ಆ ಸರೋವರವು ಆತನ ಅರಮನೆಯ ಸಮೀಪದಲ್ಲಿಯೇ ಇದ್ದು ಯಕ್ಷಾಧಿಪತಿಯಾದ ಆತನಿಗೆ ಕ್ರೀಡಾಸ್ಥಾನವಾಗಿದ್ದಿತು.

೭. ಖಡ್ಗಧಾರಿಗಳಾದ ರಾಕ್ಷಸರಿಂದಲೂ, ಕಿನ್ನರರಿಂದಲೂ ಪರಿಪಾಲಿತವಾಗಿದ್ದ ಆ ಸರಸ್ಸನ್ನು ಕಂಡು ನಡಲನು ತನ್ನಲ್ಲಿಯೇ ಅತಿಶಯವಾದ ಪ್ರೀತಿಯನ್ನು ತಾಳಿದನು.

೮. ಅವನು ಪ್ರಿಯಪತ್ನಿಯೊಡಗೂಡಿ ಕಾಮಪರವಶನಾಗಿ ಕಳಾಶಾಸ್ತ್ರದ ಅನೇಕ ಬಂಧಾದಿಗಳಿಂದ ಏಕಾಂತಗಳೂ, ಮನೋಹರಗಳೂ ಆದ ಸ್ಥಾನಗಳಲ್ಲಿ ರಮಿಸುತ್ತಿದ್ದನು.

೯. ಆ ಪ್ರದೇಶವನ್ನು ಕಣ್ಣಿಗೆ ಕಾಣದವರೂ, ಪರಾಕ್ರಮಿಗಳೂ, ಯುದ್ಧಕುಶಲರೂ, ಸರ್ವಾಯುಧಧಾರಿಗಳೂ ಆದ ಒಂದುಲಕ್ಷ ಮಂದಿ ರಾಕ್ಷಸರು ಕಾಯುತ್ತಿದ್ದರು.

೧೦. ಪ್ರಿಯಳೆ! ಅವರು ಬಾಯಿತುಂಬ ಭಕ್ಷ್ಯಗಳನ್ನು ತಿನ್ನುತ್ತಿರುವವನೂ, ದಿವ್ಯವಾದ ಚಂದನದ ಲೇಪದಿಂದ ಕೂಡಿದವನೂ, ಮಣಿಭದ್ರನ ಪುತ್ರನೂ ಆದ ಆ ನಡಲನನ್ನು ಕಂಡರು.

೧೧. ಕೇದಿಗೆಯ ಹೂವಿನ ಒಳಗಣ ಪತ್ರಗಳನ್ನು ಹೋಲುವ ಶುಭ್ರ ದಂತಪಙ್ಕ್ತಿಯಿಂದ ಶೋಭಿಸುವ ಮುಖವುಳ್ಳವನೂ, ಯುದ್ಧಕ್ಕಾಗಿ ಕವಚವನ್ನು ತೊಟ್ಟು ಮಹಾಪರಾಕ್ರಮಿಯೂ ಆಗಿರುವ ಆತನನ್ನು ರಾಜಭಟರು ನೋಡಿದರು.

ಭಾರ್ಯಾಸಹಾಯಮುನ್ಮತ್ತಂ ಪರ್ಯಂಕೇ ಚ ಸ್ಥಿತಂ ಸದಾ ।
ರತ್ಯರ್ಥಮಾಗತಂ ಜ್ಞಾತ್ವಾ ಅನ್ಯೋನ್ಯಮಭಿಚುಕ್ರುಶುಃ ॥ ೧೨ ॥
ಮಾ ವೀರಾಽನೇನ ಮಾರ್ಗೇಣ ಸಭಾರ್ಯೋ ಗಂತುಮರ್ಹಸಿ ।
ಆಕ್ರೀಡೋಽಯಂ ಕುಬೇರಸ್ಯ ಧನದಸ್ಯ ಮಹಾತ್ಮನಃ ॥ ೧೩ ॥
ದೇವಾ ದೇವರ್ಷಯೋ ಯಕ್ಷಾ ಗಂಧರ್ವಾಃ ಕಿನ್ನರಾಸ್ತಥಾ ।
ಆಮಂತ್ರ್ಯ ಯಕ್ಷಪ್ರವರಂ ವಿಹರಂತಿ ರಮಂತಿ ಚ ॥ ೧೪ ॥
ನೇಹ ಶಕ್ಯಂ ವಿನಾಽಽದೇಶಾದ್ವಿಹರ್ತುಂ ಕ್ರೀಡಿತುಂ ಚಿರಂ ।
ಭ್ರಾತ್ರಾಽಮಾತ್ಯೇನ ಸುಹೃದಾ ಕೇನಾಽಪಿ ಚ ಸುತೇನ ಚ ॥ ೧೫ ॥
ಯೇನ ಕೇನಚಿದನ್ಯಾಯಾದವಮನ್ಯ ಧನೇಶ್ವರಂ ।
ವಿಹಾರಃ ಕ್ರಿಯತೇ ದರ್ಪಾತ್ಸ ವಿನಶ್ಯೇದಸಂಶಯಂ ॥ ೧೬ ॥
ಏವಂ ಸ ರಾಕ್ಷಸೈರ್ಘೋರೈರ್ವಡಲೋ ವಿನಿವಾರಿತಃ ।
ಮಾಮೈವಮಿತಿ ಸಕ್ರೋಧಂ ಭರ್ತ್ಸಯದ್ಭಿಃ ಸಮಂತತಃ ॥ ೧೭ ॥
ಕದರ್ಥೀಕೃತ್ಯ ತು ಸ ತಾನ್ರಾಕ್ಷಸಾನ್ಭೀಮವಿಕ್ರಮಃ ।
ವ್ಯಗಾಹತ ಮಹಾತೇಜಾಸ್ತೇ ಸರ್ವೇ ತಂ ನ್ಯವಾರಯನ್ ॥ ೧೮ ॥

---

೧೨. ಹೆಂಡತಿಯೊಡನೆ ದಿವ್ಯಪರ್ಯಂಕದಲ್ಲಿ ಕುಳಿತಿರುವ ಆತನನ್ನು ಕಂಡು ವನವಿಹಾರಕ್ಕೆ ಬಂದಿರುವನೆಂಬುದನ್ನು ತಿಳಿದು ಅವರು ಆತನನ್ನು ಕೂಗಿ ಹೇಳಿದರು.

೧೧೩. "ಎಲೈ ವೀರನೆ! ಭಾರ್ಯಾಸಮೇತನಾಗಿ ನೀನು ಈ ಮಾರ್ಗದಿಂದ ಹೋಗಬಾರದು. ಐಶ್ವರ್ಯಾಧಿಪತಿಯೂ, ಮಹಾತ್ಮನೂ ಆದ ಕುಬೇರನಿಗೆ ಇದು ವಿಹಾರವನವಾಗಿರುವುದು.

೧೪. ದೇವತೆಗಳೂ, ದೇವರ್ಷಿಗಳೂ, ಯಕ್ಷರೂ, ಗಂಧರ್ವರೂ, ಕಿನ್ನರರೂ ಯಕ್ಷೇಶ್ವರನಾದ ಕುಬೇರನ ಅಪ್ಪಣೆಯಿಂದಲೇ ಇಲ್ಲಿ ವಿಹರಿಸಿ ಸಂತೋಷ ಗೊಳ್ಳುವರು.

೧೫. ಆತನ ಅಪ್ಪಣೆಯಿಲ್ಲದೆ ಬಹಳಕಾಲ ಇಲ್ಲಿ ವಿಹರಿಸುವುದಕ್ಕಾಗಲಿ ಕ್ರೀಡಿಸುವುದಕ್ಕಾಗಲಿ ಯಾರಿಗೂ ಸಾಧ್ಯವಿಲ್ಲ. ಆತನ ಸಹೋದರರೂ, ಮಂತ್ರಿಯೂ, ಸ್ನೇಹಿತನೂ, ಮಗನೂ ಅಪ್ಪಣೆಯಿಲ್ಲದೆ ಇಲ್ಲಿಗೆ ಬರಲಾರರು.

೧೬. ಆ ಧನಪತಿಯನ್ನು ಅಲ್ಲಗಳೆದು ದರ್ಪದಿಂದ ಇಲ್ಲಿ ಯಾವನೇ ಆಗಲಿ ಕ್ರೀಡಿಸಿದರೆ ಅವನು ಖಂಡಿತವಾಗಿಯೂ ನಾಶವನ್ನು ಹೊಂದುವನು."

೧೭. ಇಂತು "ಬೇಡ ಬೇಡ" ಎಂದು ಕೋಪದಿಂದಲೂ, ತರ್ಜನೆಗಳಿಂದಲೂ ಭಯಂಕರರಾದ ರಾಕ್ಷಸರು ಆ ವಡಲನನ್ನು ನಿವಾರಿಸಿದರು.

೧೮. ಅವರೆಲ್ಲರನ್ನೂ ಕಡೆಗಂಡು ಮಹಾಪರಾಕ್ರಮಿಯಾದ ಆ ಮಹಾ

F

ಗೃಹ್ಣೀತ ಬಧ್ನೀತ ನಿಕೃಂತತೈನಂ
ಪಿಬಾಮ ಖಾದಾಮಚ ವೃತ್ತಿಹೀನಂ ।
ಕ್ರುದ್ಧಾ ಬ್ರುವಂತೋಽಭ್ಯಪತನ್ದ್ರುತಂ ತೇ
ಶಸ್ತ್ರಾಣಿ ಚೋದ್ಯಮ್ಯ ನಿವೃತ್ತನೇತ್ರಾಃ ॥ ೧೯ ॥
ತತಃ ಸ ಗುರ್ವೀಂ ಯಮದಂಡಕಲ್ಪಾಂ
ಮಹಾಗದಾಂ ಕಾಂಚನಪಟ್ಟನದ್ಧಾಂ ।
ಪ್ರಗೃಹ್ಯ ತಾಮಭ್ಯತರತ್ತರಸ್ವೀ
ತತೋಽಬ್ರವೀತ್ತಿಷ್ಠತ ತಿಷ್ಠತೇತಿ ॥ ೨೦ ॥
ತೇ ತಸ್ಯ ವೀರ್ಯಂ ಚ ಬಲಂ ಚ ದೃಷ್ಟ್ವಾ
ವಿದ್ಯಾಬಲಂ ಬಾಹುಬಲಂ ತಥೈವ ।
ನ ಶಕ್ನುವಂತಃ ಸಹಿತುಂ ಸಮೇತಾ
ಪತಾಃ ಪ್ರವೀರಾಃ ಸಹಸಾ ನಿವೃತ್ತಾಃ ॥ ೨೧ ॥
ವಿದಾರ್ಯಮಾಣಾಸ್ತತ ಏವ ತೂರ್ಣ
ಮಾಕಾಶಮಾಸ್ಥಾಯ ವಿಮೂಢಸಂಜ್ಞಾಃ ।
ಕೈಲಾಸ ಶೃಂಗಾಣ್ಯಭಿದುದ್ರುವುಸ್ತೇ
ಯಕ್ಷಾರ್ದಿತಾ ರಕ್ಷಸಾಲಾಃ ಪ್ರಭಗ್ನಾಃ ॥ ೨೨ ॥

---

ತೇಜಸ್ವಿಯು ಮುನ್ನುಗ್ಗಿಬರುತ್ತಿರಲು ಅವರೆಲ್ಲರೂ ಒಟ್ಟಿಗೆ ಅವನನ್ನು ಮುತ್ತಿ ತಡೆದರು.

೧೯. "ಹಿಡಿಯಿರಿ; ಕಟ್ಟಿರಿ; ಕತ್ತರಿಸಿಹಾಕಿರಿ; ದುರಾಚಾರಪರನಾಗಿರುವ ಇವನನ್ನು ತಿಂದು ರಕ್ತವನ್ನು ಕುಡಿಯೋಣ" ಎಂದು ಕೂಗುತ್ತ ಕೋಪದಿಂದ ಅರಳಿದ ಕಣ್ಣುಗಳುಳ್ಳವರಾಗಿ ತಮ್ಮ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಮೇಲೆರಗಿದರು.

೨೦. ಆಗ ವಡಲನು ಮಹಾಭಾರವೂ, ಯಮದಂಡಸದೃಶವೂ, ಚಿನ್ನದ ಪಟ್ಟಿಗಳಿಂದಲಂಕೃತವಾದುದೂ ಆದ ಮಹಾಗದೆಯನ್ನು ತೆಗೆದುಕೊಂಡು "ನಿಲ್ಲಿರಿ, ನಿಲ್ಲಿರಿ" ಎನ್ನುತ್ತ ವೇಗದಿಂದ ಆ ರಾಕ್ಷಸ ಸೈನ್ಯದಮೇಲೆ ಬಿದ್ದನು.

೨೧. ಅವರು ಆತನ ವೀರ್ಯವನ್ನೂ, ಧೈರ್ಯವನ್ನೂ, ಯುದ್ಧವಿದ್ಯೆಯ ಕುಶಲತೆಯನ್ನೂ, ಬಾಹುಬಲವನ್ನೂ ಕಂಡು ಆತನ ಪರಾಕ್ರಮವನ್ನು ಸಹಿಸಲಾರದೆ ಗುಂಪು ಗುಂಪಾಗಿ ಸದೆಬಡಿಯಲ್ಪಟ್ಟು ಅಲ್ಲಿಂದ ಹಿಂದಿರುಗಿದರು.

೨೨. ಆ ಯಕ್ಷಕುಮಾರನ ಪೆಟ್ಟುಗಳಿಂದ ಛಿನ್ನಭಿನ್ನರಾಗಿ ಸ್ವಲ್ಪಹೊತ್ತಿನವರೆಗೂ ಮೂರ್ಛೆಗೊಂಡಿದ್ದು ಬಳಿಕ ಆಕಾಶಮಾರ್ಗವನ್ನು ಸೇರಿ ಆ ರಾಕ್ಷಸ ವನಪಾಲಕರು ಕೈಲಾಸಪರ್ವತದ ಕಡೆಗೆ ಓಡಿಹೋದರು.

ಸ ಶಕ್ರವದ್ದಾನವದೈತ್ಯಸಂಘಾ
ನ್ವಿಕ್ರಮ್ಯ ಜಿತ್ವಾ ಮದನಾಭಿತಪ್ತಃ ।
ವಿಗಾಹ್ಯತಾಂ ಪುಷ್ಕರಿಣೀಂ ಸಮರ್ಥಃ
ಕಾಮಂ ಸ ಚಿಕ್ರೀಡತಿ ಯಕ್ಷಪುತ್ರಃ ॥ ೨೩ ॥
ತತಸ್ತು ತೇ ರಕ್ಷಪಾಲಾಃ ಸಮೇತ್ಯ
ಧನೇಶ್ವರಂ ಪ್ರೈ ನಲಕೂಬರೇಣ ಸುನ್ನಾಃ ।
ಯಕ್ಷಸ್ಯ ಧೈರ್ಯಂ ಸುಬಲಂ ಚ ಸಂಖ್ಯೇ
ಯಥಾವದಾಚಖ್ಯುರತೀವ ಭೀತಾಃ ॥ ೨೪ ॥
ತೇಷಾಂ ತು ವಚನಂ ಶ್ರುತ್ವಾ ಮಣಿಭದ್ರೋ ಮಹಾಯಶಾಃ ।
ಶಶಾಪ ಪುತ್ರಂ ದಯಿತಂ ನಲಕೂಬರಂ ಪ್ರಭುಕಾರಣಾತ್ ॥ ೨೫ ॥
ಯಸ್ಮಾತ್ತ್ವಾ ನಲಿನೀ ರಮ್ಯಾ ಸೇವಿತಾ ನಲಕೂಬರೇಣ ತು ।
ದಯಿತಾ ಧನದಸ್ಯಾಪಿ ಯಥಾ ಮಾತಾ ತಥೈವ ಸಾ ॥ ೨೬ ॥
ತಸ್ಮಾತ್ಪುತ್ರೋ ಮದೀಯಸ್ತು ಸರ್ವಭೋಗವಿವರ್ಜಿತಃ ।
ಪಂಗ್ವಂಧೋ ಬಧಿರೋ ದೀನಃ ಕ್ಷಯರೋಗಮವಾಪ್ಸ್ಯತಿ ॥ ೨೭ ॥

---

೨೩. ಆ ನಲಕೂಬರನೂ ಮಹೇಂದ್ರನಂತೆ ರಾಕ್ಷಸಕುಲವನ್ನು ಜಯಿಸಿ ಪರಾಕ್ರಮದಿಂದಲೂ, ಮದನತಾಪದಿಂದಲೂ ಕೂಡಿದವನಾಗಿ ಆ ಸರೋವರದಲ್ಲಿ ಜಲಕ್ರೀಡೆಗಳನ್ನಾಡಿ ಉದ್ಯಾನವನದಲ್ಲಿಯೂ ವಿಹರಿಸುತ್ತಿದ್ದನು.

೨೪. ನಲಕೂಬರನಿಂದ ಪರಾಜಿತರಾದ ರಾಕ್ಷಸಪಾಲಕರು ಕುಬೇರನ ಬಳಿಗೆ ಬಂದು ಅವನ ಧೈರ್ಯವನ್ನೂ, ಯುದ್ಧದಲ್ಲಿ ಅಜೇಯವಾದ ಅವನ ಪರಾಕ್ರಮವನ್ನೂ ಭಯಕಂಪಿತಧ್ವನಿಯಿಂದ ಬಿನ್ನವಿಸಿಕೊಂಡರು.

೨೫. ಅವರ ಮಾತನ್ನು ಕೇಳಿ ಕುಬೇರನ ಆಸ್ಥಾನದಲ್ಲಿದ್ದ ಮಣಿಭದ್ರನು ಪ್ರಭುವಿನ ಅಪಮಾನವನ್ನು ಸಹಿಸಲಾರದೆ ಪ್ರಿಯಪುತ್ರನಾಗಿದ್ದರೂ ನಲಕೂಬರನಿಗೆ ಶಾಪವನ್ನಿತ್ತನು.

೨೬. "ಮನೋಹರವಾದ ಆ ಸರೋವರವು ಕುಬೇರನಿಂದ ಸೇವಿತವಾಗಿ ಆತನಿಗೆ ತಾಯಿಯಂತೆ ಅತಿಪ್ರಿಯವಾಗಿದ್ದಿತು. ಅದನ್ನು ನಲಕೂಬರನು ಅನುಭವಿಸಿದನು.

೨೭. ಆದುದರಿಂದ ನನ್ನ ಮಗನಾದ ಇವನು ಸಕಲ ಭೋಗಗಳಿಗೂ ದೂರವಾಗುವಂತೆ ಕುಂಟನೂ, ಕುರುಡನೂ, ಕಿವುಡನೂ, ನಿರ್ವೀರ್ಯನೂ, ಕ್ಷಯರೋಗಪೀಡಿತನೂ ಆಗುವನು."

ಇತಿ ಶಪ್ತಸ್ತದಾ ಜಾತೋ ವಡಲೋ ಭೋಗವರ್ಜಿತಃ ।
ಪತಿತೋ ಭೂತಲೇ ಚೈವ ತಸ್ಮಿನ್ ಸ್ಥಾನೇ ಗತೋಽಪಿ ಸನ್ ॥ ೨೮ ॥
ಪೀಡಿತಃ ಕ್ಷಯರೋಗೇಣ ನ ಶಶಾಕ ವಿಚೇಷ್ಟಿತುಂ ।
ಅಂಧೋಽಥ ಬಧಿರೋ ಜಾತೋ ಗುರುಶಾಪಹತಸ್ತದಾ ॥ ೨೯ ॥
ಚಿಂತಯಾಮಾಸ ಸಹಸಾ ಶಾಪಮತ್ಯದ್ಭುತಂ ಮಹತ್ ।
ಶಪ್ತೋಽಹಂ ಕೇನ ಸಹಸಾ ಜೀವನ್ನೇವಾನ್ಯಂತರಂ ಗತಃ ॥ ೩೦ ॥
ಕಥಂ ಶಪ್ತೋಽಸ್ಮಿ ತಾತೇನ ಮಣಿಭದ್ರೇಣ ವಲ್ಲಭಃ ।
ಪುತ್ರೋ ಯುವಾ ಚ ಶೂರಶ್ಚ ಶತ್ರುಪಕ್ಷಕ್ಷಯಂಕರಃ ॥ ೩೧ ॥
ಧನ್ಯೋಽಸೌ ಮಣಿಭದ್ರೋಽಪಿ ಮತ್ತಾತೋ ಯೇನ ಭೂತಲೇ ।
ಪ್ರಭುಭಕ್ತ್ಯಾ ನಿಜಃ ಪುತ್ರಃ ಶಪ್ತಸ್ತ್ಯಕ್ತಶ್ಚ ತತ್ಕ್ಷಣಾತ್ ॥ ೩೨ ॥
ವಡಲೇನ ಪುನಃ ಪ್ರೋಕ್ತಂ ಧನ್ಯೋಽಹಂ ಪ್ರಭುಕಾರಣಾತ್ ।
ಉತ್ಸವೋ ನಿಧನಂ ನಾಮ ಭರ್ತೃಪಿಂಡೋಪಜೀವಿನಾಂ ॥ ೩೩ ॥

---

೨೮. ಇಂತು ಮಣಿಭದ್ರನು ಶಾಪವಿತ್ತ ಕ್ಷಣದಲ್ಲಿಯೇ ವಡಲನು ಸಕಲ ಭೋಗಗಳನ್ನು ಕಳೆದುಕೊಂಡು ಆ ಮಹಾಸ್ಥಾನದಿಂದ ಭೂಲೋಕಕ್ಕೆ ಬಂದು ಬಿದ್ದನು.

೨೯. ತಂದೆಯ ಶಾಪದಿಂದ ಪೀಡಿತನಾಗಿ ಕುರುಡನೂ, ಕಿವುಡನೂ, ಆದುದರಿಂದಲೂ, ಕ್ಷಯರೋಗಪೀಡಿತನಾಗಿದ್ದುದರಿಂದಲೂ ಓಡಾಡುವುದಕ್ಕೂ ಕೈಲಾಗದವನಾಗಿ ಬಿದ್ದಿದ್ದನು.

೩೦. ಅಲ್ಲದೆ ಅತ್ಯದ್ಭುತವಾದ ಈ ಶಾಪವನ್ನು ಕುರಿತು ತನ್ನಷ್ಟಕ್ಕೆ ತಾನೆ ಈ ರೀತಿ ಚಿಂತಿಸುತ್ತಿದ್ದನು. "ಯಾರ ಶಾಪದ ಪರಿಣಾಮದಿಂದ ನಾನು ಬದುಕಿರುವಾಗಲೇ ಕ್ಷಣಮಾತ್ರದಲ್ಲಿ ಹೀಗೆ ಅನ್ಯಜಾತಿಯಲ್ಲಿ ಹುಟ್ಟಿದವನಂತೆ ಆದೆನು?

೩೧. ನಾನು ಮಣಿಭದ್ರನಿಗೆ ಪ್ರೀತ್ಯಾಸ್ಪದನೂ, ಯೌವನವಂತನೂ, ಶೂರನೂ, ಶತ್ರುಪಕ್ಷವನ್ನು ನಿರ್ಮೂಲಗೊಳಿಸುವವನೂ ಆದ ಪುತ್ರನಾಗಿದ್ದೆನು. ಅಂತಿದ್ದ ನನ್ನನ್ನು ಆ ತಂದೆಯು ಹೇಗೆ ಶಪಿಸಿದನೋ?

೩೨. ಪ್ರಭುವಿನಲ್ಲಿನ ತನ್ನ ಭಕ್ತಿಯಿಂದ ಔರಸಪುತ್ರನನ್ನೇ ಶಾಪಕ್ಕೀಡ ಮಾಡಿದ ನನ್ನ ತಂದೆಯಾದ ಮಣಿಭದ್ರನೇ ಪರಮಧನ್ಯನು."

೩೩. ವಡಲನು ಪುನಃ ಇಂತೆಂದನು. "ಪ್ರಭುವಿನ ಕಾರ್ಯದಿಂದ ಕಷ್ಟಕ್ಕೀಡಾದ ನಾನೂ ಧನ್ಯನೇ. ಭರ್ತೃಪಿಂಡದಿಂದ ಜೀವಿಸುವವರಿಗೆ ಮರಣವೂ ಒಂದು ಮಹೋತ್ಸವವಾಗಿರುವುದು.

ಅನ್ಯಾಯೇನ ಯಥಾಕಾಮಂ ಪ್ರಾರಬ್ಧಃ ಸಂಚಿತಶ್ಚಿರಂ ।
ತೇನಾಽಹಂ ಶಾಪತಾಂ ಪ್ರಾಪ್ತೋ ಯಾಸ್ಯಾಮಿ ನರಕಂ ಧ್ರುವಂ ॥ ೩೪ ॥
ಏವಂ ವಿಲಪತಸ್ತಸ್ಯ ಪಡಲಸ್ಯ ವರಾನನೇ ।
ಅಜಗಾಮ ತಮುದ್ದೇಶಂ ಮಣಿಭದ್ರೋ ಮಹಾಬಲಃ ।
ಪದರ್ಶ ಪುತ್ರಂ ಪಂಗ್ವಂಧಂ ಕ್ಷಯರೋಗಪ್ರಪೀಡಿತಂ ॥ ೩೫ ॥
ನಿಃಶ್ವಸಂತಂ ಸುದುಃಖಾರ್ತಂ ವಿಲಪಂತಂ ಪುನಃ ಪುನಃ ।
ಪ್ರತ್ಯುವಾಚ ಸುತಂ ಯಕ್ಷೋ ಮಣಿಭದ್ರೋಽತಿದುಃಖಿತಃ ।
ಮಯಾ ಕುಪಿತ್ವಾ ಹಾವತ್ಸ ಶಪ್ತಸ್ತ್ವಂ ಪ್ರಭುಕಾರಣಾತ್ ॥ ೩೬ ॥
ತ್ವಯೇಯಂ ನಲಿನೀ ರಮ್ಯಾ ಧನದಸ್ಯಾತಿವಲ್ಲಭಾ ।
ಸೇವಿತಾ ಕಾಮತಪ್ತೇನ ಪ್ರವರಾ ರಾಕ್ಷಸಾ ಹತಾಃ ॥ ೩೭ ॥
ತಸ್ಮಾತ್ಪುತ್ರ ಮಯಾ ಶಪ್ತೋ ನ ಮಿಥ್ಯಾ ಸ ಭವಿಷ್ಯತಿ ।
ಪ್ರಭುರ್ದೇವಃ ಪ್ರಭುಃ ಸ್ವಾಮೀ ಪ್ರಭುರ್ಮಾತಾ ಪ್ರಭುಃ ಪಿತಾ ॥ ೩೮ ॥
ಸ್ವಾಮ್ಯರ್ಥೇ ಯಃ ಪ್ರಿಯಾನ್ಪ್ರಾಣಾನ್ಪರಿತ್ಯಜತಿ ಸಂಗರೇ ।
ಸ ಯಾತಿ ಪರಮಂ ಸ್ಥಾನಂ ಬ್ರಹ್ಮಲೋಕಂ ಸನಾತನಂ ॥ ೩೯ ॥

---

೩೪. ಅನ್ಯಾಯದಿಂದ ಸ್ವೇಚ್ಛೆಯಾಗಿ ವರ್ತಿಸುತ್ತ ಬಹುಕಾಲದಿಂದ ಪ್ರಾರಬ್ಧವನ್ನು ಕೂಡಿಸಿರುವೆನು. ಆದುದರಿಂದಲೇ ಶಾಪಕ್ಕೆ ಗುರಿಯಾಗಿ ನರಕಕ್ಕೆ ಹೋಗುವುದು ನಿಶ್ಚಯವು.''

೩೫. ಎಲೌ ಪಾರ್ವತಿಯೆ! ಇಂತು ಪ್ರಲಾಪವನ್ನು ಮಾಡುತ್ತಿರುವ ಮಗನ ಬಳಿಗೆ ಮಹಾಬಲನಾದ ಮಣಿಭದ್ರನು ಪ್ರಾಪ್ತನಾಗಿ ಕುರುಡನೂ, ಕಿವುಡನೂ, ಕ್ಷಯಪೀಡಿತನೂ ಆಗಿದ್ದ ಅವನನ್ನು ಕಂಡನು.

೩೬. ಅವನು ನಿಟ್ಟುಸಿರುಗಳನ್ನುಬಿಡುತ್ತ ಬಹಳವಾದ ಸಂಕಟಕ್ಕೊಳಗಾಗಿ ಮತ್ತೆ ಮತ್ತೆ ವಿಲಪಿಸುತ್ತಿದ್ದನು. ಅವನನ್ನು ಕಂಡು ಯಕ್ಷನಾದ ಮಣಿಭದ್ರನೂ ಮನಮರುಗಿ ಇಂತೆಂದನು. ''ವತ್ಸ! ರಾಜನ ಸಲುವಾಗಿ ನೀಚಪಿತೃವಾದ ನಾನು ನಿನಗೆ ಶಾಪವನ್ನಿತ್ತೆನು.

೩೭. ಕಾಮಪೀಡಿತನಾದ ನೀನು ರಮ್ಯವೂ, ಕುಬೇರನಿಗೆ ಪರಮಪ್ರಿಯವೂ ಆದ ಸರೋವರದಲ್ಲಿ ಕ್ರೀಡಿಸುತ್ತ ಅನೇಕ ರಾಕ್ಷಸಮುಖ್ಯರನ್ನು ಕೊಂದೆ.

೩೮. ಆದುದರಿಂದ ನಾನು ನಿನ್ನನ್ನು ಶಪಿಸಿದೆನು. ನನ್ನ ಮಾತು ಸುಳ್ಳಾಗುವುದಿಲ್ಲ. ರಾಜನೇ ದೈವವು. ಆತನೇ ಸ್ವಾಮಿಯು, ತಂದೆಯು, ತಾಯಿಯು.

೩೯. ಸ್ವಾಮಿಯ ಹಿತಕ್ಕಾಗಿ ಯಾವ ಸೇವಕನು ಯುದ್ಧರಂಗದಲ್ಲಿ ಪ್ರಾಣಗಳನ್ನು ಬಿಡುವನೊ, ಅವನು ಪರಮಪದವೆನಿಸಿದ ಸನಾತನವಾದ ಬ್ರಹ್ಮಲೋಕವನ್ನು ಸೇರುವನು.

ನ ಮಂತ್ರಸಾಧ್ಯಃ ಶಾಪೋಽಯಂ ನೌಷಧೇನ ವ್ರತೇನ ಚ ।
ನಿಯಮೇನ ಚ ದಾನೇನ ತಸ್ಮಾನ್ಮದ್ವಚನಂ ಕುರು ॥ ೪೦ ॥
ಮಯಾ ಶ್ರುತಂ ಶಕ್ರಲೋಕೇ ಪುರಾಣಂ ಸ್ಕಂದಕೀರ್ತಿತಂ ।
ಬ್ರುವತೋ ನಾರದಸ್ಯೈವ ದೇವಾನಾಂ ಸನ್ನಿಧೌ ಪುರಾ ॥ ೪೧ ॥
ಪ್ರಭಾವೋ ವರ್ಣಿತಸ್ತೇನ ಮಹಾಕಾಲವನಸ್ಯ ಚ ।
ಕ್ಷೇತ್ರೇ ಹ್ಯಸ್ಮಿನ್ಮಹಾಲಿಂಗಂ ಸ್ವರ್ಗದ್ವಾರಸ್ಯ ದಕ್ಷಿಣೇ ॥ ೪೨ ॥
ವಿದ್ಯತೇ ವ್ಯಾಧಿಶಮನಂ ರೂಪಸೌಭಾಗ್ಯದಾಯಕಂ ।
ತತ್ರಾಽಹಂ ತ್ವಾಂ ಚ ನೇಷ್ಯಾಮಿ ವಿಮಾನೇನಾಶುಗಾಮಿನಾ ॥ ೪೩ ॥
ಇತ್ಯುಕ್ತ್ವಾ ಮಣಿಭದ್ರೇಣ ಸಮಾನೀತಃ ಸುತಸ್ತದಾ ।
ಯತ್ರ ದೇವಾಽಧಿದೇವೋಽಸೌ ಸ್ವರ್ಗದ್ವಾರಸ್ಯ ದಕ್ಷಿಣೇ ॥ ೪೪ ॥
ಸ್ಪರ್ಶನಾತ್ತಸ್ಯ ಲಿಂಗಸ್ಯ ಚಕ್ಷುಷ್ಮಾನ್ರೂಪವಾನ್ಬಲೀ ।
ಸುಪಾದಃ ಶ್ರುತಿಸಂಯುಕ್ತಸ್ತತ್ಕ್ಷಣಾದಭವತ್ತದಾ ॥ ೪೫ ॥

---

೪೦. ಈ ಶಾಪವನ್ನು ನಿವಾರಿಸಲು ಮಂತ್ರಗಳಿಂದಾಗಲಿ, ಔಷಧಗಳಿಂದಾಗಲಿ, ವ್ರತೋಪವಾಸಗಳಿಂದಾಗಲಿ, ನಿಯಮಗಳಿಂದಾಗಲಿ, ದಾನಗಳಿಂದಾಗಲಿ ಸಾಧ್ಯವಿಲ್ಲ. ಆದುದರಿಂದ ನಾನು ಹೇಳಿದಂತೆ ಮಾಡು.

೪೧. ಹಿಂದೆ ನಾನು ಇಂದ್ರಲೋಕದಲ್ಲಿದ್ದಾಗ ಷಣ್ಮುಖವಿರಚಿತವಾದ ಪುರಾಣವನ್ನು ನಾರದಮಹಾಮುನಿಯು ದೇವತೆಗಳ ಸನ್ನಿಧಿಯಲ್ಲಿ ಹೇಳುತ್ತಿರುವುದನ್ನು ಕೇಳಿದೆನು.

೪೨. ಆತನು ಮಹಾಕಾಲವನಕ್ಷೇತ್ರದ ಪ್ರಭಾವವನ್ನು ವರ್ಣಿಸುತ್ತಿದ್ದನು. ಆ ಕ್ಷೇತ್ರದಲ್ಲಿ ಸ್ವರ್ಗದ್ವಾರೇಶ್ವರನಿಗೆ ದಕ್ಷಿಣದಲ್ಲಿ ಒಂದು ಮಹಾಲಿಂಗವಿರುವುದು.

೪೩. ಅದು ಸರ್ವವ್ಯಾಧಿನಿವಾರಕವೂ, ಸೌಂದರ್ಯಸೌಭಾಗ್ಯದಾಯಕವೂ ಆಗಿರುವಂತೆ ನಿನ್ನನ್ನು ವೇಗಗಾಮಿಯಾಗಿರುವ ವಿಮಾನದಲ್ಲಿ ಕುಳ್ಳಿರಿಸಿ ನಾನೇ ಅಲ್ಲಿಗೆ ಕರೆದುಕೊಂಡುಹೋಗುವೆನು.''

೪೪. ಇಂತೆಂದು ಆ ಕ್ಷಣದಲ್ಲಿಯೇ ಮಣಿಭದ್ರನು - ತನ್ನ ಮಗನನ್ನು ಸ್ವರ್ಗದ್ವಾರದ ದಕ್ಷಿಣದಲ್ಲಿ ನೆಲಸಿದ್ದ ಮಹಾದೇವನ ಸನ್ನಿಧಿಗೆ ಕರೆದುಕೊಂಡು ಹೋದನು.

೪೫. ಆ ಲಿಂಗವನ್ನು ಮುಟ್ಟಿದ ಮಾತ್ರದಿಂದಲೇ ವಡಲನು ಚಕ್ಷುಷ್ಮಂತನೂ, ಸುಂದರರೂಪನೂ, ಬಲಶಾಲಿಯೂ, ಕಾಲುಗಳುಳ್ಳವನೂ, ಎಲ್ಲವನ್ನೂ ಕೇಳಬಲ್ಲವನೂ ಆದನು.

ದೃಷ್ಟ್ವಾ ಸುಮಹದಾಶ್ಚರ್ಯಂ ಮಣಿಭದ್ರೇಣ ಪಾರ್ವತಿ ।
ಕೃತಂ ನಾಮ ಸುಹೃಷ್ಟೇನ ಸ್ವೀಯಪುತ್ರಸ್ಯ ನಾಮತಃ ।
ಚಕ್ಷುಷ್ಮಾನ್ವಡಲೋ ಜಾತೋ ಲಿಂಗಸ್ಯಾಸ್ಯ ಪ್ರಭಾವತಃ ॥ ೪೬ ॥
ಅದ್ಯ ಪ್ರಭೃತಿ ದೇವೋಽಯಂ ವಡಲೇಶ್ವರಸಂಜ್ಞಕಃ ।
ಭವಿಷ್ಯತಿ ತ್ರಿಲೋಕೇಷು ವಿಖ್ಯಾತೋ ನೇತ್ರದಾಯಕಃ ॥ ೪೭ ॥
ಪೂಜಯಿಷ್ಯಂತಿ ಯೇ ದೇವಂ ವಡಲೇಶ್ವರಸಂಜ್ಞಕಂ ।
ಲಿಂಗಂ ಲೋಕೇಷು ವಿಖ್ಯಾತಂ ತೇ ಪ್ರಾಪ್ಸ್ಯಂತಿ ಮನೋರಥಂ ॥ ೪೮ ॥
ದೃಷ್ಟೋ ಹರತಿ ಪಾಪಾನಿ ಸ್ಪೃಷ್ಟೋ ರಾಜ್ಯಂ ಪ್ರಯಚ್ಛತಿ ।
ಅರ್ಚಿತೋ ಭಕ್ತಿಭಾವೇನ ಮೋಕ್ಷಂ ದದ್ಯಾನ್ನ ಸಂಶಯಃ ॥ ೪೯ ॥
ಕಾರ್ತಿಕೇ ಶುಕ್ಲಪಕ್ಷಸ್ಯ ತಿಥಿರ್ಯಾ ದ್ವಾದಶೀ ಭವೇತ್ ।
ತಸ್ಯಾಂ ಯೇ ಪೂಜಯಿಷ್ಯಂತಿ ವಡಲೇಶ್ವರಸಂಜ್ಞಕಂ ।
ದಾನಂ ತೈಃ ಸತತಂ ದತ್ತಂ ತೇ ಯಾಂತಿ ಪರಮಂ ಪದಂ ॥ ೫೦ ॥
ಪ್ರಯಾಗೇ ಚ ಪ್ರಭಾಸೇ ಚ ಗಂಗಾಸಾಗರಸಂಗಮೇ ।
ತಪಸ್ತಪ್ತಂ ಭವೇತ್ತೈಸ್ತು ತೇ ಮುಕ್ತಾ ನಾತ್ರ ಸಂಶಯಃ ॥ ೫೧ ॥

---

೪೬. ಎಲೈ ಪಾರ್ವತಿಯೆ! ಈ ಮಹಾಶ್ಚರ್ಯವನ್ನು ಕಂಡು ಮಣಿಭದ್ರನು ಆ ಲಿಂಗಕ್ಕೆ ತನ್ನ ಮಗನ ಹೆಸರನ್ನಿಟ್ಟು ಆನಂದಗೊಂಡನು. ಈ ಲಿಂಗದ ಪ್ರಭಾವದಿಂದ ವಡಲನು ನೇತ್ರಗಳುಳ್ಳವನಾದನು.

೪೭. "ಇಂದು ಮೊದಲಾಗಿ ಈ ಮಹಾದೇವನು ವಡಲೇಶ್ವರನೆಂಬ ಹೆಸರುಳ್ಳವನಾಗುವನು. ಮೂರು ಲೋಕಗಳಲ್ಲಿಯೂ ನೇತ್ರದಾಯಕನೆಂದು ಪ್ರಸಿದ್ಧಿಯನ್ನು ಪಡೆಯುವನು.

೪೮. ಈ ವಡಲೇಶ್ವರನಾಮಕನಾದ ಮಹಾದೇವನ ತ್ರಿಲೋಕವಿಖ್ಯಾತವಾದ ಈ ಮಹಾಲಿಂಗವನ್ನು ಯಾರು ಪೂಜಿಸುವರೊ, ಅವರು ತಮ್ಮ ಮನೋರಥಗಳನ್ನು ಪಡೆಯುವರು.

೪೯. ಈ ಲಿಂಗವನ್ನು ನೋಡಲು ಸಕಲ ಪಾತಕಗಳನ್ನೂ ಪರಿಹರಿಸುವುದು. ಮುಟ್ಟಲು ರಾಜ್ಯಾಧಿಕಾರವನ್ನು ಕೊಡುವುದು. ಭಕ್ತಿಭಾವದಿಂದ ಪೂಜಿಸಲು ಮೋಕ್ಷವನ್ನೇ ಕೊಡುವುದರಲ್ಲಿ ಸಂದೇಹವಿಲ್ಲವು.

೫೦. ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶಿಯ ದಿನದಲ್ಲಿ ಯಾರು ಈ ವಡಲೇಶ್ವರಮಹಾಲಿಂಗವನ್ನು ಪೂಜಿಸುತ್ತಾರೆಯೊ, ಅವರು ನಿತ್ಯವೂ ದಾನಗಳನ್ನು ಮಾಡಿದವರಂತಾಗಿ ಪರಮಪದವನ್ನು ಪಡೆಯುವರು.

೫೧. ಅವರು ಪ್ರಯಾಗ, ಪ್ರಭಾಸ, ಗಂಗಾಸಾಗರಸಂಗಮಕ್ಷೇತ್ರಗಳಲ್ಲಿ

ಗರ್ಭವಾಸೇ ನ ಜಾಯಂತೇ ಸರ್ವಸೌಖ್ಯಸಮನ್ವಿತಾಃ ।
ಗಾಣಪತ್ಯಾ ಭವಿಷ್ಯಂತಿ ಶಂಕರಸ್ಯ ಸದಾ ಪ್ರಿಯಾಃ ॥ ೫೨ ॥
ಸೌಭಾಗ್ಯರೂಪಸಂಪನ್ನಾಃ ಪುತ್ರಪೌತ್ರೈಶ್ಚ ಸಂಯುತಾಃ ।
ಜಾಯಂತೇ ಮಾನವಾ ಲೋಕೇ ವಡಲೇಶ್ವರದರ್ಶನಾತ್ ॥ ೫೩ ॥
ಗರ್ಭವಾಸೇ ಮಹಾಕಷ್ಟೇ ಯಸ್ಯ ವಾಸೋ ನ ರೋಚತೇ ।
ಸೋಽಭ್ಯರ್ಚಯತು ಭಾವೇನ ವಡಲೇಶ್ವರಮೀಶ್ವರಂ ॥ ೫೪ ॥
ನ ಲಿಂಗಂ ವಿನಾ ಸಿದ್ಧಿರ್ದುರ್ಲಭಂ ಪರಮಂ ಪದಂ ।
ಗತಿರ್ನಜಾಯತೇ ಸ್ವರ್ಗೇ ಯಾವಲ್ಲಿಂಗಂ ತು ನಾರ್ಚಯೇತ್ ॥ ೫೫ ॥
ಲಿಂಗಾರ್ಚನವಿಹೀನಾನಾಂ ಸಿದ್ಧಿಶ್ಚಾಽಪಿ ಸುದುರ್ಲಭಾ ।
ಮಮ ಪುತ್ರೇಣ ಸಂಪ್ರಾಪ್ತಮೀಪ್ಸಿತಂ ಲಿಂಗತೋ ಯತಃ ॥ ೫೬ ॥
ಇತ್ಯುಕ್ತ್ವಾ ಮಣಿಭದ್ರೋಽಪಿ ಸುತೇನ ಸಹಿತೋ ಯಯೌ ।
ಯತ್ರ ದೇವೋ ಧನಾಧ್ಯಕ್ಷಃ ಸ್ಥಾನಂ ಸ್ವಂ ಪರಮಂ ಗತಃ ॥ ೫೭ ॥

---

ತಪಸ್ಸನ್ನು ಮಾಡಿದ ಫಲಕ್ಕೆ ಭಾಗಿಗಳಾಗುವರು. ಅವರು ಮುಕ್ತರೇ ಆಗುವ ರೆನ್ನುವುದರಲ್ಲಿ ಸಂದೇಹವಿಲ್ಲವು.

೫೨. ಅವರು ಪುನಃ ತಾಯಿಯ ಗರ್ಭವನ್ನು ಪ್ರವೇಶಿಸುವುದಿಲ್ಲ. ಸಕಲ ಸೌಖ್ಯಗಳಿಂದಲೂ ಕೂಡಿದವರಾಗಿ ಮಹಾದೇವನಿಗೆ ನಿತ್ಯವೂ ಬೇಕಾದವರೆನಿಸಿ ಗಣನಾಯಕರಾಗುವರು.

೫೩. ಭೂಲೋಕದಲ್ಲಿ ಮನುಷ್ಯರೂ ವಡಲೇಶ್ವರನ ದರ್ಶನವನ್ನು ಪಡೆಯುವುದರಿಂದ ಸರ್ವೈಶ್ವರ್ಯಸೌಂದರ್ಯಸಮನ್ವಿತರಾಗಿ ಪುತ್ರಪೌತ್ರಾದಿ ಸಂತತಿಯಿಂದ ಕೂಡಿರುವರು.

೫೪. ಯಾವನಿಗೆ ಮಹಾಕಷ್ಟದಾಯಕವಾದ ಗರ್ಭವಾಸವು ರುಚಿಸುವುದಿಲ್ಲವೊ, ಅವನು ಭಕ್ತಿಯುಕ್ತನಾಗಿ ವಡಲೇಶ್ವರಮಹಾಲಿಂಗವನ್ನು ಪೂಜಿಸಲಿ.

೫೫. ಲಿಂಗಪೂಜೆಯಿಲ್ಲದೆ ಕಾರ್ಯಸಿದ್ಧಿಯಾಗುವುದಿಲ್ಲ. ಪರಮಪದವೂ ಲಭಿಸಲಾರದು. ಲಿಂಗವನ್ನು ಪೂಜಿಸುವವರೆಗೂ ಸ್ವರ್ಗದಲ್ಲಿಯೂ ಉತ್ತಮ ಗತಿಯು ಸಿಕ್ಕಲಾರದು.

೫೬. ಲಿಂಗಾರ್ಚನೆಯನ್ನು ಮಾಡದವರಿಗೆ ಸಿದ್ಧಿಯೂ ಅತಿ ದುರ್ಲಭವಾಗುವುದು. ನನ್ನ ಮಗನೂ ಲಿಂಗಾರ್ಚನೆಯಿಂದಲೇ ತನ್ನ ಮನೋಭೀಷ್ಟವನ್ನು ಪಡೆದನು.''

೫೭. ಇಂತೆಂದು ಮಣಿಭದ್ರನು ತನ್ನ ಮಗನೊಡಗೂಡಿ ಮತ್ತೆ ಕುಬೇರನ ಲೋಕಕ್ಕೆ ಹೋದನು. ಅಲ್ಲದೆ ಆತನು ಮತ್ತೆ ತನ್ನ ಉತ್ತಮಸ್ಥಾನವನ್ನು ಪಡೆದನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ವಡಲೇಶ್ವರದೇವಸ್ಯ ಶ್ರೂಯತಾಮರುಣೇಶ್ವರಂ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ವಡಲೇಶ್ವರಮಹಾತ್ಮ್ಯವರ್ಣನಂ" ನಾಮ
ಪಂಚಸಪ್ತತಿತಮೋಽಧ್ಯಾಯಃ

---

೫೮. ದೇವಿಯೆ! ಇಂತು ನಿನಗೆ ವಡಲೇಶ್ವರಮಹಾಲಿಂಗದ ಪ್ರಭಾವ-ದ್ಯೋತಕವೂ, ಪಾಪನಾಶಕವೂ ಆದ ಕಥೆಯನ್ನು ಹೇಳಿದೆನು. ಇನ್ನು ಅರುಣೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ-
ಮಾಹಾತ್ಮ್ಯದಲ್ಲಿ "ವಡಲೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಸಪ್ತತಿತಮೋಽಧ್ಯಾಯಃ

## ಅರುಣೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಷಟ್‌ಸಪ್ತತಿತಮಂ ದೇಸಮರುಣೇಶ್ವರಸಂಜ್ಞಕಂ ।
ವಿದ್ಧಿ ಪಾಪಹರಂ ದೇವಿ ದರ್ಶನಾತ್ಕಾಮದಂ ನೃಣಾಂ ॥ ೧ ॥
ಪುರಾ ದೇವಯುಗೇ ದೇವಿ ಪ್ರಜಾಪತಿಸುತೇ ಶುಭೇ ।
ಆಸ್ತಾಂ ಭಗಿನ್ಯೌ ರೂಪೇಣ ಸಹಿತೇಽದ್ಭುತೇಽನಘೇ ॥ ೨ ॥
ತೇ ಭಾರ್ಯೇ ಕಶ್ಯಪಸ್ಯಾಸ್ತಾಂ ಕದ್ರೂಶ್ಚ ವಿನತಾ ತಥಾ ।
ಪ್ರಾದಾತ್ತಾಭ್ಯಾಂ ವರಂ ಪ್ರೀತಃ ಪ್ರಜಾಪತಿಸಮಃ ಪತಿಃ ॥ ೩ ॥
ಕಶ್ಯಪೋ ಧರ್ಮಪತ್ನೀಭ್ಯಾಂ ಮುದಾ ಪರಮಯಾ ಯುತಃ ।
ವರಾತಿಸರ್ಗಂ ಶ್ರುತ್ವೈವ ಕಶ್ಯಪಾದುತ್ತಮಂ ತು ತೇ ॥ ೪ ॥
ಹರ್ಷಾದಭ್ಯಧಿಕಾಂ ಪ್ರೀತಿಂ ಪ್ರಾಪತುಃ ಸ್ಮ ವರಸ್ತ್ರಿಯೌ ।
ವವ್ರೇ ಕದ್ರೂಃ ಸುತಾನ್ನಾಗಾನ್ ಸಹಸ್ರಂ ತುಲ್ಯವರ್ಚಸಃ ॥ ೫ ॥

---

## ಕನ್ನಡದ ಅನುವಾದ

### ಅರುಣೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:— ಎಲೌ ಗಿರಿಜಾತೆಯೆ! ಎಪ್ಪತ್ತಾರನೆಯ ಮಹಾದೈವವೇ ದರ್ಶನದಿಂದ ನರರಿಗೆ ಸರ್ವಾಭೀಷ್ಟಗಳನ್ನು ಅನುಗ್ರಹಿಸುವುದೂ, ಪಾಪನಾಶಕವೂ ಆದ ಅರುಣೇಶ್ವರನೆಂದು ತಿಳಿ.

೨. ದೇವಿಯೆ! ಹಿಂದೆ ಕೃತಯುಗದಾದಿಯಲ್ಲಿ ಬ್ರಹ್ಮದೇವನ ಮಕ್ಕಳೂ, ರೂಪಸಂಪನ್ನರೂ, ಅದ್ಭುತಚರಿತ್ರರೂ, ನಿಷ್ಪಾಪರೂ ಆದ ಇಬ್ಬರು ಅಕ್ಕತಂಗಿಯರಿದ್ದರು.

೩. ಕದ್ರೂ ಮತ್ತು ವಿನತೆಯೆಂಬ ಹೆಸರುಗಳುಳ್ಳ ಅವರು ಕಶ್ಯಪನಿಗೆ ಪತ್ನಿಯರಾದರು. ಆ ಧರ್ಮಪತ್ನಿಯರ ನಡೆನುಡಿಗಳಿಂದ ಪರಮಸಂತುಷ್ಟನೂ, ಪ್ರಜಾಪತಿಸದೃಶನೂ ಆದ ಕಶ್ಯಪನು ಇಬ್ಬರಿಗೂ ಒಂದೊಂದು ವರವನ್ನು ಬೇಡುವಂತೆ ಹೇಳಿದನು.

೪. ಅವರು ಕಶ್ಯಪನಿತ್ತ ಉತ್ತಮವರಗಳನ್ನು ಪಡೆಯುವೆವೆಂಬ ಸಂಗತಿಯನ್ನು ಕೇಳಿ ಸಂತೋಷವನ್ನೂ ಪ್ರೀತಿಯನ್ನೂ ಹೊಂದಿದ್ದರು.

೫. ಕದ್ರೂದೇವಿಯು ಸಮಾನಬಲರಾದ ಒಂದುಸಾವಿರ ನಾಗರು ಮಕ್ಕಳಾಗಬೇಕೆಂದು ಬೇಡಿದಳು. ವಿನತೆಯು ಕದ್ರುವಿನ ಮಕ್ಕಳಿಗಿಂತಲೂ ಅಧಿಕ ಬಲಶಾಲಿಗಳಾದ ಇಬ್ಬರು ಪುತ್ರರನ್ನು ಕೇಳಿಕೊಂಡಳು.

ದ್ವೌ ಪುತ್ರೌ ವಿನತಾ ವವ್ರೇ ಕದ್ರೂಪುತ್ರಾಧಿಕೌ ಬಲೇ ।
ಓಜಸಾ ತೇಜಸಾ ಚೈವ ವಿಕ್ರಮೇಣಾಧಿಕೌ ಚ ತೌ ।
ತಸ್ಯೈ ಭರ್ತಾ ವರಂ ಪ್ರಾದಾಲ್ಲಪ್ಸ್ಯಸೇ ಪುತ್ರಕೋತ್ತಮೌ ॥ ೬ ॥
ಏವಮಸ್ತ್ವಿತಿ ತಾಂ ಚಾಽಽಹ ಕಶ್ಯಪೋ ವಿನತಾಂ ತದಾ ।
ಯಥಾ ಚ ಪ್ರಾರ್ಥಿತಂ ಲಬ್ಧ್ವಾ ವರಂ ತುಷ್ಟಾಽಭವತ್ತದಾ ॥ ೭ ॥
ಕೃತಕೃತ್ಯಾ ತು ವಿನತಾ ಲಬ್ಧ್ವಾ ವೀರ್ಯಾಧಿಕೌ ಸುತೌ ।
ಕದ್ರೂಶ್ಚ ಲಬ್ಧ್ವಾ ಪುತ್ರಾಣಾಂ ಸಹಸ್ರಂ ತುಲ್ಯತೇಜಸಾಂ ॥ ೮ ॥
ಧಾರ್ಯೌ ಗರ್ಭೌ ಪ್ರಯತ್ನೇನ ಇತ್ಯುಕ್ತ್ವಾ ಸ ಮಹಾತಪಾಃ ।
ತೇ ಭಾರ್ಯೇ ವರಸಂಪ್ರಹೃಷ್ಟೇ ಕಶ್ಯಪೋ ವನಮಾವಿಶತ್ ॥ ೯ ॥
ಕಾಲೇನ ಮಹತಾ ಕದ್ರೂರ್ನಾಗಾನಾಂ ಸಾ ಶತೀರ್ದಶ ।
ಜನಯಾಮಾಸ ಚಾರ್ವಂಗೀ ದ್ವೇ ಚಾಂಡೇ ವಿನತಾ ತದಾ ॥ ೧೦ ॥
ತಯೋರಂಡಾನಿ ನಿದಧುಃ ಪ್ರಹೃಷ್ಟಾಃ ಪರಿಚಾರಿಕಾಃ ।
ಸೋಪಸ್ವೇದೇಷು ಭಾಂಡೇಷು ಪಂಚವರ್ಷಶತಾನಿ ಚ ॥ ೧೧ ॥
ತತಃ ಪಂಚಶತೇ ಕಾಲೇ ಕದ್ರೂಪುತ್ರಾ ವಿನಿರ್ಗತಾಃ ।
ಅಂಡಾಭ್ಯಾಂ ವಿನತಾಯಾಸ್ತು ಮಿಥುನಂ ನ ವ್ಯದೃಶ್ಯತ ॥ ೧೨ ॥

---

೬. ವೀರ್ಯದಿಂದಲೂ, ತೇಜಸ್ಸಿನಿಂದಲೂ, ಪರಾಕ್ರಮದಿಂದಲೂ ಅತ್ಯಧಿಕರಾದ ಪುತ್ರರನ್ನು ಬೇಡಿದ ಆಕೆಗೆ ಕಶ್ಯಪನು, "ನಿನಗೆ ಬೇಕಾದಂತಹ ಉತ್ತಮಪುತ್ರರನ್ನೇ ಪಡೆಯುವೆ" ಎಂದು ವರವನ್ನಿತ್ತನು.

೭. ವಿನತೆಯು ಪ್ರಾರ್ಥಿಸಿದಾಗಲೂ ಹಾಗೆಯೇ ಆಗಲೆಂದು ಕಶ್ಯಪನು ಹೇಳಲು ತನ್ನ ಅಭೀಷ್ಟವನ್ನು ಪಡೆದ ಆಕೆಯೂ ಸಂತುಷ್ಟಳಾದಳು.

೮. ಇಂತು ವಿನತೆಯು ಮಹಾ ಪರಾಕ್ರಮಿಗಳಾದ ಇಬ್ಬರು ಮಕ್ಕಳನ್ನೂ, ಕದ್ರುವು ಒಂದುಸಾವಿರ ನಾಗರನ್ನೂ ಪಡೆದು ಕೃತಕೃತ್ಯರಾದರು.

೯. ವರಗಳಿಂದ ಆನಂದಿತರಾದ ಅವರಿಗೆ ಮಹಾತಪಸ್ಸಂಪನ್ನನಾದ ಕಶ್ಯಪನು, "ಜಾಗರೂಕತೆಯಿಂದ ನಿಮ್ಮ ಗರ್ಭಗಳನ್ನು ಕಾಪಾಡಿಕೊಳ್ಳಿರಿ" ಎಂದು ಹೇಳಿ ಅರಣ್ಯಕ್ಕೆ ಹೊರಟುಹೋದನು.

೧೦–೧೧. ಬಳಿಕ ಕೆಲವು ಕಾಲವು ಕಳೆಯಲು ಸುಂದರಿಯಾದ ಕದ್ರುವು ಒಂದುಸಾವಿರ ನಾಗರನ್ನು ಹಡೆದಳು. ವಿನತೆಯು ಎರಡು ಅಂಡಗಳನ್ನು ಪ್ರಸವಿಸಿದಳು. ಅವರ ದಾಸೀಜನರು ಆನಂದತುಂದಿಲರಾಗಿ ಇಬ್ಬರೂ ಪ್ರಸವಿಸಿದ ಅಂಡಗಳನ್ನೂ ಸುಖೋಷ್ಣಗಳಾದ ಭಾಂಡಗಳಲ್ಲಿರಿಸಿ ಐದುನೂರು ವರ್ಷಗಳ ವರೆಗೂ ಸಂರಕ್ಷಿಸುತ್ತಿದ್ದರು.

೧೨. ಆ ಐದುನೂರು ವರ್ಷಗಳು ಕಳೆದಮೇಲೆ ಕದ್ರುವಿನ ಮಕ್ಕಳು

ತತಃ ಪುತ್ರಾರ್ಥಿನೀ ದೇವೀ ವ್ರೀಡಿತಾ ಸಾ ತಪಸ್ವಿನೀ ।
ಅಂಡಂ ಬಿಭೇದ ವಿನತಾ ತತ್ರ ಪುತ್ರಂ ದದರ್ಶ ಹ ॥ ೧೩ ॥
ಪೂರ್ವಾರ್ಧಕಾಯಸಂಪನ್ನಮಿತರೇಣಾಪ್ರಕಾಶಿತಂ ।
ಸ ಪುತ್ರೋ ರೋಷಸಂರಬ್ಧಃ ಶಶಾಪೈನಾಮಿತಿ ಶ್ರುತಂ ॥ ೧೪ ॥
ಯೋಽಹಮೇವಂ ಕೃತೋ ಮಾತಸ್ತ್ವಯಾ ಲೋಭಪರೀತಯಾ ।
ಶರೀರೇಣಾಽಸಮಗ್ರೇಣ ತಸ್ಮಾದ್ದಾಸೀ ಭವಿಷ್ಯಸಿ ॥ ೧೫ ॥
ಪಂಚವರ್ಷಶತಾನ್ಯಸ್ಯಾ ಯಯಾ ವಿಸ್ಪರ್ಧಸೇ ಸದಾ ।
ಏಷ ತೇ ಚ ಸುತೋ ಮಾತರ್ದಾಸ್ಯಾದ್ವೈ ಮೋಕ್ಷಯಿಷ್ಯತಿ ॥ ೧೬ ॥
ಯದ್ಯೇನಮಪಿ ಮಾತಸ್ತ್ವಂ ಮಾಮಿವಾಂಡವಿಭೇದನಾತ್ ।
ನ ಕರಿಷ್ಯಸ್ಯನಂಗಂ ವಾ ಪುತ್ರಂ ಚಾಽತಿತರಸ್ವಿನಂ ॥ ೧೭ ॥
ಪ್ರತಿಪಾಲಯಿತವ್ಯಸ್ತೇ ಜನ್ಮಕಾಲೋಽಸ್ಯ ಧೀರಯಾ ।
ವಿಶಿಷ್ಟಬಲಮಿಪ್ಸಂತ್ಯಾ ಪಂಚವರ್ಷಶತಾನ್ಯತಃ ॥ ೧೮ ॥

---

ಅಂಡಗಳಿಂದ ಹೊರಬಿದ್ದರು. ಆದರೆ ವಿನತೆಯ ಎರಡು ಅಂಡಗಳಿಂದ ಏನೂ ಉದ್ಭವಿಸಲಿಲ್ಲ.

೧೩. ಆಗ ಪುತ್ರಲಾಲಸೆಯಿಂದ ಕೂಡಿ ತಪೋನಿರತಳಾಗಿದ್ದ ವಿನತಾದೇವಿಯು ಕದ್ರುವಿನ ಸಂತತಿಯನ್ನು ಕಂಡು ನಾಚಿಕೆಗೊಂಡು ಒಂದು ಅಂಡವನ್ನು ಒಡೆದು ಒಳಗಿದ್ದ ಪುತ್ರನನ್ನು ನೋಡಿದಳು.

೧೪. ಆತನ ಮೇಲಿನ ಅಂಗಗಳೆಲ್ಲವೂ ರೂಪುಗೊಂಡಿದ್ದುವು. ಕಾಲುಗಳು ಮಾತ್ರ ಇರಲಿಲ್ಲ. ಆ ಪುತ್ರನು ಕ್ರೋಧಮೂರ್ಛಿತನಾಗಿ ತಾಯಿಯನ್ನು ಶಪಿಸಿದನೆಂದು ಕೇಳಿದೆನು.

೧೫. "ತಾಯೆ! ಪುತ್ರಲೋಭದಿಂದ ಪ್ರೇರಿತಳಾಗಿ ಇಂತು ನೀನು ನನ್ನನ್ನು ಅರ್ಧಶರೀರದವನನ್ನಾಗಿ ಮಾಡಿದೆಯಾದುದರಿಂದ ದಾಸಿಯಾಗಿ ಬಾಳುವೆ.

೧೬. ಯಾವ ಸವತಿಯೊಡನೆ ನಿತ್ಯವೂ ಕಲಹಿಸುತ್ತಿರುವೆಯೊ, ಅವಳಲ್ಲಿಯೇ ಐದುನೂರು ವರ್ಷಗಳಕಾಲ ದಾಸ್ಯವನ್ನನುಭವಿಸುವೆ. ಈ ನಿನ್ನ ಇನ್ನೊಬ್ಬ ಮಗನೇ ನಿನ್ನನ್ನು ದಾಸ್ಯದಿಂದ ಬಿಡಿಸುವನು.

೧೭. ಆದರೆ ನೀನು ನನಗೆ ಮಾಡಿದಂತೆ ಅಂಡವನ್ನೊಡೆಯದೆ ಮಹಾ ಪರಾಕ್ರಮಿಯಾದ ಇವನು ಅಂಗಹೀನನಾಗದಂತೆ ಕಾಪಾಡಬೇಕು.

೧೮. ಈತನು ಸರ್ವಬಲಸಂಪನ್ನನಾಗಬೇಕೆಂಬ ಬಯಕೆಯು ನಿನಗೆ ಇದ್ದರೆ ಇನ್ನು ಐದುನೂರು ವರ್ಷಗಳವರೆಗೂ ಧೈರ್ಯದಿಂದ ಈತನ ಜನ್ಮಕಾಲವನ್ನು ನಿರೀಕ್ಷಿಸುತ್ತಿರು."

ಏವಂ ಶಪ್ತ್ವಾ ತತೋ ದೇವಿ ವಿನತಾಂ ಮಾತರಂ ಸ್ವಕಂ ।
ಅರುಣೋ ವಿಲಲಾಪಾಽಥ ಬಾಷ್ಪಶೋಕಪರಿಪ್ಲುತಃ ॥ ೧೯ ॥
ಹಾಹಾ ಮಯಾ ನೃಶಂಸೇನ ಮಾತಾ ಸ್ವಜನನೀ ಸ್ವಕಾ ।
ಶಪ್ತಾ ವಿನಾಽಪರಾಧೇನ ಕಥಂ ಯಾಸ್ಯಾಮಿ ಸದ್ಗತಿಂ ।
ಮಾತಾ ದೇಹಾರಣಿಃ ಪುಂಸಾಂ ಮಾತಾ ದುಃಖಸಹಾ ಪರಾ ॥ ೨೦ ॥
ಗರ್ಭಕ್ಲೇಶೇ ಪರಂ ದುಃಖಂ ಮಾತಾ ಜಾನಾತಿ ಯಾದೃಶಂ ।
ವಾತ್ಸಲ್ಯಂ ಚಾಧಿಕಂ ಮಾತುರ್ದೃಶ್ಯತೇ ನ ತು ಪೈತೃಕಂ ॥ ೨೧ ॥
ಗುರೂಣಾಮೇವ ಸರ್ವೇಷಾಂ ಮಾತಾ ಗುರುತರಾ ಸ್ಮೃತಾ ।
ಏಕಸ್ಯಾಽಪಿ ಸುತಸ್ಯೈವ ನ ದೃಷ್ಟಾ ನಿಷ್ಕೃತಿಃ ಶ್ರುತೌ ॥ ೨೨ ॥
ಯದಿ ಪಿಂಡಪ್ರದಾನಂ ತು ಗಯಾಯಾಂ ಕುರುತೇ ಸುತಃ ।
ಗತೇ ಪಿತರಿ ಪಂಚತ್ವಂ ಮಾತಾ ಪುತ್ರಸ್ಯ ನಿರ್ವೃತಿಃ ।
ನ ಚ ಮಾತೃವಿಹೀನಸ್ಯ ಮಮತ್ವಂ ಕುರುತೇ ಪಿತಾ ॥ ೨೩ ॥

---

೧೯. ಎಲೌ ಪಾರ್ವತಿಯೆ! ಇಂತು ಅರುಣನು ತಾಯಿಯಾದ ವಿನತೆಗೇ ಶಾಪವನ್ನಿತ್ತು ಕಣ್ಣೀರಿನಿಂದ ಶೋಕಪೂರಿತನಾಗಿ ಬಹುವಾಗಿ ಪ್ರಲಾಪವನ್ನು ಮಾಡಿದನು.

೨೦. "ಅಯ್ಯೊ! ನೀಚನಾದ ನಾನು ಹಡೆದ ತಾಯಿಯನ್ನೇ ಶಾಪಕ್ಕೀಡು ಮಾಡಿದೆನಲ್ಲ! ಆಕೆಯಲ್ಲಿ ಯಾವ ಅಪರಾಧವೂ ಇರಲಿಲ್ಲ. ಇನ್ನು ನನಗೆ ಸದ್ಗತಿಯು ಲಭಿಸುವುದು ಹೇಗೆ? ಪ್ರಾಣಿಗಳ ದೇಹಗಳಗೆ ತಾಯಿಯೇ ಅರಣಿಯು ಉತ್ಪತ್ತಿಸ್ಥಾನಭೂತಳು. ಬಹುಕ್ಲೇಶಗಳನ್ನು ಸಹಿಸುವ. ಉತ್ತಮಳೂ ಆಕೆಯೇ.

೨೧. ಗರ್ಭಧಾರಣದಲ್ಲಿಯೂ, ಪ್ರಸವದಲ್ಲಿಯೂ ತಾಯಿಯು ಯಾವ ದುಃಖವನ್ನನುಭವಿಸುವಳೊ, ಮಗುವಿನಲ್ಲಿ ಯಾವ ವಾತ್ಸಲ್ಯವನ್ನಿಟ್ಟಿರುವಳೊ, ಅದನ್ನು ತಂದೆಯಲ್ಲಿಯೂ ನಾವು ಕಾಣಲಾರೆವು.

೨೨. ಪೂಜ್ಯವಸ್ತುಗಳಲ್ಲೆಲ್ಲ ತಾಯಿಯೇ ಪರಮಪೂಜ್ಯಳೆಂದು ಸ್ಮೃತಿಗಳು ಹೇಳುತ್ತಿರುವುವು. ಯಾವ ಮಗನಿಗೂ ತಾಯಿಯ ಋಣದಿಂದ ಮುಕ್ತಿಯನ್ನು ಶೃತಿಗಳು ಹೇಳಿರುವುದಿಲ್ಲ.

೨೩. ತಂದೆಯು ಸಾಯಲು ಮಗನು ಗಯಾಕ್ಷೇತ್ರದಲ್ಲಿ ಪಿಂಡಪ್ರದಾನ ವನ್ನು ಮಾಡಿದರೆ ತಂದೆಯ ಋಣದಿಂದ ಮುಕ್ತನಾಗುವನು. ಅವನಿಗೆ ತಾಯಿಯು ಸೌಖ್ಯದಾಯಕಳಾಗಿರುವಳು. ತಾಯಿಯಿಲ್ಲದವನಲ್ಲಿ ತಂದೆಯೂ ಅಭಿಮಾನವನ್ನಿಡುವುದಿಲ್ಲ.

ವಿಕಲೋ ಮಾತೃಹೀನಸ್ತು ಪುತ್ರೋ ಹಿ ಪ್ರೋಚ್ಯತೇ ತದಾ ।
ಯದಾ ಸ ವೃದ್ಧೋ ಭವತಿ ತದಾ ಭವತಿ ದುಃಖಿತಃ ।
ತದಾ ಶೂನ್ಯಂ ಜಗತ್ಸರ್ವಂ ಯದಾ ಮಾತಾ ವಿಯುಜ್ಯತೇ ॥ ೨೪ ॥
ಸೋಽಹಂ ಪಾಪಸಮಾಚಾರೋ ಜಾತೋ ಮಾತೃವಿಹಿಂಸಕಃ ।
ಮರಿಷ್ಯಾಮಿ ನ ಸಂದೇಹಃ ಸಾಧಯಿತ್ವಾ ಹುತಾಶಸಂ ॥ ೨೫ ॥
ಜಾತೋಽಹಂ ವಿಕಲಾಂಗಸ್ತು ಪ್ರಾಕ್ಕೃತೇನೈವ ಕರ್ಮಣಾ ।
ನ ಮಾತಾ ಕಾರಣಂ ಯಸ್ಮಾತ್ ಸ್ವಕೀಯಂ ಕರ್ಮ ಭುಜ್ಯತೇ ॥ ೨೬ ॥
ಏವಂ ವಿಲಪತಸ್ತಸ್ಯ ಕಶ್ಯಪಸ್ಯ ಸುತಸ್ಯ ಚ ।
ಅರುಣಸ್ಯ ವಿಶಾಲಾಕ್ಷಿ ನಾರದಃ ಸಮುಪಾಗತಃ ॥ ೨೭ ॥
ದೃಷ್ಟ್ವಾಽರುಣಂ ಸುದುಃಖಾರ್ತಂ ವಿಲಪಂತಂ ಪುನಃ ಪುನಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ನಾರದಃ ಪ್ರಹಸನ್ನಿವ ॥ ೨೮ ॥
ಅರುಣೋಽಯಮಹೋ ರೌತಿ ಕಶ್ಯಪಸ್ಯಾತ್ಮಸಂಭವಃ ।
ವಿನತಾಯಾಃ ಸುತೋ ಜ್ಯೇಷ್ಠಃ ಸಂಭೂತಸ್ತಪಸಾಂನಿಧಿಃ ॥ ೨೯ ॥

---

೨೪. ತಾಯಿಯಿಲ್ಲದವನು ವಿಕಲನಾದ ಪುತ್ರನೆಂದು ಕರೆಯಲ್ಪಡುವನು. ಅವನು ವೃದ್ಧನಾದಾಗ ದುಃಖಗಳನ್ನನುಭವಿಸುವನು. ಪ್ರತಿಯೊಬ್ಬನಿಗೂ ತಾಯಿಯನ್ನು ಕಳೆದುಕೊಂಡಾಗ ಪ್ರಪಂಚವೇ ಶೂನ್ಯವಾಗಿ ತೋರುತ್ತಿರುವುದು.

೨೫. ಅಂತಹ ತಾಯಿಯನ್ನು ನೋಯಿಸಿದ ನಾನು ಪರಮಪಾತಕಿಯಾದೆನು. ಈಗ ದೊಡ್ಡ ಬೆಂಕಿಯನ್ನು ಹೊತ್ತಿಸಿ ಅದರಲ್ಲಿ ಬಿದ್ದು ಸಾಯುವೆನು. ಇದೇ ನನಗೆ ಶ್ರೇಯಸ್ಕರವು. ಇದರಲ್ಲಿ ನನಗೆ ಯಾವ ಸಂಕೋಚವೂ ಇರುವುದಿಲ್ಲ.

೨೬. ನನ್ನ ಪೂರ್ವಾರ್ಜಿತಕರ್ಮದ ಫಲವಾಗಿಯೇ ನಾನು ಅಂಗಹೀನನಾಗಿ ಜನಿಸಿದೆನು. ಇದಕ್ಕೆ ನನ್ನ ತಾಯಿಯು ಕಾರಣಳಲ್ಲ. ಪ್ರತಿಯೊಂದು ಪ್ರಾಣಿಯೂ ತಾನು ಮಾಡಿದ ಕರ್ಮದ ಫಲವನ್ನೇ ಅನುಭವಿಸುವುದಷ್ಟೆ."

೨೭. ವಿಶಾಲಾಕ್ಷಿಯೆ! ಇಂತು ಪ್ರಲಾಪವನ್ನು ಮಾಡುತ್ತಿರುವ ಕಶ್ಯಪನ ಮಗನಾದ ಆ ಅರುಣನಿದ್ದೆಡೆಗೆ ನಾರದಮಹರ್ಷಿಯು ಯಾದೃಚ್ಛಿಕವಾಗಿ ಪ್ರಾಪ್ತನಾದನು.

೨೮. ಅರುಣನು ಮತ್ತೆ ಮತ್ತೆ ದುಃಖದಿಂದ ಅಳುತ್ತಿರುವುದನ್ನು ಕಂಡು ಪ್ರಶಾಂತಮಾನಸನಾದ ಆತನು ಮುಗುಳ್ನಗೆಯಿಂದ ಅರುಣನಿಗಿಂತೆಂದನು.

೨೯. "ಆಶ್ಚರ್ಯವು! ಕಶ್ಯಪಬ್ರಹ್ಮನ ಪುತ್ರನೂ, ವಿನಿತಾದೇವಿಯ ಜ್ಯೇಷ್ಠಪುತ್ರನೂ, ತಪೋರಾಶಿಯೆನಿಸಿದವನೂ ಆದ ಅರುಣನು ರೋದನವನ್ನು ಮಾಡುತ್ತಿರುವನಲ್ಲ.

ಉತ್ಪಾದಿತೋಽಯಮಪಲ್ಪಾಽಹ್ಯೈರರ್ಧಕಾಯೋ ಮಹಾಬಲಃ ।
ವಿನಮಾಶ್ವಾಸಯಿಷ್ಯಾಮಿ ವಿನತಾಗರ್ಭಸಂಭವಂ ।
ಮೋಹೇನ ವಿಲಪಂತಂ ಚ ಶ್ರೇಯೋ ಮೇ ಭವಿತಾ ಧ್ರುವಂ ॥ ೩೦ ॥
ಇತಿ ಸಂಚಿಂತ್ಯ ಮನಸಿ ವಾಕ್ಯೈರ್ಮಧ್ವಮೃತೋಪಮೈಃ ।
ಪ್ರತ್ಯುವಾಚಾಽರುಣಂ ತತ್ರ ನಾರದೋ ದ್ವಿಜಸತ್ತಮಃ ॥ ೩೧ ॥
ತಾತ ಕಶ್ಯಪದಾಯಾದ ವಿನತಾಗರ್ಭಸಂಭವ ।
ತೇಜೋರಾಶೇ ದುರಾಧರ್ಷ ಸಂತಾಪಂ ಮಾಕೃಥಾ ವೃಥಾ ॥ ೩೨ ॥
ಭಾವಿನೋಽರ್ಥಾ ಭವಂತೀಹ ದುಃಖಸ್ಯ ಚ ಸುಖಸ್ಯ ಚ ।
ಯತ್ತ್ವಯಾ ವಿನತಾ ಶಪ್ತಾ ರಹಸ್ಯಂ ದೇವನಿರ್ಮಿತಂ ॥ ೩೩ ॥
ಯದಿ ತೇಽಸ್ತಿ ಘೃಣಾ ಚಿತ್ತೇ ಶಪ್ತಾತ್ಮಜನನೀ ತ್ವಯಾ ।
ತದಾಗಚ್ಛ ಮಯಾದೇಶಾನ್ಮಹಾಕಾಲವನಂ ಶುಭಂ ॥ ೩೪ ॥
ಉತ್ತರೇ ದೇವದೇವಸ್ಯ ಯಾತ್ರೇಶಸ್ಯ ಚ ಪುಣ್ಯದಂ ।
ವಿದ್ಯತೇ ತ್ರಿದಶೈಃ ಪೂಜ್ಯಂ ಸರ್ವದಾ ಸರ್ವದಂ ಶಿವಂ ॥ ೩೫ ॥

---

೩೦. ಮಹಾಪರಾಕ್ರಮಿಯಾದ ಈತನು ಪೂರ್ಣಕಾಲಕ್ಕೆ ಮೊದಲೇ ಹುಟ್ಟಿದುದರಿಂದ ಅರ್ಧಶರೀರನಾದನು. ವಿನತಾತನಯನೂ, ಮೋಹದಿಂದ ವಿಲಪಿಸುತ್ತಿರುವವನೂ ಆದ ಈತನನ್ನು ಸಮಾಧಾನಗೊಳಿಸಿದರೆ ನನಗೂ ಮುಂದೆ ಶ್ರೇಯಸ್ಸುಂಟಾಗುವುದು ನಿಜವು.''

೩೧. ಇಂತೆಂದು ಚಿಂತಿಸಿ ಮುನಿವರ್ಯನಾದ ನಾರದನು ಜೇನುತುಪ್ಪವನ್ನೂ, ಅಮೃತವನ್ನೂ ಹೋಲುವ ಮಾತುಗಳಿಂದ ಅರುಣನಿಗೆ ಹೇಳತೊಡಗಿದನು.

೩೨. "ಅಪ್ಪಾ! ಕಶ್ಯಪಪುತ್ರನೆ! ವಿನತಾಗರ್ಭಸಂಭೂತನೆ! ತೇಜೋರಾಶಿಯೂ, ಅಜೇಯನೂ ಆದ ನೀನು ವ್ಯರ್ಥವಾಗಿ ಇಂತು ಶೋಕವನ್ನು ಮಾಡಬೇಡ.

೩೩. ದುಃಖಗಳೂ, ಸುಖಗಳೂ ಮನುಷ್ಯನಿಗೆ ಆವಶ್ಯಕವಾಗಿ ಬರುತ್ತಲೇ ಇರುವುವು. ನೀನು ವಿನತೆಯನ್ನು ಶಪಿಸಿದುದರಲ್ಲಿಯೂ ದೇವಕಾರ್ಯಸಾಧಕವಾದ ಒಂದು ರಹಸ್ಯವಿರುವುದು.

೩೪. ಇನ್ನೂ "ನನ್ನ ತಾಯಿಗೆ ಶಾಪವನ್ನು ಕೊಟ್ಟೆನಲ್ಲ" ಎಂಬ ಚಿಂತೆಯು ನಿನ್ನ ಮನಸ್ಸಿನಲ್ಲಿದ್ದರೆ ನನ್ನ ಸಲಹೆಯನ್ನನುಸರಿಸಿ ಮಹಾಕಾಲವನವನ್ನು ಸೇರು.

೩೫. ಮಹಾದೇವನಾದ ಯಾತ್ರೇಶ್ವರನಿಗೆ ಉತ್ತರದಲ್ಲಿ ಪುಣ್ಯಪ್ರದವೂ, ದೇವತೆಗಳಿಗೂ ನಿತ್ಯವೂ, ಪೂಜ್ಯವೂ, ಸರ್ವಾಭೀಷ್ಟದಾಯಕವೂ, ಮಂಗಳಮಯವೂ ಆದ ಮಹಾಲಿಂಗವೊಂದನ್ನು ಕಾಣುವೆ.''

ಅರುಣಸ್ತ್ವೇವಮುಕ್ತಸ್ತು ನಾರದೇನ ಮಹಾತ್ಮನಾ ।
ಆಜಗಾಮ ಕ್ಷಣಾರ್ಧೇನ ಮಹಾಕಾಲವನಂ ಶುಭಂ ॥ ೩೬ ॥
ದದರ್ಶ ತತ್ರ ತಲ್ಲಿಂಗಂ ತೇಜಃಕೂಟೋಪಮಂ ಶುಭಂ ।
ಪೂಜಯಾಮಾಸ ವಿಧಿವತ್ಪುಷ್ಪೈರ್ಭಾವಸಮನ್ವಿತಃ ॥ ೩೭ ॥
ಲಿಂಗೇನೋಕ್ತೋಽರುಣೋ ದೇವಿ ಸಾರಥ್ಯಂ ಕುರು ಸರ್ವದಾ ।
ಸೂರ್ಯಸ್ಯ ಭ್ರಮತಸ್ತಸ್ಯ ತ್ವತ್ತುಲ್ಯೋ ನಾಸ್ತಿ ಸಾರಥಿಃ ॥ ೩೮ ॥
ಮಯಾ ದತ್ತಂ ತು ಸಾಮರ್ಥ್ಯಂ ಸೂರ್ಯಸ್ಯ ಪುರತಃ ಸದಾ ।
ಉದಯಸ್ವೋಽರುಣಃ ಪ್ರಾಗ್ವೈ ಪಶ್ಚಾತ್ಸೂರ್ಯ ಉದೇಷ್ಯತಿ ॥ ೩೯ ॥
ತ್ವನ್ನಾಮ್ನಾ ತ್ರಿಷು ಲೋಕೇಷು ಖ್ಯಾತೋಽಹಮರುಣೇಶ್ವರಃ ।
ಭವಿಷ್ಯಾಮಿ ನ ಸಂದೇಹೋ ಸ್ವಕಾಮಾರ್ಥಪ್ರದಾಯಕಃ ॥ ೪೦ ॥
ಯೇ ಮಾಂ ಪಶ್ಯಂತಿ ಸತತಂ ತ್ವನ್ನಾಮ್ನಾ ಚಾರುಣೇಶ್ವರಂ ।
ತೇ ಯಾಸ್ಯಂತಿ ಪರಂ ಸ್ಥಾನಂ ದಾಹಪ್ರಲಯವರ್ಜಿತಂ ॥ ೪೧ ॥

---

೩೬. ಮಹಾತ್ಮನಾದ ನಾರದನಾಡಿದ ಈ ಮಾತುಗಳನ್ನು ಕೇಳಿ ಅರುಣನು ನಿಮಿಷಾರ್ಧದಲ್ಲಿಯೇ ಪವಿತ್ರಕ್ಷೇತ್ರವಾದ ಮಹಾಕಾಲವನಕ್ಕೆ ಬಂದನು.

೩೭. ನಾರದನು ನಿರೂಪಿಸಿದ್ದ ಸ್ಥಳದಲ್ಲಿಯೇ ತೇಜೋರಾಶಿಯಂತೆ ಕಾಣುತ್ತಿರುವ ಮಂಗಳಕರವಾದ ಆ ಮಹಾಲಿಂಗವನ್ನು ಕಂಡು ಆತನು ಭಕ್ತಿಭರಿತನಾಗಿ ವಿವಿಧ ಪುಷ್ಪಗಳಿಂದ ಅದಕ್ಕೆ ವಿಧಿವಿಹಿತ ಪೂಜೆಯನ್ನು ಮಾಡಿದನು.

೩೮. ಆ ಲಿಂಗವು ಪ್ರಸನ್ನವಾಗಿ ಅರುಣನಿಗಿಂತೆಂದಿತು. "ಅಯ್ಯಾ ಅರುಣನೆ! ನೀನು ಆಕಾಶದಲ್ಲಿ ಸಂಚರಿಸುತ್ತಿರುವ ಸೂರ್ಯನಿಗೆ ಸಾರಥ್ಯವನ್ನು ಮಾಡುತ್ತಿರು. ನಿನ್ನಂತಹ ಸಾರಥಿಯು ಆತನಿಗೆ ದೊರೆಯಲಾರನು.

೩೯. ಅರುಣ! ನಾನು ನಿನಗೆ ಸಾಮರ್ಥ್ಯವನ್ನಿತ್ತಿರುವೆನು. ನೀನು ಯಾವಾಗಲೂ ಸೂರ್ಯನಿಗೆ ಮುಂದಾಗಿಯೇ ಇರುವೆ. ಆತನಿಗೆ ಮೊದಲೇ ಉದಯಿಸಿ ಆತನ ಬಳಿಕ ಅಸ್ತಮಿಸುವೆ.

೪೦. ನಿನ್ನ ಹೆಸರಿನಿಂದಲೇ ನಾನು ಮೂರು ಲೋಕಗಳಲ್ಲಿಯೂ ಅರುಣೇಶ್ವರನೆಂದು ಪ್ರಖ್ಯಾತನಾಗುವೆ. ಇದರಲ್ಲಿ ಸಂದೇಹವಿಲ್ಲ. ನಾನು ಇಲ್ಲಿದ್ದುಕೊಂಡೇ ಭಕ್ತಜನರಿಗೆ ಸಕಲಾರ್ಥಗಳನ್ನೂ ಕೊಡುತ್ತಿರುವೆನು.

೪೧. ನಿನ್ನ ಹೆಸರಿನ ಈ ಅರುಣೇಶ್ವರಲಿಂಗವನ್ನು ಯಾರು ನೋಡುವರೊ, ಅವರು ದಾಹನಾಶಗಳಿಲ್ಲದ ಶಾಶ್ವತಪದವಿಯನ್ನು ಹೊಂದುವರು.

ಮೋದಿಷ್ಯಂತಿ ಕುಲೈಃ ಸಾರ್ಧಂ ಪಿತೃಮಾತೃಸಮುದ್ಭವೈಃ ।
ಕಲ್ಪಕೋಟಿಸಹಸ್ರಂ ತು ಯೇ ಪಶ್ಯಂತಿ ಸಮಾಹಿತಾಃ ॥ ೪೨ ॥
ನ ದುಃಖಂ ಜಾಯತೇ ತೇಷಾಂ ಯೇ ಪಶ್ಯಂತಿ ರವೇರ್ದಿನೇ ।
ಸಂಸಾರಸಾಗರೋತ್ಥಂ ವೈ ಯಾವದಿಂದ್ರಾಶ್ಚತುರ್ದಶ ॥ ೪೩ ॥
ಯಃ ಪಶ್ಯತಿ ಚತುರ್ದಶ್ಯಾಂ ಕೃಷ್ಣಾಯಾಮರುಣೇಶ್ವರಂ ।
ಸ ನೇಷ್ಯತಿ ಪಿತೄನ್ ಸ್ವರ್ಗೇ ನರಕಸ್ಥಾನ್ನಸಂಶಯಃ ॥ ೪೪ ॥
ಸಂಕ್ರಾಂತೌ ರವಿವಾರೇ ಚ ಯಃ ಪಶ್ಯೇದರುಣೇಶ್ವರಂ ।
ಶುಂಡೀರಸ್ವಾಮಿನೋ ಯಾತ್ರಾ ಕೃತಾ ತೇನ ನ ಸಂಶಯಃ ॥ ೪೫ ॥
ಇತ್ಯುಕ್ತಸ್ತೇನ ಲಿಂಗೇನ ವಿನತಾನಂದನಸ್ತದಾ ।
ಆಗತಃ ಕೃತಕೃತ್ಯಾತ್ಮಾ ಯತ್ರ ದೇವೋ ದಿವಸ್ಪತಿಃ ॥ ೪೬ ॥
ಅಸ್ಯ ಲಿಂಗಸ್ಯ ಮಾಹಾತ್ಮ್ಯಾತ್ಕಶ್ಯಪಸ್ಯಾತ್ಮಸಂಭವಃ ।
ಅರುಣೋ ದೃಶ್ಯತೇ ವ್ಯೋಮ್ನಿ ಸೂರ್ಯಸ್ಯ ಪುರತಃ ಸದಾ ॥ ೪೭ ॥

---

೪೨. ಯಾರು ಪ್ರಶಾಂತಮನಸ್ಸಿನಿಂದ ಈ ಲಿಂಗವನ್ನು ಸಂದರ್ಶಿಸುವರೊ, ಅವರು ಒಂದುಸಾವಿರಕೋಟಿ ಕಲ್ಪಗಳವರೆಗೂ ತಾಯಿತಂದೆಯರ ಕುಲಜರೊಡನೆ ಸೌಖ್ಯದಿಂದಿರುವರು.

೪೩. ಭಾನುವಾರದ ದಿನದಲ್ಲಿ ಯಾರು ಈ ಮಹಾಲಿಂಗದ ದರ್ಶನವನ್ನು ಮಾಡುವರೊ, ಅವರು ಹದಿನಾಲ್ಕು ಇಂದ್ರಕಲ್ಪಗಳವರೆಗೂ ಸಂಸಾರಸಮುದ್ರದಲ್ಲಿ ತೊಳಲುವ ದುಃಖಕ್ಕೆ ಭಾಗಿಗಳಾಗುವುದಿಲ್ಲ.

೪೪. ಯಾವ ಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಅರುಣೇಶ್ವರನನ್ನು ದರ್ಶನಮಾಡಿದರೂ ಮಾನವನು ನರಕಗಳಲ್ಲಿರುವ ತನ್ನ ಪಿತೃಗಳೆಲ್ಲರನ್ನೂ ಸ್ವರ್ಗಲೋಕಕ್ಕೆ ಕಳುಹಿಸುವನು.

೪೫. ಸಂಕ್ರಮಣದ ದಿನಗಳಲ್ಲಿಯೂ, ಭಾನುವಾರಗಳಲ್ಲಿಯೂ ಯಾವನು ಈ ಅರುಣೇಶ್ವರನನ್ನು ನೋಡುವನೊ, ಅವನು ಸುಬ್ರಹ್ಮಣ್ಯಸ್ವಾಮಿಯ ಯಾತ್ರೆಯನ್ನು ಮಾಡಿದವನೆಂಬುದರಲ್ಲಿ ಸಂದೇಹವಿರುವುದಿಲ್ಲ.''

೪೬. ಇಂತೆಂದು ಆ ಲಿಂಗವು ಅಭಯವಚನಗಳನ್ನಾಡಲು, ವಿನತಾಸೂನುವಾದ ಆ ಅರುಣನು ಕೃತಕೃತ್ಯನಾಗಿ ಸೂರ್ಯನಿದ್ದಲ್ಲಿಗೆ ಬಂದು ಸೇರಿದನು.

೪೭. ಈ ಮಹಾಲಿಂಗದ ಮಾಹಾತ್ಮ್ಯದಿಂದ ಇಂದಿಗೂ ಕಶ್ಯಪಪುತ್ರನಾದ ಅರುಣನು ನಿತ್ಯವೂ ಆಕಾಶದಲ್ಲಿ ಸೂರ್ಯನು ಹುಟ್ಟುವುದಕ್ಕೆ ಮುಂಚೆಯೆ ಕಾಣುತ್ತಿರುವನು.

ಏಷತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಅರುಣೇಶ್ವರದೇವಸ್ಯ ಪುಷ್ಪದಂತೇಶ್ವರಂ ಶೃಣು ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಅರುಣೇಶ್ವರಮಾಹಾತ್ಮ್ಯವರ್ಣನಂ"ನಾಮ
ಷಟ್‌ಸಪ್ತತಿತಮೋಽಧ್ಯಾಯಃ

---

೪೮. ಪಾರ್ವತಿಯೆ! ಇಂತು ನಿನಗೆ ಅರುಣೇಶ್ವರಮಹಾದೇವನ ಚರಿತ್ರೆಯನ್ನು ಹೇಳಿದೆನು. ಇನ್ನು ಪುಷ್ಪದಂತೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಅರುಣೇಶ್ವರಮಾಹಾತ್ಮ್ಯವರ್ಣನ" ವೆಂಬ
ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಸಪ್ತತಿತಮೋಽಧ್ಯಾಯಃ

### ಪುಷ್ಪದಂತೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ:—

ಸಪ್ತಸಪ್ತತಿಕಂ ವಿದ್ಧಿ ಪುಷ್ಪದಂತೇಶ್ವರಂ ಶೃಣು ।
ಯಸ್ಯ ದರ್ಶನಮಾತ್ರೇಣ ಗರ್ಭವಾಸೋ ನ ಜಾಯತೇ ॥ ೧ ॥
ಶಿನಿರ್ನಾಮ ದ್ವಿಜೋ ದೇವಿ ಸ ಚಾಽಪುತ್ರೋಽಭವತ್ಪುರಾ ।
ಪುತ್ರಾರ್ಥಂ ಚಿಂತಯಾಮಾಸ ಸ ತಪಾಂಸಿ ಬಹೂನಿ ಚ ॥ ೨ ॥
ವಾಯುಭಕ್ಷೋಽಂಬುಭಕ್ಷಶ್ಚ ನಿರಾಹಾರೋರ್ಧ್ವಬಾಹುಕಃ ।
ಶಾಕಮೂಲಫಲಾಹಾರಃ ಪರ್ಣಸ್ಯೈಕದ್ವಿಪರ್ಣಭುಕ್ ॥ ೩ ॥
ಏವಮಾದೀನಿ ಚಾಽನ್ಯಾನಿ ತಪಾಂಸಿ ಶ್ರೇಯಸೇ ಪರಂ ।
ಏತೇಷಾಂ ತಪಸಾಂ ಮಧ್ಯೇ ತಪ ಏಕಂ ಸಮಾಶ್ರಯೇ ॥ ೪ ॥
ಪರಂ ವಿಘ್ನೋಪಶಾಂತ್ಯರ್ಥಂ ತೋಷಯಿಷ್ಯೇಽಹಮೀಶ್ವರಂ ।
ಏವಂ ಸಂಚಿಂತ್ಯ ಮನಸಾ ಊರ್ಧ್ವಪಾದೂರ್ಧ್ವಬಾಹುಕಃ ।
ಅಭ್ಯಾಂ ನ ಸ ದುರಾಸಾದ್ಯೋ ನಾಽಪರಾಧೋ ಭವಿಷ್ಯತಿ ॥ ೫ ॥

---

### ಕನ್ನಡದ ಅನುವಾದ

#### ಪುಷ್ಪದಂತೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಮಹೇಶ್ವರಿಯೆ! ಎಪ್ಪತ್ತೇಳನೆಯ ಮಹಾಲಿಂಗವಾದ ಪುಷ್ಪದಂತೇಶ್ವರನನ್ನು ನೋಡುವ ಮಾತ್ರದಿಂದ ಮನುಜನಿಗೆ ಪುನಃ ಗರ್ಭವಾಸವು ಸಂಭವಿಸುವುದಿಲ್ಲವೆನ್ನುವರು.

೨. ಹಿಂದೆ ಶಿನಿಯೆಂಬ ಬ್ರಾಹ್ಮಣನೊಬ್ಬನು ಸಂತತಿಯಿಲ್ಲದವನಾಗಿದ್ದನು. ಆತನೊಮ್ಮೆ ಪುತ್ರಲಾಭಕ್ಕಾಗಿ ಅನೇಕ ತಪಸ್ಸುಗಳನ್ನು ಕುರಿತು ಚಿಂತಿಸಿದನು.

೩. "ವಾಯುಭಕ್ಷಣ, ಜಲಪಾನ, ನಿರಾಹಾರ, ಊರ್ಧ್ವಬಾಹುವಾಗಿ ನಿಂತಿರುವುದು, ಶಾಕ, ಮೂಲ, ಫಲಗಳನ್ನು ಸೇವಿಸುವುದು, ಪರ್ಣಭೋಜನ, ದಿನಕ್ಕೊಂದೆರಡು ತರಗೆಲೆಗಳನ್ನು ತಿನ್ನುವುದು — ಇವೇ ಮೊದಲಾದ ಅನೇಕ ತಪಸ್ಸುಗಳು ಪರಮಶ್ರೇಯಸ್ಸಿಗೆ ಕಾರಣವಾಗಿರುವುವಷ್ಟೆ.

೪. ಈ ತಪಸ್ಸುಗಳಲ್ಲಿ ಯಾವುದಾದರೊಂದನ್ನು ಮಾಡುವುದರಿಂದ ನನ್ನ ಪುತ್ರಸಂತಾನಕ್ಕೆ ಒದಗಿರುವ ವಿಘ್ನವನ್ನು ಕಳೆದುಕೊಂಡು ಪರಮೇಶ್ವರನನ್ನು ಸಂತೋಷಗೊಳಿಸುತ್ತೇನೆ."

೫. ಇಂತೆಂದು ಮನಸ್ಸಿನಲ್ಲಿಯೇ ಯೋಚಿಸಿಕೊಂಡು ಊರ್ಧ್ವಬಾಹುವೂ, ಊರ್ಧ್ವಪಾದನೂ ಆಗಿ, "ಇದರಿಂದ ಪರಮೇಶ್ವರನ ಪ್ರಸಾದವು ಸಿಕ್ಕದಿರುವುದು

ತಥಾ ಚಕಾರ ಸ ಮುನಿರ್ವರ್ಷಾಣಾಂ ದ್ವಾದಶೈವ ಹಿ ।
ತಪಸ್ಯಂತಂ ಚ ತಂ ದೃಷ್ಟ್ವಾ ನಿಯಮೇ ಪರಮೇ ಸ್ಥಿತಂ ॥ ೬ ॥
ವಿಜ್ಞಪ್ತೋಽಹಂ ತ್ವಯಾ ದೇವಿ ಮಂದರೇ ಚಾರುಕಂದರೇ ।
ಕರೋತ್ಯೇಷ ತಪಃ ಕ್ರೂರಂ ಪುತ್ರಹೇತೋರ್ಮುನಿರ್ಮಹಾನ್ ॥ ೭ ॥
ತೇಜಸಾ ದೀಪಯಂಛೈಲಂ ಶೋಷಯನ್ ಸಲಿಲಾಶಯಾನ್ ।
ತಪಸಾ ದುಷ್ಕರೇಣೈವ ಕ್ಷುಭಿತಾ ನಾಕವಾಸಿನಃ ॥ ೮ ॥
ವ್ಯಾಲೇಂದ್ರಾ ವ್ಯಾಕುಲೀಭೂತಾ ಲುಲಿತಾಶ್ಚಾಽಚಲೇಶ್ವರಾಃ ।
ಮುನಯೋ ವಿಸ್ಮೃತಿಂ ಪ್ರಾಪ್ತಾಃ ಕಂಪೇತೇಚಾಽಪಿ ರೋದಸೀ ॥ ೯ ॥
ಅಯೋನಿಜಃ ಶಿನಿರ್ವಿಪ್ರಃ ಪುತ್ರಮಿಂಚ್ಛತ್ಯಯೋನಿಜಂ ।
ತ್ವಂ ಯೋನಿರ್ಗುಣಸಂಘಾನಾಂ ತ್ವಂ ಯೋನಿಸ್ತಪಸಾಮಪಿ ॥ ೧೦ ॥
ತ್ವಂ ತಪಸ್ತ್ವಂ ಪರಂಧಾಮ ಶಿಖಿಚಂದ್ರಾರ್ಕಲೋಚನ ।
ಸರ್ವೇಶ್ವರ ಸುತೋಽಭೀಷ್ಟಃ ಕಿಂ ನ ವಿಪ್ರಾಯ ದೀಯತೇ ॥ ೧೧ ॥

---

ಅಸಂಭವವು; ಮತ್ತು ಇದರಿಂದ ಯಾವ ಅಪರಾಧವೂ ಆಗುವುದಿಲ್ಲ'' ಎಂದು ನಿಶ್ಚಯಿಸಿದನು.

೬–೭. ಇಂತು ಆ ಮುನಿಯು ಹನ್ನೆರಡುವರ್ಷಗಳಕಾಲ ತಪಸ್ಸನ್ನು ಮಾಡುತ್ತಿದ್ದುದನ್ನೂ, ಉಗ್ರವಾದ ನಿಯಮವನ್ನು ಸ್ವೀಕರಿಸಿರುವುದನ್ನೂ ಕಂಡು ನೀನೊಮ್ಮೆ ಸುಂದರಕಂದರಗಳಿಂದೊಡಗೂಡಿದ ಮಂದರಪರ್ವತದಲ್ಲಿ ನನ್ನಲ್ಲಿ ವಿಜ್ಞಾಪಿಸಿಕೊಂಡೆ. "ನಾಥ! ಈ ಮಹಾಮುನಿಯು ಪುತ್ರನನ್ನು ಪಡೆಯಲು ಕ್ರೂರವಾದ ತಪಸ್ಸನ್ನು ಮಾಡುತ್ತಿರುವನು.

೮. ಈತನ ತೇಜಸ್ಸಿನಿಂದ ಪರ್ವತವೆಲ್ಲವೂ ಬೆಳಗುತ್ತಿರುವುದು. ಸಮುದ್ರಗಳೆಲ್ಲವೂ ಬತ್ತಿಹೋಗುತ್ತಿರುವುವು. ದುಷ್ಕರವಾದ ಈ ತಪಸ್ಸಿನಿಂದ ಸ್ವರ್ಗಲೋಕನಿವಾಸಿಗಳೂ ತಳಮಳಿಸುತ್ತಿರುವರು.

೯. ಪಾತಾಳದ ನಾಗಶ್ರೇಷ್ಠರೂ ವ್ಯಾಕುಲಗೊಂಡಿರುವರು. ಪರ್ವತಗಳೂ ಚಲಿಸುತ್ತಿರುವುವು. ಇತರ ಮುನಿಗಳಿಗೆ ಬುದ್ಧಿಭ್ರಮಣೆಯುಂಟಾಗುತ್ತಿರುವುದು. ಭೂಮ್ಯಂತರಿಕ್ಷಗಳು ಕಂಪಿಸುತ್ತಿರುವುವು.

೧೦. ಅಯೋನಿಜನಾದ ಶಿನಿಯೆಂಬ ಈ ಬ್ರಾಹ್ಮಣೋತ್ತಮನು ಅಯೋನಿಜನಾದ ಪುತ್ರನನ್ನೇ ಅಪೇಕ್ಷಿಸುತ್ತಿರುವನು. ಗುಣಗ್ರಾಮಗಳಿಗೂ, ಸಕಲ ತಪಸ್ಸುಗಳಿಗೂ ನೀನೇ ಉತ್ಪತ್ತಿಕಾರಣನಾಗಿರುವೆಯಲ್ಲವೆ.

೧೧. ಚಂದ್ರಸೂರ್ಯಾಗ್ನಿನೇತ್ರನೆ! ನೀನೇ ತಪೋಮೂರ್ತಿಯು, ನೀನೇ ಪರಮಪದವು. ಸರ್ವೇಶ್ವರ! ಈ ವಿಪ್ರನಿಗೆ ಅಪೇಕ್ಷಿತನಾದ ಮಗನನ್ನೇಕೆ ಕೊಡಲೊಲ್ಲೆ?

ಸುರಾಸುರಗುರೋ ಕಿಂ ನ ಪುತ್ರಮಸ್ಮೈ ಪ್ರಯಚ್ಛಸಿ ।
ತಪಸಾ ಕ್ಷೀಣದೋಷಸ್ಯ ಬ್ರಹ್ಮತ್ವೇ ಭಾವಿತಾತ್ಮನಃ ॥ ೧೨ ॥
ಶಿನೇಃ ಪುತ್ರಪ್ರದಾನಂ ತ್ವಂ ಕುರು ಮದ್ವಚನಾಚ್ಛಿವ ।
ತಪಸಾ ದುಷ್ಕರೇಣೈವ ಗಾಢಂ ಕ್ಲಿಷ್ಟೋ ಮಹಾಮುನಿಃ ॥ ೧೩ ॥
ತೇಜಾಂಸಿ ಜ್ಯೋತಿಷಾಮೇವ ಮಹತಾಂ ಚ ವಿಧಿಸ್ಥಿತಃ ।
ಅಹರತ್ತೇಜಸಾ ಸ್ವೇನ ತಮಾಂಸೀವ ದಿವಾಕರಃ ॥ ೧೪ ॥
ತ್ವದ್ಭಕ್ತಸ್ಯ ಚ ದೇವೇಶ ವ್ಯರ್ಥಃ ಕಸ್ಮಾತ್ಪರಿಶ್ರಮಃ ।
ಉದಿತೇಽರ್ಕೇ ತಮಾಂಸೀಹ ನ ಭವಂತಿ ಕದಾಚನ ॥ ೧೫ ॥
ತ್ವತ್ಪರಸ್ಯ ನ ದೇವೇಶ ಯುಕ್ತಾ ದುಃಖವಿಭೀಷಿಕಾ ।
ಇತ್ಯಹಂ ಪ್ರಾರ್ಥಿತೋ ದೇವಿ ತ್ವಯಾ ಪರ್ವತಪುತ್ರಿಕೇ ॥ ೧೬ ॥
ವಿಪ್ರಾರ್ಥಮನುಕಂಪಾರ್ಥಂ ಪುತ್ರಾರ್ಥಂ ಚ ವಿಶೇಷತಃ ।
ಆಕಾರಿತಾ ಮಯಾ ದೇವಿ ಗಣಾಸ್ತ್ವದ್ಗೌರವೇಣ ತು ॥ ೧೭ ॥
ರುದ್ರಾಶ್ಚ ಹರಭಕ್ತಾಶ್ಚ ಕೂಷ್ಮಾಂಡಾ ಗಗನೇಚರಾಃ ।
ರೋಮಕೌದ್ರಾ ಮಹಾನೀಲಾಃ ಶಿಖಾವಂತಃ ಸಕೋಕಿಲಾಃ ॥ ೧೮ ॥

---

೧೨. ದೇವರಾಕ್ಷಸಗುರುವೆ! ತಪಸ್ಸಿನಿಂದ ದೋಷಗಳನ್ನು ಕಳೆದುಕೊಂಡು ಪರಬ್ರಹ್ಮದಲ್ಲಿಯೇ ಮನಸ್ಸನ್ನು ಲಯಗೊಳಿಸಿರುವ ಈತನಿಗೇಕೆ ಪುತ್ರನನ್ನು ಕೊಡುವುದಿಲ್ಲ?

೧೩. ಪರಮಶಿವನೆ! ನನ್ನ ಬೇಡಿಕೆಯನ್ನು ಅಂಗೀಕರಿಸಿ ಶಿನಿಬ್ರಾಹ್ಮಣನಿಗೆ ಮಗನನ್ನು ಕರುಣಿಸು. ದುಸ್ಸಾಧ್ಯವಾದ ತಪಸ್ಸಿನಿಂದ ಈ ಮಹರ್ಷಿಯು ಬಹಳವಾಗಿ ಕ್ಲೇಶಗೊಂಡಿರುವನು.

೧೪. ಉಗ್ರನಿಯಮದಲ್ಲಿ ನಿಷ್ಠಾವಂತನಾಗಿ ಈತನು ತನ್ನ ತೇಜಸ್ಸಿನಿಂದ ಸೂರ್ಯನು ಕತ್ತಲೆಯನ್ನೋಡಿಸುವಂತೆ ಸಕಲಜ್ಯೋತಿಗಳ ಬೆಳಕುಗಳನ್ನೂ ಸೆಳೆದಿರುವನು.

೧೫–೧೬. ದೇವಾಧಿದೇವನೆ! ನಿನ್ನ ಭಕ್ತನಿಗೆ ವ್ಯರ್ಥವಾಗಿ ಇಷ್ಟು ಕಷ್ಟ ವೇತಕ್ಕೆ? ಸೂರ್ಯನು ಹುಟ್ಟುತ್ತಲೇ ಕತ್ತಲೆಗಳೆಲ್ಲವೂ ಕಾಣದಾಗುವುವಷ್ಟೆ. ಮಹೇಶ್ವರ! ನಿನ್ನ ಭಕ್ತನಾದವನಿಗೆ ದುಃಖದಿಂದ ಭಯಸಂಭವವು ಯುಕ್ತವಲ್ಲ.'' ಪರ್ವತರಾಜಪುತ್ರಿಯೆ! ಇಂತೆಂದು ನಾನು ನಿನ್ನಿಂದ ಪ್ರಾರ್ಥಿತನಾದೆನು.

೧೭. ಬ್ರಾಹ್ಮಣನಲ್ಲಿ ನಿನಗಿದ್ದ ಅನುಕಂಪದಿಂದಲೂ, ವಿಶೇಷವಾಗಿ ಆತನಿಗೆ ಪುತ್ರನನ್ನು ಕೊಡಬೇಕೆಂಬ ನಿನ್ನ ಮಾತಿನಲ್ಲಿ ಗೌರವದಿಂದಲೂ ನಾನು ಗಣಗಳೆಲ್ಲವನ್ನೂ ಕರೆದೆನು.

೧೮–೧೯. ರುದ್ರರು, ಶಿವಭಕ್ತರು, ಕೂಶ್ಮಾಂಡರು, ಆಕಾಶಸಂಚಾರಿಗಳು,

ಅನ್ಯೇ ಚ ವಿವಿಧಾಕಾರಾಃ ಕಾಲಾಸ್ಯಾ ಹರಿಪಿಂಗಲಾಃ ।
ಜಟಾಜೂಟಧರಾಶ್ಚಿತ್ರಾ ವೀಥಿನಕ್ಷತ್ರಚಾರಿಣಃ ॥ ೧೯ ॥
ನೀಲಗ್ರೀವಾಃ ಕೃಷ್ಣಮುಖಾಃ ಪಿಂಗಧೌತಜಟಾಸಟಾಃ ।
ಜ್ವರೋ ಡಿಂಡಿರ್ಮಹಾಕಾಲೋ ಲಾಂಗುಲಿಶ್ಚ ಮಹೇಶ್ವರಃ ॥ ೨೦ ॥
ಘಂಟಾಕರ್ಣೋ ವಿಶಾಖಶ್ಚ ಪರಿಶೇಷಾ ಗಣಾಶ್ಚ ಯೇ ।
ವೃಷಾರೂಢಾಃ ಕಾಮತುಲ್ಯಾಃ ಕಾಮರೂಪಬಲಾಸ್ತಥಾ ॥ ೨೧ ॥
ಶೂಲಚಂದ್ರಧರಾಃ ಸರ್ವೇ ಸರ್ವೇ ತುಲ್ಯಪರಾಕ್ರಮಾಃ ।
ಮಮಾದೇಶಾತ್ಸಮಾಯಾತಾಃ ಕೃತಾಂಜಲಿಪುಟಾಃ ಸ್ಥಿತಾಃ ॥ ೨೨ ॥
ಸ್ತುವಂತೋ ವಿವಿಧೈಃ ಸ್ತೋತ್ರೈರೂಚುರೇವಂ ಸಮಾಹಿತಾಃ ।
ಕಿಂ ಕರ್ತವ್ಯಮಿಹಾಽಸ್ಮಾಭಿರಾದೇಶೋ ದೀಯತಾಂ ಪ್ರಭೋ ॥ ೨೩ ॥
ಗಣಾನಾಂ ವಚನಂ ಶ್ರುತ್ವಾ ಜ್ಞಾತ್ವಾ ಭಕ್ತಿಂ ಚ ತಾದೃಶೀಂ ।
ಮಹಾತಪಃಪ್ರಭಾವೋಽಯಂ ಶಿನಿವಿಪ್ರಸ್ಯ ಕೀರ್ತಿತಃ ॥ ೨೪ ॥

---

ರೋಮರೌದ್ರರು, ಮಹಾನೀಲಕಾಯರು, ಶಿಖಾವಂತರು, ಸಕೋಕಿಲರು ಮುಂತಾದ ಬಹುವಿಧರೂಪಗಳುಳ್ಳವರೂ, ಕಪ್ಪುಮುಖದವರೂ, ಹಳದಿ ಮತ್ತು ಕೆಂಪುಬಣ್ಣದವರೂ, ಜಡೆಗಳ ಕಿರೀಟಗಳನ್ನೂ ಧರಿಸಿದ ವಿಚಿತ್ರರೂಪರೂ, ನಕ್ಷತ್ರಪಥಗಳಲ್ಲಿ ಸಂಚರಿಸುವವರೂ ಎಲ್ಲರೂ ಬಂದು ಸೇರಿದರು.

೨೦–೨೧. ಎಲ್ಲರೂ ನೀಲಕಂಠರೇ, ಕಪ್ಪುಮೊಗದವರೇ, ಕೆಂಪು ಮತ್ತು ಬಿಳಿಯ ನಿಡುಜಡೆಗಳಿಂದಲಂಕೃತರೇ. ಜ್ವರ, ಡಿಂಡಿ, ಮಹಾಕಾಲ, ಲಾಂಗುಲಿ, ಮಹೇಶ್ವರ, ಘಂಟಾಕರ್ಣ, ವಿಶಾಖ ಮುಂತಾದ ಸಮಸ್ತ ಗಣಸಮೂಹಗಳೂ, ವೃಷಭವಾಹನರಾಗಿ ಸಮಾನಾಭಿಲಾಷೆಗಳನ್ನು ಹೊಂದಿ, ಯಥೇಚ್ಛವಾದ ರೂಪಗಳನ್ನೂ ಬಲವನ್ನೂ ಪಡೆದಿದ್ದರು.

೨೨. ಎಲ್ಲರೂ ತ್ರಿಶೂಲಗಳನ್ನೂ ಬಾಲಚಂದ್ರನನ್ನೂ ಧರಿಸಿದ್ದರು. ಎಲ್ಲರೂ ಸಮಾನ ಬಲಶಾಲಿಗಳೇ ಆಗಿದ್ದರು. ನನ್ನ ಅಪ್ಪಣೆಯಂತೆ ಎಲ್ಲರೂ ಬಂದು ಸೇರಿ ಕೈಗಳನ್ನು ಮುಗಿದುಕೊಂಡು ನಿಂತಿದ್ದರು.

೨೩. ನನ್ನನ್ನು ಅನೇಕವಿಧ ಸ್ತೋತ್ರಗಳಿಂದ ಸ್ತುತಿಸುತ್ತ, "ಸ್ವಾಮಿಯೆ! ನಾವು ಇಲ್ಲಿ ಈಗ ಮಾಡಬೇಕಾಗಿರುವ ಕರ್ತವ್ಯವಾವುದು? ನಮಗೆ ಅಪ್ಪಣೆಯನ್ನು ಕೊಡು" ಎಂದು ಕೇಳಿದರು.

೨೪. ಗಣಗಳ ಮಾತನ್ನು ಕೇಳಿ ಅವರಿಗೆ ನನ್ನಲ್ಲಿರುವ ಅಪಾರವಾದ ಭಕ್ತಿಯನ್ನು ಮನಗಂಡು ನಾನು ಹೇಳಿದೆನು. "ಶಿನಿಯೆಂಬ ವಿಪ್ರೋತ್ತಮನ ತಪಸ್ಸಿನ ಪ್ರಭಾವವು ಮಹತ್ತರವಾದದ್ದೆಂದು ನಾವು ಕೇಳಿರುವೆವು.

ಪುತ್ರಾರ್ಥಂ ತಪ್ಯತಿ ತಪಃ ಶಿನಿರ್ಬ್ರಾಹ್ಮಣಸತ್ತಮಃ ।
ಮದ್ವಾಕ್ಯಾತ್ಕೋಽಸು ವಿಪ್ರಸ್ಯ ಪುತ್ರತ್ವಂ ಸಂಪ್ರದಾಸ್ಯತಿ ॥ ೨೫ ॥
ತಸ್ಯಾಽಹಂ ಸಂಪ್ರದಾಸ್ಯಾಮಿ ಸರ್ವಾನ್ಕಾಮಾನ್ಯಥೇಪ್ಸಿತಾನ್ ।
ಅಮರಂ ಚಾಽಜರಂ ಪುತ್ರಂ ಮುನಿರ್ವಾಂಛತಿ ಸಾಂಪ್ರತಂ ॥ ೨೬ ॥
ಮದ್ವಾಕ್ಯಂ ಕ್ರಿಯತಾಂ ಸದ್ಯೋ ವಿಪ್ರಃ ಕ್ಲೇಶಾದ್ವಿಮುಚ್ಯತಾಂ ।
ಮದ್ಭಕ್ತಸ್ಯ ನ ಸಂಕಲ್ಪೋ ಮಿಥ್ಯಾಭವಿತುಮರ್ಹತಿ ॥ ೨೭ ॥
ಮದೀಯಂ ವಚನಂ ಶ್ರುತ್ವಾ ಸರ್ವೇ ಕುಂಪಿತಕಂಧರಾಃ ।
ಸರ್ವೇ ಚಾಽವಾಙ್ಮುಖಾ ಜಾತಾಃ ಸರ್ವೇ ಧ್ಯಾನಪರಾಯಣಾಃ ॥ ೨೮ ॥
ನ ಕಶ್ಚಿದ್ಭಾಷತೇ ಕಿಂಚಿನ್ನ ಕಶ್ಚಿದ್ವೀಕ್ಷತೇ ತದಾ ।
ಅಥೋಕ್ತಂ ಪುಷ್ಪದಂತೇನ ರಭಸಾನ್ಮಾನಿತೇನ ತು ॥ ೨೯ ॥
ಮಮ ಚಿತ್ತಮವಿಜ್ಞಾಯ ಗಣಾನಾಮನುಕಂಪಯಾ ।
ನ ಯಾಸ್ಯಂತಿ ಗಣಾ ದೇವ ತ್ವಾಂ ವಿಹಾಯ ಮಹೀತಲಂ ॥ ೩೦ ॥
ಇತಃ ಸ್ಥಾಸ್ಯಂತಿ ಸತತಂ ತ್ವತ್ಸಮೀಪೇ ನ ಸಂಶಯಃ ।
ಕಥಂ ಯೋನಿಂ ಪ್ರಯಾಸ್ಯಂತಿ ಸಂಪ್ರಾಪ್ತಮುದಮುತ್ತಮಾಂ ॥ ೩೧ ॥

---

೨೫. ಬ್ರಾಹ್ಮಣಶ್ರೇಷ್ಠನಾದ ಆತನು ಪುತ್ರನನ್ನು ಪಡೆಯಲು ತಪಸ್ಸನ್ನಾಚರಿಸುತ್ತಿರುವನು. ನಿಮ್ಮಲ್ಲಿ ಯಾರು ನನ್ನ ಅಪ್ಪಣೆಯಂತೆ ಹೋಗಿ ಆತನಿಗೆ ಮಗನಾಗಲೆಳಸುವಿರಿ?

೨೬. ಅಂತಹವನಿಗೆ ನಾನು ಮನಸ್ಸಿನಲ್ಲಿರುವ ಅಭಿಲಾಷೆಗಳನ್ನೆಲ್ಲ ಈಡೇರಿಸುವೆನು. ಆ ಮುನಿಯು ಈಗ ಜರಾಮರಣವರ್ಜಿತನಾದ ಪುತ್ರನನ್ನು ಅಪೇಕ್ಷಿಸುತ್ತಿರುವನು.

೨೭. ನನ್ನ ಮಾತನ್ನು ಕೇಳಿ ಈಗಲೇ ಬ್ರಾಹ್ಮಣನನ್ನು ಕಷ್ಟದಿಂದ ಕಡೆಹಾಯಿಸಿರಿ. ನನ್ನ ಭಕ್ತನಾದ ಆತನ ಸಂಕಲ್ಪವು ಸುಳ್ಳಾಗದಂತೆ ಮಾಡಿರಿ."

೨೮. ನನ್ನ ಈ ಮಾತನ್ನು ಕೇಳಿ ಎಲ್ಲ ಗಣಗಳೂ ಗದ್ಗದಿತಕಂಠರೂ, ಅವನತಮುಖರೂ, ಧ್ಯಾನಾಸಕ್ತಮಾನಸರೂ ಆಗಿ ನಿಂತಿದ್ದರು.

೨೯. ಆಗ ಯಾವೊಬ್ಬನೂ ಮಾತಾಡಲಿಲ್ಲ. ಯಾವನೂ ನನ್ನ ಮುಖವನ್ನೂ ನೋಡಲಿಲ್ಲ. ಆವರೆ ಮಹಾಗರ್ವಿಯಾದ ಪುಷ್ಪದಂತನೆಂಬಾತನು ಮಾತ್ರ ಸಂಭ್ರಮದಿಂದ ಹೇಳಿದನು.

೩೦. ಗಣಗಳಲ್ಲಿ ಅಭಿಮಾನದಿಂದ ನನ್ನ ಅಭಿಪ್ರಾಯವನ್ನು ತಿಳಿಯಲಾರದೆ ಆತನಿಂತೆಂದನು. "ಮಹೇಶ್ವರನೆ! ಈ ಗಣಗಳು ನಿನ್ನ ಸನ್ನಿಧಿಯನ್ನು ಬಿಟ್ಟು ಭೂಲೋಕಕ್ಕೆ ಹೋಗಲಾರರು.

೩೧. ಎಲ್ಲರೂ ಯಾವಾಗಲೂ ಇಲ್ಲಿ ನಿನ್ನ ಸಮೀಪದಲ್ಲಿಯೇ ನಿಲ್ಲುವ-

ಹೀನಾಂ ರಜೋಽಧಿಕಾಂ ದೀನಾಂ ತಮೋಬಹುಲಧಾರಿಣೀಂ ।
ಕಥಂ ಸ್ವರ್ಗಂ ಪರಿತ್ಯಜ್ಯ ಯಾಸ್ಯಾಮೋ ನರಕಂ ಪರಂ ॥ ೩೨ ॥
ಬ್ರುವನ್ನೇವಂ ಭ್ರಮೇಣೈವ ಭಾವ್ಯರ್ಥೇನ ಪ್ರಚೋದಿತಃ ।
ಉಕ್ತೋ ಮಯಾ ವಿಶಾಲಾಕ್ಷಿ ಪುಷ್ಪದಂತೋ ಗಣಾಗ್ರಣೀಃ ॥ ೩೩ ॥
ಪತ ತ್ವಂ ಮಾನುಷೇ ಲೋಕೇ ಯಸ್ಮಾನ್ಮೇ ವಿಪ್ರಿಯಂ ಕೃತಂ ।
ಶಪ್ತ್ವಾ ತಂ ಪುಷ್ಪದಂತಂ ತು ವೀರಕಃ ಪ್ರೇರಿತೋ ಮಯಾ ॥ ೩೪ ॥
ವಿಪ್ರಸ್ಯ ಪುತ್ರತಾಂ ತೂರ್ಣಂ ಪುತ್ರ ಗಚ್ಛ ಮಮಾಜ್ಞಯಾ ।
ತತಸ್ತೇ ಸಂಪ್ರದಾಸ್ಯಾಮಿ ಸರ್ವಾನ್ಕಾಮಾನ್ಯಥೇಪ್ಸಿತಾನ್ ॥ ೩೫ ॥
ಇತ್ಯುಕ್ತೋ ವೀರಕೋ ದೇವಿ ಗತೋ ವಿಪ್ರಸ್ಯ ಪುತ್ರತಾಂ ।
ಪುಷ್ಪದಂತೋಽಪಿ ಕರುಣಂ ವಿಲಲಾಪ ಸುದುಃಖಿತಃ ॥ ೩೬ ॥
ಪಶ್ಚಾತ್ತಾಪೇನ ಸಂಯುಕ್ತೋ ನಿಃಶ್ವಸ್ಯ ಚ ಪುನಃ ಪುನಃ ।
ಅಹೋ ತತ್ಸಫಲಂ ಜನ್ಮ ಯದಾಜ್ಞಾ ಕ್ರಿಯತೇ ಸತ್ಯೈಃ ॥ ೩೭ ॥

---

ರೆಂಬುದು ನಿಸ್ಸಂದೇಹವು. ಇಲ್ಲಿನ ಉತ್ತಮ ಸೌಖ್ಯವನ್ನು ಅನುಭವಿಸಿದ ಯಾರುತಾನೆ ಮತ್ತೆ ತಾಯಿಯ ಜಠರವನ್ನು ಪ್ರವೇಶಿಸುವರು?

೩೨. ಭೂಲೋಕದಲ್ಲಿ ಜನ್ಮವು ನೀಚವೂ, ರಜೋಗುಣಭೂಯಿಷ್ಠವೂ, ಅಜ್ಞಾನತಮಸ್ಸಿನಿಂದ ಕೂಡಿದುದೂ ಆಗಿರುವುದು. ಸ್ವರ್ಗವನ್ನು ಬಿಟ್ಟು ಬೇರೊಂದು ನರಕವನ್ನು ಹೋಲುವ ಭೂಮಿಗೆ ಹೇಗೆ ಹೋಗೋಣ?''

೩೩. ಮಹೇಶ್ವರಿಯೆ! ಭವಿತವ್ಯತೆಯಿಂದ ಚೋದಿತನಾಗಿ ಪುಷ್ಪದಂತನೆಂಬ ಆ ಗಣನಾಥನು ಇಂತು ಭ್ರಾಂತನಾಗಿ ಹೇಳುತ್ತಿರಲು ನಾನು ಆತನಿಗೆ ಶಾಪವನ್ನಿತ್ತೆನು.

೩೪. ''ನನಗೆ ಅಪ್ರಿಯವನ್ನಾಡಿದ ನೀನು ಮನುಷ್ಯಲೋಕದಲ್ಲಿಯೇ ಹೋಗಿ ಬೀಳು.'' ಇಂತೆಂದು ಅವನನ್ನು ಶಪಿಸಿ ವೀರಕನನ್ನು ಹೋಗುವಂತೆ ಪ್ರೇರಿಸಿದೆನು.

೩೫. ''ವತ್ಸನೆ! ನನ್ನ ಅಪ್ಪಣೆಯಂತೆ ನೀನು ಬ್ರಾಹ್ಮಣನಿಗೆ ಪುತ್ರನಾಗಿ ಜನಿಸು. ನಿನ್ನ ಮನೋಭೀಷ್ಟಗಳೆಲ್ಲ ಲಭಿಸುವಂತೆ ನಿನಗೆ ವರವನ್ನೀಯುವೆನು.''

೩೬. ಪಾರ್ವತಿಯೆ! ಇಂತೆಂದ ನನ್ನ ಅಪ್ಪಣೆಯಂತೆ ವೀರಕನು ಆ ಬ್ರಾಹ್ಮಣನಿಗೆ ಪುತ್ರನಾಗಿ ಜನ್ಮವನ್ನು ತಳೆದನು. ಪುಷ್ಪದಂತನು ಪಶ್ಚಾತ್ತಾಪದಿಂದ ಕೂಡಿ ದುಃಖಿತನಾಗಿ ಮತ್ತೆ ಮತ್ತೆ ನಿಟ್ಟುಸಿರುಗಳನ್ನು ಬಿಡುತ್ತ ಕರುಣೆಯುಂಟಾಗುವಂತೆ ಪ್ರಲಾಪವನ್ನು ಮಾಡಲುಪಕ್ರಮಿಸಿದನು.

೩೭. ''ಪ್ರಭುಗಳ ಆಜ್ಞೆಯನ್ನು ತದೇಕನಿಷ್ಠೆಯಿಂದ ನೆರವೇರಿಸುವ ಮಾನವರ ಜನ್ಮವೇ ಸಫಲವಾದುದು. ಅಂತಹ ಸೇವಕರು ದುರ್ಲಭರೆಂದು ಹೇಳುತ್ತಿರುವರು.

ಪ್ರಭೂಣಾಮೇಕಚಿತ್ತೇನ ತೇ ಭೃತ್ಯಾ ದುರ್ಲಭಾಃ ಸ್ಮೃತಾಃ । ೬೭೦೬
ತೇಷಾಮರ್ಥಶ್ಚ ಧರ್ಮಶ್ಚ ಕುಲಂ ಚೈವ ಚ ತಾರಿತಂ । ೬೭೦೭
ಪ್ರಸನ್ನಾಸ್ತ್ರಿದಶಾಸ್ತೇಷಾಂ ಪ್ರಭುಭಕ್ತಾಶ್ಚ ಯೇ ನರಾಃ ॥ ೩೮ ॥
ಸೇವಾಧರ್ಮೋ ಹಿ ಗಹನೋ ಯೋಗಿನಾಮಪಿ ದುಷ್ಕರಃ ।
ನ ಜ್ಞೇಯಃ ಕೇನ ತತ್ತ್ವೇನ ದುರಾರಾಧ್ಯಃ ಪ್ರಭುರ್ಭವೇತ್ ॥ ೩೯ ॥
ಏಕೇನಾಪ್ಯಪರಾಧೇನ ಪ್ರಕೋಪಂ ಕುರುತೇ ಪ್ರಭುಃ ।
ವಿನಶ್ಯಂತ್ಯುಪಕಾರಾಣಿ ತಸ್ಮಾತ್ಸೇವಾ ಸುದುಷ್ಕರಾ ॥ ೪೦ ॥
ಸ್ವಾಮೀ ಸರ್ಪಶ್ಚ ವಹ್ನಿಶ್ಚ ತಪ್ತಭಾವಂ ವ್ರಜಂತಿ ಹಿ ।
ತಸ್ಮಾದ್ಯತ್ನೇನ ಸಂಸೇವ್ಯಾ ಆತ್ಮರಕ್ಷಣತತ್ಪರೈಃ ॥ ೪೧ ॥
ಸೋಽಹಂ ಭೂಮೌ ನಿಪತಿತಃ ಪ್ರಭೋರಾದೇಶಭಂಜಕಃ ।
ಕಾಂಸ್ತು ಲೋಕಾನ್ಗಮಿಷ್ಯಾಮಿ ಕಲುಷೀ ಭ್ರೂಣಹಾ ಇವ ॥ ೪೨ ॥
ಏವಂ ವಿಲಪ್ಯ ಬಹುಶೋ ಮಾಮೇವ ಶರಣಂ ಗತಃ ।
ಉವಾಚ ದೀನಯಾ ವಾಚಾ ಪ್ರಣಿಪತ್ಯ ಪುನಃ ಪುನಃ ॥ ೪೩ ॥

---

೩೮. ಅವರಿಗೆ ಐಶ್ವರ್ಯವೂ, ಧರ್ಮವೂ ಲಭಿಸುವುವು; ಅವರ ಕುಲವು ಉದ್ಧೃತವಾಗುವುದು. ಸ್ವಾಮಿಭಕ್ತರಾಗಿರುವ ಮನುಷ್ಯರಲ್ಲಿ ದೇವತೆಗಳೂ ಸುಮುಖರಾಗಿರುವರು.

೩೯. ಸೇವಾಧರ್ಮವು ಬಹಳ ದುರ್ಗಮವಾದುದು. ಯೋಗಿಗಳಿಗೂ ದುಸ್ಸಾಧ್ಯವಾದುದು. ಸ್ವಾಮಿಯು ಯಾವ ಕಾರ್ಯದಿಂದ ದುರಾರಾಧ್ಯನಾಗುವನೆಂಬುದನ್ನು ತಿಳಿಯಲಾಗುವುದಿಲ್ಲ.

೪೦. ಯಾವುದೊಂದು ಅಪರಾಧಕ್ಕಾದರೂ ಸ್ವಾಮಿಯು ಕೋಪಿಸಿಕೊಳ್ಳುವನು. ಸೇವಕನು ಮಾಡಿದ ಉಪಕಾರಗಳೆಲ್ಲವೂ ಅದರಿಂದ ನಾಶವಾಗುವುವು. ಆದುದರಿಂದ ಸೇವೆಯು ಬಹಳ ಕಷ್ಟಗಳಿಂದ ಕೂಡಿದುದಾಗಿರುವುದು.

೪೧. ಸ್ವಾಮಿ, ಸರ್ಪ ಮತ್ತು ಅಗ್ನಿ—ಇವರು ನಿಮಿಷಮಾತ್ರದಲ್ಲಿ ಕೋಪಗೊಳ್ಳುವರಾದುದರಿಂದ ಆತ್ಮರಕ್ಷಣೆಯಲ್ಲಿ ದೃಷ್ಟಿಯನ್ನಿಟ್ಟು ಜನರು ಇವರನ್ನು ಜಾಗರೂಕತೆಯಿಂದ ಸೇವಿಸಬೇಕು.

೪೨. ಸ್ವಾಮಿಯ ಆಜ್ಞೆಯನ್ನುಲ್ಲಂಘಿಸಿದ ನಾನು ಭೂಲೋಕಕ್ಕೆ ಬಂದು ಬಿದ್ದೆನು. ಶಿಶುಹತ್ಯೆಯನ್ನು ಮಾಡಿದವನಂತೆ ಮತ್ತಾವ ಲೋಕಗಳಿಗೆ ಪಾಪಿಯಾದ ನಾನು ಹೋಗುವೆನೊ!''

೪೩. ಇಂತೆಂದು ಬಹಳವಾಗಿ ಪ್ರಲಾಪಿಸಿ ಪುನಃ ನನ್ನನ್ನೇ ಶರಣುಹೊಂದಿ ಮತ್ತೆ ಮತ್ತೆ ನಮಸ್ಕರಿಸುತ್ತ ಕರುಣಾಜನಕವಾದ ಧ್ವನಿಯಿಂದ ಬೇಡಿಕೊಂಡನು.

ದೀನೋಽಸ್ಮಿ ಜ್ಞಾನಹೀನೋಽಸ್ಮಿ ಪ್ರಣತೋಽಸ್ಮಿ ಚ ಶಂಕರ ।
ಕುರು ಪ್ರಸಾದಂ ದೇವೇಶ ಅಪರಾಧಂ ಕ್ಷಮಸ್ವ ಮೇ ॥ ೪೪ ॥
ನ ಹಿ ನಿರ್ವಹಣಂ ಯಾಂತಿ ಪ್ರಭೂಣಾಮಾಶ್ರಿತಾ ರುಷಃ ।
ಪ್ರಸೀದ ದೇವದೇವೇಶ ದೀನಸ್ಯ ಕೃಪಣಸ್ಯ ಚ ॥ ೪೫ ॥
ಅಪಿ ಕೀಟಪತಂಗತ್ವಂ ಗಚ್ಛೇಯಂ ತವ ಶಾಸನಾತ್ ।
ಭಕ್ತೋಽಹಂ ಸರ್ವದಾ ದೇವ ಪುತ್ರತ್ವೇ ಹಿ ಪ್ರತಿಷ್ಠಿತಃ ॥ ೪೬ ॥
ಇತಿ ತಸ್ಯ ವಚಃ ಶ್ರುತ್ವಾ ಪುಷ್ಪದಂತಸ್ಯ ಪಾರ್ವತಿ ।
ಮಮತ್ವೇನ ತದಾ ದೇವಿ ಪ್ರೋಕ್ತಮಿತ್ಥಂ ತ್ವಯಾ ವಚಃ ॥ ೪೭ ॥
ಗಚ್ಛ ಪುತ್ರ ಮಮಾದೇಶಾನ್ಮಹಾಕಾಲವನಂ ಶುಭಂ ।
ಲಿಂಗಮಾರಾಧಯ ಕ್ಷಿಪ್ರಂ ತತ್ತ್ವನ್ನಾಮ್ನಾ ಭವಿಷ್ಯತಿ ॥ ೪೮ ॥
ಕೀರ್ತಿಸ್ತೇ ಭವಿತಾ ಪುತ್ರ ಯಾವದಾಭೂತಸಂಪ್ಲವಂ ।
ಇತ್ಯುಕ್ತೇ ತು ತ್ವಯಾ ದೇವಿ ಮಯಾಽಪ್ಯುಕ್ತಂ ವರಾನನೇ ॥ ೪೯ ॥
ನ ಮೇ ಮಿಥ್ಯಾ ವಚಃ ಪುತ್ರ ಭವಿಷ್ಯತಿ ಕಥಂಚನ ।
ದರ್ಶನಾದೇವ ಲಿಂಗಸ್ಯ ಮಮಾಭೀಷ್ಟೋ ಭವಿಷ್ಯಸಿ ॥ ೫೦ ॥

---

೪೪. "ಓ ಶಂಕರ! ನಾನು ದೀನನಾಗಿರುವೆನು; ಬುದ್ಧಿಯಿಲ್ಲದವನು; ನಿನ್ನನ್ನೇ ಶರಣುಹೊಕ್ಕಿರುವೆನು. ನನ್ನಲ್ಲಿ ಅನುಗ್ರಹವನ್ನು ತೋರಿ ನನ್ನ ಅಪರಾಧವನ್ನು ಕ್ಷಮಿಸು.

೪೫. ಆಶ್ರಿತರಾದವರು ಒಡೆಯರ ಕೋಪಗಳನ್ನು ತಡೆದುಕೊಳ್ಳಲು ಶಕ್ತರಾಗಿರುವುದಿಲ್ಲ. ಆದುದರಿಂದ ದೀನನೂ, ಕೃಪಣನೂ ಆದ ನನ್ನಲ್ಲಿ ಪ್ರಸನ್ನನಾಗು.

೪೬. ನಿನ್ನ ಅಪ್ಪಣೆಯನ್ನು ಅನುಸರಿಸಿ ನಾನು ಕೃಮಿಕೀಟಗಳ ಜನ್ಮಗಳನ್ನು ಪಡೆದರೂ ಯಾವಾಗಲೂ ನಿನ್ನ ಭಕ್ತನೇ ಆಗಿರುವೆನಲ್ಲದೆ, ಪುತ್ರನೆಂದೂ ಪ್ರತಿಷ್ಠಿಸಿರುವೆನು."

೪೭. ಪರ್ವತರಾಜಪುತ್ರಿಯೆ! ಇಂತೆಂದ ಆ ಪುಷ್ಪದಂತನ ಮಾತುಗಳನ್ನು ಕೇಳಿ ನೀನು ಸುತಾಭಿಮಾನದಿಂದ ಚೋದಿತಳಾಗಿ ಆತನಿಗೆ ಹೇಳಿದೆ.

೪೮. "ಪುತ್ರ! ನನ್ನ ಮಾತನ್ನು ಕೇಳಿ ಪವಿತ್ರಕ್ಷೇತ್ರವಾದ ಮಹಾಕಾಲವನಕ್ಕೆ ಹೋಗಿ ನೀನು ಒಂದು ಲಿಂಗವನ್ನರ್ಚಿಸು. ಅದು ನಿನ್ನ ಹೆಸರಿನಿಂದಲೇ ಪ್ರಖ್ಯಾತವಾಗುವುದು.

೪೯. ಅದರಿಂದ ಮಹಾಪ್ರಳಯವಾಗುವವರೆಗೂ ನಿನ್ನ ಕೀರ್ತಿಯೂ ನಿಂತಿರುವುದು." ಇಂತೆಂದು ನೀನು ಹೇಳಲು ನಾನೂ ಅವನಿಗೆ ಅಭಯವನ್ನಿತ್ತೆನು.

೫೦. ಎಲೈ ಪುತ್ರನೆ! ನನ್ನ ಮಾತೆಂದಿಗೂ ಸುಳ್ಳಾಗಲಾರದು. ನೀನು ಆ ಲಿಂಗವನ್ನು ನೋಡುವುದರಿಂದಲೇ ಪುನಃ ನನ್ನ ಪ್ರೀತಿಗೆ ಪಾತ್ರನಾಗಿ ಇಲ್ಲಿಗೆ ಬರುವೆ.

ವಿಮಾನೇ ಪುಷ್ಪಪಾದೇ ತು ಸಮಾರೂಢೋ ಭವಿಷ್ಯಸಿ ।
ಪುಷ್ಪೈಃ ಸಂಪೂಜ್ಯಮಾನಸ್ತು ಪದಂ ಪ್ರಾಪ್ಸ್ಯಸಿ ಶಾಶ್ವತಂ ॥ ೫೧ ॥
ಗಣೈಃ ಸಾರ್ಧಂ ಮಯಾ ಚೈವಮುದಿತೋ ವಿಚರಿಷ್ಯಸಿ ।
ಮಮಾಽಪಿ ನ ರತಿರ್ವತ್ಸ ಭವಿಷ್ಯತಿ ತ್ವಯಾ ವಿನಾ ॥ ೫೨ ॥
ಅಹಂ ತತ್ರಾಗಮಿಷ್ಯಾಮಿ ಮಹಾಕಾಲವನೇ ಶುಭೇ ।
ತುಷ್ಟೋಽಹಂ ಸರ್ವದಾ ವತ್ಸ ಗಣಾನಾಮಗ್ರಣೀಃ ಕೃತಃ ॥ ೫೩ ॥
ಅನಯಾ ಶುದ್ಧಯಾ ಭಕ್ತ್ಯಾ ಲೋಕಾನಾಮುಪಕಾರಕಃ ।
ಭವಿಷ್ಯಸಿ ನ ಸಂದೇಹಸ್ತಸ್ಮಿನ್ ಕ್ಷೇತ್ರೇ ಗತೋ ಧ್ರುವಂ ॥ ೫೪ ॥
ಇತ್ಯುಕ್ತೋ ಹಿ ಮಯಾ ದೇವಿ ಪುಷ್ಪದಂತೋ ಗಣಾಗ್ರಣೀಃ ।
ಮಾನೀ ಮಮಾಜ್ಞಯಾ ಮೌನೀ ಮಹಾಕಾಲವನೇ ಶುಭಂ ।
ಲಿಂಗಮಾರಾಧಯಾಮಾಸ ದುರ್ವಾಸೇಶಾದಥೋತ್ತರೇ ॥ ೫೫ ॥
ಲಿಂಗೇನೋಕ್ತಸ್ತು ಸಹಸಾ ತುಷ್ಟೋಽಹಂ ಗಣಸತ್ತಮ ।
ತ್ವನ್ನಾಮ್ನಾ ಖ್ಯಾತಿಮೇಷ್ಯಾಮಿ ಪ್ರಸಾದಸ್ತೇ ಕೃತೋಽಧುನಾ ॥ ೫೬ ॥

---

೫೧. ಅಲ್ಲದೆ ಪುಷ್ಪಶಯ್ಯೆಯಿಂದೊಡಗೂಡಿದ ವಿಮಾನದಲ್ಲಿ ಕುಳಿತು ಪುಷ್ಪಗಳಿಂದಲೇ ಪೂಜೆಯನ್ನು ಕೈಗೊಳ್ಳುತ್ತ ಶಾಶ್ವತಪದವಿಯನ್ನೂ ಪಡೆಯುವೆ.

೫೨. ಇದೂ ಅಲ್ಲದೆ ನೀನು ಸಂತೋಷಗೊಂಡು ಗಣಗಳೊಡನೆ ನನ್ನ ಸನ್ನಿಧಿಯಲ್ಲಿಯೇ ಸಂಚರಿಸುತ್ತಿರುವೆ. ನೀನಿಲ್ಲದಿದ್ದರೆ ನನಗೂ ಸಂತೋಷ ವಾಗಿರುವುದಿಲ್ಲ.

೫೩. ನಾನೂ ಶುಭಪ್ರದೇಶವಾದ ಆ ಮಹಾಕಾಲವನಕ್ಕೆ ಬರುವೆನು. ನಿನ್ನಲ್ಲಿ ನಾನು ಯಾವಾಗಲೂ ಸಂತುಷ್ಟನಾಗಿ ನಿನ್ನನ್ನು ಗಣಗಳಿಗೆ ನಾಯಕ ನನ್ನಾಗಿ ಮಾಡಿರುವೆನು.

೫೪. ಆ ಕ್ಷೇತ್ರಕ್ಕೆ ನೀನು ಹೋದೊಡನೆಯೇ ನಿನ್ನ ಈ ಶುದ್ಧಭಕ್ತಿಯ ಫಲವಾಗಿ ಲೋಕೋಪಕಾರಕನಾಗುವೆಯೆಂಬುದರಲ್ಲಿ ಸಂದೇಹವಿಲ್ಲವು. ಇದು ನಿಜವು.''

೫೫. ದೇವಿಯೆ! ಇಂತೆಂದು ನಾನು ಗಣನಾಥನಾದ ಪುಷ್ಪದಂತನಿಗೆ ಹೇಳಿದೆನು. ಅಭಿಮಾನಧನನಾದ ಆತನು ನನ್ನ ಅಪ್ಪಣೆಯಂತೆ ಮೌನವ್ರತ ವನ್ನವಲಂಬಿಸಿ ಪವಿತ್ರವಾದ ಮಹಾಕಾಲವನಕ್ಕೆ ಹೋಗಿ ದುರ್ವಾಸೇಶ್ವರನಿಗೆ ಉತ್ತರದಿಕ್ಕಿನಲ್ಲಿರುವ ಮಹಾಲಿಂಗವನ್ನು ಪೂಜಿಸಿದನು.

೫೬. ಆ ಲಿಂಗವು ಹೇಳಿತು. ''ಎಲೈ ಗಣೋತ್ತಮನೆ! ನಾನು ಸಂತುಷ್ಟ ನಾದೆನು. ಇನ್ನುಮೇಲೆ ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವೆನು. ಇಲ್ಲಿ ನಾನು ನಿನ್ನಲ್ಲಿ ಪ್ರಸನ್ನನಾಗಿರುವೆನು.''

ಏತಸ್ಮಿನ್ನಂತರೇ ದೇವಿ ತ್ವಯಾ ಸಾರ್ಧಮಹಂ ಗತಃ ।
ಶಕ್ರಾದ್ಯೈಸ್ತ್ರಿದಶೈಃ ಸಾರ್ಧಂ ಗಣೈರ್ನಾನಾವಿಧೈಸ್ತಥಾ ॥ ೫೭ ॥
ಹೃಷ್ಟಸ್ತು ಪುಷ್ಪದಂತೋಽಪಿ ಪುಷ್ಪಪಟ್ಟಾಸನೇ ಶುಭೇ ।
ಪುಷ್ಪೈಃ ಪ್ರಕೀರ್ಯಮಾಣೋಽಪಿ ಪುನಃ ಪ್ರಾಪ್ತೋ ಮಮಾಂತಿಕಂ ॥ ೫೮ ॥
ಮಯಾ ಸಂಶ್ಲೇಷಿತಃ ಸ್ನೇಹಾದುತ್ಸಂಗೇಽಪ್ಯಧಿರೋಪಿತಃ ।
ಸ್ಥಾನಂ ದತ್ತಂ ವಿಶಾಲಾಕ್ಷಿ ಇದಮುಕ್ತಂ ಮಯಾ ತದಾ ॥ ೫೯ ॥
ಯೇ ಪಶ್ಯಂತಿ ನರಾ ಲಿಂಗಂ ತ್ವಯಾ ಸಂಪೂಜಿತಂ ಭುವಿ ।
ತೇ ಯಾಸ್ಯಂತಿ ಪುಷ್ಪಕೇಣ ಕ್ರೀಡಂತೋ ವೈ ತ್ರಿವಿಷ್ಟಪಂ ॥ ೬೦ ॥
ಗಣಾಧ್ಯಕ್ಷಾ ಭವಿಷ್ಯಂತಿ ಸರ್ವಕಾಮೈರಲಂಕೃತಾಃ ।
ಮಮ ಲೋಕೇ ಗಣಾಧ್ಯಕ್ಷಾ ಯಾವದಿಂದ್ರಾಶ್ಚತುರ್ದಶ ॥ ೬೧ ॥
ದರ್ಶನಾತ್ಕ್ಷೀಯತೇ ಪಾಪಮೈಹಿಕಂ ಪೂರ್ವಕಂ ತಥಾ ।
ತತಃ ಪ್ರಸಾದಾನ್ಮೇ ಸರ್ವಂ ಜ್ಞಾನಂ ಸಮ್ಯಗ್ಭವಿಷ್ಯತಿ ॥ ೬೨ ॥

---

೫೭. ದೇವಿಯೆ! ಇಷ್ಟರಲ್ಲಿಯೇ ನಿನ್ನನ್ನೂ, ದೇವತೆಗಳನ್ನೂ, ಅನೇಕ ವಿಧಗಳಾದ ಗಣನಾಯಕರನ್ನೂ ಪರಿವಾರವಾಗಿ ಕರೆದುಕೊಂಡು ನಾನೂ ಅಲ್ಲಿಗೆ ಬಂದೆನು.

೫೮. ಪುಷ್ಪದಂತನೂ ಆನಂದಭರಿತನಾಗಿ ಪುಷ್ಪಮಯವಾದ ಪಟ್ಟಾಸನದಲ್ಲಿ ಕುಳಿತು ಪುಷ್ಪವರ್ಷಗಳು ಸುರಿಯುತ್ತಿರಲು ಮತ್ತೆ ನನ್ನ ಬಳಿಗೆ ಬಂದು ಸೇರಿದನು.

೫೯. ನಾನು ಅವನನ್ನು ಆಲಿಂಗಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಉತ್ತಮಸ್ಥಾನವನ್ನು ಆವನಿಗೆ ಕೊಟ್ಟೆನು. ಎಲೌ ವಿಶಾಲಾಕ್ಷಿಯೆ! ಆಗ ಆತನಿಗೆ ನಾನು ಇಂತೆಂದೆನು.

೬೦. "ಅಯ್ಯಾ ಪುಷ್ಪದಂತನೆ! ಯಾರು ನಿನ್ನಿಂದ ಪೂಜಿಸಲ್ಪಟ್ಟ ಈ ಲಿಂಗವನ್ನು ನೋಡುತ್ತಾರೆಯೋ ಅವರು ಪುಷ್ಪಕವಿಮಾನಗಳಲ್ಲಿ ಕುಳಿತು ಕ್ರೀಡಿಸುತ್ತ ಸ್ವರ್ಗವನ್ನು ಸೇರುವರು.

೬೧. ಅವರು ಸರ್ವಾಭೀಷ್ಟಗಳನ್ನೂ ಪಡೆಯುವುದಲ್ಲದೆ ನನ್ನ ಲೋಕದಲ್ಲಿ ಹದಿನಾಲ್ಕು ಇಂದ್ರಕಲ್ಪಗಳವರೆಗೂ ಗಣನಾಯಕರ ಅಧಿಕಾರವನ್ನು ಪಡೆಯುವರು.

೬೨. ಇದನ್ನು ನೋಡುವುದರಿಂದಲೇ ಮನುಷ್ಯರಿಗೆ ಈ ಜನ್ಮದಲ್ಲಿಯೂ ಜನ್ಮಾಂತರಗಳಲ್ಲಿಯೂ ಮಾಡಿದ ಪಾಪವೆಲ್ಲವೂ ನಶಿಸಿಹೋಗಿ ಬಳಿಕ ನನ್ನ ಅನುಗ್ರಹದಿಂದ ಪೂರ್ಣಜ್ಞಾನವು ಲಭಿಸುವುದು.

ಯಃ ಪೂಜಯೇಚ್ಚತುರ್ದಶ್ಯಾಮಷ್ಟಮ್ಯಾಂ ಸೋಮವಾಸರೇ ।
ಅಮರೈಃ ಸಹ ಸಂಹೃಷ್ಟೋ ಮೋದತೇ ದಿವಿ ಸರ್ವದಾ ।
ಪೈತೃಕೈರ್ಮಾತೃಕೈಃ ಸಾರ್ಧಂ ಕುಲೈಸ್ತು ಸಪ್ತಭಿರ್ಯುತಃ ॥ ೬೩ ॥
ನ ವದೇತ್ಕೇನಚಿತ್ಸಾರ್ಧಂ ನರೋ ಯಃ ಪ್ರಾತರುತ್ಥಿತಃ ।
ಪುಷ್ಪದಂತೇಶ್ವರಂ ದೃಷ್ಟ್ವಾ ಸೋಽಶ್ವಮೇಧಫಲಂ ಲಭೇತ್ ॥ ೬೪ ॥
ಮುಚ್ಯತೇ ಪಾತಕಾದ್ಯೈಶ್ಚ ಯಃ ಶಾಠ್ಯೇನಾಽಪಿ ಪಶ್ಯತಿ ।
ಮೃತೋ ಗಾಂಧರ್ವಲೋಕೇತು ಯಾತಿ ವಿದ್ಯಾಧರೈರ್ವೃತಃ ॥ ೬೫ ॥
ನ ತಸ್ಯ ಸಂತತಿಚ್ಛೇದೋ ಯಃ ಪಶ್ಯತಿ ದಿನೇ ದಿನೇ ।
ನಿಯಮೇನ ಗಣಾಽಧ್ಯಕ್ಷ ಜಾಯತೇ ಬ್ರಹ್ಮಣೋ ದಿನಂ ॥ ೬೬ ॥
ಐಶ್ವರ್ಯಂ ಸಪ್ತಲೋಕೇಷು ಭುಕ್ತ್ವಾ ಭೋಗಾನ್ಯಥಾಕ್ರಮಂ ।
ಪೃಥಿವ್ಯಾಮೇಕರಾಡ್ಭೂತ್ವಾ ಮಮಾಂಗೇ ಸಂಭವಿಷ್ಯತಿ ॥ ೬೭ ॥

---

೬೩. ಯಾವ ನರನು ಸೋಮವಾರದ ದಿನ ಬರುವ ಅಷ್ಟಮಿ ಮತ್ತು ಚತುರ್ದಶಿಯ ದಿನಗಳಲ್ಲಿ ಈ ಮಹಾಲಿಂಗವನ್ನು ಪೂಜಿಸುವನೊ, ಅವನು ಯಾವಾಗಲೂ ದೇವತೆಗಳೊಡನೆ ಸಂತೋಷದಿಂದ ಸ್ವರ್ಗಲೋಕದಲ್ಲಿ ವಾಸ ಮಾಡುತ್ತಿರುವನು. ತಾಯಿತಂದೆಗಳ ಉಭಯ ವಂಶದವರ ಸಪ್ತಕುಲದವರೊಡನೆ ಅಲ್ಲಿಗೆ ಹೋಗುವನು.

೬೪. ಯಾವನು ಪ್ರಾತಃಕಾಲದಲ್ಲಿ ಎದ್ದಕೂಡಲೆ ಯಾವನೊಡನೆಯೂ ಮಾತನಾಡದೆ ಮೊದಲು ಪುಷ್ಪದಂತೇಶ್ವರನನ್ನು ನೋಡುವನೊ, ಅವನು ಅಶ್ವಮೇಧಯಜ್ಞದ ಫಲವನ್ನು ಹೊಂದುವನು.

೬೫. ಶಾಠ್ಯದಿಂದಾದರೂ ಯಾವ ಮನುಜಶ್ರೇಷ್ಠನು ಈ ಮಹಾಲಿಂಗವನ್ನು ನೋಡುವನೊ, ಅವನು ಸಮಸ್ತ ಮಹಾಪಾತಕೋಪಪಾತಕಗಳೆಲ್ಲವನ್ನೂ ಕಳೆದು ಕೊಂಡು ದೇಹಾವಸಾನದಲ್ಲಿ ವಿದ್ಯಾಧರರಿಂದೊಡಗೂಡಿ ಗಂಧರ್ವಲೋಕವನ್ನು ಸೇರಿ ಸುಖಿಸುವನು.

೬೬. ಎಲೈ ಗಣನಾಯಕನೆ! ಯಾವನು ನಿತ್ಯದಲ್ಲಿಯೂ ನಿಯಮದಿಂದ ಈ ಪುಷ್ಪದಂತೇಶ್ವರನನ್ನು ನೋಡುತ್ತಿರುವನೊ, ಅವನಿಗೆ ಬ್ರಹ್ಮನ ಒಂದು ದಿನದ ವರೆಗೂ ಸಂತಾನವಿಚ್ಛೇದವುಂಟಾಗುವುದಿಲ್ಲ.

೬೭. ಮಹಾ ಪುಣ್ಯಶಾಲಿಯಾದ ಅಂಥ ಮಾನವಶ್ರೇಷ್ಠನು ಏಳು ಊರ್ಧ್ವ ಲೋಕಗಳ ಸಕಲೈಶ್ವರ್ಯವನ್ನೂ ಕ್ರಮವಾಗಿ ಅನುಭವಿಸಿ ಭೂಮಿಯನ್ನೆಲ್ಲ ಏಕಚ್ಛತ್ರದಿಂದಾಳಿ ಕಡೆಯಲ್ಲಿ ನನ್ನಲ್ಲಿ ಐಕ್ಯವನ್ನು ಪಡೆಯುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪುಷ್ಪದಂತೇಶ್ವರೇಶಸ್ಯ ಅವಿಮುಕ್ತೇಶ್ವರಂ ಶೃಣು ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪುಷ್ಪದಂತೇಶ್ವರಮಾಹಾತ್ಮ್ಯವರ್ಣನಂ" ನಾಮ
ಸಪ್ತಸಪ್ತತಿತಮೋಽಧ್ಯಾಯಃ

---

೭೮. ದೇವಿಯೆ! ಇಂತು ನಿನಗೆ ಪುಷ್ಪದಂತೇಶ್ವರಮಹಾದೇವನ ಪ್ರಭಾವವನ್ನು ಹೇಳಿದೆನು. ಪಾಪನಾಶಕವಾದ ಈ ಚರಿತ್ರೆಯಾದಮೇಲೆ ಅವಿಮುಕ್ತೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪುಷ್ಪದಂತೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಸಪ್ತತಿತಮೋಽಧ್ಯಾಯಃ

### ಅವಿಮುಕ್ತೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಅಷ್ಟಸಪ್ತತಿಕಂ ವಿದ್ಧಿ ಅವಿಮುಕ್ತೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ತೀರ್ಥಯಾತ್ರಾಫಲಂ ಲಭೇತ್ ॥ ೧ ॥
ಶಾಕಲೇ ನಗರೇ ದೇವಿ ಚಿತ್ರಸೇನೋ ಮಹೀಪತಿಃ ।
ಬಭೂವ ಭುವಿ ವಿಖ್ಯಾತೋ ರೂಪವಾನ್ಮನ್ಮಥಾಧಿಕಃ ॥ ೨ ॥
ತಸ್ಯ ಚಂದ್ರಪ್ರಭಾ ಭಾರ್ಯಾ ಪ್ರಾಣೇಭ್ಯೋಽಪಿ ಗರೀಯಸೀ ।
ಪತಿವ್ರತಾ ಧರ್ಮಶೀಲಾ ರೂಪಯೌವನಶಾಲಿನೀ ॥ ೩ ॥
ಅಪುತ್ರಸ್ಯಾಽಪಿ ನೃಪತೇಃ ಪುತ್ರೀ ಜಾತಾ ಮನೋರಮಾ ।
ತಸ್ಯಾ ನಾಮ ತದಾ ಚಕ್ರೇ ಪಿತಾ ಪಾರ್ಥಿವಸತ್ತಮಃ ॥ ೪ ॥
ಸರ್ವಲಕ್ಷಣಸಂಪನ್ನಾ ಕನ್ಯಾ ಲಾವಣ್ಯವತ್ಯಪಿ ।
ಸಾಽಪಿ ಜಾತಿಸ್ಮರಾ ದೇವಿ ಸಸ್ಮಾರ ಚ ಪುರಾತನಂ ॥ ೫ ॥

---

### ಕನ್ನಡದ ಅನುವಾದ

#### ಅವಿಮುಕ್ತೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಎಪ್ಪತ್ತೆಂಟನೆಯ ಮಹಾಲಿಂಗವಾದ ಅವಿಮುಕ್ತೇಶ್ವರನನ್ನು ನೋಡಿದಮಾತ್ರದಿಂದಲೇ ಸಮಸ್ತ ತೀರ್ಥಗಳಲ್ಲಿಯೂ ಯಾತ್ರೆಗಳನ್ನು ಮಾಡಿದ ಫಲವು ಲಭಿಸುವುದು.

೨. ಹಿಂದೆ ಶಾಕಲನಗರದಲ್ಲಿ ಭೂಮಂಡಲದಲ್ಲಿಯೆ ಪ್ರಖ್ಯಾತನೂ, ಮನ್ಮಥನನ್ನು ಮೀರಿಸುವ ಸೌಂದರ್ಯಶಾಲಿಯೂ ಆದ ಚಿತ್ರಸೇನನೆಂಬ ರಾಜನೋರ್ವನಿದ್ದನು.

೩. ಆತನಿಗೆ ಪ್ರಾಣಗಳಿಗಿಂತ ಅಧಿಕಳೂ, ಪತಿವ್ರತೆಯೂ, ಧರ್ಮಶೀಲಳೂ, ರೂಪಯೌವನಸಂಪನ್ನಳೂ ಆದ ಚಂದ್ರಪ್ರಭೆಯೆಂಬ ಮಹಿಷಿಯಿದ್ದಳು.

೪. ಬಹಳಕಾಲ ಸಂತಾನಹೀನನಾಗಿದ್ದ ಆತನಿಗೊಬ್ಬ ಸುಂದರಿಯಾದ ಮಗಳು ಜನಿಸಿದಳು. ಮಹಾರಾಜನಾದ ಆ ಚಿತ್ರಸೇನನು ಆ ಮಗುವಿಗೆ ನಾಮಕರಣವನ್ನು ಮಾಡಿದನು.

೫. ಸಮಸ್ತ ಶುಭಲಕ್ಷಣಗಳಿಂದ ಕೂಡಿದ್ದ ಆಕೆಗೆ ಲಾವಣ್ಯವತಿಯೆಂಬ ಹೆಸರನ್ನಿಟ್ಟನು. ಆ ಕನ್ಯೆಯು ಜನ್ಮಾಂತರಸ್ಮರಣೆಯುಳ್ಳವಳಾಗಿ ತನ್ನ ಹಿಂದಿನ ನಡತೆಯೆಲ್ಲವನ್ನೂ ಜ್ಞಾಪಿಸಿಕೊಂಡಳು.

ವೈರಾಗ್ಯಾದ್ಬ್ರಹ್ಮಚರ್ಯಂ ಚ ಚಚಾರ ತನುಮಧ್ಯಮಾ ।
ಕದಾಚಿದ್ಯೌವನಂ ಪ್ರಾಪ್ತಾ ಸಾ ಚ ಪೃಷ್ಟಾ ನೃಪೇಣ ವೈ ॥ ೬ ॥
ಉತ್ಸಂಗೇ ಚ ನಿಜೇ ಕೃತ್ವಾ ಮೂರ್ಧ್ನಿ ಚಾಘ್ರಾಯ ಹರ್ಷಿತಃ ।
ಪುತ್ರಿ ಪ್ರದಾನಕಾಲಸ್ತೇ ಕಸ್ಮೈ ದೇಯಾ ವರಾಯ ಚ ॥ ೭ ॥
ನೃಪಾಯ ನೃಪಪುತ್ರಾಯ ಸಮ್ಮತಾಯ ದ್ವಿಜಾಯ ವಾ ।
ವೃದ್ಧಾಯ ಬಹುಭಾರ್ಯಾಯ ಗ್ರಾಮೀಣಾಯ ಚ ಪುತ್ರಿಣೇ ।
ಹರ್ಷೇಣ ಚಾಽಽವೃತೋ ರಾಜಾ ಪುನಃ ಪಪ್ರಚ್ಛ ತಾಂ ಸುತಾಂ ॥ ೮ ॥
ಪೃಷ್ಟಾ ಚ ಸಾ ಯದಾ ದೇವೀ ನಚೋವಾಚ ನೃಪಂ ಪ್ರತಿ ।
ಅಧೋಮುಖೀ ಚ ಸಂಜಾತಾ ಪುನಃ ಪ್ರೋಕ್ತಾ ನೃಪೇಣ ತು ॥ ೯ ॥
ಯದಿ ಮದ್ವಚನಂ ಪುತ್ರಿ ಪ್ರತಿಭಾತಿ ನ ಸಾಂಪ್ರತಂ ।
ವರಣಂ ಸ್ವೇಚ್ಛಯಾ ಪುತ್ರಿ ಕುರು ತರ್ಹಿ ಸ್ವಯಂವರಂ ॥ ೧೦ ॥
ಇತ್ಯುಕ್ತಾ ಸಾ ನೃಪತಿನಾ ಪಿತ್ರಾ ಪ್ರೋಕ್ತಾ ಪುನಃ ಪುನಃ ।
ರುರೋದ ಸಾ ವೈ ಕರುಣಂ ಶ್ರುತ್ವಾ ತಾಂ ಕುತ್ಸಿತಾಂ ಗತಿಂ ॥ ೧೧ ॥

---

೬. ಬಡುನಡುವಿನವಳಾದ ಆಕೆಯು ವೈರಾಗ್ಯದಿಂದ ತಪಸ್ಸನ್ನಾಚರಿಸುತ್ತಿದ್ದಳು. ಕಾಲಾನುಕ್ರಮದಲ್ಲಿ ಯೌವನಾವಸ್ಥೆಯನ್ನು ತಾಳಿದ ಆಕೆಯನ್ನು ರಾಜನು ಕೇಳಿದನು.

೭. ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆನಂದದಿಂದ ತಲೆಯನ್ನು ಮೂಸಿನೋಡುತ್ತ ಇಂತೆಂದನು. "ಪುತ್ರಿಯೆ! ನಿನ್ನನ್ನು ಮದುವೆ ಮಾಡಿಕೊಡುವ ಕಾಲವೊದಗಿತು. ಯಾವ ವರನಿಗೆ ನಿನ್ನನ್ನು ಕೊಡಲಿ?"

೮. ಆನಂದಭರಿತನಾದ ರಾಜನು ಮತ್ತೆ ಆಕೆಯನ್ನು ಪ್ರಶ್ನೆಮಾಡಿದನು. "ರಾಜನಿಗೊ, ರಾಜಪುತ್ರನಿಗೊ, ನೀನೊಪ್ಪಿದ ಬ್ರಾಹ್ಮಣನಿಗೊ, ವಿದ್ಯಾವೃದ್ಧನಿಗೊ, ಬಹುಜನ ಹೆಂಡಿರುಳ್ಳವನಿಗೊ, ಪುತ್ರಸಂತಾನವಂತನಾದ ಅನಾಗರಿಕನಿಗೊ ಯಾರಿಗೆ ಕೊಡಲಿ?"

೯. ಇಂತೆಂದು ಕೇಳಲ್ಪಟ್ಟ ರಾಜಕುಮಾರಿಯು ತಂದೆಗೆ ಯಾವ ಪ್ರತ್ಯುತ್ತರವನ್ನೂ ಕೊಡಲಾರದೆ ತಲೆಯನ್ನು ತಗ್ಗಿಸಿರಲು ಆತನು ಮತ್ತೆ ಹೇಳಿದನು.

೧೦. "ಮಗಳೆ! ಈಗ ನನ್ನ ಮಾತು ನಿನಗೆ ಸರಿದೋರದಿದ್ದರೆ ಹೋಗಲಿ. ಸ್ವಯಂವರವನ್ನು ನಡೆಸಿ ನಿನಗೆ ಬೇಕಾದ ವರನನ್ನೇ ಮದುವೆಯಾಗುವಿಯಂತೆ!"

೧೧. ಇಂತೆಂದು ತಂದೆಯಾದ ಮಹಾರಾಜನು ಮತ್ತೆ ಮತ್ತೆ ಕೇಳುತ್ತಿರಲು ಆ ಕನ್ಯೆಯು ತನ್ನ ಪರೋಪಜೀವನದ ನೀಚಗತಿಯನ್ನು ಕೇಳಿ ಬಹುವಾಗಿ ಅತ್ತಳು.

ಜಹಾಸ ಚಾಽತಿಹಾಸೇನ ಪುನಃ ಶ್ವಾಸಾಂಶ್ಚ ಮುಂಚತಿ ।
ಪ್ರಹರ್ಷಂ ಚ ಪುನಃ ಕ್ಷಿಪ್ರಂ ಪ್ರಾಪ್ಯ ಬಾಷ್ಪಂ ಚ ಮುಂಚತಿ ॥ ೧೨ ॥
ತಾಮುವಸ್ಥಾಂ ಗತಾಂ ದೃಷ್ಟ್ವಾ ಪುತ್ರೀಮುನ್ಮತ್ತತಾಂ ಗತಾಂ ।
ಕಿಮೇತದಿತಿ ಭೂಪಾಲೋ ಗ್ರಸಿತಾ ಕಿಂ ಗ್ರಹೇಣ ವೈ ॥ ೧೩ ॥
ಭೂತೇನ ವಾ ಪಿಶಾಚೇನ ಮತ್ಸುತಾ ಲಕ್ಷಣೈರ್ಯುತಾ ।
ಇತಿ ಚಿಂತಾಪರೋ ರಾಜಾ ಯದಾ ಜಾತೋ ಯಶಸ್ವಿನಿ ॥ ೧೪ ॥
ತದಾ ಪ್ರೋಕ್ತಸ್ತಯಾ ಪುತ್ರ್ಯಾ ಮಾ ತಾತ ವಿಮನಾ ಭವ ।
ನಾಽಹಂ ಗ್ರಸ್ತಾ ಗ್ರಹೇಣೇಹ ನ ಭೂತೇನ ನ ರಕ್ಷಸಾ ॥ ೧೫ ॥
ನ ಪಿಶಾಚೇನ ಯಕ್ಷೇಣ ತವ ಕನ್ಯಾ ಮಹೀಪತೇ ।
ಜಾತಿಸ್ಮರಾಽಹಮುತ್ಪನ್ನಾ ಶ್ರೂಯತಾಂ ಮಮ ಜನ್ಮ ಚ ॥ ೧೬ ॥
ಪ್ರಾಗ್ಜ್ಯೋತಿಷೇ ಪುರೇ ವಿಪ್ರೋ ಹರಸ್ವಾಮೀ ಬಭೂವ ಹ ।
ಭಾರ್ಯಾಽಹಂ ದುರ್ಭಗಾ ಜಾತಾ ತಸ್ಯ ವಿಪ್ರಸ್ಯ ಪಾರ್ಥಿವ ॥ ೧೭ ॥
ರೂಪಯೌವನಸಂಪನ್ನಾ ತಸ್ಯ ನಾಽಹಂ ಪ್ರಿಯಾ ವಿಭೋ ।
ಸದಾ ವಿದ್ವೇಷಸಂಯುಕ್ತೋ ಮಯಿ ನಿಷ್ಠುರಜಲ್ಪಕಃ ॥ ೧೮ ॥

---

೧೨. ಬಳಿಕ ಅವಳು ಗಟ್ಟಿಯಾಗಿ ನಕ್ಕಳು. ಮತ್ತೆ ನಿಟ್ಟುಸಿರುಗಳನ್ನು ಬಿಡುತ್ತಿದ್ದಳು. ಕ್ಷಿಪ್ರದಲ್ಲಿಯೇ ಹರ್ಷಭರಿತಳಾಗಿ ಮತ್ತೆ ಕಣ್ಣೀರನ್ನು ಸುರಿಸ ತೊಡಗಿದಳು.

೧೩. ಇಂತು ಪುತ್ರಿಯು ಉನ್ಮಾದಾವಸ್ಥೆಯಲ್ಲಿದ್ದುದನ್ನು ಕಂಡು ರಾಜನು ಇದೇನೆಂದು ಚಿಂತಾಕ್ರಾಂತನಾದನು. "ಇವಳಿಗೆ ಯಾವುದಾದರೂ ಗ್ರಹವು ಹಿಡಿಯಿತೆ?

೧೪. ಸರ್ವಲಕ್ಷಣಸಂಪನ್ನೆಯಾದ ನನ್ನ ಮಗಳಿಗೆ ಭೂತಪಿಶಾಚಗಳ ಆವೇಶವೇನಾದರೂ ಆಯಿತೆ?" ಎಂಬುದಾಗಿ ರಾಜನು ಬಹಳ ಚಿಂತೆಗೊಳಗಾದನು.

೧೫. ಆಗ ಪುತ್ರಿಯು ತಂದೆಗೆ ಹೇಳಿದಳು. "ತಂದೆಯೆ! ನೀನು ಖಿನ್ನ ಮನಸ್ಕನಾಗಬೇಡ. ನಾನು ಗ್ರಹಗಳಿಂದಲೂ, ಭೂತಗಳಿಂದಲೂ, ರಾಕ್ಷಸರಿಂದಲೂ ಪೀಡಿತಳಾಗಿಲ್ಲ.

೧೬. ಮಹಾರಾಜ! ನಿನ್ನ ಮಗಳಾದ ನನ್ನನ್ನು ಯಾವ ಪಿಶಾಚಗಳೂ, ಯಕ್ಷರೂ ಹಿಡಿದಿಲ್ಲ. ನಾನು ಹುಟ್ಟುತ್ತಲೇ ಜನ್ಮಾಂತರಸ್ಮೃತಿಯುಳ್ಳವಳಾದೆನು. ನನ್ನ ಜನ್ಮದ ಕಥೆಯನ್ನು ಕೇಳು.

೧೭. ರಾಜೇಂದ್ರ! ಪ್ರಾಗ್ಜ್ಯೋತಿಷವೆಂಬ ಪಟ್ಟಣದಲ್ಲಿ ಹರಸ್ವಾಮಿಯೆಂಬ ಒಬ್ಬ ಬ್ರಾಹ್ಮಣನಿದ್ದನು. ನೀಚಳಾದ ನಾನು ಆತನಿಗೆ ಪತ್ನಿಯಾಗಿದ್ದೆನು.

೧೮. ರೂಪಯೌವನಗಳಿಂದ ಕೂಡಿದ್ದರೂ ನಾನು ಆತನಿಗೆ ಪ್ರಿಯಳಾಗಿ

ನಾಽನ್ಯಸ್ಯ ಕಸ್ಯಚಿದ್ದ್ವೇಷ್ಟಾ ಮುಕ್ತ್ವಾ ಮಾಂ ಪೃಥಿವೀಪತೇ ।
ಪಾಣಿಗ್ರಹಣಕಾಲೇ ತು ಗ್ರಹೈಃ ಪಾಪೈರ್ವಿಲೋಕಿತಾ ।
ಅಹಮೂಢಾ ಕುಲೀನೇನ ದ್ವಿಜೇನಾಽತಿಗುಣೇನ ಚ ॥ ೧೯ ॥
ಸ ಚಾಽವಲೋಕಿತೋ ವಿಪ್ರೋ ಗ್ರಹೈಃ ಪುಣ್ಯೈರ್ನರಾಽಧಿಪ ।
ತೇನ ಮೇ ವಲ್ಲಭೋ ರಾಜನ್ನ ಚಾಽಹಂ ತಸ್ಯ ವಲ್ಲಭಾ ॥ ೨೦ ॥
ಸ ಸದಾಚಾರಸಂಯುಕ್ತೋ ವೇದಾಽಧ್ಯಯನತತ್ಪರಃ ।
ನಾಽನ್ಯತ್ರ ಕುರುತೇ ಭಾವಂ ಬ್ರಹ್ಮಚರ್ಯವ್ರತೇ ಸ್ಥಿತಃ ॥ ೨೧ ॥
ತತೋಽಹಂ ಕ್ರೋಧಸಂಯುಕ್ತಾ ವಶೀಕರಣಲಂಪಟಾ ।
ಅಪೃಚ್ಛಂ ಪ್ರಮದಾಸ್ತಾತ ಯಾಸ್ತ್ಯಕ್ತಾಃ ಪತಿಭಿಃಕಿಲ ॥ ೨೨ ॥
ತಾಭಿರುಕ್ತಾ ಹ್ಯಹಂ ಭೂಪ ವಶ್ಯೋ ಭರ್ತಾ ಭವಿಷ್ಯತಿ ।
ಅಸ್ಮಾಕಂ ಪ್ರತ್ಯಯೋ ಜಾತಸ್ತಸ್ಮಾತ್ತ್ವಂ ಕರ್ತುಮರ್ಹಸಿ ॥ ೨೩ ॥
ಭೇಷಜೈರ್ವಿವಿಧೈಶ್ಚೂರ್ಣೈರ್ಮಂತ್ರೈರ್ಮೋಹಕರೈಃ ಪರೈಃ ।
ತೈಸ್ತೈಸ್ತು ಕೃತಲೇಪೋಽಪಿ ಭವಿತಾ ದಾಸವತ್ಪತಿಃ ॥ ೨೪ ॥

---

ಇರಲಿಲ್ಲ. ಆತನು ನನ್ನಲ್ಲಿ ಯಾವಾಗಲೂ ದ್ವೇಷಬುದ್ಧಿಯುಳ್ಳವನಾಗಿ ನಿಷ್ಠುರ ವಾಕ್ಯಗಳನ್ನಾಡುತ್ತಿದ್ದನು.

೧೯. ಭೂನಾಥನೆ! ನನ್ನನ್ನುಳಿದು ಆತನು ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಪಾಣಿಗ್ರಹಣಕಾಲದಲ್ಲಿ ನಾನು ಪಾಪಗ್ರಹಗಳ ವೀಕ್ಷಣೆಗೊಳಗಾಗಿದ್ದೆನು. ಆದರೂ ಕುಲೀನನೂ, ಸಕಲ ಸದ್ಗುಣಭರಿತನೂ ಆದ ಆ ಬ್ರಾಹ್ಮಣನನ್ನೇ ಮದುವೆ ಮಾಡಿಕೊಂಡೆನು.

೨೦. ನರವರ! ಆ ಬ್ರಾಹ್ಮಣನಾದರೊ ಶುಭಗ್ರಹಗಳ ಅವಲೋಕನಕ್ಕೆ ಪಾತ್ರನಾಗಿದ್ದನು. ಆದುದರಿಂದಲೇ ಆತನು ನನಗೆ ಪ್ರಿಯನಾದರೂ ನಾನು ಮಾತ್ರ ಆತನಿಗೆ ಬೇಕಾದವಳೆನಿಸಲಿಲ್ಲ.

೨೧. ಆತನು ಸದಾಚಾರನಿರತನೂ, ವೇದಾಧ್ಯಯನತತ್ಪರನೂ, ಬ್ರಹ್ಮಚರ್ಯವ್ರತಪಾಲಕನೂ ಆಗಿದ್ದುಕೊಂಡು ಬೇರೆ ಸ್ತ್ರೀಯರಲ್ಲಿ ಮನಸ್ಸನ್ನಿಟ್ಟಿರಲಿಲ್ಲ.

೨೨. ತಂದೆಯೆ! ಆಗ ನಾನು ಕೋಪಗೊಂಡವಳಾಗಿ ಗಂಡನನ್ನು ಹೇಗಾದರೂ ವಶಮಾಡಿಕೊಳ್ಳಲೆಳಸಿ ಗಂಡಂದಿರು ತ್ಯಜಿಸಿದ್ದ ಕೆಲವರನ್ನು ಕೇಳಿದೆನು.

೨೩. ಅವರು ನನಗೆ ಹೇಳಿದರು. ''ಖಂಡಿತವಾಗಿಯೂ ನಿನ್ನ ಪತಿಯು ನಿನಗೆ ವಶನಾಗುವನು. ಇದರಲ್ಲಿ ನಮಗೆ ನಂಬುಗೆಯುಂಟು. ಆದುದರಿಂದ ನೀನೂ ತಕ್ಕ ಉಪಾಯವನ್ನು ಮಾಡು.

೨೪. ಅನೇಕ ವಿಧಗಳಾದ ಔಷಧಗಳಿಂದಲೂ, ಚೂರ್ಣಗಳಿಂದಲೂ, ಪರರನ್ನು ಮೋಹಗೊಳಿಸುವ ಮಂತ್ರಗಳಿಂದಲೂ, ಆಯಾ ಅಂಗಗಳಲ್ಲಿ ಮಾಡುವ ಲೇಪಗಳಿಂದಲೂ ಗಂಡನು ವಶವಾಗುವನು.''

ತತೋಽಹಂ ತ್ವರಿತಾ ಗತ್ವಾ ತಾಸಾಂ ವಾಕ್ಯೇನ ಭೂಪತೇ ।
ಚೂರ್ಣಂ ಮಂತ್ರಂ ಗೃಹೀತ್ವಾ ಚ ಪ್ರಾಪ್ತಾ ಭರ್ತೃಗೃಹಂ ಪುನಃ ॥ ೨೫ ॥
ಪ್ರದೋಷೇ ಪಯಸಾ ಯುಕ್ತಶ್ಚೂರ್ಣೋ ಭರ್ತರಿ ಯೋಜಿತಃ ।
ಗ್ರೀವಾಯಾಂ ಚ ಮಯಾ ಮಂತ್ರೋ ನ್ಯಸ್ತಃ ಸರ್ವಾಂಗಸಂಧಿಷು ॥೨೬॥
ಯದಾ ಪೀತಶ್ಚ ಚೂರ್ಣಸ್ತು ಮಂತ್ರೇಣಾಽತೀವಗುಂಠಿತಃ ।
ವಶಗಸ್ತತ್ಕ್ಷಣಾಜ್ಜಾತೋ ಮಂತ್ರಚೂರ್ಣಪ್ರಭಾವತಃ ॥ ೨೭ ॥
ದ್ವಾರದೇಶೇ ಸ್ಥಿತಃ ಕ್ರಂದನ್ದಾಸೋಽಸ್ಮಿ ತವ ಶೋಭನೇ ।
ತ್ರಾಹಿ ಮಾಂ ಶರಣಂ ಪ್ರಾಪ್ತಂ ತ್ವದ್ವಶೋಽಹಂ ಚ ಶೋಭನೇ ॥ ೨೮ ॥
ತತ್ತಸ್ಯ ರುದಿತಂ ಜ್ಞಾತ್ವಾ ಮಂತ್ರಮಾಹಾತ್ಮ್ಯತೋ ನೃಪ ।
ಸ್ವಸ್ಥೀಕರಣಯೋಗೇನ ತದಾ ಸ್ವಸ್ಥಃ ಕೃತಃ ಪತಿಃ ॥ ೨೯ ॥
ತತಃ ಪ್ರಭೃತಿ ಕಾಂತೋ ಮೇ ವಶ್ಯೋಽಭೂದ್ಭವನೇ ಸ್ಥಿತಃ ।
ಪಂಚತ್ವಂ ಚ ಗತಾ ಕಾಲೇ ತಥಾ ನರಕಯಾತನಾಂ ॥ ೩೦ ॥
ತಾಮ್ರಭ್ರಾಷ್ಟ್ರೇ ಚ ದಗ್ಧಾಽಹಂ ಯುಗಾನಿ ದಶಪಂಚ ಚ ।
ಸೂಕ್ಷ್ಮಾಣಿ ತಿಲಮಾತ್ರಾಣಿ ಕೃತ್ವಾ ಖಂಡಾನ್ಯನೇಕಶಃ ।
ಛೇದಿತಾ ಕಾಲಸೂತ್ರೇಣ ಪೀಡಿತಾ ಘ್ರಾಣಯಂತ್ರಕೇ ॥ ೩೧ ॥

---

೨೫. ಭೂಪಾಲಕ! ಅವರ ಮಾತನ್ನು ಕೇಳಿ ನಾನು ಬೇಗನೆಹೋಗಿ ಒಂದು ಚೂರ್ಣವನ್ನೂ ಮಂತ್ರವನ್ನೂ ಸ್ವೀಕರಿಸಿ ಪುನಃ ಗಂಡನಮನೆಗೆ ಬಂದೆನು.

೨೬. ಪ್ರದೋಷಕಾಲದಲ್ಲಿ ಹಾಲಿನೊಡನೆ ಆ ಚೂರ್ಣವನ್ನು ಬೆರಸಿ ಆತನಿಗೆ ಕೊಟ್ಟೆನು. ಕುತ್ತಿಗೆಯಲ್ಲಿಯೂ, ದೇಹದ ಕೀಲುಕೀಲುಗಳಲ್ಲಿಯೂ ಮಂತ್ರದಿಂದ ಅಭಿಮಂತ್ರಿಸಿದೆನು.

೨೭. ಆ ಚೂರ್ಣವನ್ನು ಸೇವಿಸಿ ಮಂತ್ರದಿಂದ ಅತ್ಯಂತದೀನನಾಗಿದ್ದ ಆತನು ಅವುಗಳ ಪ್ರಭಾವದಿಂದ ನಿಮಿಷಮಾತ್ರದಲ್ಲಿಯೆ ನನ್ನ ವಶವರ್ತಿಯಾದನು.

೨೮. ಅವನು, "ಓ ಶುಭಾಂಗಿಯೆ! ನಾನು ನಿನ್ನವನಾಗಿರುವೆನು. ನಿನ್ನ ವಶಗತನಾಗಿ ಶರಣುಹೊಕ್ಕಿರುವ ನನ್ನನ್ನು ಕಾಪಾಡು" ಎಂದು ಕೂಗುತ್ತ ನನ್ನ ಬಾಗಿಲಲ್ಲಿ ಬಿದ್ದಿರುತ್ತಿದ್ದನು.

೨೯-೩೦. ರಾಜನೆ! ಮಂತ್ರದ ಮಾಹಾತ್ಮ್ಯದಿಂದ ಆತನು ರೋದಿಸುತ್ತಿರುವುದನ್ನು ಕಂಡು ನಾನು ಸ್ವಸ್ಥೀಕರಣವೆಂಬ ಯೋಗದಿಂದ ಆ ಪತಿಯನ್ನು ಸ್ವಸ್ಥಚಿತ್ತನನ್ನಾಗಿ ಮಾಡಿದೆನು. ಅಂದಿನಿಂದ ಪ್ರಾಣನಾಥನು ನನ್ನ ವಶವರ್ತಿಯಾಗಿ ಮನೆಯಲ್ಲಿಯೇ ಇರುತ್ತಿದ್ದನು. ನಾನೂ ಕಾಲಾನುಕ್ರಮದಲ್ಲಿ ಮರಣವನ್ನು ಹೊಂದಿ ನರಕಯಾತನೆಗಳನ್ನನುಭವಿಸಿದೆನು.

೩೧. ತಾಮ್ರಭ್ರಾಷ್ಟ್ರವೆಂಬ ನರಕದಲ್ಲಿ ನಾನು ಹದಿನೈದು ಯುಗಗಳಕಾಲ

ಕ್ವಾಥೀಭೂತಾ ತಪ್ತತೈಲೈರ್ಘಟೀ ದರ್ವ್ಯಾಽಥ ಲೋಡಿತಾ ।
ಪಿಷ್ಟ್ವಾ ಚೈವ ಶಿಲಾಪೃಷ್ಠೇ ಕುಟ್ಟಿತಾ ಲೋಹಮುದ್ಗರೈಃ ॥ ೩೨ ॥
ದಲಿತಾ ದಂತದಲನೇ ದಗ್ಧಾಽಹಂ ರೌರವೇ ಭೃಶಂ ।
ಅಧೋಮುಖೀ ವಿನಿಕ್ಷಿಪ್ತಾ ತ್ವಮೇಧ್ಯೇ ಪೂಯಶೋಣಿತೇ ॥ ೩೩ ॥
ಯಾನ್ ಯಾಽಪಿ ಯುವತೀ ತಾತ ಭರ್ತುರ್ವಶ್ಯಂ ಸಮಾಚರೇತ್ ।
ವೃಥಾಧರ್ಮಾ ದುರಾಚಾರಾ ಪಚ್ಯತೇ ನರಕೇ ಭೃಶಂ ॥ ೩೪ ॥
ಭರ್ತಾ ನಾಥೋ ಗುರುರ್ಭರ್ತಾ ಭರ್ತಾ ವೈ ದೈವತಂ ಪರಂ ।
ಭರ್ತಾ ಸ್ವಾಮೀ ಸುಹೃದ್ಭರ್ತಾ ಭರ್ತಾ ಚ ಪರಮಂ ಪದಂ ॥ ೩೫ ॥
ತುಷ್ಟೇ ಭರ್ತರಿ ನಾರೀಣಾಂ ತುಷ್ಟಾಃ ಸ್ಯುಃ ಸರ್ವದೇವತಾಃ ।
ವಿಮುಖೇ ವಿಮುಖಾಃ ಸರ್ವೇ ತಸ್ಮಾತ್ಸೇವ್ಯಃ ಸದಾ ಪತಿಃ ।
ಭಸ್ಮೀಭವತಿ ಸಾ ನಾರೀ ಯಯಾ ಭರ್ತಾ ನ ತೋಷಿತಃ ॥ ೩೬ ॥

---

ಸುಡಲ್ಪಟ್ಟೆನು. ಕಾಲಸೂತ್ರವೆಂಬ ನರಕದಲ್ಲಿ ದೇಹವನ್ನೆಲ್ಲ ಎಳ್ಳುಕಾಳಿನ ಪ್ರಮಾಣದ ತುಂಡುಗಳಾಗಿ ಕತ್ತರಿಸಿದರು. ಘ್ರಾಣಯಂತ್ರಕದಲ್ಲಿ ನನ್ನನ್ನು ಪೀಡಿಸಿದರು.

೩೨. ಕಾಯಿಸಿದ ಎಣ್ಣೆಯಲ್ಲಿ ನನ್ನನ್ನು ಕುದಿಸಿದರು. ಘಟಯಂತ್ರದಲ್ಲಿ ಸೌಟನಿಂದ ಹುರಿದರು. ಹಾಸುಗಲ್ಲಿನಮೇಲೆ ಅಪ್ಪಳಿಸಿದರು. ಕಬ್ಬಿಣದ ಒನಕೆಗಳಿಂದ ಕುಟ್ಟಿದರು.

೩೩. ಚಿಮಟಗಳಿಂದ ಕಿತ್ತರು. ರೌರವ ನರಕದಲ್ಲಿ ನಾನು ಬಹುವಾಗಿ ಸುಡಲ್ಪಟ್ಟೆನು. ದುರ್ಗಂಧಯುಕ್ತವಾದ ರಕ್ತಾಮೇಧ್ಯಗಳ ಮಡುವಿನಲ್ಲಿ ತಲೆಕೆಳಗಾಗಿ ನನ್ನನ್ನು ತಳ್ಳಿದರು.

೩೪. ತಂದೆಯೆ! ನನ್ನಂತೆ ಯಾವ ಸ್ತ್ರೀಯು ಗಂಡನಿಗೆ ವಶ್ಯವನ್ನು ಪ್ರಯೋಗಮಾಡುವಳೊ, ಅವಳ ಧರ್ಮವೆಲ್ಲವೂ ನಾಶವಾಗಿ ದುಷ್ಟಾಚಾರದಿಂದ ಅವಳು ನರಕದಲ್ಲಿ ಬಿದ್ದು ಸಂಕಟಪಡುವಳು.

೩೫. ಗಂಡನೇ ಸ್ವಾಮಿಯು. ಆತನೇ ಗುರುವು. ಆತನೇ ಪರಾತ್ಪರ ದೈವವು. ಆತನೇ ಒಡೆಯನು. ಸ್ನೇಹಿತನು. ಆತನೇ ಸದ್ಗತಿದಾಯಕನು.

೩೬. ಗಂಡನನ್ನು ಸಂತೋಷಗೊಳಿಸಿದ ನಾರಿಯಲ್ಲಿ ಸಕಲ ದೇವತೆಗಳೂ ಸಂತುಷ್ಟರಾಗುವರು. ಆತನು ವಿಮುಖನಾದರೇ ಅವರೂ ವಿಮುಖರಾಗುವರು. ಆದುದರಿಂದ ಸ್ತ್ರೀಯು ನಿತ್ಯವೂ ಪತಿಯ ಸೇವೆಯನ್ನು ಮಾಡಬೇಕು. ಯಾವಳು ಗಂಡನನ್ನು ಸಂತೋಷಗೊಳಿಸುವುದಿಲ್ಲವೊ, ಅವಳು ಸುಟ್ಟು ಹೋಗುವಳು.

ಯಸ್ಯ ಪ್ರಸಾದಾತ್ಪ್ರಾಪ್ಯಂತೇ ಭೋಗಾಶ್ಚ ವಿವಿಧಾಃ ಸದಾ ।
ತಂ ವಶ್ಯಂ ಕುರುತೇ ಯಾಚ ಸಾ ಕಥಂ ಸುಖಮಾಪ್ನುಯಾತ್ ॥ ೩೭ ॥
ತಿರ್ಯಗ್ಯೋನಿಶತಂ ಯಾತಿ ಕೃಮಿಪಕ್ಷಿಶತಾನಿ ಚ ।
ತಸ್ಮಾತ್ತತ್ತತ್ಸದಾ ಕಾರ್ಯಂ ಸ್ತ್ರೀಭಿರ್ಭರ್ತೃವಚಃ ಕಿಲ ॥ ೩೮ ॥
ಏವಂ ಪುನರ್ಮಯಾ ಭುಕ್ತಾ ನರಕಾ ಭೃಶದಾರುಣಾಃ ।
ತಿರ್ಯಗ್ಯೋನಿಸಹಸ್ರಂ ತು ಕರ್ಮಣಾ ಕುತ್ಸಿತೇನ ಚ ॥ ೩೯ ॥
ಕಿಂಚಿತ್ಪಾತಕಶುದ್ಧ್ಯರ್ಥಂ ಚಂಡಾಲಸ್ಯ ಚ ವೇಶ್ಮನಿ ।
ಜಾತಾಽಹಮತಿರೂಪೇಣ ಪೀಡಿತಾ ವಿವಿಧೈರ್ವ್ರಣೈಃ ॥ ೪೦ ॥
ಸಾರಮೇಯೈರ್ವೃತಾ ದೀನಾ ಭಕ್ಷ್ಯಮಾಣಾ ಪುನಃ ಪುನಃ ।
ದುಷ್ಟಾಽಹಂ ಭಕ್ಷ್ಯಮಾಣಾಽಪಿ ಮಾರ್ಗೇ ರುದ್ಧಾ ವೃಕೈರಹಂ ।
ತೈರಹಂ ತುದ್ಯಮಾನಾಽಪಿ ಮಹಾಕಾಲವನಂ ಗತಾ ॥ ೪೧ ॥
ದೃಷ್ಟೋ ಮಯಾ ಮಹಾದೇವೋ ದೈವತೋ ಮೃಗಮಾಣಯಾ ।
ಸಮೀಪೇ ದೇವದೇವಸ್ಯ ಪಿಪ್ಪಲಾದೇಶ್ವರಸ್ಯ ಚ ॥ ೪೨ ॥

---

೩೭. ಯಾವನ ಪ್ರಸನ್ನತೆಯಿಂದ ನಾರಿಯು ಸಮಸ್ತ ವಿಧಗಳಾದ ಭೋಗಗಳನ್ನು ನಿತ್ಯವೂ ಪಡೆಯುತ್ತಿರುವಳೊ, ಅವನನ್ನು ವಶಗೊಳಿಸಿಕೊಂಡವಳು ಹೇಗೆ ಸುಖವನ್ನು ಹೊಂದುವಳು?

೩೮. ಅಂತಹವಳು ನೂರಾರು ತಿರ್ಯಗ್ಜಂತುಗಳ ಜನ್ಮಗಳನ್ನೂ, ಕೃಮಿ ಪಕ್ಷ್ಯಾದಿ ನೂರಾರು ಜನ್ಮಗಳನ್ನೂ ತಾಳುವಳಾದುದರಿಂದ ಸ್ತ್ರೀಯರು ಯಾವಾಗಲೂ ಗಂಡಂದಿರ ಮಾತಿನಂತೆ ನಡೆದುಕೊಂಡಿರಬೇಕು.

೩೯. ಒಂದು ಜನ್ಮದ ನೀಚವಾದ ಈ ಕಾರ್ಯದಿಂದ ನಾನು ಪುನಃ ಅತಿ ದಾರುಣಗಳಾದ ಅನೇಕ ನರಕಗಳಲ್ಲಿ ಯಾತನೆಗಳನ್ನನುಭವಿಸಿ ಬಳಿಕ ಸಾವಿರಾರು ತಿರ್ಯಗ್ಯೋನಿಗಳಲ್ಲಿ ಜನ್ಮಗಳನ್ನು ತಳೆದೆನು.

೪೦. ಪಾಪಶೇಷವನ್ನು ಕಳೆದುಕೊಳ್ಳಲು ಕಡೆಗೆ ನಾನೊಬ್ಬ ಚಂಡಾಲನ ಮನೆಯಲ್ಲಿ ಅತಿ ಲಾವಣ್ಯವತಿಯಾಗಿ ಹುಟ್ಟಿದರೂ ದೇಹದಲ್ಲೆಲ್ಲ ವಿಧ ವಿಧಗಳಾದ ವ್ರಣಗಳಿಂದ ಪೀಡಿತಳಾದೆನು.

೪೧. ದೀನಳಾದ ನಾನು, ನಾಯಿಗಳು ಮುತ್ತಿ ಮತ್ತೆ ಮತ್ತೆ ಕಚ್ಚುತ್ತಿದ್ದರೂ ಓಡಿಹೋಗುತ್ತ ದಾರಿಯಲ್ಲಿ ತೋಳಗಳು ಬಹುವಾಗಿ ಹಿಂಸಿಸಿದರೂ ನಿಲ್ಲದೆ ಕಡೆಗೆ ಮಹಾಕಾಲವನವನ್ನು ಸೇರಿದೆನು.

೪೨. ಆರಾಧ್ಯದೈವವನ್ನರಸುತ್ತ ತಿರುಗುತ್ತಿದ್ದ ನನಗೆ ಪಿಪ್ಪಲಾದೇಶ್ವರನ ಸಮೀಪದಲ್ಲಿದ್ದ ಮಹಾದೇವನ ಚಿಹ್ನೆಯಾದ ಲಿಂಗವೊಂದು ಕಂಡುಬಂದಿತು.

ತಸ್ಯ ದರ್ಶನಮಾತ್ರೇಣ ಗತಾ ಶಕ್ರಪುರಂ ಪ್ರತಿ ।
ವಿಮಾನೇನ ಸುದೀಪ್ತೇನ ಕಿಂಕಿಣೀಜಾಲಮಾಲಿನಾ ।
ದಿವ್ಯಾಂಬರಧರಾ ದಿವ್ಯಾ ದಿವ್ಯಮಾಲಾವಿಭೂಷಣಾ ॥ ೪೩ ॥
ತತ್ರಾಽಹಂ ಪೂಜಿತಾ ದೇವೈಃ ಸ್ತುತಾಽಹಂ ಚಾರಣೈಸ್ತಥಾ ।
ದರ್ಶನಾತ್ತಸ್ಯ ಲಿಂಗಸ್ಯ ಜಾತಾಽಹಂ ತವ ವೇಶ್ಮನಿ ॥ ೪೪ ॥
ವಲ್ಲಭಾ ರೂಪಸಂಪನ್ನಾ ಶಾಕಲೇ ನಗರೇ ಶುಭೇ ।
ಸ್ಮೃತ್ವಾ ತು ಕುತ್ಸಿತಾಂ ಯೋನಿಂ ವಿಲಾಪಶ್ಚ ಕೃತೋ ಮಯಾ ।
ಸ್ಮೃತ್ವಾ ಲಿಂಗಸ್ಯ ಮಾಹಾತ್ಮ್ಯಂ ಹರ್ಷೋಽ ಜಾತಸ್ತು ತತ್ಕ್ಷಣಾತ್ ॥
ತನ್ಮೇ ನೈವ ಚ ವಾತೂಲ್ಯಂ ಗೃಹೀತಾ ನ ಗ್ರಹೇಣ ಚ ।
ಜಾತಾ ಜಾತಿಸ್ಮರಾ ತಾತ ಬ್ರಹ್ಮಚರ್ಯವ್ರತೇ ಸ್ಥಿತಾ ॥ ೪೬ ॥
ಅತೋ ಯಾಸ್ಯಾಮಿ ತಂ ದೇವಂ ದರ್ಶನಾರ್ಥಂ ಪುನಃ ಪ್ರಭೋ ।
ಯಥಾ ನ ಭೂಯೋ ಮೇ ಜನ್ಮ ಸ್ಯಾಚ್ಚ ಸಂಸಾರಸಾಗರೇ ॥ ೪೭ ॥
ಇತಿ ಪುತ್ರೀವಚಃ ಶ್ರುತ್ವಾ ಚಿತ್ರಸೇನೋ ಮಹೀಪತಿಃ ।
ಸ ಭೃತ್ಯೋ ಮಂತ್ರಿಸಹಿತೋ ಮಹಾಕಾಲವನಂ ಗತಃ ॥ ೪೮ ॥

---

೪೩. ಅದನ್ನು ನೋಡಿದ ಮಾತ್ರದಿಂದಲೇ ನಾನು ತೇಜೋಮಯವಾದುದೂ, ಕಿರುಗಂಟೆಗಳ ಸಾಲುಗಳಿಂದ ಶೋಭಿಸುವುದೂ ಆದ ವಿಮಾನದಲ್ಲಿ ಕುಳಿತು ದಿವ್ಯವಸ್ತ್ರವನ್ನುಟ್ಟು ದಿವ್ಯಪುಷ್ಪಮಾಲೆಯಿಂದಲಂಕೃತಳಾಗಿ ದಿವ್ಯರೂಪದಿಂದ ಇಂದ್ರಲೋಕವನ್ನು ಕುರಿತು ಹೊರಟೆನು.

೪೪–೪೫. ಅಲ್ಲಿ ದೇವತೆಗಳು ನನ್ನನ್ನು ಪೂಜಿಸಿದರು. ಚಾರಣರು ಸ್ತೋತ್ರ ಮಾಡಿದರು. ಆ ಲಿಂಗದ ದರ್ಶನದ ಪುಣ್ಯದಿಂದಲೇ ನಾನು ನಿನ್ನ ಮನೆಯಲ್ಲಿ ಹುಟ್ಟಿದೆನು. ನಿನಗೆ ಪ್ರೀತಿಪಾತ್ರಳೂ, ಸೌಂದರ್ಯಸಂಪನ್ನಳೂ ಆಗಿ ಶುಭಕ್ಷೇತ್ರವಾದ ಈ ಶಾಕಲನಗರಕ್ಕೆ ಬಂದೆನು. ಹಿಂದಿನ ನೀಚಯೋನಿಗಳನ್ನು ಸ್ಮರಿಸಿಕೊಂಡು ನಾನು ಪ್ರಲಾಪಗಳನ್ನು ಮಾಡಿದೆನು. ಆ ಮಹಾಲಿಂಗದ ಮಾಹಾತ್ಮ್ಯವನ್ನು ಜ್ಞಾಪಿಸಿಕೊಂಡು ಉತ್ತರಕ್ಷಣದಲ್ಲಿಯೇ ನನಗೆ ಆನಂದವುಂಟಾಯಿತು.

೪೬. ಆದುದರಿಂದ ನನಗೆ ವಾತರೋಗವೂ ಇಲ್ಲ. ಗ್ರಹಪೀಡೆಯೂ ಇಲ್ಲ. ತಂದೆಯೆ! ನನಗೆ ಪೂರ್ವಜನ್ಮಗಳ ಸ್ಮರಣೆಯಿಂದೊಡಗೂಡಿಯೇ ಜನ್ಮವಾಗಿರುವುದು. ಆದುದರಿಂದ ನಾನು ಬ್ರಹ್ಮಚರ್ಯದಲ್ಲಿಯೇ ಇರುವವಳು.

೪೭. ಆದುದರಿಂದ ನಾನು ಪುನಃ ಆ ಮಹಾದೇವನನ್ನೇ ನೋಡಲು ಹೋಗುವವಳಾಗಿದ್ದೇನೆ. ಅದರಿಂದ ಮತ್ತೆ ಈ ಸಂಸಾರಸಮುದ್ರದಲ್ಲಿ ಜನ್ಮವುಂಟಾಗದಿರಲಿ.''

೪೮. ಇಂತೆಂದ ಮಗಳ ಮಾತನ್ನು ಕೇಳಿ ಚಿತ್ರಸೇನಮಹಾರಾಜನೂ ಮಂತ್ರಿಸೇವಕ ಪರಿವಾರದೊಡನೆ ಮಹಾಕಾಲವನಕ್ಕೆ ಪ್ರಯಾಣಮಾಡಿದನು.

ಷದರ್ಶ ತತ್ರ ತಲ್ಲಿಂಗಂ ಪೂಜಯಾಮಾಸ ಭಕ್ತಿತಃ ।
ಸಾಽಪಿ ದೃಷ್ಟ್ವೈವ ತಲ್ಲಿಂಗಂ ತಸ್ಮಿಂಲ್ಲಿಂಗೇ ಲಯಂಗತಾ ॥ ೪೯ ॥
ರಾಜಾ ಚ ಪುತ್ರವಾಂಜಾತೋ ಲಿಂಗದರ್ಶನತಃ ಪ್ರಿಯೇ ।
ಬಭೂವ ಚಕ್ರವರ್ತೀ ಸ ಯಥಾ ಸ್ವಾಯಂಭುವೋ ಮನುಃ ॥ ೫೦ ॥
ಏತಸ್ಮಿನ್ನಂತರೇ ದೇವಿ ದೃಷ್ಟ್ವಾ ದೇವೇ ಲಯಂ ಗತಾಂ ।
ರಾಜಪುತ್ರೀಂ ಮಹಾದೇವಿ ಕೃತಂ ನಾಮ ಮುದಾನ್ವಿತೈಃ ॥ ೫೧ ॥
ಅವಿಮುಕ್ತಸ್ಯ ಲಿಂಗಸ್ಯ ದರ್ಶನಾದೇವ ತತ್ಕ್ಷಣಾತ್ ।
ಅವಿಮುಕ್ತೇಶ್ವರೋ ದೇವ ಇತಿ ಖ್ಯಾತೋ ಭವತ್ವಿತಿ ॥ ೫೨ ॥
ಯೋಽಸೌ ಕಾಶ್ಯಾಂ ಪ್ರಸಿದ್ಧೋಽಸ್ತಿ ದೇವೋ ವಿಶ್ವೇಶ್ವರಃ ಶಿವಃ ।
ಸ ಚೈವಾತ್ರ ಸುವಿಖ್ಯಾತೋಽವಿಮುಕ್ತೇಶ್ವರಸಂಜ್ಞಯಾ ॥ ೫೩ ॥
ವಾರಾಣಸೀ ಯಥಾ ಪುಣ್ಯಾ ತಥಾಽವಂತೀ ಚ ಮುಕ್ತಿದಾ ।
ತಸ್ಯಾ ದಶಗುಣಂ ಪುಣ್ಯಂ ಶ್ರೂಯತೇಽತ್ರ ವಿಶೇಷತಃ ॥ ೫೪ ॥

---

೪೯. ಆ ಮಹಾಲಿಂಗವನ್ನು ಕಂಡು ಭಕ್ತಿಯಿಂದ ಪೂಜಿಸಿದನು. ಆ ಕನ್ಯೆಯು ಆ ಮಹಾಲಿಂಗವನ್ನು ನೋಡಿದ ನಿಮಿಷದಲ್ಲಿ ಅದರಲ್ಲಿಯೇ ಅಂತರ್ಧಾನವನ್ನು ಹೊಂದಿದಳು.

೫೦. ಪಾರ್ವತಿಯೆ! ಮಹಾರಾಜನೂ ಆ ಲಿಂಗದರ್ಶನದ ಫಲವಾಗಿ ಪುತ್ರವಂತನಾಗಿ ಸ್ವಾಯಂಭುವಮನುವಿನಂತೆ ಚಕ್ರವರ್ತಿಯಾದನು.

೫೧. ಅದೇ ಸಮಯದಲ್ಲಿಯೇ ಲಾವಣ್ಯವತಿಯು ಆ ಲಿಂಗದಲ್ಲಿ ಐಕ್ಯವನ್ನು ಹೊಂದಿದುದನ್ನು ನೋಡಿದವರೆಲ್ಲರೂ ಆನಂದಭರಿತರಾಗಿ ಆ ಲಿಂಗಕ್ಕೆ ಹೆಸರನ್ನಿಟ್ಟರು.

೫೨. "ದರ್ಶನಮಾಡಿದ ಕ್ಷಣದಲ್ಲಿಯೇ ಈಕೆಯು ಲಿಂಗವನ್ನೆಡಬಿಡದಿರುವುದನ್ನು ನಾವು ನೋಡಿದೆವಾದುದರಿಂದ ಈ ಮಹಾದೇವನು ಅವಿಮುಕ್ತೇಶ್ವರನೆಂದೇ ಪ್ರಖ್ಯಾತನಾಗಲಿ.

೫೩. ಕಾಶೀಕ್ಷೇತ್ರದಲ್ಲಿ ಯಾವ ಮಹಾದೇವನು ವಿಶ್ವೇಶ್ವರನೆಂದು ಪ್ರಸಿದ್ಧನಾಗಿರುವನೊ, ಅವನೇ ಇಲ್ಲಿ ಅವಿಮುಕ್ತೇಶ್ವರನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದಿರುವನು.

೫೪. ವಾರಾಣಸಿಯು ಹೇಗೆ ಪುಣ್ಯಪ್ರದವೊ, ಹಾಗೆಯೇ ಅವಂತೀ ಕ್ಷೇತ್ರವೂ ಪುಣ್ಯಪ್ರದವಾದುದು. ಇಲ್ಲಿ ಕಾಶಿಗಿಂತಲೂ ಹತ್ತುಮಡಿ ಪುಣ್ಯವು ಹೆಚ್ಚಾಗಿ ಲಭಿಸುವುದೆಂದು ಹೇಳುವರು.

ತಸ್ಮಾದ್ವಿಶ್ವೇಶ್ವರೋ ದೇವಃ ಸಮಾಯಾತಃ ಕುಶಸ್ಥಲೀಂ ।
ಯತ್ರಾಗತ್ಯ ಸುವಿದ್ವಾಂಸೋ ಮಾನವಾಃ ಶಂಸಿತವ್ರತಾಃ ॥ ೫೫ ॥
ಪಶ್ಯಂತಿ ಪರಯಾ ಭಕ್ತ್ಯಾ ಹ್ಯವಿಮುಕ್ತೇಶ್ವರಂ ಶಿವಂ ।
ತೇಷಾಂ ಮುಕ್ತಿರ್ನಸಂದೇಹೋ ಭವಿಷ್ಯತಿ ಸುನಿಶ್ಚಲಾ ॥ ೫೬ ॥
ಅವಿಮುಕ್ತಾ ನೈವ ಪಶ್ಯಂತಿ ಮುಕ್ತಾಃ ಪಶ್ಯಂತಿ ಸರ್ವದಾ ।
ಬ್ರಹ್ಮಚರ್ಯವ್ರತೈಃ ಸಮ್ಯಗಿಷ್ಟೈಃ ಸರ್ವಮಖೈರ್ಭವೇತ್ ॥ ೫೭ ॥
ತತ್ಫಲಂ ಪ್ರಾಪ್ಯತೇ ಸಮ್ಯಗವಿಮುಕ್ತೇಶದರ್ಶನಾತ್ ।
ನೈಃಶ್ರೇಯಸೀ ಗತಿಃ ಪುಣ್ಯಾ ದರ್ಶನಾದೇವ ಜಾಯತೇ ॥ ೫೮ ॥
ಯಾ ಗತಿಃ ಪ್ರಾಪ್ಯತೇ ಸಾಂಖ್ಯೈರ್ಯೋಗೈರ್ವಾ ಯಾ ಗತಿರ್ಭವೇತ್ ।
ಸಾ ಗತಿಃ ಪ್ರಾಪ್ಯತೇ ಸಮ್ಯಗವಿಮುಕ್ತೇಶದರ್ಶನಾತ್ ॥ ೫೯ ॥
ಜನ್ಮಮೃತ್ಯುಭಯಂ ಹಿತ್ವಾ ಸ ಯಾತಿ ಪರಮಾಂ ಗತಿಂ ।
ಯಃ ಪೂಜಯತಿ ಭಾವೇನ ಹ್ಯವಿಮುಕ್ತೇಶ್ವರಂ ಶಿವಂ ॥ ೬೦ ॥
ಬ್ರಹ್ಮಹಾಽಪಿ ಚ ಯೋ ಗಚ್ಛೇದವಿಮುಕ್ತೇಶ್ವರಂ ಯಜೇತ್ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾತ್ಸರ್ವಪಾಪಾನ್ನಿವರ್ತತೇ ॥ ೬೧ ॥

---

೫೫–೫೬. ಆದುದರಿಂದಲೇ ವಿಶ್ವೇಶ್ವರನು ಕುಶಸ್ಥಳಿಗೆ ಬಂದು ಸೇರಿದನು. ಜ್ಞಾನಿಗಳೂ, ನಿಯಮಪರರೂ ಆದ ಮಾನವರು ಅಲ್ಲಿಗೆ ಬಂದು ಅತ್ಯಂತ ಭಕ್ತಿಯುಕ್ತರಾಗಿ ಅವಿಮುಕ್ತೇಶ್ವರಮಹಾದೇವನನ್ನು ನೋಡಲು ಅವರಿಗೆ ಶಾಶ್ವತವಾದ ಮೋಕ್ಷಪದವಿಯು ಲಭಿಸುವುದರಲ್ಲಿ ಸಂಶಯವಿಲ್ಲವು.

೫೭–೫೮. ಬದ್ಧರಾದ ಜೀವರು ಈ ಲಿಂಗವನ್ನೆಂದಿಗೂ ನೋಡುವುದಿಲ್ಲವು. ಅದು ಮುಕ್ತಾತ್ಮರಿಗೆ ಮಾತ್ರವೇ ಕಾಣುವುದು. ಆಜನ್ಮಬ್ರಹ್ಮಚರ್ಯದಿಂದಲೂ ಸಕಲಯಜ್ಞಗಳನ್ನು ವಿಧ್ಯುಕ್ತರೀತಿಯಿಂದ ಮಾಡುವುದರಿಂದಲೂ ಯಾವ ಫಲವುಂಟೊ, ಅದನ್ನೇ ಅವಿಮುಕ್ತೇಶ್ವರನ ದರ್ಶನದಿಂದ ಪಡೆಯಬಹುದು. ಅವನ್ನು ನೋಡುವುದರಿಂದಲೇ ಮೋಕ್ಷಪ್ರದಾಯಕವಾದ ಪುಣ್ಯಗತಿಯು ಲಭಿಸುವುದು.

೫೯. ಸಾಂಖ್ಯರಿಗೆ ಪ್ರಕೃತಿಪುರುಷವಿವೇಕದಿಂದಲೂ, ಪಾತಂಜಲರಿಗೆ ಯೋಗಾಭ್ಯಾಸದಿಂದಲೂ ಯಾವ ಗತಿಯು ಪ್ರಾಪ್ತವಾಗುವುದೊ, ಅದನ್ನೇ ಅವಿಮುಕ್ತೇಶ್ವರಲಿಂಗದ ದರ್ಶನದಿಂದಲೂ ಪಡೆಯಬಹುದು.

೬೦. ಅವಿಮುಕ್ತೇಶ್ವರಮಹಾಲಿಂಗವನ್ನು ಭಕ್ತಿಯಿಂದ ಪೂಜಿಸಿದವನು ಜನನಮರಣಗಳ ಭಯವನ್ನು ಕಳೆದುಕೊಂಡು ಪರಮಪದವನ್ನು ಹೊಂದುವನು.

೬೧. ಬ್ರಹ್ಮಘಾತಕನಾದರೂ ಯಾವ ಮನುಜನು ಅವಿಮುಕ್ತೇಶ್ವರನಿಗೆ ಪೂಜೆಯನ್ನು ಮಾಡುವನೊ, ಅವನು ಆ ಲಿಂಗದ ಪ್ರಭಾವದಿಂದ ಸಕಲಪಾಪಗಳನ್ನೂ ಕಳೆದುಕೊಳ್ಳುವನು.

ಶಾಠ್ಯೇನಾಽಪಿ ಚ ಯಃ ಪಶ್ಯೇದವಿಮುಕ್ತೇಶ್ವರಂ ಶಿವಂ ।
ಸ ಮುಂಚತಿ ಜರಾಂ ಮೃತ್ಯುಂ ಜನ್ಮಚೈತದಶಾಶ್ವತಂ ॥ ೬೨ ॥
ಸ್ಮೃತಃ ಸಂಪೂಜಿತೋ ಭಕ್ತ್ಯಾ ಸ್ತುತೋ ವಾ ವಿವಿಧೈಃ ಸ್ತವೈಃ ।
ಮುಕ್ತಿಂ ದದಾತಿ ದೇವೇಶೋ ಹ್ಯವಿಮುಕ್ತೇಶ್ವರಃ ಶಿವಃ ॥ ೬೩ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಅವಿಮುಕ್ತೇಶ್ವರೇಶಸ್ಯ ಹನುಮತ್ಕೇಶ್ವರಂ ಶೃಣು ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಅವಿಮುಕ್ತೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಸಪ್ತತಿತಮೋಽಧ್ಯಾಯಃ

---

೬೨. ಮೌಢ್ಯದಿಂದಲೇ ಆದರೂ ಯಾವನು ಅವಿಮುಕ್ತೇಶ್ವರನ ದರ್ಶನೆವನ್ನು ಮಾಡುವನೊ, ಅವನು ಮುಪ್ಪು, ಮರಣ, ಜನನಗಳನ್ನೂ, ನಶ್ವರವಾದ ಈ ಸಂಸಾರವನ್ನೂ ಕಳೆದುಕೊಳ್ಳುವನು.

೬೩. ಅವಿಮುಕ್ತೇಶ್ವರಮಹಾದೇವನು ಸ್ಮರಣೆಯಿಂದಲೂ, ಭಕ್ತಿಯುಕ್ತವಾದ ಪೂಜೆಯಿಂದಲೂ, ಬಹುವಿಧ ಸ್ತೋತ್ರಗಳಿಂದಲೂ ಸುಪ್ರೀತನಾಗಿ ಮೋಕ್ಷವನ್ನು ಕೊಡುವನು.

೬೪. ದೇವಿಯೆ! ಇಂತು ನಿನಗೆ ಅವಿಮುಕ್ತೇಶ್ವರಮಹಾದೇವನ ಪಾಪಪರಿಹಾರಕವಾದ ಕಥೆಯನ್ನು ಹೇಳಿದೆನು. ಇನ್ನು ಹನುಮತ್ಕೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಅವಿಮುಕ್ತೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಾಽಶೀತಿತಮೋಽಧ್ಯಾಯಃ

### ಹನುಮತ್ಕೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ:—

ಏಕೋನಾಽಶೀತಿಕಂ ವಿದ್ಧಿ ಹನುಮತ್ಕೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಸರ್ವಾಹಿತಫಲಂ ಲಭೇತ್ ॥ ೧ ॥
ಪ್ರಾಪ್ತರಾಜಸ್ಯ ರಾಮಸ್ಯ ರಾಕ್ಷಸಾನಾಂ ವಧೇ ಕೃತೇ ।
ಆಗತಾ ಮುನಯೋ ದೇವಿ ರಾಘವಂ ಪ್ರತಿನಂದಿತುಂ ॥ ೨ ॥
ರಾಮೇಣ ಪೂಜಿತಾಃ ಸರ್ವೇ ಹ್ಯಗಸ್ತಿಪ್ರಮುಖಾ ದ್ವಿಜಾಃ ।
ಪ್ರಹೃಷ್ಟಮನಸೋ ವಿಪ್ರಾ ರಾಮಂ ವಚನಮಬ್ರುವನ್ ॥ ೩ ॥
ದಿಷ್ಟ್ಯಾ ತು ನಿಹತೋ ರಾಮ ರಾವಣಃ ಪುತ್ರಪೌತ್ರವಾನ್ ।
ದಿಷ್ಟ್ಯಾ ವಿಜಯಿನಂ ತ್ವಾಽದ್ಯ ಪಶ್ಯಾಮಃ ಸಹ ಭಾರ್ಯಯಾ ॥ ೪ ॥
ಹನೂಮತಾ ಚ ಸಹಿತಂ ವಾನರೇಣ ಮಹಾತ್ಮನಾ ।
ದಿಷ್ಟ್ಯಾ ಪವನಪುತ್ರೇಣ ರಾಕ್ಷಸಾಂತಕರೇಣ ಚ ॥ ೫ ॥

---

### ಕನ್ನಡದ ಅನುವಾದ

#### ಹನುಮತ್ಕೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಎಪ್ಪತ್ತೊಂಬತ್ತನೆಯ ಮಹಾಲಿಂಗವೇ ಹನುಮತ್ಕೇಶ್ವರನೆಂದು ತಿಳಿ. ಅದನ್ನು ನೋಡುವುದರಿಂದ ಸಕಲೇಷ್ಟಾರ್ಥಗಳೂ ಸಿದ್ಧಿಸುವುವು.

೨. ದೇವಿಯೆ! ರಾಕ್ಷಸರನ್ನು ಜಯಿಸಿ ಶ್ರೀರಾಮಚಂದ್ರನು ಪುನಃ ತನ್ನ ರಾಜ್ಯದಲ್ಲಿ ನೆಲಸಿರಲು ಮುನಿಗಳೆಲ್ಲರೂ ಆತನನ್ನು ಅಭಿನಂದಿಸಲು ಬಂದು ಸೇರಿದರು.

೩. ಅಗಸ್ತ್ಯಮುನಿಯೇ ಮೊದಲಾದ ಅವರೆಲ್ಲರನ್ನೂ ರಾಮನು ಯಥಾವಿಧಿಯಾಗಿ ಪೂಜಿಸಿದನು. ಆ ಪೂಜೆಯಿಂದ ಆನಂದಗೊಂಡು ಬ್ರಾಹ್ಮಣರು ರಾಮನಿಗೆ ಹೇಳಿದರು.

೪. "ರಾಮಚಂದ್ರ! ನಮ್ಮ ಸುಕೃತದಿಂದಲೇ ಪುತ್ರಪೌತ್ರರೊಡನೆ ರಾವಣಾಸುರನು ಹತನಾದನು. ನಮ್ಮ ಅದೃಷ್ಟದಿಂದ ಭಾರ್ಯಾಸಮೇತನಾಗಿ ಜಯಶಾಲಿಯಾಗಿ ಬಂದ ನಿನ್ನನ್ನು ನೋಡುತ್ತಿರುವೆವು.

೫. ನೀನು ವಾನರನೂ, ಮಹಾತ್ಮನೂ, ವಾಯುಪುತ್ರನೂ, ರಾಕ್ಷಸ ಕುಲನಾಶಕನೂ ಆದ ಹನುಮಂತನೊಡನೆ ಕೂಡಿರುವೆ.

ಚಿರಂ ಜೀವತು ದೀರ್ಘಾಯುರ್ವಾನರೋ ಹನುಮಾನ್ಸದಾ ।
ಅಂಜನೀಗರ್ಭಸಂಭೂತೋ ರುದ್ರಾಂಶೋ ಹಿ ಧರಾತಲೇ ॥ ೬ ॥
ಆಖಂಡಲೋಽಗ್ನಿರ್ಭಗವಾನ್ಯಮೋ ವೈ ನಿರ್ಋತಿಸ್ತಥಾ ।
ವರುಣಃ ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ।
ಬ್ರಹ್ಮಣಾ ಸಹಿತಾಶ್ಚೈವ ದಿಕ್ಪಾಲಾಃ ಪಾಂತು ಸರ್ವದಾ ॥ ೭ ॥
ಶ್ರುತ್ವಾ ತೇಷಾಂ ತು ವಚನಂ ಮುನೀನಾಂ ಭಾವಿತಾತ್ಮನಾಂ ।
ವಿಸ್ಮಯಂ ಪರಮಂ ಗತ್ವಾ ರಾಮಃ ಪ್ರಾಂಜಲಿರಬ್ರವೀತ್ ॥ ೮ ॥
ಕಿಮರ್ಥಂ ಲಕ್ಷ್ಮಣಂ ತ್ಯಕ್ತ್ವಾ ವಾನರೋಽಯಂ ಪ್ರಶಂಸಿತಃ ।
ಕೀದೃಶಃ ಕಿಂ ಪ್ರಭಾವೋ ವಾ ಕಿಂ ವೀರ್ಯಃ ಕಿಂ ಪರಾಕ್ರಮಃ ॥ ೯ ॥
ಅಥೋಚುಃ ಸತ್ಯಮೇವೈತತ್ಕಾರಣಂ ವಾನರೋತ್ತಮೇ ।
ಸತ್ವಸ್ಯ ಸದೃಶೋ ವೀರ್ಯೇ ವಿದ್ಯತೇ ಭುವನತ್ರಯೇ ॥ ೧೦ ॥
ಏಷ ದೇವ ಮಹಾಪ್ರಾಜ್ಞೋ ಯೋಜನಾನಾಂ ಶತಂ ಪ್ಲುತಃ ।
ಧರ್ಷಯಿತ್ವಾ ಪುರೀಂ ಲಂಕಾಂ ರಾವಣಾಂತಃಪುರಂ ಗತಃ ॥ ೧೧ ॥

---

೬. ಮಹಾದೇವನ ಅಂಶದಿಂದ ಭೂಲೋಕಕ್ಕೆ ಬಂದು ಅಂಜನೀದೇವಿಯ ಗರ್ಭದಲ್ಲಿ ಹುಟ್ಟಿದ ಕಪಿಶ್ರೇಷ್ಠನಾದ ಈ ಹನುಮಂತನು ಚಿರಂಜೀವಿಯಾಗಿರಲಿ.

೭. ಈತನನ್ನು ಇಂದ್ರನೂ, ಅಗ್ನಿಯೂ, ಯಮನೂ, ನಿರ್ಋತಿಯೂ, ವರುಣನೂ, ವಾಯುವೂ, ಧನಪತಿಯಾದ ಕುಬೇರನೂ, ಸದಾಶಿವನೂ, ಬ್ರಹ್ಮಸಮೇತರಾದ ದಿಕ್ಪಾಲಕರೂ ಯಾವಾಗಲೂ ಕಾಪಾಡುತ್ತಿರಲಿ.''

೮. ಆತ್ಮಜ್ಞಾನಿಗಳಾದ ಆ ಮುನಿವರ್ಯರ ಮಾತನ್ನು ಕೇಳಿ ಶ್ರೀರಾಮನು ಅತ್ಯಂತ ವಿಸ್ಮಯಾವಿಷ್ಟನಾಗಿ ಅಂಜಲಿಬಂಧವನ್ನು ಮಾಡಿಕೊಂಡು ಇಂತೆಂದನು.

೯. ``ನೀವು ನನ್ನ ಸಹೋದರನಾದ ಲಕ್ಷ್ಮಣನನ್ನು ಬಿಟ್ಟು ಈ ವಾನರನನ್ನು ಪ್ರಶಂಸಿಸಿದಿರಿ? ಇವನೆಂತಹವನು? ಇವನ ಮಹಿಮೆಯೇನು? ಬಲವೇನು? ಪರಾಕ್ರಮವೇನು?''

೧೦. ಆಗ ಅವರು ಹೇಳಿದರು : ``ನಾವು ಹೇಳಿದುದು ಸತ್ಯವೇ. ಈ ವಾನರ ಶ್ರೇಷ್ಠನಿಗೆ ಸಮನಾದ ಪರಾಕ್ರಮಿಯು ಮೂರು ಲೋಕಗಳಲ್ಲಿಯೂ ಮತ್ತೊಬ್ಬನಿಲ್ಲ.

೧೧. ರಾಮ! ಇವನೇ ಮಹಾಬುದ್ಧಿಶಾಲಿಯು, ನೂರುಯೋಜನದ ಅಗಲದ ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನೇ ಕಡೆಗಣಿಸಿ ರಾವಣನ ಅಂತಃಪುರವನ್ನೂ ಹೊಕ್ಕನು.

ಪ್ರಾದೇಶಮಾತ್ರಪ್ರತಿಮಂ ಕೃತಂ ರೂಪಮನೇನ ವೈ ।
ದೃಷ್ಟ್ವಾ ಸಂಭಾಷಿತಾ ಸೀತಾ ಪೃಷ್ಟ್ವಾ ವಿಶ್ವಾಸಿತಾ ತಥಾ ॥ ೧೨ ॥
ಸೇನಾಽಗ್ರಗಾ ಮಂತ್ರಿಪುತ್ರಾಃ ಕಿಂಕರಾ ರಾವಣಾತ್ಮಜಾಃ ।
ಹತಾ ಹನುಮತಾ ತತ್ರ ತಾಡಿತಾ ರಾವಣಾಲಯೇ ॥ ೧೩ ॥
ಭೂಯೋ ಬಂಧವಿಮುಕ್ತೇನ ಸಂಭಾಷ್ಯತು ದಶಾನನಂ ।
ಲಂಕಾ ಭಸ್ಮೀಕೃತಾ ತೇನ ಪಾತಕೇನೇವ ಮೇದಿನೀ ॥ ೧೪ ॥
ನ ಕಾಲಸ್ಯ ನ ಶಕ್ರಸ್ಯ ನ ವಿಷ್ಣೋರ್ವೇಧಸೋಽಪಿ ವಾ ।
ಶ್ರೂಯಂತೇ ತಾನಿ ಕರ್ಮಾಣಿ ಯಾದೃಶಾನಿ ಹನೂಮತಃ ॥ ೧೫ ॥

ರಾಮ ಉವಾಚ :—

ಏತಸ್ಯ ಬಾಹುವೀರ್ಯೇಣ ಲಂಕಾ ಸೀತಾ ಚ ಲಕ್ಷ್ಮಣಃ ।
ಪ್ರಾಪ್ತೋ ಮಮ ಜಯಶ್ಚೈವ ರಾಜ್ಯಂ ಮಿತ್ರಾಣಿ ಬಾಂಧವಾಃ ॥ ೧೬ ॥
ಸಖಾಯಂ ವಾನರಪತಿಮೃಕ್ಷೇಶ್ವರಸಂ ಹರಿಪುಂಗವಂ ।
ಪ್ರವೃತ್ತಿಮಪಿ ಕೋ ವೇತ್ತುಂ ಜಾನಕ್ಯಾಃ ಶಕ್ತಿಮಾನ್ ಭವೇತ್ ॥ ೧೭ ॥

---

೧೨. ಆಗ ಇವನು ತನ್ನ ರೂಪವನ್ನು ಪ್ರಾದೇಶಮಾತ್ರವಾದದ್ದನ್ನಾಗಿ ಮಾಡಿಕೊಳ್ಳಲಿಲ್ಲವೆ? ಸೀತೆಯನ್ನೂ ನೋಡಿ, ಮಾತನಾಡಿ, ಕುಶಲಪ್ರಶ್ನೆಯನ್ನು ಮಾಡಿ ಸಮಾಧಾನವಾಕ್ಯಗಳನ್ನೂ ಹೇಳಿದನಷ್ಟೆ.

೧೩. ಆ ರಾವಣನಗರಿಯಲ್ಲಿ ಸೇನಾನಾಯಕರೂ, ಮಂತ್ರಿಪುತ್ರರೂ, ರಾಕ್ಷಸಕಿಂಕರರೂ, ರಾವಣನ ಮಕ್ಕಳೂ ಹನುಮಂತನಿಂದಲೇ ಸದೆಬಡಿಯಲ್ಪಟ್ಟರು.

೧೪. ಬಳಿಕ ಬಂಧನದಿಂದ ಬಿಡುಗಡೆಯನ್ನು ಹೊಂದಿದಕೂಡಲೇ ಮತ್ತೆ ರಾವಣನನ್ನು ಮಾತನಾಡಿಸಿ ಪಾಪಗಳಿಂದ ಊಷರವಾದ ಭೂಮಿಯಂತೆ ಲಂಕೆಯನ್ನು ಸುಟ್ಟನು.

೧೫. ಈ ಹನುಮಂತನು ಮಾಡಿದ ಕೆಲಸಕ್ಕೆ ಸಮಾನವಾದ ಕಾರ್ಯವನ್ನು ಕಾಲಯಮ, ಮಹೇಂದ್ರ, ವಿಷ್ಣು, ಬ್ರಹ್ಮರ ವಿಷಯದಲ್ಲಿಯೂ ನಾವು ಎಂದೂ ಕೇಳಿರುವುದಿಲ್ಲ.''

೧೬. ರಾಮನು ಹೇಳುತ್ತಾನೆ:— ಇವನ ಬಾಹುಪರಾಕ್ರಮದಿಂದಲೇ ನಾನು ಲಂಕೆಯನ್ನೂ, ಸೀತೆಯನ್ನೂ, ಲಕ್ಷ್ಮಣನನ್ನೂ, ವಿಜಯವನ್ನೂ, ರಾಜ್ಯವನ್ನೂ, ಮಿತ್ರರನ್ನೂ, ಬಂಧುಗಳನ್ನೂ ಪಡೆದೆನು.

೧೭. ಈ ಕಪೀಶ್ವರನೇ ನನಗೆ ಪರಮಮಿತ್ರನು. ಈತನಲ್ಲದೆ ಬೇರೆ ಯಾವನಿಗೆ ತಾನೆ ಜಾನಕಿಯ ಯೋಗಕ್ಷೇಮವನ್ನು ತಿಳಿಯಲು ಶಕ್ಯವಾಗುತ್ತಿದ್ದಿತು?

ವಾಲೀ ಕಿಮರ್ಥಮೇತೇನ ಸುಗ್ರೀವಪ್ರಿಯಕಾಮ್ಯಯಾ ।
ತದಾ ವೈರೇ ಸಮುತ್ಪನ್ನೇ ನದಗ್ಧಸ್ತೃಣವತ್ಕಥಂ ॥ ೧೮ ॥
ನಾಽಯಂ ವಿದಿತವಾನ್ ಮನ್ಯೇ ಹನುಮಾನಾತ್ಮನೋ ಬಲಂ ।
ಉಪೇಕ್ಷಿತಃ ಕ್ಲಿಶ್ಯಮಾನೇ ಕಿಮರ್ಥಂ ವಾನರಾಽಧಿಪೇ ॥ ೧೯ ॥
ಏವಂ ಬ್ರುವಾಣಂ ರಾಮಂ ತು ಮುನಯೋ ವಾಕ್ಯಮಬ್ರುವನ್ ।
ಸತ್ಯಮೇತದ್ರಘುಶ್ರೇಷ್ಠ ಯದ್ಬ್ರವೀಷಿ ಹನೂಮತಃ ॥ ೨೦ ॥
ನ ಬಲೇ ವಿದ್ಯತೇ ತುಲ್ಯೋ ನ ಗತೌ ನ ಮತಾವಪಿ ।
ಅಮೋಘವಾಕ್ಯೈಃ ಶಾಪಸ್ತು ದತ್ತೋಽಸ್ಯ ಮುನಿಭಿಃ ಪುರಾ ॥ ೨೧ ॥
ನ ಜ್ಞಾತಂ ಹಿ ಬಲಂ ಯೇನ ಬಲಿನಾ ವಾಲಿಮರ್ದನೇ ।
ಬಾಲ್ಯೇಽಪ್ಯನೇನ ಯತ್ಕರ್ಮ ಕೃತಂ ನಾಮ ಮಹಾತ್ಮನಾ ॥ ೨೨ ॥
ತನ್ನವರ್ಣಯಿತುಂ ಶಕ್ಯಮೇತಸ್ಯ ತು ಬಲಂ ಮಹತ್ ।
ಯದಿ ಶ್ರೋತುಂ ತವೇಚ್ಛಾಽಸ್ತಿ ನಿಶಾಮಯ ವದಾಮಹೇ ॥ ೨೩ ॥
ಅಸೌ ಹಿ ಜಾತಮಾತ್ರೋಽಪಿ ಬಾಲಾರ್ಕಇವ ಮೂರ್ತಿಮಾನ್ ।
ಗ್ರಹೀತುಕಾಮೋ ಬಾಲಾರ್ಕಂ ಪುಪ್ಲಾವಾಂಬರಮಧ್ಯತಃ ॥ ೨೪ ॥

---

೧೮. ಅಣ್ಣತಮ್ಮಂದಿರಲ್ಲಿ ವೈರವುಂಟಾಗಲು ಸುಗ್ರೀವನಿಗೆ ಪ್ರಿಯವನ್ನು ಉಂಟುಮಾಡುವುದಕ್ಕಾಗಿ ಇವನು ವಾಲಿಯನ್ನು ಹುಲ್ಲುಕಡ್ಡಿಯಂತೆ ಸುಡದಿದ್ದುದಕ್ಕೆ ಕಾರಣವೇನು?

೧೯. ಹನುಮಂತನು ತನ್ನ ಬಲವನ್ನು ತಾನೇ ತಿಳಿಯಲಾರನೆಂದು ಯೋಚಿಸುವೆನು. ಅಲ್ಲದಿದ್ದರೆ ಸುಗ್ರೀವನು ಕಷ್ಟಪಡುತ್ತಿರಲು ಇವನು ವಾಲಿಯನ್ನೇಕೆ ಉಪೇಕ್ಷಿಸಿದನು?''

೨೦. ಇಂತೆಂದು ಹೇಳುತ್ತಿದ್ದ ರಾಮನಿಗೆ ಮುನಿಗಳು ಹೇಳಿದರು. ''ರಘುಪುಂಗವ! ಹನುಮಂತನ ವಿಷಯದಲ್ಲಿ ನೀನು ಹೇಳಿದುದೆಲ್ಲವೂ ಸತ್ಯವೇ.

೨೧. ಬಲದಲ್ಲಾಗಲಿ, ವೇಗದಲ್ಲಾಗಲಿ, ಬುದ್ಧಿಶಕ್ತಿಯಲ್ಲಾಗಲಿ ಇವನಿಗೆ ಸಮಾನರಾದವರು ಯಾರೂ ಕಾಣಲಿಲ್ಲ. ಹಿಂದೆ ಸತ್ಯವಾಕ್ಯಪರಾಯಣರಾದ ಮುನಿಗಳು ಇವನಿಗೆ ಶಾಪವನ್ನಿತ್ತರು.

೨೨–೨೩. ಆದರಿಂದಲೇ ಪರಾಕ್ರಮಿಯಾದ ಈತನು ವಾಲಿವಧೆಯ ಕಾಲದಲ್ಲಿ ತನ್ನ ಬಲವನ್ನು ತಿಳಿಯಲಿಲ್ಲ. ಈ ಮಹಾತ್ಮನು ಬಾಲ್ಯದಲ್ಲಿ ಮಾಡಿದ ಯಾವ ಕೆಲಸವುಂಟೊ, ಅದನ್ನು ವರ್ಣಿಸಲು ನಮ್ಮಿಂದ ಶಕ್ಯವಲ್ಲ. ಇವನ ಬಲವು ಅಪಾರವಾದುದು. ನಿನಗೆ ಕೇಳಲಿಚ್ಛೆಯಿದ್ದಲ್ಲಿ ಹೇಳುವೆವು, ಲಾಲಿಸು.

೨೪. ಇವನು ಹುಟ್ಟಿದಾಗಲೇ ಬಾಲಸೂರ್ಯನಂತೆ ಹೊಳೆಯುತ್ತಿದ್ದನು. ಉದಯಿಸುತ್ತಿದ್ದ ಸೂರ್ಯನನ್ನು ಹಿಡಿಯಲೆಳಸಿ ಆಕಾಶಮಧ್ಯಕ್ಕೆ ಹಾರಿದನು.

ತೂರ್ಣಮಾಧಾವತೋ ರಾಮ ಶಕ್ರೇಣ ವಿದಿತಾತ್ಮನಾ ।
ಹನುಸ್ತೇನಾಽಸ್ಯ ಸಹಸಾ ಕುಲಿಶೇನೈವ ತಾಡಿತಃ ॥ ೨೫ ॥
ತತೋ ಗಿರೌ ಪಪಾತೈಷ ಶಕ್ರವಜ್ರಾಽಭಿತಾಡಿತಃ ।
ಪತತೋಽಸ್ಯ ಮಹಾವೇಗಾದ್ವಾಮೋ ಹನುರಭಜ್ಯತ ।
ಅಸ್ಮಿಂಸ್ತು ಪತಿತೇ ಬಾಲೇ ಮೃತಕಲ್ಪೇಽಶನಿಕ್ಷತಾತ್ ॥ ೨೬ ॥
ತತೋ ವಾಯುಃ ಸಮಾದಾಯ ಮಹಾಕಾಲವನಂ ಗತಃ ।
ಲಿಂಗಮಾರಾಧಯಾಮಾಸ ಪುತ್ರಾರ್ಥಂ ಪವನಸ್ತದಾ ॥ ೨೭ ॥
ಸ್ಪೃಷ್ಟಮಾತ್ರಸ್ತು ಲಿಂಗೇನ ಸಮುತ್ತಸ್ಥೌ ಪ್ಲವಂಗಮಃ ।
ಜಲಸಿಕ್ತಂ ಯಥಾ ಸಸ್ಯಂ ಪುನರ್ಜೀವಿತಮಾಪ್ತವಾನ್ ॥ ೨೮ ॥
ಪ್ರಾಣವಂತಮಿಮಂ ದೃಷ್ಟ್ವಾ ಪವನೋ ಹರ್ಷಿತಸ್ತದಾ ।
ಪ್ರತ್ಯುವಾಚ ಪ್ರಸನ್ನಾತ್ಮಾ ಪುತ್ರಮಾದಾಯ ಸತ್ವರಂ ॥ ೨೯ ॥
ಸ್ಪರ್ಶನಾದಸ್ಯ ಲಿಂಗಸ್ಯ ಮಮ ಪುತ್ರಃ ಸಮುತ್ಥಿತಃ ।
ಹನುಮತ್ಕೇಶ್ವರೋ ದೇವೋ ವಿಖ್ಯಾತೋಽಯಂ ಭವಿಷ್ಯತಿ ॥ ೩೦ ॥

---

೨೫. ಎಲೈ ರಾಮನೆ! ವೇಗವಾಗಿ ಬರುತ್ತಿರುವ ಇವನ ಅಭಿಪ್ರಾಯವನ್ನು ತಿಳಿದು ಮಹೇಂದ್ರನು ತನ್ನ ವಜ್ರಾಯುಧದಿಂದ ಇವನ ಬಲಕೆನ್ನೆಗೆ ಬಲವಾಗಿ ಹೊಡೆದನು.

೨೬. ಇಂದ್ರನಿಂದ ವಜ್ರಾಯುಧದ ಪೆಟ್ಟನ್ನು ತಿಂದು ಇವನು ಪರ್ವತದಲ್ಲಿ ಬಿದ್ದನು. ಬಿದ್ದ ಮಹಾವೇಗಕ್ಕೆ ಇವನ ಎಡಗೆನ್ನೆಯೂ ಒಡೆಯಿತು. ಇಂತು ಬಾಲಕನಾದ ಇವನು ವಜ್ರಘಾತದಿಂದ ಸತ್ತವನಂತೆ ಬಿದ್ದಿದ್ದನು.

೨೭. ತರುವಾಯ ವಾಯುದೇವನು ಮಗುವನ್ನು ತೆಗೆದುಕೊಂಡು ಮಹಾಕಾಲವನಕ್ಕೆ ಹೋಗಿ ಪುತ್ರನನ್ನು ಪುನರುಜ್ಜೀವಿಸಲು ಮಹಾಲಿಂಗವೊಂದನ್ನು ಪೂಜಿಸಿದನು.

೨೮. ಆ ಲಿಂಗವನ್ನು ಮುಟ್ಟಿದಮಾತ್ರದಿಂದಲೇ ವಾನರಶಿಶುವು ಎದ್ದು ಕುಳಿತನು; ನೀರಿನಿಂದ ಪುಷ್ಟವಾದ ಸಸ್ಯದಂತೆ ಪುನಃ ಚೈತನ್ಯವಂತನಾದನು.

೨೯. ಪ್ರಾಣವಂತನಾದ ಮಗನನ್ನು ಕಂಡು ವಾಯುವೂ ಆನಂದಭರಿತನಾದನು. ಮತ್ತು ಪ್ರಶಾಂತವಾದ ಚಿತ್ತದಿಂದ ಅವನು ಬೇಗನೆಯೆ ಪುತ್ರನನ್ನೆತ್ತಿಕೊಂಡು ಇಂತೆಂದನು.

೩೦. "ಈ ಮಹಾಲಿಂಗದ ಸ್ಪರ್ಶದಿಂದ ನನ್ನ ಪುತ್ರನು ಉಜ್ಜೀವಿತನಾದುದರಿಂದ ಈ ಲಿಂಗವು ಹನುಮತ್ಕೇಶ್ವರನೆಂದೇ ಪ್ರಖ್ಯಾತಿಯನ್ನು ಪಡೆಯುವುದು."

ಏತಸ್ಮಿನ್ನಂತರೇ ಶಕ್ರಃ ಸಮಾಯಾತಃ ಸುರೈರ್ವೃತಃ ।
ನೀಲೋತ್ಪಲಮಯೀಂ ಮಾಲಾಂ ಸಂಪ್ರಗೃಹ್ಯೇದಮಬ್ರವೀತ್ ॥ ೩೧ ॥
ಮತ್ಕರೋತ್ಸೃಷ್ಟವಜ್ರೇಣ ಯಸ್ಮಾದಸ್ಯ ಹನುರ್ಹತಃ ।
ತದೇಷ ಕಪಿಶಾರ್ದೂಲೋ ಹನುಮಾಂಸ್ತು ಭವಿಷ್ಯತಿ ॥ ೩೨ ॥
ವರುಣೋಽಸ್ಯ ವರಂ ಪ್ರಾದಾನ್ನಾಽಸ್ಯ ಮೃತ್ಯುರ್ಭವಿಷ್ಯತಿ ।
ಯಮೋ ದಂಡಾದವಧ್ಯತ್ವಮಾರೋಗ್ಯಂ ಧನದೋ ದದೌ ॥ ೩೩ ॥
ಸೂರ್ಯೇಣ ಚ ಪ್ರಭಾ ದತ್ತಾ ಪವನೇನ ಗತಿರ್ದ್ರುತಾ ।
ಲಿಂಗೇನ ಚ ವರೋ ದತ್ತೋ ದೇವಾನಾಂ ಸನ್ನಿಧೌ ತದಾ ॥ ೩೪ ॥
ಆಯುಧಾನಾಂ ಹಿ ಸರ್ವೇಷಾಮವಧ್ಯೋಽಯಂ ಭವಿಷ್ಯತಿ ।
ಅಜರಶ್ಚಾಽಮರಶ್ಚೈವ ಭವಿಷ್ಯತಿ ನ ಸಂಶಯಃ ॥ ೩೫ ॥
ಅಮಿತ್ರಭಯದೋ ಹ್ಯೇಷ ಮಿತ್ರಾಣಾಮಭಯಪ್ರದಃ ।
ಅಜೇಯೋ ಭವಿತಾ ಯುದ್ಧೇ ಲಿಂಗೇನೋಕ್ತಂ ಪುನಃ ಪುನಃ ॥ ೩೬ ॥
ಶತ್ರೋರ್ಬಲೋತ್ಸಾದನಾಯ ರಾಘವಪ್ರೀತಯೇ ಸದಾ ।
ಕಿಯತ್ಕಾಲಂ ಬಲಂ ಸ್ವೀಯಂ ನ ಸ್ಮರಿಷ್ಯತಿ ಶಾಪತಃ ॥ ೩೭ ॥

---

೩೧. ಇಷ್ಟರಲ್ಲಿಯೆ ದೇವತೆಗಳಿಂದ ಪರಿವಾರಿತನಾಗಿ ನೀಲೋತ್ಪಲಗಳ ಮಾಲೆಯನ್ನು ಹಿಡಿದು ಮಹೇಂದ್ರನು ಅಲ್ಲಿಗೆ ಪ್ರಾಪ್ತನಾಗಿ ಹೇಳತೊಡಗಿದನು.

೩೨. "ನನ್ನ ಕೈಯಿಂದ ಬಿಡಲ್ಪಟ್ಟ ವಜ್ರಾಯುಧದಿಂದ ಈ ಕಪಿಶ್ರೇಷ್ಠನ ಕಪೋಲವು ಪೆಟ್ಟುತಿಂದಿತಾದುದರಿಂದ ಈತನು ಹನುಮಂತನೆಂದು ಕರೆಯಲ್ಪಡುವನು."

೩೩-೩೪. ವರುಣನು ಇವನಿಗೆ ಮರಣವಾಗದಿರುವಂತೆ ವರವನ್ನಿತ್ತನು. ಯಮನು ದಂಡದಿಂದ ಅವಧ್ಯತ್ವವನ್ನೂ, ಕುಬೇರನು ದೇಹಾರೋಗ್ಯವನ್ನೂ ಕೊಟ್ಟರು. ಸೂರ್ಯನು ತೇಜಸ್ಸನ್ನಿತ್ತನು. ವಾಯುವು ವೇಗಗಮನವನ್ನನು ಗ್ರಹಿಸಿದನು. ಬಳಿಕ ದೇವತೆಗಳೆಲ್ಲರ ಸನ್ನಿಧಿಯಲ್ಲಿ ಲಿಂಗವೂ ವರವನ್ನು ಕೊಟ್ಟಿತು.

೩೫. "ಇವನು ಸಕಲ ವಿಧಗಳಾದ ಆಯುಧಗಳಿಂದಲೂ ಸಾಯತಕ್ಕವನಲ್ಲ; ಮುಪ್ಪು ಮರಣಗಳಿಲ್ಲದವನೂ ಆಗುವುದರಲ್ಲಿ ಸಂದೇಹವಿಲ್ಲ.

೩೬. ಇವನು ಶತ್ರುಗಳಿಗೆ ಭಯಕಾರಕನೂ, ಮಿತ್ರರಿಗೆ ಅಭಯಪ್ರದನೂ ಆಗಿ ಯುದ್ಧದಲ್ಲಿ ಜಯಿಸಲಸಾಧ್ಯನಾಗಿರುವನು." ಇಂತೆಂದು ಲಿಂಗವು ಮತ್ತೆ ಹೇಳಿತು.

೩೭. "ಶತ್ರುವಿನ ಬಲವನ್ನು ನಿಗ್ರಹಿಸುವುದಕ್ಕೂ, ಶ್ರೀರಾಮನ ಪ್ರೀತಿಯನ್ನು ಸಂಪಾದಿಸುವುದಕ್ಕೂ, ಶಾಪದ ಫಲವಾಗಿ ಸ್ವಲ್ಪಕಾಲದವರೆಗೂ ಇವನು ತನ್ನ ಬಲವನ್ನು ಸ್ಮರಿಸಿಕೊಳ್ಳುವುದಿಲ್ಲ.

ಹತೇ ತು ರಾವಣೇ ಭೂಯೋ ರಾಮಸ್ಯಾಽನುಮತೇ ಸ್ಥಿತಃ ।
ವಿಭೀಷಣಂ ಪ್ರಾರ್ಥಯಿತ್ವಾ ಮಾಮತ್ರ ಸ್ಥಾಪಯಿಷ್ಯತಿ ॥ ೩೮ ॥
ತತೋ ಮಾಂ ತ್ರಿದಶಾಃ ಸರ್ವೇ ಪೂಜಯಿಷ್ಯಂತಿ ಭಾವಿತಾಃ ।
ತೇನೈವ ನಾಮ್ನಾ ವಿಖ್ಯಾತಿಂ ಪುನರ್ಯಾಸ್ಯಾಮಿ ಭೂತಲೇ ॥ ೩೯ ॥
ಅಥ ಗಂಧವಹಃ ಪುತ್ರಂ ಪ್ರಗೃಹ್ಯ ಗೃಹಮಾಸಯುತ್ ।
ಅಂಜನಾಯೈ ತದಾಚಖ್ಯೌ ವರಲಬ್ಧಿಂ ಚ ಲಿಂಗತಃ ॥ ೪೦ ॥
ಏವಂ ಲಿಂಗಪ್ರಭಾವಾಚ್ಚ ಬಲವಾನ್ಮಾರುತಾತ್ಮಜಃ ।
ಸ ಜಾತಸ್ತ್ರಿಷು ಲೋಕೇಷು ರಾಮ ಶಸ್ತ್ರಾತ್ತ್ರಶಸ್ಯತೇ ॥ ೪೧ ॥

ಪರಾಕ್ರಮೋತ್ಸಾಹಮತಿಪ್ರತಾಪೈಃ
ಸೌಶೀಲ್ಯಮಾಧುರ್ಯನಯಾದಿಕೈಶ್ಚ ।
ಗಾಂಭೀರ್ಯಚಾತುರ್ಯಸುವೀರ್ಯಧೈರ್ಯೈ-
ರ್ಹನೂಮತಃ ಕೋಽಭ್ಯಧಿಕೋಽಸ್ತಿ ಲೋಕೇ ॥ ೪೨ ॥
ಮಮೇವ ವಿಕ್ಷೋಭಿತ ಸಾಗರಸ್ಯ
ಲೋಕಾನ್ದಿಧಕ್ಷೋರಿವ ಪಾವಕಸ್ಯ ।
ಪ್ರಜಾ ಜಿಹೀರ್ಷೋರಿವ ಚಾಂತಕಸ್ಯ
ಹನೂಮತಃ ಸ್ಥಾಸ್ಯತಿ ಕಃ ಪುರಸ್ತಾತ್ ॥ ೪೩ ॥

---

೩೮. ರಾವಣಾಸುರನ ವಧೆಯಾದಮೇಲೆ ಇವನು ರಾಮನ ಅನುಜ್ಞೆಯಲ್ಲಿ ನಿಂತವನಾಗಿ ವಿಭೀಷಣನನ್ನು ಪ್ರಾರ್ಥಿಸಿಕೊಂಡು ನನ್ನನ್ನಿಲ್ಲಿ ಪ್ರತಿಷ್ಠಿಸುವನು.

೩೯. ಆಗ ಸಕಲ ದೇವತೆಗಳೂ ಭಕ್ತಿಯಿಂದ ನನ್ನನ್ನು ಪೂಜಿಸುವರು. ಮತ್ತೆ ನಾನು ಈತನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಭೂಲೋಕದಲ್ಲಿ ಪಡೆಯುವೆನು.''

೪೦. ಬಳಿಕ ವಾಯುದೇವನು ಮಗನನ್ನೆತ್ತಿಕೊಂಡು ಮನೆಗೆ ಹಿಂದಿರುಗಿ ಬಂದು ಅಂಜನಾದೇವಿಗೆ, ಲಿಂಗವು ಇವನಿಗೆ ವರವನ್ನಿತ್ತ ಸಮಾಚಾರವೆಲ್ಲವನ್ನೂ ತಿಳಿಸಿದನು.

೪೧. ರಾಮ! ಇಂತು ಆ ಲಿಂಗದ ಮಾಹಾತ್ಮ್ಯೆಯಿಂದ ವಾಯುಪುತ್ರನಾದ ಈತನು ಮಹಾಪರಾಕ್ರಮಿಯಾದನು. ಅದುದರಿಂದಲೇ ಇವನು ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗಿರುವನು.

೪೨. ಪರಾಕ್ರಮ, ಉತ್ಸಾಹ, ಬುದ್ಧಿ, ಪ್ರತಾಪ, ಸೌಶೀಲ್ಯ, ಮಾಧುರ್ಯ, ನಯ, ಗಾಂಭೀರ್ಯ, ಚಾತುರ್ಯ, ವೀರ್ಯ, ಧೈರ್ಯಗಳಲ್ಲಿ ಹನುಮಂತನಿಗಿಂತಲೂ ಅಧಿಕನಾದವನು ಲೋಕದಲ್ಲಿ ಯಾವನಿರುವನು ?

೪೩. ನನ್ನಂತೆ ಸಮುದ್ರವನ್ನು ಕ್ಷೋಭಗೊಳಿಸಿದವನೂ, ಅಗ್ನಿಯಂತೆ

ಏತದ್ವೈ ಕಥಿತಂ ತುಭ್ಯಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಹನೂಮತೋಽಸ್ಯ ಬಾಲಸ್ಯ ಕರ್ಮಾಣ್ಯದ್ಭುತವಿಕ್ರಮ ॥ ೪೪ ॥
ದೃಷ್ಟಃ ಸಭಾಜಿತಶ್ಚಾಽಪಿ ರಾಮ ಗಚ್ಛಾಮಹೇ ವಯಂ ।
ಏವಮುಕ್ತ್ವಾ ಗತಾಃ ಸರ್ವೇ ಮುನಯೋಽವಂತಿಮಂಡಲಂ ।
ಪೂಜಯಾಮಾಸುರೀಶಾನಂ ಹನುಮತ್ಕೇಶ್ವರಂ ಶಿವಂ ॥ ೪೫ ॥
ಸಮರ್ಚಯಂತಿ ಯೇ ಭಕ್ತ್ಯಾ ಲಿಂಗಂ ತ್ರಿದಶಪೂಜಿತಂ ।
ಹನುಮತ್ಕೇಶ್ವರಂ ದೇವಂ ತೇ ಕೃತಾರ್ಥಾಃ ಕಲೌ ಯುಗೇ ॥ ೪೬ ॥
ವ್ರಜಂತ್ಯೇವ ಸುದುಷ್ಪ್ರಾಪ್ಯಂ ಬ್ರಹ್ಮಸಾಯುಜ್ಯಮವ್ಯಯಂ ।
ಸಂಪ್ರಾಪ್ಯ ತು ಪುನರ್ಜನ್ಮ ಲಭಂತೇ ಮೋಕ್ಷಮವ್ಯಯಂ ॥ ೪೭ ॥
ಯಃ ಪಶ್ಯತಿ ನರೋ ಲಿಂಗಂ ಹನುಮತ್ಕೇಶ್ವರಂ ಪ್ರಿಯೇ ।
ಸೋಽಧಿಕಂ ಫಲಮಾಪ್ನೋತಿ ಸರ್ವದುಃಖವಿವರ್ಜಿತಃ ॥ ೪೮ ॥
ಸರ್ವಲೋಕೇಷು ತಸ್ಯೈವ ಗತಿರ್ನ ಪ್ರತಿಹನ್ಯತೇ ।
ದಿವ್ಯೇರ್ನೈಶ್ವರ್ಯಯೋಗೇನ ಯುಜ್ಯತೇ ನಾಽತ್ರ ಸಂಶಯಃ ॥ ೪೯ ॥

---

ಲೋಕಗಳನ್ನು ಸುಡಲು ಶಕ್ತನೂ, ಯಮನಂತೆ ಪ್ರಜೆಗಳ ಪ್ರಾಣಗಳನ್ನು ತೆಗೆಯುವವನೂ ಆದ ಹನುಮಂತನ ಮುಂದೆ ನಿಲ್ಲುವುದಕ್ಕೆ ಯಾರಿಗೆ ಸಾಧ್ಯವು?

೪೪. ಎಲೈ ಪರಾಕ್ರಮಿಯೆ! ನಮ್ಮನ್ನು ನೀನು ಕೇಳಿದಂತೆ ಹನುಮಂತನು ಬಾಲ್ಯದಲ್ಲಿಮಾಡಿದ ಕಾರ್ಯವನ್ನು ನಿನಗೆ ತಿಳಿಸಿರುವೆನು.

೪೫. ಈತನನ್ನು ನೋಡಿ ನಾವು ಸಮ್ಮಾನಿಸಿರುವೆವು. ರಾಮ! ಇನ್ನು ನಾವು ಹೊರಡುವೆವು.” ಇಂತೆಂದು ಸಕಲಮುನಿಗಳೂ ಅವಂತೀಕ್ಷೇತ್ರಕ್ಕೆ ಹೋಗಿ ಹನುಮತ್ಕೇಶ್ವರಮಹಾಲಿಂಗವನ್ನು ಪೂಜಿಸಿದರು.

೪೬. ದೇವತೆಗಳಿಗೂ ಪೂಜ್ಯತಮವಾದ ಈ ಹನುಮತ್ಕೇಶ್ವರಲಿಂಗವನ್ನು ಯಾರು ಭಕ್ತಿಯಿಂದ ಪೂಜಿಸುವರೊ, ಅವರೇ ಈ ಕಲಿಯುಗದಲ್ಲಿ ಕೃತಾರ್ಥರು.

೪೭. ಅವರು ದುರ್ಲಭವೂ, ಶಾಶ್ವತವೂ ಆದ ಬ್ರಹ್ಮಪದವಿಯನ್ನು ಪಡೆಯುವರು. ಅಥವಾ ಮತ್ತೊಂದು ಜನ್ಮವನ್ನು ತಳೆದು ಮೋಕ್ಷಕ್ಕೆ ಭಾಗಿಗಳಾಗುವರು.

೪೮. ಪ್ರಿಯಳೆ! ಯಾವ ಮನುಷ್ಯನು ಹನುಮತ್ಕೇಶ್ವರಮಹಾಲಿಂಗವನ್ನು ನೋಡುವನೊ, ಅವನು ಸಮಸ್ತ ದುಃಖಗಳನ್ನೂ ಕಳೆದುಕೊಂಡು ಅಧಿಕವಾದ ಪುಣ್ಯಫಲವನ್ನು ಪಡೆಯುವನು.

೪೯. ಅವನಿಗೆ ಸಮಸ್ತಲೋಕಗಳಲ್ಲಿಯೂ ತಡೆಯಿಲ್ಲದ ಸಂಚಾರವಿರುವುದು. ಮತ್ತು ಅವನು ದೇವಲೋಕದ ವೈಭವಗಳಿಂದ ಕೂಡಿರುವುದರಲ್ಲಿ ಸಂಶಯವಿಲ್ಲ.

ಬಾಲಸೂರ್ಯಪ್ರತೀಕಾಶವಿಮಾನೇನ ಸುವರ್ಚಸಾ ।
ವೃತಃ ಸ್ತ್ರೀಣಾಂ ಸಹಸ್ರೈಸ್ತು ಸ್ವಚ್ಛಂದಗಮನಾಽಽಗಮಃ ॥ ೫೦ ॥
ವಿಚರತ್ಯವಿಚಾರೇಣ ಸರ್ವಲೋಕಾನ್ದಿವೌಕಸಾಂ ।
ಸ್ಪೃಹಣೀಯತಮಃ ಪುಂಸಾಂ ಸರ್ವವರ್ಣೋತ್ತಮೋಽಧುನಾ ॥ ೫೧ ॥
ಸ್ವರ್ಗಾಚ್ಚ್ಯುತಃ ಪ್ರಜಾಯೇತ ಕುಲೇ ಮಹತಿ ರೂಪವಾನ್ ।
ಧರ್ಮಜ್ಞೋ ರುದ್ರಭಕ್ತಶ್ಚ ಸರ್ವವಿದ್ಯಾರ್ಥಪಾರಗಃ ॥ ೫೨ ॥
ರಾಜಾ ವಾ ರಾಜತುಲ್ಯೋ ವಾ ದರ್ಶನಾದಸ್ಯ ಜಾಯತೇ ।
ಸ್ಪರ್ಶನಾತ್ಪರಮಂ ಪುಣ್ಯಂ ಯಜನಾತ್ಪರಮಂ ಪದಂ ॥ ೫೩ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಹನುಮತ್ಕೇಶ್ವರೇಶಸ್ಯ ಸ್ವಪ್ನೇಶ್ವರಮಥೋ ಶೃಣು ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಹನುಮತ್ಕೇಶ್ವರಮಾಹಾತ್ಮ್ಯವರ್ಣನಂ"
ನಾಮೈಕೋನಾಽಶೀತಿತಮೋಽಧ್ಯಾಯಃ

---

೫೦. ಉದಯಾದಿತ್ಯನ ಪ್ರಕಾಶದಿಂದ ಹೊಳೆಯುವ ವಿಮಾನದಲ್ಲಿ ಕುಳಿತು ಸಾವಿರಾರು ಸ್ತ್ರೀಯರಿಂದ ಸೇವಿತನಾಗಿ ಹದಿನಾಲ್ಕು ಲೋಕಗಳಲ್ಲಿಯೂ ಸ್ವೇಚ್ಛೆಯಿಂದಲೇ ಬಂದು ಹೋಗುತ್ತಿರುವನು.

೫೧. ವಿಚಾರಣೆಯಿಲ್ಲದೆ ದೇವಲೋಕಗಳಲ್ಲಿಯೂ ಸಂಚರಿಸುತ್ತ ಅವನು ಭೂಲೋಕದಲ್ಲಿ ಉತ್ತಮವರ್ಣದಲ್ಲಿ ಹುಟ್ಟಿದರೆ ಸಕಲ ಜನರಿಗೂ ಬೇಕಾದವನಾಗಿರುವನು.

೫೨. ಸ್ವರ್ಗದಿಂದ ಚ್ಯುತನಾದರೆ ಸುಂದರನೂ, ಧರ್ಮಜ್ಞನೂ, ಮಹೇಶ್ವರ ಭಕ್ತನೂ, ಸರ್ವವಿದ್ಯಾಪಾರಂಗತನೂ ಆಗಿ ಉತ್ತಮ ವಂಶದಲ್ಲಿ ಜನಿಸುವನು.

೫೩. ಮಾನವನು ಈ ಲಿಂಗದ ದರ್ಶನದಿಂದ ರಾಜನಾಗಲಿ, ರಾಜನಿಗೆ ಸಮಾನನಾದವನಾಗಲಿ ಆಗುವನು. ಇದನ್ನು ಮುಟ್ಟುವುದರಿಂದ ಪುಣ್ಯಾಧಿಕ್ಯವೂ, ಪೂಜಿಸುವುದರಿಂದ ಮೋಕ್ಷವೂ ಲಭಿಸುವುವು.

೫೪. ಪಾರ್ವತಿಯೆ! ಹನುಮತ್ಕೇಶ್ವರಮಹಾದೇವನ ಪ್ರಭಾವವನ್ನು ನಿನಗೆ ತಿಳಿಸಿದೆನು. ಇನ್ನು ಸ್ವಪ್ನೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಹನುಮತ್ಕೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಅಶೀತಿತಮೋಽಧ್ಯಾಯಃ

### ಸ್ವಪ್ನೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಅಶೀತಿಕಂ ವಿಜಾನೀಹಿ ದೇವಂ ಸ್ವಪ್ನೇಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ದುಃಸ್ವಪ್ನಂ ನಶ್ಯತಿ ಧ್ರುವಂ ॥ ೧ ॥
ಕಲ್ಮಾಷಪಾದೇತಿ ಖ್ಯಾತೋ ಲೋಕೇ ರಾಜಾ ಬಭೂವ ಹ ।
ಇಕ್ಷ್ವಾಕುವಂಶಜೋ ದೇವಿ ತೇಜಸಾ ಸೂರ್ಯವದ್ಭುವಿ ॥ ೨ ॥
ಸ ಕದಾಚಿದ್ವನೇ ರಾಜಾ ವಸಿಷ್ಠಸುತಮೌರಸಂ ।
ಶಕ್ತಿಂ ಪರಮಧರ್ಮಜ್ಞಂ ದದರ್ಶ ವಿಜಿತೇಂದ್ರಿಯಂ ।
ಮಾರ್ಗಸ್ಥಿತಂ ತಪೋನಿಷ್ಠಮುಪಗಚ್ಛೇತಿ ಚಾಽಬ್ರವೀತ್ ॥ ೩ ॥
ಅಮುಂಚಂತಂ ತು ಪಂಥಾನಂ ತಮೃಷಿಂ ನೃಪಸತ್ತಮಂ ।
ಜಘಾನ ಕಶಯಾ ಮೋಹಾತ್ತದಾ ರಾಕ್ಷಸವನ್ಮುನಿಂ ॥ ೪ ॥
ಕಶಾಪ್ರಹಾರಾಽಭಿಹತಸ್ತತಃ ಸ ಮುನಿಪುಂಗವಃ ।
ತಂ ಶಶಾಪ ರುಷಾವಿಷ್ಟೋ ವಾಸಿಷ್ಠಃ ಕ್ರೋಧಮೂರ್ಛಿತಃ ॥ ೫ ॥

---

### ಕನ್ನಡದ ಅನುವಾದ

#### ಸ್ವಪ್ನೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಎಂಬತ್ತನೆಯ ಮಹಾಲಿಂಗವೇ ಸ್ವಪ್ನೇಶ್ವರನೆಂದು ತಿಳಿ. ಇದನ್ನು ನೋಡುವುದರಿಂದ ದುಸ್ಸ್ವಪ್ನದೋಷವು ನಾಶವಾಗುವುದು ನಿಜವು.

೨. ದೇವಿಯೆ! ಇಕ್ಷ್ವಾಕುವಂಶದಲ್ಲಿ ಸೂರ್ಯನಂತೆ ಮಹಾ ತೇಜಸ್ವಿಯಾದವನೂ, ಲೋಕದಲ್ಲಿ ವಿಖ್ಯಾತನಾದವನೂ ಆದ ಕಲ್ಮಾಷಪಾದನೆಂಬ ರಾಜನೊಬ್ಬನಿದ್ದನು.

೩. ಆತನೊಮ್ಮೆ ಅರಣ್ಯದಲ್ಲಿ ಸಂಚರಿಸುತ್ತ ದಾರಿಯ ಮಧ್ಯದಲ್ಲಿ ನಿಂತಿದ್ದ ವಶಿಷ್ಠಪುತ್ರನೂ, ಪರಮಧರ್ಮಜ್ಞನೂ, ಜಿತೇಂದ್ರಿಯನೂ ಆದ ಶಕ್ತಿಮಹಾಮುನಿಯನ್ನು ಕಂಡು ತಪೋನಿರತನಾದ ಆತನನ್ನು ಕುರಿತು "ಪಕ್ಕಕ್ಕೆ ಹೋಗು" ಎಂದನು.

೪. ದಾರಿಯನ್ನು ಬಿಡದಿರುವ ಆ ಮುನಿಯ ವಿಷಯದಲ್ಲಿ ಮೋಹಗೊಂಡು ರಾಜನು ರಾಕ್ಷಸಭಾವವನ್ನು ತಾಳಿ ಆತನನ್ನು ಚಾವಟಿಯಿಂದ ಹೊಡೆದನು.

೫. ಚಬುಕಿನ ಪೆಟ್ಟಿನಿಂದ ಸಿಟ್ಟಿಗೆದ್ದು ವಶಿಷ್ಠಪುತನಾದ ಶಕ್ತಿಯು ರೋಷದಿಂದ ಆ ರಾಜನಿಗೆ ಶಾಪವನ್ನಿತ್ತನು.

ಹಂಸಿ ರಾಕ್ಷಸವದ್ಯಸ್ಮಾದ್ರಾಜಾಪಸದ ತಾಪಸಂ ।
ತಸ್ಮಾತ್ತ್ವಮದ್ಯ ಪ್ರಭೃತಿ ಪುರುಷಾದೋ ಭವಿಷ್ಯತಿ ॥ ೬ ॥
ಸತತಂ ನಿಶಿತಾಸಕ್ತಶ್ಚರಿಷ್ಯಸಿ ಮಹೀಮಿಮಾಂ ।
ಸ ತು ಶಪ್ತಸ್ತದಾ ತೇನ ತತ್ಕ್ಷಣಾದ್ವೈ ನೃಪೋತ್ತಮಃ ।
ಜಗಾಮ ಶರಣಂ ಶಕ್ತಿಂ ಪ್ರಸಾದಯಿತುಮರ್ಹಯತ್ ॥ ೭ ॥
ಯದಾ ನ ತುಷ್ಟೋ ವಿಪ್ರರ್ಷಿಃ ಶಕ್ತಿಃ ಪರಮಕೋಪನಃ ।
ಪ್ರಸಾದ್ಯಮಾನೋ ಭೂಪೇನ ತದಾ ತೇನಾಽಪಿ ಭಕ್ಷಿತಃ ॥ ೮ ॥
ಶಕ್ತಿಂ ತಂ ಭಕ್ಷಯಿತ್ವಾ ತು ವಸಿಷ್ಠಸ್ಯಾಽಪರಾನ್ ಸುತಾನ್ ।
ಭಕ್ಷಯಾಮಾಸ ಸಹಸಾ ಸಿಂಹಃ ಕ್ಷುದ್ರಮೃಗಾನಿವ ॥ ೯ ॥
ತದಾ ಪ್ರಭೃತಿ ಸಂಜಾತಃ ಪುರುಷಾಽದೋ ನೃಪೋತ್ತಮಃ ।
ರಾತ್ರೌ ಪಶ್ಯತಿ ದುಃಸ್ವಪ್ನಾನ್ಪಾಪಸಂಘೇನ ಮೋಹಿತಃ ॥ ೧೦ ॥
ದೃಷ್ಟ್ವಾ ಭಯಾನಕಾನ್ ಸ್ವಪ್ನಾನ್ ಸ ರಾಜಾ ಪರ್ಯತಪ್ಯತ ।
ಪಶ್ಚಾತ್ತಾಪೇನ ಸಂಯುಕ್ತೋ ವಿಲಲಾಪ ಸುದುಃಖಿತಃ ॥ ೧೧ ॥

---

೬. "ಎಲೈ ನೀಚರಾಜನೆ! ತಪೋನಿಷ್ಠನಾದ ನನ್ನನ್ನು ರಾಕ್ಷಸನಂತೆ ಹೊಡೆದ ಕಾರಣದಿಂದ ನೀನು ಇಂದುಮೊದಲು ಮನುಷ್ಯನನ್ನು ತಿನ್ನುವ ರಾಕ್ಷಸನಾಗಿಯೇ ಇರುವೆ.

೭. ಯಾವಾಗಲೂ ಮಾಂಸದಲ್ಲಿ ಆಸಕ್ತನಾಗಿ ಈ ಭೂಮಿಯಲ್ಲಿ ಸಂಚರಿಸುತ್ತಿರುವೆ.'' ಇಂತೆಂದು ಶಾಪವನ್ನು ಹೊಂದಿ ಆ ರಾಜೇಂದ್ರನು ಆ ಕ್ಷಣದಲ್ಲಿಯೇ ಶಕ್ತಿಮಹಾಮುನಿಯನ್ನು ಪ್ರಸನ್ನನಾಗಿ ಮಾಡಿಕೊಳ್ಳಲು ಆತನಲ್ಲಿ ಶರಣಾಗತನಾದನು.

೮. ಪರಮಕೋಪಸ್ವಭಾವದವನಾದ ಶಕ್ತಿಯು ಪ್ರಸನ್ನನಾಗದಿರಲು ಪ್ರಸಾದವಿಮುಖನಾದ ರಾಜನು ಮೊದಲು ಅವನನ್ನೇ ತಿಂದುಹಾಕಿದನು.

೯. ಇಂತು ಶಕ್ತಿಮಹಾಮುನಿಯನ್ನು ಮೊದಲು ತಿಂದಬಳಿಕ ಸಿಂಹವು ಸಣ್ಣಮೃಗಗಳನ್ನು ಭಕ್ಷಿಸುವಂತೆ ವಶಿಷ್ಠನ ಇತರ ಪುತ್ರರನ್ನೂ ತಿಂದನು.

೧೦. ಅಂದಿನಿಂದ ಆ ಮಹಾರಾಜನು ಮನುಷ್ಯಭಕ್ಷಕನಾದನು. ತನ್ನ ಪಾಪಸಮೂಹದ ಫಲವಾಗಿ ನಿತ್ಯವೂ ರಾತ್ರಿಯಲ್ಲಿ ಅವನು ದುಸ್ಸ್ವಪ್ನಗಳನ್ನೇ ಕಾಣುತ್ತಿದ್ದನು.

೧೧. ಭಯಂಕರಗಳಾದ ಸ್ವಪ್ನಗಳನ್ನು ಕಂಡು ಆತನು ಬಹಳವಾಗಿ ಪರಿತಪಿಸಿದನು. ಪಶ್ಚಾತ್ತಾಪದಿಂದ ಕೂಡಿದವನಾಗಿ ದುಃಖದಿಂದ ಪ್ರಲಾಪವನ್ನೂ ಮಾಡುತ್ತಿದ್ದನು.

ಅಥಾಽಪೃಚ್ಛನ್ನಮಾತ್ಯಾಶ್ಚ ಕಿಂ ಕರೋಷಿ ಮಹೀಪತೇ ।
ಕಸ್ಮಾತ್ತೇ ನಿಷ್ಪ್ರಭಾ ಕಾಂತಿರ್ವಿವರ್ಣೋ ಹರಿಣಃ ಕೃಶಃ ॥ ೧೨ ॥
ಸ ರಾಜಾ ಕಥಯಾಮಾಸ ದುಃಸ್ವಪ್ನಾನನುಪೂರ್ವಶಃ ।
ಸ್ವಪ್ನೇಽಹಂ ಸಾಗರಂ ಶುಷ್ಕಂ ಚಂದ್ರಂ ಚ ಪತಿತಂ ಭುವಿ ॥ ೧೩ ॥
ಉಪರುದ್ಧಾಂ ಚ ಜಗತೀಂ ಘನೇನ ತಮಸಾ ವೃತಾಂ ।
ಆತ್ಮಾನಂ ಚಾಽಹಮದ್ರಾಕ್ಷಂ ಮಲಿನಂ ಮುಕ್ತಮೂರ್ಧಜಂ ॥ ೧೪ ॥
ಪತಂತಮದ್ರಿಶಿಖರಾತ್ಕಲುಷೇ ಗೋಮಯೇ ಹ್ರದೇ ।
ಪಿಬನ್ನಂಜಲಿನಾ ತೈಲಂ ಹಸನ್ನಿವ ಮುಹುರ್ಮುಹುಃ ॥ ೧೫ ॥
ತೈಲೇನಾಭ್ಯಕ್ತಸರ್ವಾಂಗಸ್ತೈಲಮೇವಾಽವಗಾಹಯನ್ ।
ಪೀಠೇ ಕಾರ್ಷ್ಣಾಯಸೇ ಚೈವ ನಿಷಣ್ಣೋಽಹಮಧೋಮುಖಃ ॥ ೧೬ ॥
ಗಾಯಂತಿ ಪ್ರಮದಾ ರಕ್ತಾ ರಕ್ತಮಾಲ್ಯಾಽನುಲೇಪನಾಃ ।
ಕೃಷ್ಣಾಽಂಬರಧರಾಶ್ಚಾಽನ್ಯಾಃ ಕೃಷ್ಣಮಾಲ್ಯಾನುಲೇಪನಾಃ ॥ ೧೭ ॥

---

೧೨. ಒಂದು ದಿನ ಮಂತ್ರಿಗಳು ಆತನಿಗೆಂದರು: "ಭೂಪಾಲಕನೆ! ನೀನೇನು ಮಾಡುತ್ತಿರುವೆ? ನಿನ್ನ ಮುಖದಲ್ಲಿ ರಾಜತೇಜಸ್ಸು ಕಾಣದೆಹೋಗಲು ಕಾರಣವೇನು? ನಿನ್ನ ಸಹಜವರ್ಣವನ್ನು ಕಳೆದುಕೊಂಡು ಹಳದಿಯ ಬಣ್ಣದ ಕೃಶವಾದ ಮೈಯುಳ್ಳವನಾಗಿರುವೆ."

೧೩. ಆಗ ರಾಜನು ತಾನು ಕಾಣುತ್ತಿರುವ ದುಸ್ಸ್ವಪ್ನಗಳನ್ನು ಅವರಿಗೆ ಹೇಳಿದನು. ಸ್ವಪ್ನದಲ್ಲಿ ನಾನು ಸಮುದ್ರವು ಒಣಗಿಹೋದುದನ್ನೂ, ಚಂದ್ರನು ಭೂಮಿಯಲ್ಲಿ ಬಿದ್ದುದನ್ನೂ ಕಂಡೆನು.

೧೪. ಭೂಮಿಯಲ್ಲಿ ವ್ಯಾಪಾರವು ನಿಂತು ಅಂಧಕಾರದಿಂದಾವೃತವಾಗಿದ್ದುದನ್ನು ನೋಡಿದೆನು. ನಾನು ಮಲಿನನಾಗಿ ಕೂದಲನ್ನು ಕೆದರಿಕೊಂಡಿದ್ದುದನ್ನು ಕಂಡೆನು.

೧೫. ಬೆಟ್ಟದ ತುದಿಯಿಂದ ಸಗಣಿಯ ಕುಂಟೆಯಲ್ಲಿ ಬೀಳುತ್ತಿರುವಂತೆಯೂ, ಕೈಗಳಿಂದ ತೈಲವನ್ನು ಕುಡಿಯುತ್ತ ಮತ್ತೆ ಮತ್ತೆ ನಿಷ್ಕಾರಣವಾಗಿ ನಗುತ್ತಿರುವಂತೆಯೂ ಕಂಡೆನು.

೧೬. ತೈಲದಿಂದ ಲೇಪಿತನಾಗಿ ಎಣ್ಣೆಯಲ್ಲಿ ಸ್ನಾನವನ್ನು ಮಾಡಿ ಕಬ್ಬಿಣದ ಆಸನದಲ್ಲಿ ದೀನನಾಗಿ ಮುಖವನ್ನು ತಗ್ಗಿಸಿ ಕುಳಿತಿದ್ದುದನ್ನು ಕಂಡೆನು.

೧೭. ಕೆಂಪು ಹೂವುಗಳಿಂದಲೂ, ಗಂಧದಿಂದಲೂ ಅಲಂಕೃತರಾದ ಕೆಲವು ಕೆಂಪುಬಣ್ಣದ ಸ್ತ್ರೀಯರು ಸುತ್ತಲೂ ಹಾಡುತ್ತಿದ್ದರು. ಮತ್ತೆ ಕೆಲವರು ಕರಿಯ ಸೀರೆಗಳನ್ನುಟ್ಟು ಕರಿಯ ಹೂಮಾಲೆಗಳನ್ನು ತಾಳಿದ್ದರು.

ತಾಭಿರಾಕೃಷ್ಯಮಾಣೋಽಪಿ ನೀತೋಽಹಂ ದಕ್ಷಿಣಾಂ ದಿಶಂ ।
ಬದ್ಧ್ವಾ ರಜ್ವಾ ಸುವರ್ಣಸ್ಯ ಲೋಹಸ್ಯ ರಜತಸ್ಯ ಚ ॥ ೧೮ ॥
ಪಾಂಸುಕರ್ದಮಯೋರ್ಮಧ್ಯೇ ಮಗ್ನೋಽಹಂ ಲೋಹಯಂತ್ರಿತಃ ।
ಕಪೋತೈಸ್ತುದ್ಯಮಾನೋಽಹಂ ಗೃಧ್ರೈಃ ಕಾಕೈಶ್ಚ ದಾರುಣೈಃ ॥ ೧೯ ॥
ಸೃಗಾಲೈರ್ಭಕ್ಷ್ಯಮಾಣಶ್ಚ ಸ್ಥಿತೋ ಮದ್ಗುರಮಸ್ತಕೇ ।
ಋಕ್ಷವಾನರಯಾನಸ್ಥೋ ಗತೋಽಹಂ ದಕ್ಷಿಣಾಂ ದಿಶಂ ॥ ೨೦ ॥
ನದೀಂ ನಿಮಗ್ನೋ ನಿಶ್ಚೇಷ್ಟೋ ಜಲಹೀನಾಂ ಮಹೀಸಮಾಂ ।
ದಂತೈರ್ವಿದಾರಿತೋ ರಾತ್ರೌ ರಾಸಭೇನಾಽಪಮರ್ದಿತಃ ॥ ೨೧ ॥
ತಾಡಿತೋ ಹೃದಯೇಽತ್ಯರ್ಥಂ ಚರಣೈರ್ವಜ್ರಸನ್ನಿಭೈಃ ।
ದೃಷ್ಟಿಶ್ಚ ಹನ್ಯತೇಽತ್ಯರ್ಥಂ ವೇತಾಲೈರ್ಲೋಹಶಂಕುಭಿಃ ॥ ೨೨ ॥
ಕರಾಲೈಃ ಕಂಟಕೈಃ ಕೃಷ್ಣೈಃ ಪುರುಷೈರುದ್ಯತಾಯುಧೈಃ ।
ಸ್ವಪ್ನೇಽಹಂ ತಾಡಿತೋಽತ್ಯರ್ಥಮಪ್ರಮಾಣೈಃ ಶಿತೈಃ ಶರೈಃ ॥ ೨೩ ॥

---

೧೮. ಅವರೆಲ್ಲರೂ ನನ್ನನ್ನು ಬೆಳ್ಳಿ, ಭಂಗಾರ, ಕಬ್ಬಿಣದ ಸರಪಳಿಗಳಿಂದ ಬಂಧಿಸಿ ಸೆಳೆದುಕೊಂಡು ದಕ್ಷಿಣದಿಕ್ಕಿಗೆ ಹೋದರು.

೧೯. ಲೋಹದಿಂದ ಬದ್ಧನಾದ ನಾನು ದೂಳಿನಲ್ಲಿಯೂ, ಕೆಸರಿನಲ್ಲಿಯೂ ಬಿದ್ದಿದ್ದೆನು. ನನ್ನ ದೇಹವನ್ನು ಕಪೋತಗಳೂ, ಗೃಧ್ರಗಳೂ, ಕಾಗೆಗಳೂ ಭಯಂಕರವಾಗಿ ಕಿತ್ತು ತಿನ್ನುತ್ತಿದ್ದುವು.

೨೦. ನರಿಗಳು ತಿನ್ನುತ್ತಿದ್ದ ದೇಹದೊಡನೆ ಮೀನಿನ ಮೇಲೆ ನಿಂತಿದ್ದಂತಿದ್ದಿತು. ಕರಡಿ ಮತ್ತು ಕಪಿಗಳ ಮೇಲೆ ಕುಳಿತು ದಕ್ಷಿಣದಿಕ್ಕಿಗೆ ಪ್ರಯಾಣ ಮಾಡಿದೆನು.

೨೧. ಜಲರಹಿತವೂ, ಭೂಮಿಗೆ ಸಮಾನವೂ ಆದ ನದಿಯಲ್ಲಿ ಮುಳುಗಿ ನಿಶ್ಚೇಷ್ಟನಾಗಿ ಬಿದ್ದಿದ್ದೆನು. ರಾತ್ರಿಯಲ್ಲಿ ಕತ್ತೆಗಳು ನುಗ್ಗಿ ನನ್ನ ಹಲ್ಲುಗಳನ್ನು ಉದುರಿಸಿದುವು.

೨೨. ಅವು ವಜ್ರಸಮಾನಗಳಾದ ಹಿಂಗಾಲುಗಳಿಂದ ನನ್ನ ಎದೆಯಲ್ಲಿ ಬಲವಾಗಿ ಒದ್ದುವು. ಭೇತಾಳರು ಕಬ್ಬಿಣದ ಸಲಾಕೆಗಳಿಂದ ನನ್ನ ಕಣ್ಣುಗಳನ್ನು ಕೀಳುತ್ತಿದ್ದರು.

೨೩. ಭಯಂಕರರೂ, ಕಂಟಕಪ್ರಾಯರೂ, ಕಪ್ಪುಬಣ್ಣದವರೂ ಆದ ಭಟರು ಆಯುಧಗಳನ್ನೆತ್ತಿ ಹಿಡಿದು ಲೆಕ್ಕವಿಲ್ಲದ ತೀಕ್ಷ್ಣಬಾಣಗಳಿಂದ ನನ್ನನ್ನು ಹೊಡೆದರು.

ಏವಮೇತನ್ಮಯಾ ದೃಷ್ಟಮಿಮಾಂ ರಾತ್ರಿಂ ಭಯಾವಹಾಂ ।
ಸಂಖ್ಯಾಂ ಕರ್ತುಂ ನ ಶಕ್ಯೇತ ದುಃಸ್ವಪ್ನಾನಪರಾನ್ ಬಹೂನ್ ॥ ೨೪ ॥
ಇಮಾಂ ತು ದುಃಸ್ವಪ್ನಗತಿಂ ನಿರೀಕ್ಷ್ಯ ವೈ
ಹ್ಯನೇಕರೂಪಾಮನುಚಿಂತಿತಂ ಪುರಾ ।
ಭಯಂ ಮಹನ್ಮೇ ಹೃದಯಂ ನ ಶುಧ್ಯತಿ
ಪ್ರಗೃಹ್ಯ ಬಾಹೂ ವಿಲಪಾಮ್ಯನಾಥವತ್ ॥ ೨೫ ॥
ನೃಪಸ್ಯ ವಚನಂ ಶ್ರುತ್ವಾ ಅಮಾತ್ಯಾ ಭೃಶದುಃಖಿತಾಃ ।
ಪಶ್ಯತೋ ದುರ್ನಿಮಿತ್ತಾಂಶ್ಚ ಉಲ್ಕಾಪಾತಾದಿಕಾಂಸ್ತದಾ ॥ ೨೬ ॥
ಸೌರಿಸೂರ್ಯಕುಜಾಕ್ರಾಂತಂ ನಗರಂ ದೃಶ್ಯತೇಽಧುನಾ ।
ನಾಗಂ ಚತುಷ್ಪದಂ ವಿಷ್ಟಿಂ ಕಿಂಸ್ತುಘ್ನಂ ಶಕುನಿಂ ತಥಾ ॥ ೨೭ ॥
ಕರಣಾನಿ ನ ಶಸ್ಯಂತೇ ಮುಹೂರ್ತಾ ದಾರುಣಾಭವನ್ ।
ವಿದಿತ್ವಾ ನೃಪಭಂಗಂ ತು ದೇಶಭಂಗಂ ಕುಲಕ್ಷಯಂ ॥ ೨೮ ॥
ಆಶ್ವಾಸಯಂತೋ ರಾಜಾನಮಿದಂ ವಚನಮಬ್ರುವನ್ ।
ಅಲಂ ಶೋಕೇನ ಕಾಕುತ್ಥ್ಸ ಸತ್ಯಾಽಸತ್ಯಾ ಹಿ ವಿಭ್ರಮಾಃ ॥ ೨೯ ॥

---

೨೪. ಈ ರೀತಿಯಾಗಿ ಕಳೆದ ರಾತ್ರಿಯು ನನಗೆ ಭಯಾನಕದೃಶ್ಯಗಳಿಂದ ಕೂಡಿದ್ದಿತು. ಇತರ ಅನೇಕ ದುಸ್ಸ್ವಪ್ನಗಳನ್ನು ಕಂಡಿರುವುದನ್ನು ಹೇಳುವುದಕ್ಕೂ ಸಾಧ್ಯವಿಲ್ಲ.

೨೫. ಇಂತಹ ಬಹು ವಿಧಗಳೂ ಅನಿರೀಕ್ಷಿತಗಳೂ ಆದ ದುಸ್ಸ್ವಪ್ನಗಳ ಪರಂಪರೆಯನ್ನು ಕಂಡು ನನ್ನ ಮನಸ್ಸು ಬಹಳ ಭಯಗೊಂಡಿರುವುದು. ಚಿತ್ತ ಶುದ್ಧಿಯಿಲ್ಲದೆ ನಾನು ಕೈಗಳನ್ನು ಹಿಸುಕಿಕೊಳ್ಳುತ್ತ ಅನಾಥನಂತೆ ದುಃಖಿಸುತ್ತಿರುವೆನು.''

೨೬. ಮಹಾರಾಜನ ಮಾತುಗಳನ್ನು ಕೇಳಿ ಉಲ್ಕಾಪಾತಗಳೇ ಮೊದಲಾದ ಅನೇಕ ದುಶ್ಶಕುನಗಳನ್ನು ಕಂಡು ಮಂತ್ರಿಗಳೂ ಸಹ ಬಹಳ ಸಂಕಟಗೊಂಡರು.

೨೭. ಪಟ್ಟಣವು ಶನಿ, ಸೂರ್ಯ, ಕುಜರಿಂದ ಆಕ್ರಮಿಸಲ್ಪಟ್ಟಿರುವಂತೆ ಈಗ ಕಾಣುತ್ತಿರುವುದು. ಗಜಗಳೂ, ಚತುಷ್ಪದ ಪ್ರಾಣಿಗಳೂ ವಿಷ್ಮಿಸುತ್ತಿರುವುವು. ಶಕುನಿಪಕ್ಷಿಗಳು ಅಮಂಗಳಗಳನ್ನು ಸೂಚಿಸುತ್ತಿರುವುವು.

೨೮. ಕರಣಗಳು ಒಳ್ಳೆಯವಲ್ಲ. ಮುಹೂರ್ತಗಳು ಕ್ರೂರಗಳಾಗಿವೆ. ಇವುಗಳಿಂದ ಅವರು ಮುಂದೆ ರಾಜನಿಗೆ ಅರಿಷ್ಟವನ್ನೂ ದೇಶಕ್ಕೆ ಹಾನಿಯನ್ನೂ ತಿಳಿಯುವವರಾದರು.

೨೯. ಆದರೂ ರಾಜನನ್ನು ಸಮಾಧಾನಗೊಳಿಸುವವರಾಗಿ ಇಂತೆಂದು ಹೇಳಿದರು. '' ರಾಜೇಂದ್ರನೆ! ದುಃಖವನ್ನು ಸಾಕುಮಾಡು. ಭ್ರಾಂತಿಗಳು ಸತ್ಯಾಸತ್ಯ ಫಲಗಳಿಂದ ಕೂಡಿರುವುವಷ್ಟೆ.

ದೃಶ್ಯಂತೇ ಭಾವಿತಾಃ ಪುಂಸಿ ಸ್ವಪ್ನೇ ಧಾತುವಶೇನ ಹಿ ।
ತಥಾ ಪಿತ್ರಾದಿ ದೇವಾಂಶ್ಚ ಪೂಜಯ ಬ್ರಾಹ್ಮಣಾಂಸ್ತಥಾ ॥ ೩೦ ॥
ಏಭಿಸ್ತತೋ ಮೋಕ್ಷ್ಯಸೇ ತ್ವಂ ಮಾನಸಾದಧಿವಿಭ್ರಮಾತ್ ।
ಯಸ್ಮಾದ್ದೈವೋಪಘಾತಾನಾಂ ದೈವಮೇವ ಹಿ ರಕ್ಷಣಂ ॥ ೩೧ ॥
ಏವಮಾಶ್ವಾಸಿತೋ ಭೂಪೋ ಹ್ಯಮಾತ್ಯೈರ್ಧರ್ಮಕೋವಿದೈಃ ।
ತತ್ಪಾಪಂ ಕಥಯಾಮಾಸ ಗುರುಪುತ್ರವಧಾದಿಕಂ ॥ ೩೨ ॥
ವಸಿಷ್ಠಸ್ಯ ಸುತೋ ಜ್ಯೇಷ್ಠಃ ಶಕ್ತಿರ್ವೈ ಭಕ್ಷಿತೋ ಮಯಾ ।
ನೃಶಂಸೇನ ತಥಾಽಮಾತ್ಯಾ ಏಕೋನಂ ಭಕ್ಷಿತಂ ಶತಂ ॥ ೩೩ ॥
ತೇನ ಪಾಪೇನ ಸಂತಪ್ತಃ ಕಥಂ ಸ್ವಸ್ಥೋ ಭವಾಮಿ ವೈ ।
ಏಕಾಽಪಿ ಬ್ರಹ್ಮಹತ್ಯಾಯಾ ಸಾಽಪಿ ದೈವಾತ್ಸುದುಷ್ಕರಾ ।
ಮಯಾ ಪುನರ್ನೃಶಂಸೇನ ಸಾ ತಥಾ ನ ತು ವರ್ಜಿತಾ ॥ ೩೪ ॥
ಕಾಂಸ್ತು ಲೋಕಾನ್ಗಮಿಷ್ಯಾಮಿ ಕೃತ್ವಾ ಕರ್ಮ ಸುದಾರುಣಂ ।
ರಾಕ್ಷಸೋಽಹಮನೇನೈವ ಶರೀರೇಣ ಕುಲಾಂತಕೃತ್ ॥ ೩೫ ॥

---

೩೦. ಮನುಷ್ಯನು ಎಚ್ಚತ್ತಿರುವಾಗ ಮನಸ್ಸಿನಲ್ಲಿ ಯೋಚಿಸಿದವುಗಳೇ ಶರೀರಧಾತುಗಳ ಕಾರಣದಿಂದ ಸ್ವಪ್ನಗಳಲ್ಲಿ ಕಾಣುತ್ತಿರುವುವು. ಆದರೂ ಇದರ ಶಾಂತಿಗಾಗಿ ಪಿತೃಗಳನ್ನೂ, ದೇವತೆಗಳನ್ನೂ, ಬ್ರಾಹ್ಮಣರನ್ನೂ ಸತ್ಕರಿಸು.

೩೧. ಈ ಕಾರ್ಯಗಳನ್ನು ಮಾಡುವುದರಿಂದ ನಿನ್ನ ಮನಸ್ಸಿನಲ್ಲಿರುವ ಭ್ರಮೆಗಳನ್ನು ಕಳೆದುಕೊಳ್ಳುವೆ. ದೈವಿಕ ದುಃಖಗಳನ್ನು ಹೊಂದಿದವರಿಗೆ ದೈವವೇ ಶರಣ್ಯವಾಗಿರುವುದು.''

೩೨. ಇಂತು ಧರ್ಮಜ್ಞರಲ್ಲಿ ಮುಖ್ಯರಾದ ಅಮಾತ್ಯರು ತನ್ನನ್ನು ಸಮಾಧಾನಗೊಳಿಸುತ್ತಿರಲು, ರಾಜನು ಗುರುಪುತ್ರನನ್ನು ಕೊಂದುದೇ ಮೊದಲಾದ ತನ್ನ ಪಾಪಕೃತ್ಯವನ್ನು ತಿಳಿಸಿದನು.

೩೩. "ಎಲೈ ಮಂತ್ರಿಶ್ರೇಷ್ಠರಿರಾ! ಪರಮನೀಚನಾದ ನಾನು ವಶಿಷ್ಠ ಮಹಾಮುನಿಯ ಪುತ್ರನಾದ ಶಕ್ತಿಯನ್ನು ಭಕ್ಷಿಸಿದೆನು. ಬಳಕ ಮಿಕ್ಕ ತೊಂಬತ್ತೊಂಬತ್ತುಮಂದಿಯನ್ನೂ ತಿಂದೆನು.

೩೪. ಆ ಪಾತಕದಿಂದ ಪಶ್ಚಾತ್ತಪ್ತನಾಗಿರುವ ನನಗೆ ಹೇಗೆ ಸೌಖ್ಯ ವುಂಟಾದೀತು? ಒಂದು ಬ್ರಹ್ಮಹತ್ಯೆಯೂ ಸಹ ಅದೃಷ್ಟದಿಂದ ಕಳೆಯಲಸಾಧ್ಯ ವಾಗಿರುವುದು. ನೃಶಂಸನಾದ ನಾನಾದರೊ ಆ ಕಾರ್ಯವನ್ನು ಅಲ್ಲಿಗೇ ಬಿಡಲಿಲ್ಲ.

೩೫. ಇಂತಹ ಭಯಂಕರ ಕೃತ್ಯವನ್ನು ಮಾಡಿರುವ ನಾನು ಯಾವ ಲೋಕಗಳಿಗೆ ಹೋಗುವೆನೊ! ಈ ದೇಹದಿಂದಲೇ ಕುಲನಾಶಕನಾದ ರಾಕ್ಷಸ ನಾಗಿರುವೆನು.

ಜಾತಃ ಕುಲೇ ರಘೂಣಾಂ ವೈ ಪಾಪಾತ್ಮಾ ಪಾಪಸಂಭವಃ ।
ಸೋಽಹಮತ್ರ ಮರಿಷ್ಯಾಮಿ ಸಾಧಯಿತ್ವಾ ಹುತಾಶನಂ ॥ ೩೬ ॥
ಇತಿ ತಸ್ಯ ವಚಃ ಶ್ರುತ್ವಾ ಸೌದಾಸಸ್ಯ ಸುವಿಸ್ಮಿತಾಃ ।
ಅಮಾತ್ಯಾ ವೇದತತ್ತ್ವಜ್ಞಾಃ ಸರ್ವಶಾಸ್ತ್ರವಿಶಾರದಾಃ ॥ ೩೭ ॥
ಅಹೋ ಪಾಪಮಿದಂ ಭೂರಿ ಕೃತಂ ಪಾಪೇನ ಸರ್ವಥಾ ।
ಪ್ರಾಯಶ್ಚಿತ್ತಂ ನ ಜಾನೀಮೋ ವಸಿಷ್ಠೇನ ವಿನಾಽಧುನಾ ॥ ೩೮ ॥
ತಸ್ಮಾದದ್ಯೈವ ಗಂತವ್ಯಮಸ್ಯ ಭೂಪಸ್ಯ ಕಾರಣಾತ್ ।
ಯತ್ರ ತಿಷ್ಠತಿ ವಿಪ್ರರ್ಷಿರ್ವಸಿಷ್ಠೋ ಭಗವಾನ್ಮುನಿಃ ॥ ೩೯ ॥
ಇತ್ಯುಕ್ತ್ವಾ ಸಹಿತಾಸ್ತೇನ ತೇಽಮಾತ್ಯಾ ಭೃಶದುಃಖಿತಾಃ ।
ಗತ್ವಾ ಯತ್ರಾಶ್ರಮೋ ವಿಪ್ರೋ ವಸಿಷ್ಠೋ ಭಗವಾನೃಷಿಃ ॥ ೪೦ ॥
ಅದೃಶ್ಯಂತೀಂ ವಧೂಂ ದೀನಾಂ ಯತ್ರಾಶ್ವಾಸಯತಿ ಪ್ರಭುಃ ।
ಅದೃಶ್ಯಂತೀಂ ತು ತಂ ದೃಷ್ಟ್ವಾ ಕ್ರೂರಕರ್ಮಾಣಮಗ್ರತಃ ।
ಭಯಸಂವಿಗ್ನಯಾ ವಾಚಾ ವಸಿಷ್ಠಮಿದಮಬ್ರವೀತ್ ॥ ೪೧ ॥

---

೩೬. ಪಾಪಮನಸ್ಕನೂ, ಪಾಪಕರ್ಮಿಯೂ ಆದ ನಾನು ಉತ್ತಮವಾದ ರಘುವಂಶದಲ್ಲಿ ಹುಟ್ಟಿರುವುದರಿಂದ ಆ ವಂಶದ ಪಾವಿತ್ರ್ಯಕ್ಕಾಗಿ ಈಗ ಅಗ್ನಿಯನ್ನು ಪ್ರಜ್ವಲಗೊಳಿಸಿ ಅದರಲ್ಲಿ ಬಿದ್ದು ಸಾಯುವೆನು."

೩೭. ಇಂತೆಂದ ಮಹಾರಾಜನ ಮಾತನ್ನು ಕೇಳಿ ವೇದಗಳನ್ನೂ, ಸಕಲ ಶಾಸ್ತ್ರಗಳನ್ನೂ ತಿಳಿದ ಮಹಾಮಾತ್ಯರು ವಿಸ್ಮಯಾನ್ವಿತರಾಗಿ ಹೇಳಿದರು.

೩೮. "ಅಯ್ಯೋ! ಪಾಪಿಯಾದ ಇವನು ಮಹತ್ತರವಾದ ಪಾತಕವನ್ನೇ ಮಾಡಿರುವನು. ಇದಕ್ಕೆ ವಸಿಷ್ಠಮಹರ್ಷಿಯ ಅನುಗ್ರಹವಲ್ಲದೆ ಬೇರೆ ಪರಿಹಾರ ವನ್ನೇ ಕಾಣೆವು.

೩೯. ಆದುದರಿಂದ ನಾವು ಈ ಭೂಪಾಲಕನಿಗಾಗಿ ಬ್ರಾಹ್ಮಣನೂ, ಷಡ್ಗುಣೈಶ್ವರ್ಯಯುತನೂ, ಮಹಾ ತಪಸ್ವಿಯೂ ಆದ ವಸಿಷ್ಠನ ಆಶ್ರಮಕ್ಕೆ ಇಂದೇ ಹೋಗಬೇಕು."

೪೦. ಇಂತೆಂದು ಆ ಮಂತ್ರಿಗಳು ಬಹಳವಾಗಿ ದುಃಖಗೊಂಡು ರಾಜನನ್ನೂ ಕರೆದುಕೊಂಡು ಮಹಾತ್ಮನಾದ ವಸಿಷ್ಠಮಹರ್ಷಿಯಿದ್ದ ಆಶ್ರಮಕ್ಕೆ ಹೊರಟು ಬಂದರು.

೪೧. ಅಲ್ಲಿ ಆ ಮುನಿಯು ಅದೃಶ್ಯಂತಿಯೆಂಬ ತನ್ನ ಸೊಸೆಯನ್ನು ಸಮಾಧಾನಗೊಳಿಸುತ್ತಿದ್ದನು. ಕ್ರೂರಕರ್ಮಿಯಾದ ರಾಜನು ಎದುರಿಗೆ ಬಂದುದನ್ನು ಕಂಡು ಆಕೆಯು ಭಯದಿಂದ ಕುಗ್ಗಿದ ಧ್ವನಿಯುಳ್ಳವಳಾಗಿ ವಸಿಷ್ಠನಿಗಿಂತೆಂದಳು.

ಅಸೌ ಮೃತ್ಯುರಿವೋಗ್ರೇಣ ದಂಡೇನ ಬಹುಗರ್ವಿತಃ ।
ಪ್ರಗೃಹೀತೇನ ಕಾಷ್ಠೇನ ರಾಕ್ಷಸೋಽಭ್ಯೇತಿ ಭೀಷಣಃ ॥ ೪೨ ॥
ತನ್ನಿವಾರಯಿತುಂ ಶಕ್ತೋ ನಾಽನ್ಯೋ ವೈ ಭುವಿ ಕಶ್ಚನ ।
ತ್ವಾಮೃತೇಽದ್ಯ ಮಹಾಭಾಗ ಸರ್ವವೇದವಿದಾಂ ವರ ॥ ೪೩ ॥
ತ್ರಾಹಿ ಮಾಂ ಭಗವನ್ ಪಾಪಾದಸ್ಮಾದ್ದಾರುಣದರ್ಶನಾತ್ ।
ರಾಕ್ಷಸೋಽಯಮಿಹಾಗತ್ಯ ನೂನಮಾವಾಂ ಸಮೀಹತೇ ॥ ೪೪ ॥

ವಸಿಷ್ಠ ಉವಾಚ :—

ಮಾಭೈಃ ಪುತ್ರಿ ನ ಭೇತವ್ಯಂ ರಾಕ್ಷಸಾತ್ತೇ ಕಥಂಚನ ।
ನೈತದ್ರಕ್ಷೋ ಭಯಂ ಯಸ್ಮಾತ್ಪಶ್ಯಸಿ ತ್ವಮುಪಸ್ಥಿತಂ ।
ರಾಜಾ ಕಲ್ಮಾಷಪಾದೋಽಯಮಮಾತ್ಯೈಃ ಸಹಿತೋ ವಿಭುಃ ॥ ೪೫ ॥
ಸ ಏಷೋಽಸ್ಮಿನ್ವನೋದ್ದೇಶೇ ಸಮಾಯಾತೋ ಮಮಾಂತಿಕಂ ।
ತಮಾಯಾಂತಮಥಾಲಕ್ಷ್ಯ ವಸಿಷ್ಠೋ ಭಗವಾನೃಷಿಃ ।
ವಾರಯಾಮಾಸ ತೇಜಸ್ವೀ ಹುಂಕಾರೇಣ ನೃಪೋತ್ತಮಂ ॥ ೪೬ ॥
ಮಂತ್ರಪೂತೇನ ಚ ತತಃ ಸಮಭ್ಯುಕ್ಷ್ಯ ಚ ವಾರಿಣಾ ।
ಮೋಕ್ಷಯಾಮಾಸ ವೈ ಭಾವಾದ್ರಾಕ್ಷಸಾದ್ರಾಜಸತ್ತಮಂ ॥ ೪೭ ॥

---

೪೨. "ಉಗ್ರದಂಡವನ್ನು ಕೈಯಲ್ಲಿ ಹಿಡಿದ ಮೃತ್ಯುದೇವತೆಯಂತೆ ಉನ್ಮತ್ತನಾಗಿ ಭೀಕರನಾಗಿರುವ ಈ ರಾಕ್ಷಸನೊಬ್ಬನು ದಂಡವನ್ನು ಹಿಡಿದು ಬರುತ್ತಿರುವನು.

೪೩. ಎಲೈ ಮಹಾತ್ಮನೆ! ಸಕಲ ವೇದಗಳನ್ನು ತಿಳಿದ ನೀನಲ್ಲದೆ ಈತನನ್ನು ತಡೆದು ಕಳುಹಿಸಲು ಶಕ್ತನಾದವನು ಭೂಮಂಡಲದಲ್ಲಿಯೇ ಬೇರೊಬ್ಬನಿಲ್ಲ.

೪೪. ಓ ಭಗವಂತನೆ! ಪಾಪಿಯೂ ಭಯಂಕರರೂಪನೂ ಆದ ಈ ರಾಕ್ಷಸನ ದೆಸೆಯಿಂದ ನನ್ನನ್ನು ಕಾಪಾಡು. ಇವನಿಲ್ಲಿಗೆ ಬಂದು ನಮ್ಮಿಬ್ಬರನ್ನೂ ತಿನ್ನಲು ಆಶಿಸುವನಂತೆ ತೋರುತ್ತಿರುವುದು."

೪೫. ವಸಿಷ್ಠನು ಹೇಳುತ್ತಾನೆ:—"ಪುತ್ರಿಯೆ! ಭಯಗೊಳ್ಳಲು ಕಾರಣವಿಲ್ಲ. ರಾಕ್ಷಸನಿಂದ ನಿನಗೆ ಯಾವ ಭಯವೂ ಉಂಟಾಗದಿರಲಿ. ನೀನು ಭಯಗೊಂಡು ನೋಡುತ್ತಿರುವ ಇವನು ರಾಕ್ಷಸನಲ್ಲ. ಇವನೇ ಈ ದೇಶಕ್ಕೆ ಒಡೆಯನಾದ ಕಲ್ಮಾಷಪಾದನೆಂಬ ರಾಜನು. ಅಮಾತ್ಯರೊಡಗೂಡಿ ಇಲ್ಲಿಗೆ ಬಂದಿರುವನು.

೪೬—೪೭. ಇವನು ಈ ಅರಣ್ಯಪ್ರದೇಶದಲ್ಲಿ ನನ್ನನ್ನೇ ಹುಡುಕಿಕೊಂಡು ಬರುತ್ತಿರುವನು." ಇಂತೆಂದು ಹತ್ತಿರಕ್ಕೆ ಬರುತ್ತಿರುವ ಆ ರಾಜೇಂದ್ರನನ್ನು ಕಂಡು ವಸಿಷ್ಠಮುನಿಯು ಹುಂಕಾರವನ್ನು ಮಾಡಿ ಅವನನ್ನು ದಾರಿಯಲ್ಲಿಯೇ ತಡೆದನು. ಬಳಿಕ ಅಭಿಮಂತ್ರಣದಿಂದ ಪವಿತ್ರವಾದ ಜಲವನ್ನು ಆತನ ಮೇಲೆ ಪ್ರೋಕ್ಷಿಸಿ ಆ ಮಹಾರಾಜನನ್ನು ರಾಕ್ಷಸಪ್ರಕೃತಿಯಿಂದ ಬಿಡುಗಡೆ ಮಾಡಿದನು.

ಪ್ರತಿಲಭ್ಯ ತತಃ ಸಂಜ್ಞಾಮಭಿವಾದ್ಯ ಕೃತಾಂಜಲಿಃ ।
ಉವಾಚ ನೃಪತಿಃ ಕಾಲೇ ವಸಿಷ್ಠಮೃಷಿಸತ್ತಮಂ ॥ ೪೮ ॥
ಸೌದಾಸೋಽಹಂ ಮಹಾಭಾಗ ದಾಸೋಽಹಂ ತವ ಸುವ್ರತ ।
ಅಸ್ಮಿನ್ಕಾಲೇ ಯದಿಷ್ಟಂ ತೇ ಬ್ರೂಹಿ ಕಿಂ ಕರವಾಣಿ ತೇ ॥ ೪೯ ॥
ತಸ್ಯ ತದ್ವಚನಂ ಶ್ರುತ್ವಾ ನೃಪಸ್ಯ ದ್ವಿಜಸತ್ತಮಃ ।
ಜ್ಞಾತ್ವಾ ತಪೋಬಲೇನೈವ ವಿಶ್ವಾಮಿತ್ರಸ್ಯ ಚೇಷ್ಟಿತಂ ।
ರಾಜಾನಂ ಪ್ರತ್ಯುವಾಚೇದಂ ವಿನಯಾಽವನತಂ ತಥಾ ॥ ೫೦ ॥
ಜ್ಞಾತಮೇವ ಯಥಾಕಾಲಂ ಗಚ್ಛ ರಾಜನ್ ಕುಶಸ್ಥಲೀಂ ।
ಮಹಾಕಾಲಸಮೀಪೇ ತು ಲಿಂಗಂ ದುಃಸ್ವಪ್ನನಾಶನಂ ॥ ೫೧ ॥
ರಾಜಸಂಪತ್ಕರಂ ದಿವ್ಯಂ ಪುತ್ರಪೌತ್ರವಿವರ್ಧನಂ ।
ಬ್ರಹ್ಮಹತ್ಯಾಸಹಸ್ರಾಣಾಂ ಸ್ಫೋಟನಂ ಪಾಪನಾಶನಂ ।
ತಸ್ಯ ದರ್ಶನಮಾತ್ರೇಣ ವಿಪಾಪ್ಮಾ ಚ ಭವಿಷ್ಯಸಿ ॥ ೫೨ ॥
ದುಃಸ್ವಪ್ನಜಂ ಭಯಂ ಘೋರಂ ವಿನಂಕ್ಷ್ಯತಿ ನ ಸಂಶಯಃ ।
ಗ್ರಹಾಶ್ಚ ಸಾನುಕೂಲಾಸ್ತೇ ಭವಿಷ್ಯಂತಿ ನೃಪೋತ್ತಮ ॥ ೫೩ ॥

---

೪೮. ಸ್ವಲ್ಪಕಾಲದಮೇಲೆ ರಾಜನು ಪೂರ್ವಸ್ಮರಣೆಯನ್ನು ಹೊಂದಿ ಋಷಿಶ್ರೇಷ್ಠನಾದ ವಸಿಷ್ಠನಿಗೆ ಅಭಿವಾದನವನ್ನು ಮಾಡಿ ಕೈಗಳನ್ನು ಜೋಡಿಸಿಕೊಂಡು ಇಂತೆಂದನು.

೪೯. "ತಪೋನಿಧಿಯಾದ ಓ ಮಹಾತ್ಮನೆ! ನಾನು ನಿನಗೆ ದಾಸನಾದ ಕಲ್ಮಾಷಪಾದರಾಜನು. ಈ ಸಮಯದಲ್ಲಿ ನಿನಗೆ ಬೇಕಾದುದನ್ನು ಕೇಳು. ನಿನಗೆ ಏನುಮಾಡಿಕೊಡಲಿ?"

೫೦. ಇಂತೆಂದ ರಾಜನ ಮಾತನ್ನು ಕೇಳಿ ಆ ಬ್ರಾಹ್ಮಣೋತ್ತಮನು ತನ್ನ ತಪೋಬಲದಿಂದ ಇದೆಲ್ಲವೂ ವಿಶ್ವಾಮಿತ್ರನ ಚೇಷ್ಟಿತವೆಂದರಿತುಕೊಂಡು ವಿನಯದಿಂದ ಬಗ್ಗಿ ನಿಂತಿರುವ ಆ ರಾಜೇಂದ್ರನಿಗೆ ಹೇಳತೊಡಗಿದನು.

೫೧. "ಎಲೈ ರಾಜನೆ! ಹಿಂದೆ ನಡೆದುದೆಲ್ಲವನ್ನೂ ತಿಳಿದೆನು. ನೀನು ಕುಶಸ್ಥಳಕ್ಷೇತ್ರಕ್ಕೆ ಹೋಗು. ಮಹಾಕಾಲೇಶ್ವರನ ಸಮೀಪದಲ್ಲಿಯೇ ದುಃಸ್ವಪ್ನಗಳನ್ನು ಕಳೆಯುವ ಲಿಂಗವೊಂದಿರುವುದು.

೫೨. ಆ ದಿವ್ಯಲಿಂಗವು ರಾಜ್ಯೈಶ್ವರ್ಯಪ್ರದವೂ, ಪುತ್ರಪೌತ್ರಸಂತಾನವರ್ಧಕವೂ, ಸಾವಿರಾರು ಬ್ರಹ್ಮಹತ್ಯೆಗಳನ್ನು ನಾಶಗೊಳಿಸುವುದೂ, ಸಮಸ್ತಪಾತಕಗಳನ್ನು ಕಳೆಯುವುದೂ ಆಗಿರುವುದು. ಅದನ್ನು ನೋಡುವಮಾತ್ರದಿಂದಲೇ ನೀನು ಪಾಪರಹಿತನಾಗುವೆ

೫೩. ದುಃಸ್ವಪ್ನಗಳಿಂದ ನಿನಗುಂಟಾಗಿರುವ ಮಹಾಭಯವೂ ನಾಶವಾಗು

ಇತ್ಯುಕ್ತೋ ಗುರುಣಾ ಭೂಯೋ ವಸಿಷ್ಠೇನ ಮಹಾತ್ಮನಾ ।
ಜಗಾಮ ತ್ವರಿತೋ ದೇವಿ ಮಹಾಕಾಲವನಂ ಶುಭಂ ।
ದದರ್ಶ ತತ್ರ ತಲ್ಲಿಂಗಂ ದುಷ್ಟದುಃಸ್ವಪ್ನ ನಾಶನಂ ॥ ೩೪ ॥
ನಷ್ಟಾಃ ಸರ್ವೇಽಪಿ ದುಃಸ್ವಪ್ನಾಃ ಸುಸ್ವಪ್ನಾಶ್ಚಾಽಭವಂಸ್ತದಾ ।
ರಾಜಾ ನಿಷ್ಕಲ್ಮಷೋ ಭೂತ್ವಾ ಪುನಃ ಪ್ರಾಪ್ನೋನ್ನಿಜಂ ಪದಂ ।
ಅಯೋಧ್ಯಾಯಾಂ ಗತೋ ರಾಜ್ಯಂ ಚಕಾರ ಮುದಿತಸ್ತದಾ ॥ ೩೫ ॥
ತದಾಪ್ರಭೃತಿ ದೇವೋಽಯಂ ಸುಸ್ವಪ್ನೇಶ್ವರಸಂಜ್ಞಕಃ ।
ಬಭೂವ ಭುವನೇ ಖ್ಯಾತಃ ಸರ್ವದುಃಸ್ವಪ್ನನಾಶನಃ ॥ ೩೬ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ದೇವಂ ಸ್ವಪ್ನೇಶ್ವರಂ ಶಿವಂ ।
ದರ್ಶನಂ ಯೇ ಕರಿಷ್ಯಂತಿ ಸ್ನಾತ್ವಾ ಶಿಪ್ರಾಜಲೇ ಶುಭೇ ।
ಆಜನ್ಮಪ್ರಭವಂ ತೇಷಾಂ ದುಃಸ್ವಪ್ನಂ ಚ ವಿನಶ್ಯತಿ ॥ ೩೭ ॥
ಸ ಏವ ಸರ್ವದಾ ಪೂಜ್ಯ ಇಹಲೋಕೇ ಪರತ್ರ ಚ ।
ಯಃ ಪಶ್ಯತಿ ನರೋ ಭಕ್ತ್ಯಾ ದೇವಂ ಸ್ವಪ್ನೇಶ್ವರಂ ಶಿವಂ ॥ ೩೮ ॥

---

ವುದರಲ್ಲಿ ಸಂದೇಶವಿಲ್ಲ. ಎಲೈ ನೃಪಶ್ರೇಷ್ಠನೆ! ಗ್ರಹಗಳೂ ಸಹ ನಿನಗೆ ಅನುಕೂಲಗಳಾಗುವುವು.''

೩೪. ದೇವಿಯೆ! ಇಂತೆಂದ ಗುರುವೂ, ಮಹಾತ್ಮನೂ ಆದ ವಸಿಷ್ಠ ಮುನಿಯ ಮಾತುಗಳನ್ನು ಕೇಳಿ ಕಲ್ಮಾಷಪಾದನು ತ್ವರೆಯಿಂದ ಶುಭಕ್ಷೇತ್ರವಾದ ಮಹಾಕಾಲವನಕ್ಕೆ ಹೋಗಿ ಭಯಂಕರಸ್ವಪ್ನಗಳನ್ನು ನಾಶಮಾಡುವ ಲಿಂಗವನ್ನು ಅಲ್ಲಿ ಕಂಡನು.

೩೫. ಅಂದಿನಿಂದ ಆತನಿಗೆ ಸಮಸ್ತ ದುಃಸ್ವಪ್ನಗಳೂ ಕಳೆದು ಶುಭಸ್ವಪ್ನ ಗಳು ಕಾಣತೊಡಗಿದುವು. ಆತನು ಪಾಪರಹಿತನಾಗಿ ಪುನಃ ತನ್ನ ಪದವಿಯನ್ನು ಹೊಂದಿ ಆನಂದದಿಂದ ಅಯೋಧ್ಯೆಗೆ ಹೋಗಿ ರಾಜ್ಯಭಾರವನ್ನು ಮಾಡುತ್ತಿದ್ದನು.

೩೬. ಆ ದಿನ ಮೊದಲುಗೊಂಡು ಈ ಮಹಾಲಿಂಗವು ದುಃಸ್ವಪ್ನಗಳನ್ನು ನಾಶಮಾಡಿ ಸುಸ್ವಪ್ನೇಶ್ವರನೆಂಬ ಹೆಸರಿನಿಂದ ಭೂಲೋಕದಲ್ಲಿ ಪ್ರಖ್ಯಾತವಾಗಿ ರುವುದು.

೩೭. ಯಾವ ಮಾನವರು ಅಷ್ಟಮಿ, ಚತುರ್ದಶಿ ತಿಥಿಗಳಲ್ಲಿ ಪಾವನವಾದ ಶಿಪ್ರಾನದಿಯಲ್ಲಿ ಸ್ನಾನವನ್ನು ಮಾಡಿ ಸ್ವಪ್ನೇಶ್ವರಮಹಾದೇವನ ದರ್ಶನವನ್ನು ತೆಗೆದುಕೊಳ್ಳುವರೊ, ಅವರು ಜನ್ಮಾವಧಿ ಕಂಡಿರುವ ದುಃಸ್ವಪ್ನಗಳೆಲ್ಲವೂ ನಾಶ ವಾಗುವುವು.

೩೮. ಯಾವ ನರನು ಭಕ್ತಿಯಿಂದ ಸ್ವಪ್ನೇಶ್ವರ ಶಿವನನ್ನು ನೋಡುವನೊ, ಅವನೇ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಪೂಜಾರ್ಹನಾಗುವನು.

ಯಂ ಯಂ ಕಾಮಮಭಿಧ್ಯಾಯ ಮನಸಾಭಿಮತಂ ನರಃ ।
ತಂ ತಂ ದುರ್ಲಭಮಾಪ್ನೋತಿ ಸುಸ್ವಪ್ನೇಶ್ವರದರ್ಶನಾತ್ ॥ ೫೯ ॥
ನಿಯಮೇನ ಪ್ರಪಶ್ಯಂತಿ ದೇವಂ ಸ್ವಪ್ನೇಶ್ವರಂ ಸದಾ ।
ತೇ ಪ್ರಯಾಂತಿ ತನುಂ ತ್ಯಕ್ತ್ವಾ ಮದೀಯಂ ಭವನಂ ಪ್ರಿಯೇ ॥ ೬೦ ॥
ಭಕ್ತಿಹೀನಃ ಕ್ರಿಯಾಹೀನೋ ಯಃ ಪಶ್ಯತಿ ಪ್ರಸಂಗತಃ ।
ಸುಪುಣ್ಯಾಂ ಗತಿಮಾಪ್ನೋತಿ ಯೋಗಿಗಮ್ಯಾಂ ಯಶಸ್ವಿನಿ ॥ ೬೧ ॥
ಯೇ ಚ ಪುಷ್ಪೈರ್ವಿಚಿತ್ರೈಶ್ಚ ಪೂಜಯಂತಿ ಚ ಪರ್ವಸು ।
ತೇ ಸರ್ವಕಾಮಸಂಪನ್ನಾಃ ಶ್ರೀಬಲಾರೋಗ್ಯಸಂಯುತಾಃ ।
ದೀರ್ಘಾಯುಷಃ ಶುಭಾಚಾರಾ ಜಾಯಂತೇ ದೇಹಿನೋಽಮಲಾಃ॥ ೬೨ ॥
ಏತೇ ಚ ಬ್ರಹ್ಮವಿಷ್ಣ್ವಿಂದ್ರಕುಬೇರದಹನಾದಯಃ ।
ಸುಸ್ವಪ್ನಂ ಪರಮಂ ಪ್ರಾಪ್ತಾಃ ಶ್ರೀಸ್ವಪ್ನೇಶ್ವರದರ್ಶನಾತ್ ॥ ೬೩ ॥

---

೫೯. ಈ ಸುಸ್ವಪ್ನೇಶ್ವರನ ದರ್ಶನವನ್ನು ಮಾಡುವುದರಿಂದ ಮನುಷ್ಯನು ದುರ್ಲಭವಾದ ಯಾವುದೇ ಅಭಿಲಾಷೆಯನ್ನು ಮನಸ್ಸಿನಲ್ಲಿ ಮಾಡಿಕೊಂಡರೂ ಅದನ್ನು ಪಡೆದೇ ಪಡೆಯುವನು. ಇದರಲ್ಲಿ ಲೇಶಮಾತ್ರವೂ ಸಂದೇಹವಿರುವುದಿಲ್ಲವು.

೬೦. ಪ್ರಿಯಳೆ! ಯಾರು ನಿಯಮದಿಂದ ನಿತ್ಯವೂ ಸ್ವಪ್ನೇಶ್ವರನ ದರ್ಶನವನ್ನು ಮಾಡುತ್ತಿರುವರೊ, ಅವರು ದೇಹವನ್ನು ಬಿಟ್ಟಾಗ ನನ್ನ ಲೋಕವನ್ನು ಸೇರುವರು.

೬೧. ಎಲೌ ಯಶಸ್ವಿನಿಯಾದ ಪಾರ್ವತಿಯೆ! ಭಕ್ತಿಹೀನನೂ, ಕ್ರಿಯಾರಹಿತನೂ ಆದವನು ಸಹ ಪ್ರಸಂಗವಶದಿಂದ ಈ ಲಿಂಗವನ್ನು ದರ್ಶನಮಾಡಲು ಯೋಗಿಗಳಿಗೆ ಲಭ್ಯವಾದ ಪುಣ್ಯಗತಿಯನ್ನು ಪಡೆಯುವನು. ಅವನಿಗೆ ಎಲ್ಲ ಪುಣ್ಯಲೋಕಗಳೂ ಕರತಲಾಮಲಕವಾಗಿರುತ್ತವೆಯೆಂದು ತಿಳಿಯುವವಳಾಗು.

೬೨. ಯಾವ ಮನುಜರು ಪರ್ವದಿವಸಗಳಲ್ಲಿ ಅನೇಕ ವಿಧಗಳಾದ ಪುಷ್ಪಗಳಿಂದ ಸ್ವಪ್ನೇಶ್ವರನನ್ನು ಪೂಜಿಸುವರೊ, ಅವರು ಸರ್ವಾಭೀಷ್ಟಗಳನ್ನು ಪಡೆದವರೂ, ಐಶ್ವರ್ಯಬಲಾರೋಗ್ಯಸಹಿತರೂ, ದೀರ್ಘಾಯುಷ್ಯವಂತರೂ, ಸತ್ಕರ್ಮನಿರತರೂ, ಪರಿಶುದ್ಧರೂ, ಶುಭಾಚಾರಗಳಲ್ಲಿ ನಿಷ್ಠರೂ ಆಗಿ ಹುಟ್ಟುತ್ತಿರುವರು.

೬೩. ಬ್ರಹ್ಮ, ವಿಷ್ಣು, ಮಹೇಂದ್ರ, ಕುಬೇರ, ಅಗ್ನಿಗಳೇ ಮುಂತಾದ ದೇವತೆಗಳೂ ಸ್ವಪ್ನೇಶ್ವರನ ದರ್ಶನದಿಂದಲೇ ಸುಖಸ್ವಪ್ನಗಳನ್ನು ಕಾಣುವವರಾದರು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸ್ವಪ್ನೇಶ್ವರಸ್ಯ ದೇವಸ್ಯ ಶೃಣು ಲಿಂಗಚತುಷ್ಟಯಂ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸ್ವಪ್ನೇಶ್ವರಮಾಹಾತ್ಮ್ಯವರ್ಣನಂ"
ನಾಮಾಽಶೀತಿತಮೋಽಧ್ಯಾಯಃ

---

೬೪. ದೇವಿಯೆ! ಇಂತು ನಿನಗೆ ಸ್ವಪ್ನೇಶ್ವರಮಹಾದೇವನ ಪ್ರಭಾವವನ್ನು ಹೇಳಿದೆನು. ಪಾಪನಾಶಕವಾದ ಈ ಚರಿತ್ರೆಯಾದಮೇಲೆ ಲಿಂಗಚತುಷ್ಟಯದ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸ್ವಪ್ನೇಶ್ವರಮಹಾತ್ಮ್ಯವರ್ಣನ"ವೆಂಬ
ಎಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕಾಽಶೀತಿತಮೋಽಧ್ಯಾಯಃ

### ಪಿಂಗಲೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಚತುರ್ದ್ವಾರಸ್ಥಿತಂ ದೇವಿ ಶೃಣು ಲಿಂಗಚತುಷ್ಟಯಂ ।
ಯಸ್ಯ ದರ್ಶನಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೧ ॥
ಅಹಂ ಪೃಷ್ಟಸ್ತ್ವಯಾ ದೇವಿ ಕೌತುಕಾಚ್ಚ ವರಾನನೇ ।
ಅತೀವ ರಮಣೀಯಂ ಚ ಸ್ಥಲಂ ದರ್ಶಯ ಮೇ ಪ್ರಭೋ ॥ ೨ ॥
ಸೇವಿತಂ ಬಹುಭಿಃ ಸಿದ್ಧೈಃಪುನರಾವೃತ್ತಿಕಾಂಕ್ಷಿಭಿಃ ।
ಯದ್ಗುಹ್ಯಂ ಚ ಪವಿತ್ರಂ ಚ ಪ್ರಲಯೇಽಪ್ಯವಿನಾಶಿ ಯತ್ ॥ ೩ ॥
ಅನನ್ಯಸದೃಶಂ ದಿವ್ಯಂ ಯತ್ತೀರ್ಥಂ ಯತ್ತಪೋವನಂ ।
ಅಸಂಖ್ಯೇಯಗುಣೋಪೇತಂ ಭುಕ್ತಿಮುಕ್ತಿಕರಂ ಶುಭಂ ॥ ೪ ॥
ಸುವರ್ಣಶೃಂಗಾಃ ಪ್ರಾಸಾದಾ ಹರ್ಮ್ಯಾಣಿ ವಿವಿಧಾನಿ ಚ ।
ಉದ್ಯಾನಾನಿ ವಿಚಿತ್ರಾಣಿ ಮಾರ್ಗಾಶ್ಚ ವಿವಿಧಾಃ ಶುಭಾಃ ॥ ೫ ॥

---

### ಕನ್ನಡದ ಅನುವಾದ

#### ಪಿಂಗಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ ! ಇನ್ನು ಮಹಾಕಾಲವನದ ನಾಲ್ಕು ದ್ವಾರಗಳಲ್ಲಿಯೂ ನೆಲಸಿರುವ ಲಿಂಗಚತುಷ್ಟಯದ ಕಥೆಗಳನ್ನು ಕೇಳು. ಅವುಗಳನ್ನು ನೋಡುವುದರಿಂದ ಮನುಷ್ಯನು ಕೃತಾರ್ಥನಾಗುವನು.

೨. ಪ್ರಿಯಳೆ! ಒಮ್ಮೆ ನೀನು ಕುತೂಹಲಭರಿತಳಾಗಿ ನನ್ನನ್ನು ಪ್ರಶ್ನೆ ಮಾಡಿದೆ. "ನಾಥ! ನನಗೊಂದು ಅತ್ಯಂತ ರಮಣೀಯವಾದ ಪ್ರದೇಶವನ್ನು ತೋರು.

೩. ಆ ಸ್ಥಳವು ಅಪುನರಾವೃತ್ತಿಯನ್ನಪೇಕ್ಷಿಸುವ ಸಿದ್ಧಗಣಗಳಿಂದ ಸೇವಿತವೂ, ಗುಪ್ತವೂ, ಪವಿತ್ರವೂ, ಪ್ರಳಯದಲ್ಲಿಯೂ ನಾಶವಾಗದಿರುವುದೂ ಆಗಿರಬೇಕು.

೪. ಅದನ್ನು ಹೋಲುವ ಕ್ಷೇತ್ರವು ಮತ್ತೊಂದಿರಬಾರದು. ಆ ತೀರ್ಥವು ಸಮಸ್ತಸದ್ಗುಣಭರಿತವೂ, ಭೋಗಮೋಕ್ಷಗಳೆರಡನ್ನೂ ಕೊಡುವುದೂ ಆದ ತಪೋವನವಾಗಿರಬೇಕು.

೫. ಅಲ್ಲಿನ ದೇವಾಲಯಗಳು ಚಿನ್ನದ ಕಲಶಗಳಿಂದಲಂಕೃತಗಳಾಗಿ, ವಿಧ ವಿಧಗಳಾದ ಉಪ್ಪರಿಗೆಗಳಿಂದಲೂ, ವಿಚಿತ್ರಗಳಾದ ಉದ್ಯಾನವನಗಳಿಂದಲೂ ಕೂಡಿದ ಆ ಪಟ್ಟಣದಲ್ಲಿ ಪ್ರಶಸ್ತಗಳಾದ ರಾಜಮಾರ್ಗಗಳು ಶೋಭಿಸುತ್ತಿರಬೇಕು.

ಸರ್ವಾಹಿತಫಲಾऽವಾಪ್ತಿರ್ಯತ್ರ ಲಭ್ಯಾ ಸುಖೇನ ವೈ ।
ಸಿದ್ಧಚಾರಣಗಂಧರ್ವಕಿನ್ನರೋದ್ಗೀತನಾದಿತಂ ॥ ೬ ॥
ಪುಣ್ಯಲೋಕೋಪಮಸ್ಥಾನಂ ತ್ರಿವಿಷ್ಟಪವಿಭೂಷಣಂ ।
ಏವಮಭ್ಯರ್ಥಿತೋ ದೇವಿ ಮಂದರೇ ಚಾರುಕಂದರೇ ॥ ೭ ॥
ಮಯಾ ಪ್ರೋಕ್ತಂ ಪ್ರಸನ್ನೇನ ಸ್ಥಾನಂ ಶೃಣು ಸನಾತನಂ ।
ಮಹಾಕಾಲವನಂ ರಮ್ಯಂ ಸ್ವರ್ಗಾತ್ಸುಖಕರಂ ಪರಂ ॥ ೮ ॥
ಅನೌಪಮ್ಯಗುಣೋಪೇತಂ ಭುಕ್ತಿಮುಕ್ತಿಕರಂ ಶುಭಂ ।
ತತ್ಸಮಃ ಕೋऽಪಿ ಧನ್ಯೋऽನ್ಯೋ ನ ದೃಷ್ಟೋ ಭುವನತ್ರಯೇ ॥ ೯ ॥
ದೇವಗಂಧರ್ವಸಿದ್ಧೈಶ್ಚ ಸೇವ್ಯಂ ವೈ ಮುಕ್ತಿಕಾಂಕ್ಷಿಭಿಃ ।
ವಿನೋದಾರ್ಥಂ ಮಯಾ ಸೃಷ್ಟಂ ತ್ವತ್ಪ್ರಿಯಾರ್ಥಂ ಕುತೂಹಲಾತ್ ॥೧೦॥
ತಿಲಕಂ ಸರ್ವತೀರ್ಥಾನಾಂ ಜಂಬೂದ್ವೀಪೇ ಮನೋರಮೇ ।
ಇಚ್ಛಾಕಾಮಫಲಾऽವಾಪ್ತಿರನಾಯಾಸೇನ ಲಭ್ಯತೇ ॥ ೧೧ ॥

---

೬. ಅಲ್ಲಿಗೆ ಬರುವವರಿಗೆ ಅನಾಯಾಸದಿಂದಲೇ ಇಷ್ಟಫಲಗಳು ಲಭಿಸಬೇಕು. ಸಿದ್ಧರು, ಚಾರಣರು, ಗಂಧರ್ವರು, ಕಿನ್ನರರು ಮೊದಲಾದವರ ಮಧುರಗಾಯನದಿಂದ ಆ ಪ್ರದೇಶವು ಪ್ರತಿಧ್ವನಿಸುತ್ತಿರಬೇಕು.

೭. ಸ್ವರ್ಗಕ್ಕೆ ಸಮಾನವಾದ ಆ ಸ್ಥಾನವು ಮೂರು ಲೋಕಗಳಿಗೂ ಅಲಂಕಾರಪ್ರಾಯವಾಗಿರಬೇಕು.'' ಇಂತೆಂದೊಮ್ಮೆ ನೀನು ಮನೋಹರಕಂದರಗಳುಳ್ಳ ಮಂದರಪರ್ವತದಲ್ಲಿ ನನ್ನನ್ನೊಮ್ಮೆ ಪ್ರಾರ್ಥಿಸಿದೆ.

೮. ನಾನೂ ಪ್ರಸನ್ನನಾಗಿ ಹೇಳಿದೆನು. ''ಇಂತಹ ಸನಾತನವಾದ ಸ್ಥಾನವನ್ನು ತಿಳಿಸುವೆನು, ಕೇಳು. ಮನೋಹರವಾದ ಮಹಾಕಾಲವನವು ಸ್ವರ್ಗಕ್ಕಿಂತಲೂ ಅತ್ಯಧಿಕ ಸುಖಪ್ರದವಾಗಿರುವುದು.

೯. ಅದರ ಸದ್ಗುಣಗಳು ಉಪಮಾತೀತಗಳಾಗಿರುವುವು. ಭುಕ್ತಿಮುಕ್ತಿಗಳನ್ನು ಕೈಗೂಡಿಸುವ ಆ ಶುಭಕ್ಷೇತ್ರಕ್ಕೆ ಸಮಾನವಾದ ಧನ್ಯಪ್ರದೇಶವು ಮೂರು ಲೋಕಗಳಲ್ಲಿಯೇ ಬೇರೊಂದು ಕಾಣಲಾರದು.

೧೦. ದೇವತೆಗಳೂ, ಗಂಧರ್ವರೂ, ಸಿದ್ಧರೂ, ಮೋಕ್ಷಾಪೇಕ್ಷಿಗಳಾದ ಮಹರ್ಷಿಗಳೂ ಸೇವಿಸುತ್ತಿರುವ ಆ ಕ್ಷೇತ್ರವನ್ನು ವಿನೋದಕ್ಕಾಗಿಯೂ, ನಿನ್ನ ಸಂತೋಷಕ್ಕಾಗಿಯೂ, ಕುತೂಹಲದಿಂದಲೂ ನಾನು ನಿರ್ಮಿಸಿದೆನು.

೧೧. ಮನೋಹರವಾದ ಜಂಬೂದ್ವೀಪದಲ್ಲಿರುವ ಸಕಲ ತೀರ್ಥಗಳಿಗೂ ಅದು ತಿಲಕಪ್ರಾಯವಾಗಿರುವುದು. ಅಲ್ಲಿ ಮನುಷ್ಯರಿಗೆ ಸುಲಭದಿಂದಲೇ ಸಕಲೇಷ್ಟಫಲಗಳೂ ಲಭಿಸುವುವು.

ಜರಾರೋಗಭಯೈರ್ಹೀನಂ ಸರ್ವವ್ಯಾಧಿವಿವರ್ಜಿತಂ ।
ಶಕ್ರಾಽಗ್ನಿಯಮರಕ್ಷೋಽಂಬುವಾಯುಸೋಮೇಶಸೇವಿತಂ ।
ಸ್ವರ್ಗೇ ಪ್ರಮುದಿತಾ ದೇವಾಸ್ತೇಽಪಿ ಕಾಂಕ್ಷಂತಿ ಸರ್ವದಾ ॥ ೧೨ ॥
ಅಸಂಖ್ಯೇಯಫಲಂ ತ್ವತ್ರ ಅಕ್ಷಯಾ ಚ ಗತಿಃ ಸದಾ ।
ಯೈರ್ನ ಸಂಸೇವಿತಂ ಸ್ಥಾನಂ ವಂಚಿತಾಸ್ತೇ ನರಾ ಭುವಿ ॥ ೧೩ ॥
ಕ್ಷೇತ್ರಸ್ಯ ಚ ಗುಣಾನ್ವಕ್ತುಂ ದೇವದಾನವಮಾನವೈಃ ।
ನ ಶಕ್ಯತೇ ಪ್ರಯತ್ನಾಚ್ಚ ಸ್ವಯಂ ಯತ್ರ ಸ್ಥಿತೋಹ್ಯಹಂ ॥ ೧೪ ॥
ಯತ್ಕಿಂಚಿದಶುಭಂ ಕರ್ಮ ಕೃತಂ ಮಾನುಷಕರ್ಮಣಾ ।
ಮಹಾಕಾಲವನಂ ಪ್ರಾಪ್ಯ ತತ್ಸರ್ವಂ ಭಸ್ಮಸಾದ್ಭವೇತ್ ॥ ೧೫ ॥
ನ ಸಾ ಗತಿಃ ಕುರುಕ್ಷೇತ್ರೇ ಗಂಗಾದ್ವಾರೇ ತ್ರಿಪುಷ್ಕರೇ ।
ಯಾ ಗತಿರ್ವಿಹಿತಾ ಪುಂಸಾಂ ಮಹಾಕಾಲವನೇ ಸದಾ ॥ ೧೬ ॥
ತಿರ್ಯಗ್ಯೋನಿಗತಾ ಗತ್ವಾ ಮಹಾಕಾಲವನೇ ಸ್ಥಿತಾಃ ।
ತತ್ರೈವ ನಿಧನಂ ಪ್ರಾಪ್ತಾಸ್ತೇ ಯಾಂತಿ ಪರಮಾಂ ಗತಿಂ ॥ ೧೭ ॥

---

೧೨. ಅಲ್ಲಿ ಮುಪ್ಪುರೋಗಗಳ ಭಯವಿಲ್ಲ. ಅದು ಸಕಲ ವ್ಯಾಧಿಗಳಿಂದ ವರ್ಜಿತವಾದ ಪ್ರದೇಶವು. ಮಹೇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಚಂದ್ರ, ಮಹೇಶ್ವರರು ಅದನ್ನು ಸೇವಿಸುತ್ತಿರುವರು. ಸ್ವರ್ಗದಲ್ಲಿ ಆನಂದದಿಂದಿರುವ ದೇವತೆಗಳೂ ಆ ಕ್ಷೇತ್ರದ ವಾಸವನ್ನು ನಿತ್ಯವೂ ಬಯಸುತ್ತಿರುವರು.

೧೩. ಅಲ್ಲಿ ಮಾಡಿದ ಕರ್ಮವು ಅಪರಿಮಿತವಾದ ಫಲವನ್ನು ಕೊಡುವುದು. ಮತ್ತು ಯಾವಾಗಲೂ ಅಲ್ಲಿ ಸದ್ಗತಿಯೆ ಲಭಿಸುವುದು. ಯಾವ ನರರು ಆ ಸ್ಥಾನವನ್ನು ಸೇವಿಸುವುದಿಲ್ಲವೊ, ಅವರೇ ಭೂಲೋಕದಲ್ಲಿ ಸೌಖ್ಯದಿಂದ ವಂಚಿತರಾದವರು.

೧೪. ಈ ಕ್ಷೇತ್ರದ ಗುಣಗಳನ್ನು ವರ್ಣಿಸಲು ದೇವತೆಗಳೂ, ರಾಕ್ಷಸರೂ, ಮನುಷ್ಯರೂ ಪ್ರಯತ್ನದಿಂದಲೂ ಶಕ್ತರಾಗಲಾರರು. ಅಲ್ಲಿ ನಾನೇ ನೆಲಸಿರುವೆನು.

೧೫. ಮನುಷ್ಯನು ಜನ್ಮದಲ್ಲಿ ಯಾವ ಅತ್ಯಲ್ಪವಾದ ಪಾತಕವನ್ನು ಮಾಡಿದ್ದರು ಸಹ ಮಹಾಕಾಲವನವನ್ನು ಸೇರಲು ಅದೆಲ್ಲವೂ ಸುಟ್ಟುಹೋಗುವುದು.

೧೬. ಸರ್ವಕಾಲದಲ್ಲಿಯೂ ಯಾವ ಪುಣ್ಯಗತಿಯು ಮಹಾಕಾಲವನದಲ್ಲಿ ಲಭಿಸುವುದೊ, ಅದು ಕುರುಕ್ಷೇತ್ರ, ಗಂಗಾದ್ವಾರ, ತ್ರಿಪುಷ್ಕರಗಳಲ್ಲಿಯೂ ಸಿಕ್ಕುವುದಿಲ್ಲ.

೧೭. ತಿರ್ಯಗ್ಯೋನಿಗಳಲ್ಲಿರುವ ಪ್ರಾಣಿಗಳೂ ಮಹಾಕಾಲವನಕ್ಕೆ ಹೋಗಿ ಅಲ್ಲಿಯೇ ವಾಸಮಾಡುತ್ತ ಮರಣವನ್ನು ಹೊಂದಲು ಅವುಗಳೂ ಉತ್ತಮಗತಿಯನ್ನು ಪಡೆಯುವುವು.

ಮೇರುಮಂದರಮಾತ್ರೋಽಪಿ ರಾಶಿಃ ಪಾಪಸ್ಯ ಕರ್ಮಣಃ ।
ಮಹಾಕಾಲವನಂ ಪ್ರಾಪ್ಯ ಸರ್ವೋಽಪಿ ವ್ರಜತಿ ಕ್ಷಯಂ ॥ ೧೮ ॥
ಸ್ಮಶಾನಮಿತಿ ಚಾಖ್ಯಾತಂ ಮಹಾಕಾಲವನಂ ಪ್ರಿಯೇ ।
ತತ್ರ ಬ್ರಹ್ಮಾದಯೋ ದೇವಾ ನಾರಾಯಣಪುರೋಗಮಾಃ ॥ ೧೯ ॥
ಯೋಗಿನಶ್ಚ ತಥಾಸಾಂಖ್ಯಾಃ ಸಿದ್ಧಾಶ್ಚ ಸನಕಾದಯಃ ।
ಉಪಾಸತೇ ಚ ಮಾಂ ಭಕ್ತ್ಯಾ ಮದ್ಭಕ್ತ್ಯಾ ಮತ್ಪರಾಯಣಾಃ ॥ ೨೦ ॥
ಯಾ ಗತಿರ್ಯೋಗತಪಸಾಂ ಯಾ ಗತಿರ್ಯಜ್ಞವಾಜಿನಾಂ ।
ಮಹಾಕಾಲವನೇ ಕ್ಷೇತ್ರೇ ಸಾ ಗತಿರ್ವಿಹಿತಾ ಮಯಾ ॥ ೨೧ ॥
ಸಂಹರಾಮಿ ಚ ತತ್ರಸ್ಥಸ್ತ್ರೈಲೋಕ್ಯಂ ಸಚರಾಚರಂ ।
ಅತೋ ದೇವಿ ಸಮಾಖ್ಯಾತಂ ಮಹಾಕಾಲವನಂ ಶುಭಂ ॥ ೨೨ ॥
ಏವಂ ಬಹುವಿಧಾಂಛ್ರುತ್ವಾ ಗುಣಾನ್ಬಹುವಿಧಾಂಸ್ತಥಾ ।
ದೇವಿ ತ್ವಂ ವಿಸ್ಮಿತಾ ಜಾತಾ ಗಮನಾಯ ಮನೋ ದಧೇ ॥ ೨೩ ॥

---

೧೮. ಮಾನವನು ಮೇರುಮಂದರ ಪರ್ವತಗಳಿಗೆ ಸಮಾನವಾದ ಪಾಪದ ರಾಶಿಯನ್ನು ಗಳಿಸಿದ್ದರೂ ಮಹಾಕಾಲವನಕ್ಕೆ ಹೋಗುತ್ತಲೇ ಅದೆಲ್ಲವೂ ನಾಶವಾಗುವುದು.

೧೯–೨೦. ಪ್ರಿಯಳೆ! ಮಹಾಕಾಲವನವು ಸ್ಮಶಾನಕ್ಷೇತ್ರವೆಂದು ಪ್ರಖ್ಯಾತವಾಗಿರುವುದು. ಅಲ್ಲಿ ಚತುರ್ಮುಖ, ನಾರಾಯಣಾದಿ ದೇವತೆಗಳೂ, ಯೋಗಿಗಳೂ, ಸಾಂಖ್ಯರೂ, ಸಿದ್ಧರೂ, ಸನಕಾದಿ ಮಹರ್ಷಿಗಳೂ, ನನ್ನಲ್ಲಿ ಭಕ್ತಿಯುಳ್ಳವರಾಗಿ ನನ್ನನ್ನೇ ನಂಬಿಕೊಂಡು ನನ್ನ ಉಪಾಸನೆಯಲ್ಲಿಯೇ ನಿರತರಾಗಿರುವರು.

೨೧. ಯೋಗಾಭ್ಯಾಸ ಮತ್ತು ತಪಸ್ಸುಗಳಿಂದ ಯಾವ ಗತಿಯು ಲಭಿಸುವುದೊ, ಯಜ್ಞಗಳನ್ನು ಮಾಡುವುದರಿಂದ ಯಾವ ಗತಿಯುಂಟೊ, ಆ ಸದ್ಗತಿಯೇ ಮಹಾಕಾಲವನಕ್ಷೇತ್ರವನ್ನು ಸೇವಿಸುವವರಿಗೆ ನನ್ನಿಂದ ನಿಶ್ಚಯಿಸಲ್ಪಟ್ಟಿರುವುದು.

೨೨. ಅಲ್ಲಿ ನೆಲಸಿಯೇ ನಾನು ಚರಾಚರಗಳನ್ನೊಳಗೊಂಡ ಮೂರು ಲೋಕಗಳನ್ನೂ ಉಪಸಂಹರಿಸುವೆನಾದುದರಿಂದ ಈ ಕ್ಷೇತ್ರಕ್ಕೆ ಮಹಾಕಾಲವನವೆಂಬ ಶುಭನಾಮವುಂಟಾಯಿತು.''

೨೩. ಪಾರ್ವತಿಯೆ! ಇಂತು ಈ ಕ್ಷೇತ್ರದ ಅಸಂಖ್ಯಾತ ಗುಣಗಳನ್ನು ನಾನು ಬಹುವಿಧಗಳಾಗಿ ವರ್ಣಿಸಲು ನೀನೂ ವಿಸ್ಮಯಗೊಂಡು ಅಲ್ಲಿಗೆ ಹೋಗಲು ಮನಸ್ಸುಳ್ಳವಳಾದೆ.

ಕ್ಷೇತ್ರಸ್ಯಾಲೋಕನೇ ಚಿತ್ತಂ ಜಾತಮುತ್ಕಂಠಿತಂ ತವ ।
ತ್ವಯಾ ಸಾರ್ಧಂ ಸಮಾಗತ್ಯ ಮಹಾಕಾಲವನೇ ಶುಭೇ ॥ ೨೪ ॥
ಪಶ್ಯ ದೇವಿ ವಿಚಿತ್ರಾಖ್ಯಂ ಯನ್ಮಯಾ ಕಥಿತಂ ತವ ।
ಅಮರೇಶಪುರಸ್ಪರ್ಧಿ ವರ್ಧಿತಾನಂದಸುಂದರಂ ।
ವರ್ಣಿತಂ ಯನ್ಮಯಾ ದೇವಿ ಭುಕ್ತಿಮುಕ್ತಿಕರಂ ಪರಂ ॥ ೨೫ ॥
ತ್ವಯಾ ಪ್ರೋಕ್ತಂ ವಿಶಾಲಾಕ್ಷಿ ದೃಷ್ಟ್ವಾ ಕ್ಷೇತ್ರಮನುತ್ತಮಂ ।
ಅಸ್ಯ ಸ್ಥಾನಸ್ಯ ರಕ್ಷಾರ್ಥಂ ಭಕ್ತಂ ಗಣಚತುಷ್ಟಯಂ ।
ನಿಯುಜ್ಯತಾಂ ಮಹಾದೇವ ಸಂತೋಷಾಯ ಮಮ ಪ್ರಭೋ ॥ ೨೬ ॥
ದ್ವಾರಾಣಿ ತತ್ರ ಚತ್ವಾರಿ ಕ್ರಿಯಂತಾಂ ಪರಮೇಶ್ವರ ।
ಚತ್ವಾರಃ ಕಲಶಾಶ್ಚೈವ ಹೈಮಾಃ ಕಾರ್ಯಾ ದೃಢಾಃ ಶುಭಾಃ ॥ ೨೭ ॥
ಪೂರ್ವಾದಿಕ್ರಮಯೋಗೇನ ಚತುರ್ವರ್ಗೋ ನಿಯೋಜ್ಯತಾಂ ।
ಧರ್ಮಶ್ಚಾಽರ್ಥಶ್ಚ ಕಾಮಶ್ಚ ಮೋಕ್ಷಶ್ಚೈವ ಮಹೇಶ್ವರ ॥ ೨೮ ॥
ತ್ವದೀಯಂ ವಚನಂ ಶ್ರುತ್ವಾ ಮಯಾ ದೇವಿ ಪ್ರಯತ್ನತಃ ।
ಅಸ್ಯ ಕ್ಷೇತ್ರಸ್ಯ ರಕ್ಷಾರ್ಥಂ ಸ್ಮೃತಂ ಗಣಚತುಷ್ಟಯಂ ॥ ೨೯ ॥

---

೨೪. ಆ ಕ್ಷೇತ್ರವನ್ನು ನೋಡಬೇಕೆಂಬ ನಿನ್ನ ಬಯಕೆಯು ತೀವ್ರವಾಗಲು ನಾನು ನಿನ್ನೊಡನೆ ಮಹಾಕಾಲವನಕ್ಕೆ ಬಂದು ಇಂತೆಂದೆನು.

೨೫. "ದೇವಿಯೆ! ನಾನು ಹಿಂದೆ ಅತಿ ವಿಚಿತ್ರವೆಂದು ವರ್ಣಿಸಿದ ಈ ಕ್ಷೇತ್ರವನ್ನು ನೋಡು. ಇದು ದೇವನಗರಿಯನ್ನು ಸರಿಹೋಲುವುದಾಗಿ ಅಡಿಗಡಿಗೂ ಆನಂದವನ್ನು ಹೆಚ್ಚಿಸುತ್ತಿರುವ ಸುಂದರನಗರವಾಗಿರುವುದು. ಇದನ್ನೇ ನಾನು ಭೋಗಮೋಕ್ಷಪ್ರದವಾದ ಉತ್ತಮಕ್ಷೇತ್ರವೆಂದು ಕರೆದುದು."

೨೬. ವಿಶಾಲಾಕ್ಷಿಯೆ! ನೀನು ಈ ಪವಿತ್ರಕ್ಷೇತ್ರವನ್ನು ಕಂಡು ಹೇಳತೊಡಗಿದೆ. "ಮಹೇಶ್ವರ! ಈ ಮಹಾಕ್ಷೇತ್ರದ ರಕ್ಷಣೆಗಾಗಿ ನಿನ್ನ ಭಕ್ತರಾದ ನಾಲ್ಕುಜನ ಗಣನಾಯಕರನ್ನು ನಾಲ್ಕು ಕಡೆಗಳಲ್ಲಿ ನೆಲೆಸಹೇಳಿದರೆ ನನಗೆ ಸಂತೋಷವಾಗುವುದು.

೨೭. ದೇವ! ಈ ಪ್ರದೇಶಕ್ಕೆ ನಾಲ್ಕು ಮಹಾದ್ವಾರಗಳನ್ನು ನಿರ್ಮಾಣ ಮಾಡಿ ಅವುಗಳಮೇಲೆ ಭಾರವಾದ ನಾಲ್ಕು ಚಿನ್ನದ ಕಳಶಗಳನ್ನು ಸ್ಥಾಪಿಸಬೇಕು.

೨೮. ಮಹೇಶ್ವರ! ಪೂರ್ವದ್ವಾರವೇ ಮೊದಲಾಗಿ ಪ್ರದಕ್ಷಿಣಾಕ್ರಮದಿಂದ ಒಂದೊಂದು ಬಾಗಿಲಲ್ಲಿಯೂ ಧರ್ಮ, ಅರ್ಥ, ಕಾಮ, ಮೋಕ್ಷಗಳು ನೆಲಸುವಂತೆ ಮಾಡು."

೨೯. ಪಾರ್ವತಿಯೆ! ನಿನ್ನ ಮಾತನ್ನು ಕೇಳಿ ನಾನೂ ಈ ಕ್ಷೇತ್ರವನ್ನು ಪ್ರಯತ್ನದಿಂದ ಕಾಪಾಡಬೇಕೆಂದು ನಾಲ್ವರು ಗಣನಾಯಕರನ್ನು ಸ್ಮರಿಸಿದೆನು.

ಚತ್ವಾರ ಈಶ್ವರಾಸ್ತೇಽಪಿ ಸ್ಥಾಪಿತಾಸ್ತದನಂತರಂ ।
ಪಿಂಗಲೇಶೋ ಧನಾಧ್ಯಕ್ಷಸ್ತಥಾ ಕಾಯಾಽವರೋಹಣಃ ॥ ೩೦ ॥
ಬಿಲ್ವೇಶ್ವರೋ ಗಣಶ್ರೇಷ್ಠೋ ದುರ್ದರ್ಶೋ ಗಣನಾಯಕಃ ।
ಏತೇ ಮಯಾ ನಿಯುಕ್ತಾ ವೈ ಸಮರ್ಥಾಃ ಕ್ಷೇತ್ರರಕ್ಷಣೇ ॥ ೩೧ ॥
ಪೂರ್ವಾದಿಕ್ರಮಯೋಗೇನ ತ್ವತ್ಪ್ರಿಯಾರ್ಥಂ ವರಾನನೇ ।
ನಿಯುಕ್ತಾಸ್ತ್ವನ್ಮತೇನೈವ ಪೂರ್ವಸ್ಯಾಂ ದಿಶಿ ಪಿಂಗಲಃ ॥ ೩೨ ॥
ದಕ್ಷಿಣಸ್ಯಾಂ ದಿಶಿ ತಥಾ ಪ್ರಿಯೇ ಕಾಯಾಽವರೋಹಣಃ ।
ಬಿಲ್ವೇಶ್ವರಃ ಪ್ರತೀಚ್ಯಾಂತು ದುರ್ದರ್ಶಶ್ಚೋತ್ತರೇ ತಥಾ ॥ ೩೩ ॥
ಮಾನವಾ ಯೇ ಮ್ರಿಯಂತೇಽತ್ರ ಕ್ಷೇತ್ರಮಧ್ಯೇ ಗಣೋತ್ತಮಾಃ ।
ತೇಷಾಂ ರಕ್ಷಾ ಪರಾ ಕಾರ್ಯಾ ಭವದ್ಭಿರ್ಮಮ ಶಾಸನಾತ್ ॥ ೩೪ ॥
ಕಥಾಂ ಶೃಣು ಪ್ರಯತ್ನೇನ ಪಿಂಗಲೇಶ್ವರಸಂಭವಾಂ ।
ಯಸ್ಯಾಃ ಶ್ರವಣಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೩೫ ॥
ಪಿಂಗಲಾ ಕನ್ಯಕಾ ದೇವಿ ಕಾನ್ಯಕುಬ್ಜೇ ಬಭೂವ ಹ ।
ಸುಶೀಲಾ ಚ ಸುವೇಷಾ ಚ ಸೌಂದರ್ಯೇಣಾಽತಿನಿರ್ವೃತಾ ॥ ೩೬ ॥

---

೩೦–೩೧. ಬಳಿಕ ಸರ್ವೇಶ್ವರರಾದ ಈ ನಾಲ್ವರನ್ನೂ ಸ್ಥಾಪಿಸಿದೆನು. ಮೊದಲನೆಯವನೇ ಧನೇಶ್ವರನಾದ ಪಿಂಗಲೇಶ್ವರನು. ಎರಡನೆಯವನು ಕಾಯಾವರೋಹಣನು. ಮೂರನೆಯವನು ಗಣಾಧ್ಯಕ್ಷನಾದ ಬಿಲ್ವೇಶ್ವರನು. ನಾಲ್ಕನೆಯ ಗಣನಾಯಕನೇ ದುರ್ದರ್ಶನು. ಈ ಸರ್ವಸಮರ್ಥರನ್ನು ನಾನು ಕ್ಷೇತ್ರಸಂರಕ್ಷಣದ ಕಾರ್ಯದಲ್ಲಿರುವಂತೆ ನೇಮಿಸಿದೆನು.

೩೨. ಸುಂದರಿಯೆ! ನಿನ್ನ ಪ್ರೀತಿಗೋಸ್ಕರ ನಿನ್ನ ಅನುಮತಿಯಂತೆಯೇ ಈ ನಾಲ್ವರೂ ಪೂರ್ವದಿಕ್ಕಿನಿಂದ ಕ್ರಮವಾಗಿ ನೆಲೆಗೊಳಿಸಲ್ಪಟ್ಟರು. ಪೂರ್ವ ದಿಕ್ಕಿನಲ್ಲಿ ಪಿಂಗಲೇಶ್ವರನಿರುವನು.

೩೩. ಹಾಗೆಯೇ ದಕ್ಷಿಣದಲ್ಲಿ ಕಾಯಾವರೋಹಣನನ್ನೂ, ಪಶ್ಚಿಮದಲ್ಲಿ ಬಿಲ್ವೇಶ್ವರನನ್ನೂ, ಉತ್ತರದಲ್ಲಿ ದುರ್ದರ್ಶೇಶ್ವರನನ್ನೂ ನಿಯಮಿಸಿ ಅವರಿಗೆ ಇಂತೆಂದು ಹೇಳಿದೆನು.

೩೪. "ಎಲೈ ಗಣಾಧ್ಯಕ್ಷರಿರಾ! ಈ ಕ್ಷೇತ್ರದ ಮಧ್ಯದಲ್ಲಿ ಯಾವ ಮಾನವರು ಸಾಯುವರೊ, ಅವರ ಸಂರಕ್ಷಣೆಯನ್ನು ಇಹಪರಗಳೆರಡರಲ್ಲಿಯೂ ನೀವು ಮಾಡಬೇಕು. ಇದು ನನ್ನ ಕಟ್ಟಪ್ಪಣೆಯೆಂದು ತಿಳಿಯಿರಿ."

೩೫. ದೇವಿಯೆ! ಇನ್ನು ಪಿಂಗಲೇಶ್ವರನಿಗೆ ಸಂಬಂಧಿಸಿದ ಕಥೆಯೊಂದನ್ನು ಕೇಳು. ಅದನ್ನು ಕೇಳುವುದರಿಂದಲೇ ಮಾನವನು ಕೃತಕೃತ್ಯನಾಗುವನು.

೩೬. ಹಿಂದೆ ಕನ್ಯಾಕುಬ್ಜ ನಗರದಲ್ಲಿ ಸೌಶೀಲ್ಯವತಿಯೂ, ಸುವೇಷಾಢ್ಯಳೂ, ಅತ್ಯಂತ ಸುಂದರಾಂಗಿಯೂ ಆದ ಪಿಂಗಲೆಯೆಂಬ ಕನ್ಯೆಯೊಬ್ಬಳಿದ್ದಳು.

ಪಿತಾ ತಸ್ಯಾ ಮಹಾಪ್ರಾಜ್ಞಃ ಸರ್ವಶಾಸ್ತ್ರಾರ್ಥತತ್ತ್ವವಿತ್ ।
ಜ್ಞಾನಧ್ಯಾನರತಶ್ಚೈವ ಸ್ವಾಧ್ಯಾಯಪರಿನಿಷ್ಠಿತಃ ॥ ೩೭ ॥
ಪಿಂಗಲೋ ನಾಮ ವಿಪ್ರೇಂದ್ರೋ ಭಾರ್ಯಾ ತಸ್ಯ ಪತಿವ್ರತಾ ।
ಪಿಂಗಾಕ್ಷೀ ವಿಶ್ರುತಾ ಲೋಕೇ ಸಾ ಚ ಪಂಚತ್ವಮಾಗತಾ ॥ ೩೮ ॥
ತತಸ್ತೇನ ಸ ದುಃಖೇನ ಗೃಹಸ್ಥಾಶ್ರಮನಿಃಸ್ಪೃಹಃ ।
ತಪೋವನಂ ಜಗಾಮಾಽಥ ಗೃಹೀತ್ವಾ ತನಯಾಂ ಸ್ವಕಾಂ ॥ ೩೯ ॥
ಋಷಿಭಿಃ ಸೇವಿತಂ ಪುಣ್ಯಂ ಶಾಕಮೂಲಫಲಾಽಶನೈಃ ।
ಸ ತತ್ರ ಮುನಿಭಿಃ ಸಾರ್ಧಂ ಧ್ಯಾನಯೋಗಪರಾಯಣಃ ॥ ೪೦ ॥
ನಿವಾಸಂ ಕೃತವಾನ್ದೇವಿ ಪಿಂಗಲಾಯಾಶ್ಚ ರಕ್ಷಣಂ ।
ಪಾಲಯಾಮಾಸ ಧರ್ಮಾತ್ಮಾ ಪುತ್ರಿಕಾಂ ಹೃದಯೋಪಮಾಂ ॥ ೪೧ ॥
ತಾಮೇವ ಸತತಂ ಸಾಧ್ವೀಂ ಮನ್ಯಮಾನೋ ಮಹಾತಪಾಃ ।
ನ ಪಾಣಿಂ ಗ್ರಾಹಯಾಮಾಸ ಮಾತೃಹೀನೇತಿ ಚಿಂತಯನ್ ॥ ೪೨ ॥

---

೩೭. ಆಕೆಯ ತಂದೆಯು ತೀಕ್ಷ್ಣಬುದ್ಧಿಯೂ, ಸಕಲಶಾಸ್ತ್ರಗಳ ಅಂತರಾರ್ಥಗಳನ್ನು ತಿಳಿದವನೂ, ಜ್ಞಾನಧ್ಯಾನಗಳಲ್ಲಿ ನಿರತನಾದವನೂ, ವೇದಗಳಲ್ಲಿ ಪಾರಂಗತನೂ ಆಗಿದ್ದನು.

೩೮. ಪಿಂಗಲನೆಂಬ ಹೆಸರಿನ ಆ ಬ್ರಾಹ್ಮಣೋತ್ತಮನಿಗೆ ಪಿಂಗಾಕ್ಷಿಯೆಂಬ ಪತ್ನಿಯಿದ್ದಳು. ಮಹಾ ಪತಿವ್ರತೆಯೆಂದು ಪ್ರಖ್ಯಾತಳಾಗಿದ್ದ ಆಕೆಯು ಕಾಲಕ್ರಮದಲ್ಲಿ ಮೃತಳಾದಳು.

೩೯. ಆ ಮಹಾವ್ಯಸನದಿಂದ ಬ್ರಾಹ್ಮಣನು ಗೃಹಸ್ಥಾಶ್ರಮದಲ್ಲಿ ಶ್ರದ್ಧೆಯಿಲ್ಲದವನಾಗಿ ತನ್ನ ಮಗಳನ್ನು ಕರೆದುಕೊಂಡು ತಪೋವನಕ್ಕೆ ಹೊರಟು ಹೋದನು.

೪೦. ಮಹರ್ಷಿಗಳ ನಿವಾಸವಾದ ಆ ವನದಲ್ಲಿ ಸೊಪ್ಪುಗಳನ್ನೂ, ಗೆಡ್ಡೆಗೆಣಸುಗಳನ್ನೂ ತಿನ್ನುತ್ತ ಅವರೊಡನೆಯೇ ಧ್ಯಾನಯೋಗದಲ್ಲಿ ತತ್ಪರನಾಗಿದ್ದನು.

೪೧. ದೇವಿಯೆ! ಇಂತು ಅಲ್ಲಿ ವಾಸಿಸಿ ಪಿಂಗಲೆಯ ಸಂರಕ್ಷಣೆಯನ್ನೂ ಮಾಡುತ್ತ ಧರ್ಮೈಕತತ್ಪರನಾದ ಆತನು ಪ್ರಾಣಪ್ರಿಯಳಾದ ಆ ಮಗಳನ್ನು ಪೋಷಿಸಿ ಬೆಳೆಸಿದನು.

೪೨. ಮಹಾ ತಪಸ್ಸಂಪನ್ನನಾದ ಆತನು ತನ್ನ ಮಗಳು ಪರಮಸಾಧ್ವಿಯೆಂದೂ, ತಾಯಿಯಿಲ್ಲದ ಮಗುವೆಂದೂ ತಿಳಿದು ಆಕೆಯನ್ನು ಯಾರಿಗೂ ದಾನ ಮಾಡಲಿಲ್ಲ.

ವಿರಕ್ತೋಽಪಿ ಮಹಾಭಾಗ ಸಂಸಾರಾತ್ಸರ್ವಧರ್ಮವಿತ್ ।
ಪುತ್ರಿಕಾಂ ಪ್ರೇಕ್ಷಯನ್ ಸಮ್ಯಕ್ಸನ್ಯಾಸಂ ನಾಽಕರೋದ್ವಶೀ ॥ ೪೩ ॥
ಅಥ ಸಂರಕ್ಷಯನ್ಬಾಲಾಂ ಮಾತೃಹೀನಾಂ ತಪಸ್ವಿನೀಂ ।
ಸಂಯುಕ್ತಃ ಕಾಲಧರ್ಮೇಣ ಸ ವಿಪ್ರಃ ಸ್ವರ್ಜಗಾಮ ಹ ॥ ೪೪ ॥
ತತಃ ಸಾ ಪಿಂಗಲಾ ದೀನಾ ಹೀನಾ ಪಿತ್ರಾ ಸುದುಃಖಿತಾ ।
ವಿಲಲಾಪಾತುರಾ ದೇವಿ ಪತಿತಾ ಶೋಕಸಾಗರೇ ॥ ೪೫ ॥

ಪಿಂಗಲೋವಾಚ :—

ಅದ್ಯ ಮೇ ಚ ಪಿತಾ ದೈವಾತ್ಕಾಲಧರ್ಮಮುಪೇಯಿವಾನ್ ।
ಮಾಂ ತ್ಯಕ್ತ್ವಾ ಗತವಾನೇಕೋ ದಯಾಲುರ್ನಿಃಸ್ಪೃಹೋ ಯಥಾ ॥೪೬॥
ಸ ಸಮಃ ಸರ್ವಭೂತೇಷು ಮಮಾತ್ಯಂತಂ ಹಿತೇ ರತಃ ।
ಮಾಮೇಕಾಂ ಸಂಪರಿತ್ಯಜ್ಯ ಪರಲೋಕಮಿತೋಗತಃ ॥ ೪೭ ॥
ಸಾಽಹಂ ಪರಮದುಃಖಾರ್ತಾ ಪಿತೃಶೋಕೇನ ವಿಹ್ವಲಾ ।
ಶರೀರಂ ಧಾರಯಾಮೀದಂ ಕೃಪಣಂ ವ್ಯರ್ಥಜೀವಿತಂ ॥ ೪೮ ॥
ಬ್ರಹ್ಮಜ್ಞೋಽಪಿ ಹಿ ತಾತೋ ಮೇ ಶಾಂತೋ ದಾಂತೋ ಜಿತೇಂದ್ರಿಯಃ ।
ಮಾಮೇವ ಪಾಲಯಾಮಾಸ ಮಾತೃಹೀನೇತಿ ಚಿಂತಯನ್ ॥ ೪೯ ॥

---

೪೩. ಸಕಲಾಶ್ರಮಧರ್ಮಗಳನ್ನು ತಿಳಿದ ಆತನು ವಿರಕ್ತನಾಗಿದ್ದರೂ, ಮಗಳ ಅಭಿವೃದ್ಧಿಯ ದೃಷ್ಟಿಯಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಲಿಲ್ಲ.

೪೪. ಇಂತು ತಾಯಿಯಿಲ್ಲದವಳೂ, ತಪೋನಿರತಳೂ ಆದ ಬಾಲಕಿಯನ್ನು ಸಂರಕ್ಷಿಸುತ್ತ ಕಾಲಗತಿಗೆ ಸಿಕ್ಕಿ ಆ ಬ್ರಾಹ್ಮಣಶ್ರೇಷ್ಠನೂ ಸ್ವರ್ಗವಾಸಿಯಾದನು.

೪೫. ದೇವಿಯೆ! ಹೀಗೆ ತಂದೆಯನ್ನೂ ಕಳೆದುಕೊಂಡು ದೀನಳೂ, ಶೋಕ ಸಮುದ್ರದಲ್ಲಿ ಮುಳುಗಿದವಳೂ ಆದ ಆ ಬಾಲಕಿಯು ದುಃಖದಿಂದ ಪ್ರಲಾಪಿಸಿದಳು.

೪೬. ಪಿಂಗಲೆಯು ಹೇಳುತ್ತಾಳೆ:— "ಇಂದು ನನ್ನ ತಂದೆಯು ನನ್ನ ದುರದೃಷ್ಟದಿಂದ ಕಾಲಧರ್ಮವನ್ನು ಹೊಂದಿದನು. ದಯಾಳುವೂ, ನಿಸ್ಪೃಹನೂ ಆದ ಆತನು ನನ್ನನ್ನು ತ್ಯಜಿಸಿ ಒಬ್ಬನೇ ಹೊರಟುಹೋದನು!

೪೭. ಆತನು ಸಕಲ ಪ್ರಾಣಿಗಳಲ್ಲಿಯೂ ಸಮಾನಬುದ್ಧಿಯುಳ್ಳವನಾಗಿ ನನ್ನ ಪರಮಹಿತವನ್ನೇ ಕೋರುತ್ತಿದ್ದು ಈಗ ನನ್ನನ್ನು ಏಕಾಂಗಿಯನ್ನಾಗಿ ಮಾಡಿ ಪರಲೋಕಕ್ಕೆ ಹೋಗಿರುವನು.

೪೮. ಪರಮ ದುಃಖಸಂತಪ್ತಳೂ, ಪಿತೃಶೋಕಾನ್ವಿತಳೂ ಆದ ನಾನು ದೀನವೂ, ಕೆಲಸಕ್ಕೆ ಬಾರದುದೂ ಆದ ಈ ಶರೀರವನ್ನು ಧರಿಸಿಕೊಂಡಿರುವೆನು.

೪೯. ಬ್ರಹ್ಮಜ್ಞಾನಿಯೂ, ಶಮದಮಾದಿಸಹಿತನೂ, ಜಿತೇಂದ್ರಿಯನೂ

ಯೇನ ಸಂರಕ್ಷಿತಾ ಬಾಲ್ಯೇ ಯೇನಾಽಸ್ಮಿ ಪರಿವರ್ಧಿತಾ ।
ತೇನ ಪಿತ್ರಾ ವಿಯುಕ್ತಾಽಹಂ ನ ಜೀವಿಷ್ಯೇ ಕದಾಚನ ॥ ೫೦ ॥
ನದ್ಯಾಂ ವಾ ನಿಪತಿಷ್ಯಾಮಿ ಸಮಿದ್ಧೇ ವಾ ಹುತಾಶನೇ ।
ಪರ್ವತಾದ್ವಾ ಪತಿಷ್ಯಾಮಿ ಪಿತೃಹೀನಾ ನಿರಾಶ್ರಯಾ ॥ ೫೧ ॥
ಇತಿ ಶೋಕಾತುರಾ ಬಾಲಾ ವಿಲಪಂತೀ ಪುನಃ ಪುನಃ ।
ಬೋಧ್ಯಮಾನಾ ಮಹಾಭಾಗ್ಯೈಃ ಸದಾರೈ ಋಷಿಸತ್ತಮೈಃ ॥ ೫೨ ॥
ಕನ್ಯಕಾಭೀ ರುದಂತೀಭಿರ್ವಯಸ್ಯಾಭಿಃ ಸಮಂತತಃ ।
ಆಲಿಂಗ್ಯಾಲಿಂಗ್ಯ ಬಹುಶಃ ಪೀಡ್ಯಮಾನಾ ಸುದುಃಖಿತಾ ।
ಆಗತ್ಯ ಕರುಣಾವಿಷ್ಟೋ ಧರ್ಮಃ ಪರಹಿತೇ ರತಃ ॥ ೫೩ ॥
ಸ್ಥವಿರೋ ಬ್ರಾಹ್ಮಣೋ ಭೂತ್ವಾ ಪ್ರೋವಾಚೇದಂ ವಚಸ್ತದಾ ।
ಅಲಂ ಬಾಲೇ ವಿಶಾಲಾಕ್ಷಿ ರೋದನೈರತಿದಾರುಣೈಃ ।
ನ ಭೂಯಃ ಪ್ರಾಪ್ಯತೇ ತಾತಸ್ತಸ್ಮಾನ್ನಾಽರ್ಹಸಿ ಶೋಚಿತುಂ ॥ ೫೪ ॥

---

ಆಗಿದ್ದರೂ ನನ್ನ ತಂದೆಯು ತಾಯಿಯಿಲ್ಲದವಳೆಂಬ ಮಮತೆಯಿಂದಲೇ ನನ್ನನ್ನು ಪೋಷಿಸುತ್ತಿದ್ದನು.

೫೦. ಯಾವನು ನನ್ನನ್ನು ಬಾಲ್ಯದಲ್ಲಿ ಸಂರಕ್ಷಿಸಿದನೊ, ಯಾವನಿಂದ ಪ್ರವರ್ಧಮಾನಳಾದೆನೊ, ಅಂತಹ ತಂದೆಯನ್ನು ಕಳೆದುಕೊಂಡು ನಾನು ಖಂಡಿತ ವಾಗಿಯೂ ಬದುಕಲೆಳಸುವುದಿಲ್ಲ.

೫೧. ತಂದೆಯನ್ನು ಕಳೆದುಕೊಂಡು ಆಶ್ರಯರಹಿತಳಾದ ನಾನು ನದಿ ಯಲ್ಲಿಯೊ ಅಥವ ಉರಿಯುವ ಬೆಂಕಿಯಲ್ಲಿಯೊ ಬಿದ್ದು ಸಾಯವೆನು. ಇಲ್ಲ ದಿದ್ದರೆ ಪರ್ವತಶಿಖರದಿಂದ ಹಾರಿಬೀಳುವೆನು.''

೫೨. ಇಂತೆಂದು ಶೋಕಾತುರಳಾಗಿ ಪ್ರಲಪಿಸುತ್ತಿರುವ ಆ ಬಾಲೆಯನ್ನು ಪತ್ನೀಸಮೇತರಾದ ಇತರ ಮಹರ್ಷಿಗಳು ಜ್ಞಾನೋಪದೇಶದಿಂದ ಸಮಾಧಾನ ಗೊಳಿಸಿದರು.

೫೩. ರೋದಿಸುತ್ತಿರುವ ತನ್ನ ಸಖಿಯರಾದ ಕನ್ಯಕೆಯರಿಂದ ಪರಿವಾರಿತ ಳಾಗಿ ಮತ್ತೆಮತ್ತೆ ಅವರ ಆಲಿಂಗನಗಳಿಗೊಳಗಾಗಿ ದುಃಖಿಸುತ್ತಿದ್ದ ಆಕೆಯ ಬಳಿಗೆ ಪರಹಿತತತ್ಪರನಾದ ಧರ್ಮರಾಜನು ಕೃಪಾವಿಷ್ಟನಾಗಿ ಬಂದನು.

೫೪. ಮುದುಕನಾದ ಬ್ರಾಹ್ಮಣನ ವೇಷವನ್ನು ತಾಳಿ ಬಂದು ಆಕೆಗೆ ಹೇಳಿದನು. ''ವಿಶಾಲನೇತ್ರೆಯಾದ ಬಾಲೆಯೆ! ಕರುಣಾಜನಕವಾದ ಈ ರೋದನ ವನ್ನು ಸಾಕುಮಾಡು. ಹೋದ ತಂದೆಯನ್ನು ಪುನಃ ಪಡೆಯಲಾರೆಯಾದುದ ರಿಂದ ನೀನು ಶೋಕಪಡುವುದನುಚಿತವು.

ಅನಿತ್ಯಂ ಯೌವನಂ ರೂಪಂ ಜೀವಿತಂ ದ್ರವ್ಯಸಂಚಯಃ ।
ಪ್ರಿಯೈಃ ಸಹ ಚ ಸಂವಾಸಸ್ತನ್ನಶೋಚಂತಿ ಪಂಡಿತಾಃ ॥ ೫೫ ॥
ತ್ವಯಾ ವೈ ತತ್ಕೃತಂ ಕರ್ಮ ಪೂರ್ವಜನ್ಮನಿ ಶೋಭನೇ ।
ಯೇನ ಪಿತ್ರಾ ವಿಯೋಗಃ ಸ್ಯಾದರಣ್ಯೇ ಮುನಿಸೇವಿತೇ ॥ ೫೬ ॥
ತ್ವಾಂ ವಿಹಾಯ ಗತಃ ಕ್ವಾಽಪಿ ಪಶ್ಯ ಬಾಲೇ ವಿಧೇರ್ಬಲಂ ।
ಇದಂ ಕೃತಮಿದಂ ಕಾರ್ಯಮಿದಮನ್ಯತ್ಕೃತಾಽಕೃತಂ ॥ ೫೭ ॥
ಏವಮೀಹಾಸಮಾಸಕ್ತಂ ಮೃತ್ಯುಃ ಪ್ರಕುರುತೇ ವಶೇ ।
ತಸ್ಮಾದ್ದುಃಖಂ ಸಮುತ್ಸೃಜ್ಯ ಶ್ರೋತುಮರ್ಹಸಿ ಶೋಭನೇ ॥ ೫೮ ॥
ಪಿತೃಭ್ಯಾಂ ಚ ವಿಯೋಗಶ್ಚ ಯೇನಾಽಭೂತ್ತವ ಕರ್ಮಣಾ ।
ಪುರಾ ತ್ವಂ ಸುಂದರೀನಾಮ ವೇಶ್ಯಾ ರೂಪೇಣ ಸುಂದರೀ ॥ ೫೯ ॥
ನೃತ್ಯಗೇಯಾದಿನಿಪುಣಾ ವೀಣಾವೇಣುವಿಚಕ್ಷಣಾ ।
ಆದಿಶ್ಚ ಪಣ್ಯನಾರೀಣಾಂ ಭೂಷಣಾಚ್ಛಾದನಾದಿಭಿಃ ॥ ೬೦ ॥

---

೫೫. ಮನುಷ್ಯರ ಯೌವನವೂ, ಸೌಂದರ್ಯವೂ, ಜೀವಿತವೂ, ದ್ರವ್ಯ ಸಂಗ್ರಹವೂ, ಪ್ರಿಯರೊಡನೆ ಸಹವಾಸವೂ ಅನಿತ್ಯಗಳೆಂದು ತಿಳಿದೇ ಪ್ರಾಜ್ಞರು ಅವುಗಳಿಗಾಗಿ ದುಃಖಿಸುವುದಿಲ್ಲ.

೫೬. ಮಂಗಳಾಂಗಿಯೆ! ನೀನು ಹಿಂದಿನ ಜನ್ಮದಲ್ಲಿ ಮಾಡಿರುವ ಕರ್ಮದ ಫಲವಾಗಿಯೇ ನಿನಗೆ ಈಗ ಮುನಿಸೇವಿತವಾದ ಅರಣ್ಯದಲ್ಲಿ ಪಿತೃವಿಯೋಗ ವುಂಟಾಯಿತು.

೫೭–೫೮. ಆತನು ನಿನ್ನನ್ನು ಬಿಟ್ಟು ಎಲ್ಲಿಯೋ ಹೊರಟುಹೋದನು. ವಿಧಿಯ ಬಲವನ್ನು ನೋಡಿ, "ಇದನ್ನು ಮಾಡಿದೆನು; ಇದನ್ನು ಮಾಡಬೇಕು; ಈ ಕೆಲಸವು ಬೇರೆ ಪ್ರಾರಂಭವಾಗಿ ಅರ್ಧದಲ್ಲಿ ನಿಂತಿರುವುದು" ಮುಂತಾದ ಕಾರ್ಯಗೌರವಗಳಲ್ಲಿರುವ ಮನುಷ್ಯನನ್ನೇ ಮೃತ್ಯುವು ವಶಪಡಿಸಿಕೊಳ್ಳುವನು. ಆದುದರಿಂದ ನಿನ್ನ ದುಃಖವನ್ನು ಬಿಟ್ಟು ಹಿಂದಿನ ಚರಿತ್ರೆಯನ್ನು ಕೇಳು.

೫೯. ಯಾವ ಕರ್ಮದಿಂದ ನಿನಗೆ ತಂದೆತಾಯಿಗಳ ವಿಯೋಗವುಂಟಾಯಿ ತೆಂಬುದನ್ನು ಹೇಳುವೆನು. ಹಿಂದೆ ನೀನು ಸರ್ವಾಂಗಸುಂದರಿಯಾಗಿ ಸುಂದರಿ ಯೆಂಬ ಹೆಸರೇ ಉಳ್ಳ ವೇಶ್ಯಾಸ್ತ್ರೀಯಳಾಗಿದ್ದೆ.

೬೦. ನಾಟ್ಯಸಂಗೀತಗಳಲ್ಲಿ ನಿಪುಣಳೂ, ವೀಣಾವೇಣುವಾದ್ಯಗಳನ್ನು ಬಾಜಿಸುವುದರಲ್ಲಿ ಚದುರಳೂ ಆಗಿ ವಸ್ತ್ರಭೂಷಣಾದಿಗಳಿಂದ ಸಕಲ ವೇಶ್ಯೆಯ ರಿಗೂ ಮೊದಲಿಗಳೆನಿಸಿದ್ದೆ.

ತಾಂ ದೃಷ್ಟ್ವಾ ರೂಪಸಂಪನ್ನಾಂ ಸುವೇಷಾಂ ಸುವಿಭೂಷಿತಾಂ ।
ಬ್ರಾಹ್ಮಣೋ ಗುಣವಾನ್ಕಶ್ಚಿದ್ಬಭೂವ ಮದನಾತುರಃ ॥ ೬೧ ॥
ತಂ ವಿದಿತ್ವಾ ತಥಾ ಭೂತಂ ಬ್ರಾಹ್ಮಣಂ ಮದನಾತುರಂ ।
ಸಮಾಶ್ಚತಸ್ರಸ್ತೇನ ತ್ವಂ ರಮಿತಾ ಕಾಮಿನಾ ತತಃ ॥ ೬೨ ॥
ಸೋಽಥ ಪಾಪರತಿರ್ಮೂಢೋ ಬ್ರಾಹ್ಮಣೋ ವಿಷಯಾತ್ಮಕಃ ।
ಹತಃ ಶೂದ್ರೇಣ ಕೇನಾಽಪಿ ಕಾಮಿನಾ ತವ ವೇಶ್ಮನಿ ॥ ೬೩ ॥
ವಿಹಾಯ ಭಾರ್ಯಾಮಪ್ರೌಢಾಂ ಶುಭಾಂ ದ್ವಾದಶವಾರ್ಷಿಕೀಂ ।
ಪ್ರಯಾತೋ ನರಕಂ ಘೋರಂ ಶೂದ್ರಾಸಂಪರ್ಕದೂಷಿತಃ ॥ ೬೪ ॥
ತತಸ್ತಸ್ಯ ಪಿತಾ ವಿದ್ವಾನ್ಮಾತಾಽತೀವ ಚ ದುಃಖಿತಾ ।
ಆರ್ತಾ ಪುತ್ರವಿಯೋಗೇನ ಶಾಪೋ ದತ್ತೋ ಭಯಾವಹಃ ॥ ೬೫ ॥

ಮಾತೋವಾಚ :—

ಔಷಧಾದಿಪ್ರಯುಕ್ತಂ ಚ ವಶೀಕರ್ತುಂ ಮಮಾತ್ಮಜಂ ।
ಯದಸ್ಮಾಕಂ ವಿಯೋಗಾಯ ವಂಚಿತೋ ದುಷ್ಟಚಾರಿಣಿ ॥ ೬೬ ॥

---

೬೧. ಇಂತಹ ರೂಪವತಿಯೂ, ಸುವಸ್ತ್ರಭೂಷಣಾಲಂಕೃತಳೂ ಆದ ನಿನ್ನನ್ನು ಕಂಡು ಒಬ್ಬಾನೊಬ್ಬ ಸದ್ಗುಣಿಯಾದ ಬ್ರಾಹ್ಮಣನು ಕಾಮಬಾಣ ಪೀಡಿತನಾದನು.

೬೨. ಕಾಮಾತುರನಾದ ಆ ಬ್ರಾಹ್ಮಣನನ್ನು ಕಂಡು ಆತನ ಪ್ರೇಮಕ್ಕೆ ಪಾತ್ರಳಾದ ನೀನು ಆತನೊಡನೆ ನಾಲ್ಕುವರ್ಷಗಳಕಾಲ ರಮಿಸುತ್ತಿದ್ದೆ.

೬೩. ಪಾಪಚಾರಿಯೂ, ಮೂಢನೂ, ವಿಷಯಾತುರನೂ ಆದ ಆ ಬ್ರಾಹ್ಮಣನು ನಿನ್ನ ಮನೆಯಲ್ಲಿಯೇ ಮತ್ತೊಬ್ಬ ಶೂದ್ರಜಾತಿಯ ವಿಟಪುರುಷ ನಿಂದ ಹತನಾದನು.

೬೪. ಹನ್ನೆರಡುವರ್ಷದ ಬಾಲಕಿಯಾದವಳೂ, ಮಂಗಳಾಂಗಿಯೂ ಆದ ಹೆಂಡತಿಯನ್ನು ಬಿಟ್ಟು ಶೂದ್ರಸ್ತ್ರೀಯ ಸಂಪರ್ಕದಿಂದ ಕಲಂಕಿತನಾದ ಬ್ರಾಹ್ಮಣನು ಘೋರನರಕಕ್ಕೈದಿದನು.

೬೫. ಮಹಾವಿದ್ವಾಂಸನಾದ ಆವನ ತಂದೆಯೂ, ತಾಯಿಯೂ ಪುತ್ರಶೋಕ ದಿಂದ ಸಂತಪ್ತರಾಗಿ ನಿನಗೆ ಭಯಂಕರಗಳಾದ ಶಾಪಗಳನ್ನಿತ್ತರು.

೬೬. ತಾಯಿಯು ಹೇಳುತ್ತಾಳೆ :—“ನನ್ನ ಮಗನನ್ನು ವಶಗೊಳಿಸಿಕೊಳ್ಳಲು ನಮ್ಮನ್ನು ಬಿಟ್ಟು ಬರಲು ಆವನಿಗೆ ಔಷಧಾದಿಗಳನ್ನಿತ್ತು ವಂಚಿಸಿದ ದುರಾಚಾರಿಣಿಯು ನೀನು.

ಯಸ್ಮಾಚ್ಚ ಮಮ ಪುತ್ರೇಣ ಸಾ ವಿಯೋಗಮಕಾರಯತ್ ।
ತೇನ ಜನ್ಮಾಂತರೇ ದೀನಾ ಪತಿಹೀನಾ ಭವತ್ವಸೌ ॥ ೬೭ ॥

ಪಿತೋವಾಚ :—

ಬಾಲ್ಯೇ ವಯಸಿ ವರ್ತಂತೀ ಮಾತೃಹೀನಾ ಸುದುಃಖಿತಾ ।
ಬಹಿಷ್ಕೃತಾ ವಿವಾಹೇನ ಪಿತೃಹೀನಾ ಭವಿಷ್ಯಸಿ ॥ ೬೮ ॥

ಧರ್ಮ ಉವಾಚ :—

ತಸ್ಮಾತ್ಪೂರ್ವಕೃತೇನೈವ ಕರ್ಮಣಾ ವರವರ್ಣಿನಿ ।
ಇದಂ ದುಃಖಮನುಪ್ರಾಪ್ತಾ ಕನ್ಯಕಾ ಭವತೀ ಸತೀ ॥ ೬೯ ॥

ಪಿಂಗಲೋವಾಚ :—

ತ್ವಯಾ ಜನ್ಮಾಂತರೇ ವೃತ್ತಂ ಮಮ ಪ್ರೋಕ್ತಂ ದ್ವಿಜೋತ್ತಮ ।
ತಸ್ಮಾದ್ಬ್ರೂಹಿ ಭವಾನ್ ಪ್ರಶ್ನಂ ಪೃಚ್ಛಂತ್ಯಾ ನಿಶ್ಚಯಂ ಸ್ವಕಂ ॥ ೭೦ ॥
ಇತ್ಥಂ ಸುಘೋರಪಾಪಾಽಹಂ ಪಾಪಾಚಾರಾ ತಥಾಽಧಮಾ ।
ಕಥಂ ತು ಬ್ರಾಹ್ಮಣೇನಾಽಹಮುತ್ಪನ್ನಾ ಬ್ರಹ್ಮವಾದಿನಾ ॥ ೭೧ ॥
ದಶಸೂನಾಸಮಶ್ಚಕ್ರೀ ದಶಚಕ್ರಿ ಸಮೋಧ್ವಜಃ ।
ದಶಧ್ವಜ ಸಮಾವೇಶ್ಯಾ ದಶವೇಶ್ಯಾ ಸಮೋ ನೃಪಃ ॥ ೭೨ ॥

---

೬೭. ಇಂತು ಅವಳು ನನಗೆ ಪುತ್ರವಿಯೋಗವನ್ನುಂಟುಮಾಡಿದವಳಾದುದರಿಂದ ಅವಳೂ ಮುಂದಿನ ಜನ್ಮದಲ್ಲಿ ದೀನಳೂ, ಗಂಡನಿಲ್ಲದವಳೂ ಆಗಲಿ.''

೬೮. ತಂದೆಯು ಹೇಳುತ್ತಾನೆ:—''ದುಷ್ಟಳೆ! ನೀನು ಎಳೆಯವಯಸ್ಸಿನಲ್ಲಿರುವಾಗಲೇ ತಾಯಿಯನ್ನು ಕಳೆದುಕೊಂಡು ದುಃಖಗೊಳ್ಳುತ್ತ ಮದುವೆಯೂ ಇಲ್ಲದವಳಾಗಿ ಕಡೆಗೆ ತಂದೆಯಿಂದಲೂ ವಿಯೋಗವನ್ನು ಪಡೆಯುವೆ.''

೬೯. ಧರ್ಮನು ಹೇಳುತ್ತಾನೆ:—ಓ ಬಾಲಕಿಯೆ! ಇಂತು ನಿನ್ನ ಪೂರ್ವಜನ್ಮದ ಕರ್ಮದ ಫಲವಾಗಿಯೇ ಈಗ ನೀನು ಕನ್ಯೆಯಾಗಿರುವಾಗಲೇ ಈ ದುಃಖಕ್ಕೆ ಭಾಗಿಯಾದೆ.

೭೦. ಪಿಂಗಲೆಯು ಹೇಳುತ್ತಾಳೆ:— ಎಲೈ ಬ್ರಾಹ್ಮಣಶ್ರೇಷ್ಠನೆ! ನೀನು ಜನ್ಮಾಂತರದ ವೃತ್ತಾಂತವನ್ನು ತಿಳಿಸಿದೆ. ಆದುದರಿಂದ ನಾನು ಕೇಳುವ ಪ್ರಶ್ನೆಗೆ ನಿಶ್ಚಯವೂ ಯಥಾರ್ಥವೂ ಆದ ನಿನ್ನ ಉತ್ತರವನ್ನು ಹೇಳುವವನಾಗು.

೭೧. ಇಂತಹ ಮಹಾಪಾತಕವನ್ನು ಮಾಡಿ ಪಾಪಚರಿತಳೂ, ನೀಚಳೂ ಆಗಿದ್ದ ನಾನು ಈಗ ಬ್ರಹ್ಮವಾದಿಯಾದ ಬ್ರಾಹ್ಮಣೋತ್ತಮನಿಗೆ ಮಗಳಾಗಿ ಹೇಗೆ ಹುಟ್ಟಿದೆನು?

೭೨. ಎಣ್ಣೆಯ ಗಾಣವು ಹತ್ತು ಪ್ರಾಣಿಹತ್ಯೆಗಳಿಗೆ ಸಮನಾದುದು. ಮದ್ಯದ ಭಟ್ಟಿಯಂಗಡಿಯು ಹತ್ತು ಗಾಣಗಳಿಗೆ ಸಮವು. ವೇಶ್ಯೆಯು ಹತ್ತು ಭಟ್ಟಿಯಂಗಡಿಗಳಿಗೆ ಸಮಾನಳು. ರಾಜನು ಹತ್ತು ವೇಶ್ಯೆಯರಿಗೆ ಸಮನು.

ಏವಂ ವದಂತಿ ಧರ್ಮಜ್ಞಾ ಬ್ರಾಹ್ಮಣಾಃ ಸಂಶಿತವ್ರತಾಃ ।
ತಸ್ಮಾದ್ದ್ವಿಜೋತ್ತಮಾದಸ್ಮಾತ್ಕಥಂ ಜನ್ಮಾಽಭವನ್ಮಮ ॥ ೭೩ ॥

ಬ್ರಾಹ್ಮಣ ಉವಾಚ :—

ಪಾಪಾಚಾರಪರಾಽಪಿ ತ್ವಂ ಬ್ರಾಹ್ಮಣಾನಾಂ ಕುಲೇ ಶುಭೇ ।
ಉತ್ಪನ್ನಾ ತತ್ರ ವಕ್ಷ್ಯಾಮಿ ಕಾರಣಂ ಶೃಣು ಪಿಂಗಲೇ ॥ ೭೪ ॥
ಬ್ರಾಹ್ಮಣೋ ವಿಷಯಾಸಕ್ತಃ ಕಶ್ಚಿದ್ಬದ್ಧೋ ನೃಪಾಜ್ಞಯಾ ।
ಚೌರ್ಯಂ ಕರ್ಮ ಕೃತಂ ತೇನ ವೇಶ್ಯಾಲುಬ್ಧೇನ ಸುಂದರಿ ॥ ೭೫ ॥
ಮುಚ್ಯತಾಂ ಚ ತ್ವಯಾಽಪ್ಯುಕ್ತಂ ನ ಚೌರೋ ನೈವ ಪಾತಕಂ ।
ಯದ್ಯನೇನ ಕೃತಂ ಚೌರ್ಯಂ ತನ್ಮಯೈವ ಕೃತಂ ಭವೇತ್ ॥ ೭೬ ॥
ದದಾಮಿ ವಿತ್ತಮಧಿಕಂ ಮುಚ್ಯತಾಂ ದ್ವಿಜಸತ್ತಮಃ ।
ಇತ್ಯುಕ್ತ್ವಾ ಗೃಹಮಾನೀಯ ತೇನೈವ ಸಹಿತಾ ಪುನಃ ॥ ೭೭ ॥
ಗೃಹಂ ಚ ಕಲ್ಪಿತಂ ಶುಭ್ರಂ ಪುಷ್ಪಧೂಪಾದಿವಾಸಿತಂ ।
ರಮಿತಶ್ಚ ತ್ವಯಾ ವಿಪ್ರೋ ಯಥಾಸುಖಮನುತ್ತಮಂ ॥ ೭೮ ॥

---

೭೩. ಇಂತು ಧರ್ಮವನ್ನರಿತವರೂ, ನಿಯತಾತ್ಮರೂ ಆದ ಬ್ರಾಹ್ಮಣರು ಹೇಳುತ್ತಿರುವರು. ಆದುದರಿಂದ ಈ ಬ್ರಾಹ್ಮಣಶ್ರೇಷ್ಠನಲ್ಲಿ ನನಗೆ ಜನ್ಮವು ಹೇಗೆ ಲಭಿಸಿತು ?

೭೪. ಬ್ರಾಹ್ಮಣನು ಹೇಳುತ್ತಾನೆ:—ಎಲೌ ಪಿಂಗಲೆಯೆ! ನೀನು ಪಾಪಾಚಾರನಿರತಳಾಗಿದ್ದರೂ ಬ್ರಾಹ್ಮಣರ ಉತ್ತಮಕುಲದಲ್ಲಿ ಹುಟ್ಟಿರುವುದಕ್ಕೆ ಕಾರಣವನ್ನು ಹೇಳುವೆನು, ಕೇಳು.

೭೫. ಸುಂದರಿಯೆ! ವೇಶ್ಯೆಯಾಗಿದ್ದ ನಿನ್ನಲ್ಲಿ ಮೋಹಗೊಂಡ ಬ್ರಾಹ್ಮಣನೊಬ್ಬನು ವಿಷಯಾತುರನಾಗಿ ಚೌರ್ಯವನ್ನು ಮಾಡಲು ರಾಜನ ಅನುಜ್ಞೆಯಂತೆ ಭಟರು ಆತನನ್ನು ಬಂಧಿಸಿದರು.

೭೬. ಆಗ ನೀನು ರಾಜನ ಬಳಿಗೆ ಹೋಗಿ ಇಂತೆಂದೆ. "ಈತನನ್ನು ಬಿಟ್ಟುಬಿಡಿರಿ. ಈತನು ಚೋರನೂ ಅಲ್ಲ. ಯಾವ ಪಾತಕವನ್ನೂ ಮಾಡಿಲ್ಲ. ಇವನು ಚೌರ್ಯವನ್ನು ಮಾಡಿದ್ದರೆ ಅದಕ್ಕೆ ಕಾರಣಳಾದ ನಾನೇ ಮಾಡಿದಂತಾಯಿತು.

೭೭. ಆದುದರಿಂದ ಅಧಿಕಧನವನ್ನು ರಾಜದಂಡವಾಗಿ ಕೊಡುವೆನು. ಈ ಬ್ರಾಹ್ಮಣೋತ್ತಮನನ್ನು ಬಿಟ್ಟುಬಿಡಿರಿ." ಇಂತೆಂದು ನುಡಿದು ಆತನೊಡನೆಯೇ ನೀನು ಮತ್ತೆ ಮನೆಯನ್ನು ಸೇರಿದೆ.

೭೮. ಮನೆಯನ್ನು ಶುಭ್ರಗೊಳಿಸಿ ಪುಷ್ಪಧೂಪಾದಿ ಸುಗಂಧಯುಕ್ತವನ್ನಾಗಿ ಮಾಡಿ ನೀನು ಆ ಬ್ರಾಹ್ಮಣನೊಡನೆ ಸ್ವೇಚ್ಛೆಯಾಗಿ ಉತ್ತಮರೀತಿಯಿಂದ ರಮಿಸುತ್ತಿದ್ದೆ.

ತಸ್ಯ ಪುಣ್ಯಸ್ಯ ಮಾಹಾತ್ಮ್ಯಾದ್ಗತಾ ಸ್ವರ್ಗಮನುತ್ತಮಂ ।
ಸಮುತ್ಪನ್ನಾ ಕುಲೇ ಪುತ್ರೀ ಬ್ರಾಹ್ಮಣಸ್ಯ ವಿಶೇಷತಃ ॥ ೭೯ ॥
ಶಾಪಾಚ್ಚೈವ ವಿಯೋಗಂ ತ್ವಂ ಪ್ರಾಪ್ತಾ ಪುತ್ರ್ಯಧುನಾ ಪರಂ ॥ ೮೦ ॥

ಪಿಂಗಲೋವಾಚ :—

ಪೂರ್ವಜನ್ಮನಿ ವೇಶ್ಯಾಽಹಂ ಜಾತಾ ದುಷ್ಕೃತಕಾರಿಣೀ ।
ಪರದ್ರವ್ಯಪರಾ ದುಷ್ಟಾ ಶೌಚಾಚಾರವಿವರ್ಜಿತಾ ।
ಇದಾನೀಂ ದುಃಖಿತಾ ಜಾತಾ ಪಿತೃಮಾತೃವಿಯೋಗತಃ ॥ ೮೧ ॥
ಪಾಣಿಗ್ರಹಣಧರ್ಮೇಣ ವರ್ಜಿತಾ ಶಾಪತಃ ಪ್ರಭೋ ।
ಪ್ರಸಾದಂ ಕುರು ಮೇ ವಿಪ್ರ ಕೋ ಭವಾನ್ಕಥಯಸ್ವ ಮೇ ॥ ೮೨ ॥
ಕಥಂ ಜನ್ಮ ನ ಮೇ ಭೂಯಾತ್ಕಥಂ ಮುಕ್ತಿರ್ಭವೇನ್ಮಮ ।
ಭವಬಂಧವಿನಿರ್ಮುಕ್ತಾ ಕಥಂ ಯಾಸ್ಯಾಮಿ ಸದ್ಗತಿಂ ॥ ೮೩ ॥

ವಿಪ್ರ ಉವಾಚ :—

ಧರ್ಮೋಽಹಂ ದ್ವಿಜರೂಪೇಣ ತ್ವಾಂ ಜಿಜ್ಞಾಸುರಿಹಾಗತಃ ।
ಮಮೋಪದೇಶಾತ್ತನ್ವಂಗಿ ಲಿಂಗಸ್ಯೈಕಸ್ಯ ದರ್ಶನಾತ್ ।
ಕ್ಷೇತ್ರಸ್ಯ ಚ ಪ್ರಸಾದಾತ್ತ್ವಂ ಪರಾಂ ಮುಕ್ತಿಮವಾಪ್ಸ್ಯಸಿ ॥ ೮೪ ॥

---

೭೯. ಆ ಪುಣ್ಯದ ಫಲವಾಗಿ ನೀನು ಸ್ವಲ್ಪಕಾಲ ಸ್ವರ್ಗಲೋಕಕ್ಕೆ ಹೋಗಿ ಪುನಃ ಭೂಲೋಕದಲ್ಲಿ ಬ್ರಾಹ್ಮಣೋತ್ತಮನ ಪುತ್ರಿಯಾಗಿ ಜನಿಸಿದೆ.

೮೦. ಮಗಳೆ! ಆ ಬ್ರಾಹ್ಮಣದಂಪತಿಗಳ ಶಾಪದಿಂದ ಈಗ ಈ ಮಹಾ ವಿಯೋಗವನ್ನೂ ತಾಳಿರುವೆ.

೮೧. ಪಿಂಗಲೆಯು ಹೇಳುತ್ತಾಳೆ :—ಹಿಂದಿನ ಜನ್ಮದಲ್ಲಿ ನಾನು ದುಷ್ಕಾರ್ಯ ಪ್ರಸಕ್ತಳೂ, ಪರದ್ರವ್ಯಾಪಹಾರಿಣಿಯೂ, ದುಷ್ಟಳೂ, ಶೌಚಾಚಾರಗಳಿಲ್ಲದವಳೂ ಆದ ವೇಶ್ಯೆಯಾಗಿದ್ದೆನು. ಅದರಿಂದ ಈಗ ನಾನು ತಂದೆತಾಯಿಯರನ್ನು ಕಳೆದು ಕೊಂಡು ಈ ದುಃಖಕ್ಕೊಳಗಾದೆನು.

೮೨. ಶಾಪದ ಕಾರಣದಿಂದ ನನಗೆ ಮದುವೆಯೂ ಇಲ್ಲದಂತಾಯಿತು. ಬ್ರಾಹ್ಮಣಶ್ರೇಷ್ಠನೆ! ನನ್ನಲ್ಲಿ ಕೃಪೆಮಾಡಿ ನೀನಾರೆಂಬುದನ್ನು ತಿಳಿಸು.

೮೩. ನನಗೆ ಮತ್ತೆ ಜನ್ಮವಿಲ್ಲದಂತಾಗುವುದು ಹೇಗೆ? ಹೇಗೆತಾನೆ ನಾನು ಮುಕ್ತಳಾಗುವೆನು? ಈ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದಿ ನಾನು ಸದ್ಗತಿಯನ್ನು ಹೇಗೆ ಪಡೆಯುವೆನು?

೮೪. ಬ್ರಾಹ್ಮಣನು ಹೇಳುತ್ತಾನೆ:—ನಾನೇ ಧರ್ಮನು. ಬ್ರಾಹ್ಮಣವೇಷ ದಿಂದ ನಿನ್ನ ಆಂತರ್ಯವನ್ನು ತಿಳಿಯಲು ಇಲ್ಲಿಗೆ ಬಂದೆನು. ಸುಂದರಿಯೆ! ನನ್ನ ಮಾತಿನಂತೆ ನೀನು ಶಿವಲಿಂಗವೊಂದನ್ನು ನೋಡುವುದರಿಂದಲೂ, ಕ್ಷೇತ್ರ ವೊಂದರ ಮಾಹಾತ್ಮ್ಯದಿಂದಲೂ ಉತ್ತಮವಾದ ಮೋಕ್ಷವನ್ನು ಹೊಂದುವೆ.

ಪಿಂಗಲೋವಾಚ :—

ಕಸ್ಮಿನ್ಕ್ಷೇತ್ರೇ ಪರಾ ಮುಕ್ತಿಃ ಕಸ್ಯ ಲಿಂಗಸ್ಯ ದರ್ಶನಾತ್ ।
ಲಭ್ಯತೇ ಸಹಸಾ ಧರ್ಮ ಏತದಿಚ್ಛಾಮಿ ವೇದಿತುಂ ॥ ೮೫ ॥

ಧರ್ಮ ಉವಾಚ :—

ಅಸ್ತಿ ಗುಪ್ತತಮಂ ಕ್ಷೇತ್ರಂ ಮಹಾಕಾಲವನಂ ಶುಭಂ ।
ಸರ್ವೇಷಾಮೇವ ಜಂತೂನಾಂ ಹೇತುರ್ಮೋಕ್ಷಸ್ಯ ಸರ್ವದಾ ॥ ೮೬ ॥
ತಸ್ಮಿನ್ಕ್ಷೇತ್ರವರೇ ಪುಣ್ಯೇ ಸ್ಥಾನೇ ಯೋಜನವಿಸ್ತೃತೇ ।
ಲಿಂಗಂ ಮೋಕ್ಷಪ್ರದಂ ಪುತ್ರಿ ಪೂರ್ವಸ್ಯಾಂ ದಿಶಿ ಸಂಸ್ಥಿತಂ ।
ತಸ್ಯ ದರ್ಶನಮಾತ್ರೇಣ ಮುಕ್ತಿಮಾಪ್ಸ್ಯಸಿ ಪಿಂಗಲೇ ॥ ೮೭ ॥
ತಸ್ಯ ತದ್ವಚನಂ ಶ್ರುತ್ವಾ ಧರ್ಮಸ್ಯ ಚ ಯಶಸ್ವಿನಿ ।
ಜಗಾಮ ಪಿಂಗಲಾ ತೂರ್ಣಂ ಯತ್ರ ತಲ್ಲಿಂಗಮುತ್ತಮಂ ।
ದದರ್ಶ ಪರಯಾ ಭಕ್ತ್ಯಾ ಪಸ್ಪರ್ಶ ಚ ಪುನಃ ಪುನಃ ॥ ೮೮ ॥
ದರ್ಶನಾತ್ತಸ್ಯ ಲಿಂಗಸ್ಯ ತಸ್ಮಿಂಲ್ಲಿಂಗೇ ಲಯಂ ಗತಾ ।
ಅತ್ರ ಚಾಽವಸರೇ ದೇವಾಃ ಪ್ರೋಚುಸ್ತತ್ರೈವ ಸಂಸ್ಥಿತಾಃ ॥ ೮೯ ॥

---

೮೫. ಪಿಂಗಲೆಯು ಹೇಳುತ್ತಾಳೆ:— ಎಲೈ ಧರ್ಮರಾಜನೆ! ಯಾವ ಕ್ಷೇತ್ರದಲ್ಲಿ ಯಾವ ಲಿಂಗದ ದರ್ಶನದಿಂದ ಶೀಘ್ರವಾಗಿ ನನಗೆ ಮೋಕ್ಷವು ಸಿಕ್ಕುವುದೆಂಬುದನ್ನು ತಿಳಿಯಲಪೇಕ್ಷಿಸುತ್ತೇನೆ.

೮೬. ಧರ್ಮನು ಹೇಳುತ್ತಾನೆ:—ಭೂಲೋಕದಲ್ಲಿ ಮಹಾಕಾಲವನವೆಂಬ ಗುಪ್ತಕ್ಷೇತ್ರವೊಂದಿರುವುದು. ಅದು ಯಾವಾಗಲೂ ಸಕಲಪ್ರಾಣಿಗಳ ಮೋಕ್ಷಕ್ಕೂ ಕಾರಣವಾಗಿರುವುದು.

೮೭. ಮಗಳೆ! ಯೋಜನವಿಸ್ತಾರದ ಪುಣ್ಯಪ್ರದವಾದ ಆ ಉತ್ತಮ ಕ್ಷೇತ್ರದ ಪೂರ್ವದಿಕ್ಕಿನಲ್ಲಿ ಮೋಕ್ಷಪ್ರದವಾದ ಲಿಂಗವೊಂದು ನೆಲಸಿರುವುದು. ಅದನ್ನು ನೋಡುವುದರಿಂದಲೇ ನೀನು ಮೋಕ್ಷವನ್ನು ಪಡೆಯುವೆ.

೮೮. ಪಾರ್ವತಿಯೆ! ಯಮಧರ್ಮನ ಆ ಮಾತುಗಳನ್ನು ಕೇಳಿದ ಕ್ಷಣದಲ್ಲಿಯೇ ಪಿಂಗಲೆಯು ವೇಗವಾಗಿ ಹೊರಟು ಆ ಉತ್ತಮಲಿಂಗವಿದ್ದಲ್ಲಿ ಸೇರಿ ಪರಮಭಕ್ತಿಯಿಂದ ಅದನ್ನು ನೋಡಿ ಪುನಃ ಪುನಃ ಮುಟ್ಟಿ ಸೇವಿಸಿದಳು.

೮೯. ಆ ಲಿಂಗವನ್ನು ನೋಡಿದ ಮಾತ್ರದಿಂದಲೇ ತಾನೂ ಅದರಲ್ಲಿಯೇ ಐಕ್ಯವನ್ನು ಹೊಂದಿ ಅದೃಶ್ಯಳಾದುದನ್ನು ಕಂಡು ಅಲ್ಲಿಯೇ ನಿಂತಿದ್ದ ದೇವತೆಗಳೆಲ್ಲರೂ ಇಂತೆಂದರು.

ಅನ್ಯಜನ್ಮನಿ ಪಾಪಿಷ್ಠಾ ಮುಕ್ತಾ ತ್ವಂ ಪಿಂಗಲೇಕ್ಷಣಾ ॥ ೯೦ ॥
ಅತೋ ಲೋಕೇಷು ವಿಖ್ಯಾತಃ ಪಿಂಗಲೇಶ್ವರಸಂಜ್ಞಕಃ ।
ಭವಿಷ್ಯತಿ ನ ಸಂದೇಹೋ ಮಹಾಪಾತಕನಾಶನಃ ॥ ೯೧ ॥
ದಿಶಿ ಪಶ್ಯಂತಿ ಯೇ ಗತ್ವಾ ಪೂರ್ವಸ್ಯಾಂ ಪಿಂಗಲೇಶ್ವರಂ ।
ತೇಷಾಂ ಶತಕ್ರತುಸ್ತುಷ್ಟಃ ಪೂಜಾಂ ಸಮ್ಯಗ್ವಿಧಾಸ್ಯತಿ ॥ ೯೨ ॥
ದೇವಾ ವಶ್ಯಾ ಭವಿಷ್ಯಂತಿ ಸ್ವರ್ಗಸ್ತೇಷಾಂ ನ ಸಂಶಯಃ ।
ಭವಿಷ್ಯತಿ ಚ ವಶಗಾ ನಗರೀ ಚಾಽಮರಾವತೀ ॥ ೯೩ ॥
ಧರ್ಮೋ ಧನೇನ ಸಹಿತಃ ಕುಲೇ ತೇಷಾಂ ನ ಪಶ್ಯತಿ ।
ಲೋಕೋ ಧರ್ಮೇಣ ಚರತಾಂ ವಶಗಃ ಸಂಭವಿಷ್ಯತಿ ।
ಪಿತೄಣಾಮಕ್ಷಯಾ ತೃಪ್ತಿರ್ಭವಿಷ್ಯತಿ ನ ಸಂಶಯಃ ॥ ೯೪ ॥
ಅಶ್ವಮೇಧಸಹಸ್ರೇಣ ಯತ್ಪುಣ್ಯಂ ಸಮುದಾಹೃತಂ ।
ತತ್ಸರ್ವಂ ಭವಿತಾ ಸಮ್ಯಕ್ಪಿಂಗಲೇಶ್ವರದರ್ಶನಾತ್ ॥ ೯೫ ॥
ಯಾನಿ ಲಿಂಗಾನಿ ಕ್ಷೇತ್ರೇಽಸ್ಮಿನ್ಗೋಪ್ಯಾನಿ ಪ್ರಕಟಾನಿ ಚ ।
ಪೂಜಿತಾನಿ ಭವಂತೀಹ ಪಿಂಗಲೇಶ್ವರದರ್ಶನಾತ್ ॥ ೯೬ ॥

---

೯೦. "ರಕ್ತನೇತ್ರೆಯಾದ ನೀನು ಪೂರ್ವಜನ್ಮದಲ್ಲಿ ಪಾತಕಿಯಾಗಿದ್ದರೂ ಇಲ್ಲಿ ಈ ಜನ್ಮದಲ್ಲಿ ಮೋಕ್ಷವನ್ನು ಹೊಂದಿದೆ.

೯೧. ಆದುದರಿಂದ ಈ ಮಹಾಲಿಂಗವು ಮುಂದೆ ಪಿಂಗಲೇಶ್ವರನೆಂದೇ ಪ್ರಖ್ಯಾತವಾಗಿ ಮಹಾಪಾತಕಗಳನ್ನೂ ನಾಶಗೊಳಿಸುವುದರಲ್ಲಿ ಸಂಶಯವಿಲ್ಲ.

೯೨-೯೩. ಯಾರು ಈ ಕ್ಷೇತ್ರದ ಪೂರ್ವದಿಕ್ಕಿಗೆ ಹೋಗಿ ಈ ಪಿಂಗಲೇಶ್ವರನನ್ನು ನೋಡುವರೊ, ಅವರಲ್ಲಿ ಮಹೇಂದ್ರನು ಸಂತುಷ್ಟನಾಗಿ ಪೂಜೆಯನ್ನು ಮಾಡುವನು. ಅವರಿಗೆ ದೇವತೆಗಳೂ ಆಜ್ಞಾಕಾರಿಗಳಾಗುವರು. ಸ್ವರ್ಗವೂ, ರಾಜಧಾನಿಯಾದ ಅಮರಾವತೀನಗರವೂ ವಶವಾಗುವುದರಲ್ಲಿ ಸಂದೇಹವಿಲ್ಲ.

೯೪. ಅವರ ಕುಲದಲ್ಲಿ ಧರ್ಮವೂ, ಐಶ್ವರ್ಯವೂ ಎಂದಿಗೂ ನಾಶವಾಗುವುದಿಲ್ಲ. ಧರ್ಮದಿಂದ ನಡೆಯುತ್ತಿರುವ ಅವರಿಗೆ ಲೋಕವೇ ವಶವಾಗುವುದು. ಅವರ ಧರ್ಮಾಚರಣೆಯಿಂದ ಪಿತೃಗಳಿಗೂ ಅಕ್ಷಯತೃಪ್ತಿಯುಂಟಾಗುವುದು.

೯೫. ಒಂದು ಸಾವಿರ ಅಶ್ವಮೇಧಯಜ್ಞಗಳನ್ನು ಮಾಡುವುದರಿಂದ ಯಾವ ಪುಣ್ಯವು ಲಭಿಸುವುದೆಂದು ಹೇಳಲ್ಪಟ್ಟಿರುವುದೊ, ಅದೆಲ್ಲವೂ ವಿಧಿಪೂರ್ವಕವಾದ ಪಿಂಗಲೇಶ್ವರನ ದರ್ಶನದಿಂದಲೇ ಲಭಿಸುವುದು.

೯೬. ಈ ಪಿಂಗಲೇಶ್ವರನೊಬ್ಬನನ್ನು ನೋಡಿ ಸೇವಿಸುವುದರಿಂದ ಈ ಮಹಾಕ್ಷೇತ್ರದಲ್ಲಿ ಎಷ್ಟು ಲಿಂಗಗಳು ಗುಪ್ತಗಳಾಗಿಯೂ, ಪ್ರಕಟಗಳಾಗಿಯೂ ಇರುವುವೊ, ಅವುಗಳೆಲ್ಲವನ್ನೂ ಸೇವಿಸಿದಂತಾಗುವುದು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪಿಂಗಲೇಶ್ವರದೇವಸ್ಯ ಶೃಣು ಕಾಯಾಽವರೋಹಣಂ ॥ ೯೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಪಿಂಗೇಲೆಶ್ವರಮಾಹಾತ್ಮ್ಯವರ್ಣನಂ"ನಾಮ್ನೈಕಾಽಶೀತಿತಮೋಽಧ್ಯಾಯಃ

---

೯೭. ದೇವಿಯೆ! ಇಂತು ನಿನಗೆ ಪಿಂಗಲೇಶ್ವರಮಹಾದೇವನ ಪ್ರಭಾವವನ್ನೊಳಗೊಂಡ ಪಾಪಪರಿಹಾರಕವಾದ ಕಥೆಯನ್ನು ಹೇಳಿದೆನು. ಇನ್ನು ಕಾಯಾವರೋಹಣೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಪಿಂಗಲೇಶ್ವರಮಾಹಾತ್ಮ್ಯವರ್ಣನ"ವೆಂಬ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವ್ಯಶೀತಿತಮೋಽಧ್ಯಾಯಃ

### ಕಾಯಾವರೋಹಣೇಶ್ವರಮಾಹಾತ್ಮ್ಯವರ್ಣನಂ

ಮಹಾದೇವ ಉವಾಚ :—

ಕಾಯಾಽವರೋಹಣಸ್ಯಾಽಪಿ ಉತ್ಪತ್ತಿಂ ಶೃಣು ಪಾರ್ವತಿ ।
ಯಸ್ಯಾಃ ಶ್ರವಣಮಾತ್ರೇಣ ನ ನರಃ ಕಾಯವಾನ್ ಭವೇತ್ ॥ ೧ ॥
ಬ್ರಹ್ಮಣಃ ಸೃಷ್ಟಿಕಾಮಸ್ಯ ಮನೋರ್ವೈವಸ್ವತೇಽಂತರೇ ।
ದಕ್ಷಸ್ತ್ವಜಾಯತಾಂಗುಷ್ಠಾದ್ದಕ್ಷಿಣಾತ್ಸ ಪ್ರಜಾಪತಿಃ ॥ ೨ ॥
ವಾಮಾದಜಾಯತಾಂಗುಷ್ಠಾದ್ಭಾರ್ಯಾ ತಸ್ಯ ಮಹಾತ್ಮನಃ ।
ತಸ್ಯಾಂ ಪಂಚಾಶತಂ ಕನ್ಯಾಃ ಸ ಏವಾಽಜನಯತ್ಪ್ರಭುಃ ॥ ೩ ॥
ತಾಃ ಸರ್ವಾಶ್ಚಾಽನವದ್ಯಾಂಗೀಃ ಕನ್ಯಾಃ ಕಮಲಲೋಚನಾಃ ।
ಪುತ್ರಿಕಾಃ ಸ್ಥಾಪಯಾಮಾಸ ನಷ್ಟಪುತ್ರಃ ಪ್ರಜಾಪತಿಃ ॥ ೪ ॥
ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ದಿವ್ಯೇನ ವಿಧಿನಾ ದೇವಿ ಸಪ್ತವಿಂಶತಿಮಿಂದವೇ ॥ ೫ ॥

---

### ಕನ್ನಡದ ಅನುವಾದ

### ಕಾಯಾವರೋಹಣೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ದೇವಿಯೆ ! ಇನ್ನು ಕಾಯಾವರೋಹಣೇಶ್ವರನು ಉದ್ಭವಿಸಿದ ಕಥೆಯನ್ನು ಕೇಳು. ಅದನ್ನು ಕೇಳಿದಮಾತ್ರದಿಂದಲೇ ನರನು ಮತ್ತೆ ದೇಹವನ್ನು ಧರಿಸುವುದಿಲ್ಲ.

೨. ವೈವಸ್ವತಮನ್ವಂತರದ ಆದಿಯಲ್ಲಿ ಲೋಕವನ್ನು ಸೃಷ್ಟಿಮಾಡಲೆಳಸಿದ ಬ್ರಹ್ಮದೇವನ ಬಲಗೈಯ ಹೆಬ್ಬೆರಳಿನಿಂದ ದಕ್ಷನು ಹುಟ್ಟಿ ಪ್ರಜಾಪತಿಯಾದನು.

೩. ಎಡಗೈಯ ಹೆಬ್ಬೆರಳಿನಿಂದ ಆ ಮಹಾತ್ಮನಿಗೆ ತಕ್ಕ ಹೆಂಡತಿಯುಂಟಾದಳು. ಪ್ರಜೇಶ್ವರನಾದ ಆತನು ಆಕೆಯಲ್ಲಿ ಐವತ್ತುಮಂದಿ ಕನ್ಯೆಯರನ್ನುಪಡೆದನು.

೪. ಆ ಎಲ್ಲ ಕನ್ಯೆಯರೂ ನಿರ್ದೋಷದೇಹಗಳುಳ್ಳವರೂ, ಕಮಲನೇತ್ರೆಯರೂ ಆಗಿದ್ದರು. ಗಂಡುಮಕ್ಕಳಿಲ್ಲದ ಆ ದಕ್ಷನು ಅವರನ್ನೇ ಪುತ್ರರನ್ನಾಗಿ ಭಾವಿಸಿದ್ದನು.

೫. ಹತ್ತುಮಕ್ಕಳನ್ನು ಯಮಧರ್ಮನಿಗೂ, ಕಶ್ಯಪನಿಗೆ ಹದಿಮೂರು ಕನ್ಯೆಯರನ್ನೂ ಕೊಟ್ಟು ಇಪ್ಪತ್ತೇಳು ಕನ್ಯೆಯರನ್ನು ದೈವವಿಧಿಯಿಂದ ಚಂದ್ರನಿಗೆ ಮದುವೆ ಮಾಡಿದನು.

ರೋಹಿಣೀ ವಲ್ಲಭಾ ಜಾತಾ ತಸ್ಯ ಚಂದ್ರಸ್ಯ ಸರ್ವದಾ ।
ಷಡ್ವಿಂಶತಿಕೃತೇ ಚಂದ್ರಃ ಶಪ್ತೋ ದಕ್ಷೇಣ ಪಾರ್ವತಿ ॥ ೬ ॥
ಚಂದ್ರೇಣಾಽಪಿ ತಥಾ ಶಪ್ತೋ ದಕ್ಷಃ ಪ್ರಾಚೇತಸಃ ಕೃತಃ ।
ಅಯಜತ್ಸೋಽಶ್ವಮೇಧೇನ ಭೂತ್ವಾ ಪ್ರಾಚೇತಸಾತ್ಮಜಃ ॥ ೭ ॥
ನಾಽಽಮಂತ್ರಿತೋಽಹಂ ಮೋಹೇನ ದಕ್ಷೇಣ ಪರ್ವತಾತ್ಮಜೇ ।
ತತ್ರ ದೇವನಿಕಾಯಾನಾಂ ಯಜ್ಞಭಾಗಾನಶೇಷತಃ ॥ ೮ ॥
ಹವ್ಯವಾಹಸ್ತದಾಯುಕ್ತೋ ವಹನ್ಮಂತ್ರೈಃ ಸವಿಾರಿತಃ ।
ತ್ವಯಾ ದೃಷ್ಟೋ ವಿಶಾಲಾಕ್ಷಿ ನಿರಾಲಂಬೇಽಂಬರೇ ಸ್ಥಿತಃ ॥ ೯ ॥
ಸ್ಮರಂತ್ಯಾ ಪೂರ್ವವೈರಂ ತು ವಿಜ್ಞಪ್ತೋಽಹಂ ತ್ವಯಾ ಪ್ರಿಯೇ ।
ತ್ವಂ ದೇವಃ ಸರ್ವದೇವಾನಾಂ ಗತಿಶ್ಚ ಶರಣಂ ತಥಾ ॥ ೧೦ ॥
ತ್ವಂ ಯಜ್ಞಸ್ತ್ವಂ ವಷಟ್ಕಾರೋ ಹೋತಾಽಧ್ವರ್ಯುಸ್ತ್ವಮೇವ ಚ ।
ತ್ವಯಾ ವಿನಾ ಕಥಂ ಯಜ್ಞೋ ವರ್ತತೇ ಸರ್ವದೇವಪ ॥ ೧೧ ॥
ದೇವಾನಾಂ ಭಾಗಧೇಯಾನಿ ವಹತ್ಯಗ್ನಿರಯಂ ಭಯಾತ್ ।
ಸ ಗರ್ವಶ್ಚಾಽವಲಿಪ್ತಶ್ಚ ದಕ್ಷಃ ಪ್ರಾಚೇತಸಃ ಕಿಲ ॥ ೧೨ ॥

---

೬. ಪಾರ್ವತಿಯೆ ! ಅವರಲ್ಲೆಲ್ಲ ರೋಹಿಣಿಯೇ ಚಂದ್ರನಿಗೆ ಪರಮಪ್ರಿಯಳಾದಳು. ಉದಾಸೀನದಿಂದ ಕಾಣಲ್ಪಡುತ್ತಿದ್ದ ಇತರ ಇಪ್ಪತ್ತಾರು ಪತ್ನಿಯರ ಕಾರಣದಿಂದ ದಕ್ಷನು ಚಂದ್ರನಿಗೆ ಶಾಪವನ್ನಿತ್ತನು.

೭. ಚಂದ್ರನೂ ದಕ್ಷನಿಗೆ ಶಾಪವನ್ನಿತ್ತು ಪ್ರಚೇತನಿಗೆ ಮಗನಾಗಿ ಹುಟ್ಟುವಂತೆ ಮಾಡಿದನು. ಇಂತು ಹುಟ್ಟಿದ ದಕ್ಷಬ್ರಹ್ಮನು ಅಶ್ವಮೇಧಮಹಾಯಜ್ಞವನ್ನು ಮಾಡಿದನು.

೮–೯. ಪರ್ವತರಾಜಕನ್ಯೆಯೆ ! ಬುದ್ಧಿಮೋಹದಿಂದ ದಕ್ಷನು ನನ್ನನ್ನು ಕರೆಯಲಿಲ್ಲ. ಆಗ ಮಂತ್ರಗಳಿಂದ ಆಹೂತನಾಗಿ ದೇವಸಮೂಹಗಳಿಗೆಲ್ಲ ಹವಿರ್ಭಾಗಗಳನ್ನು ತೆಗೆದುಕೊಂಡು ಆಕಾಶದಲ್ಲಿ ನಿಂತಿದ್ದ ಅಗ್ನಿಯನ್ನು ನೀನು ಕಂಡೆ.

೧೦. ಪೂರ್ವವೈರವನ್ನು ನೆನೆದು ನೀನು ನನ್ನಲ್ಲಿ ವಿಜ್ಞಾಪಿಸಿಕೊಂಡೆ. ನೀನೇ ಸಕಲದೇವತೆಗಳಿಗೂ ಗತಿದಾಯಕನು. ಅವರಿಗೆ ಆರಾಧ್ಯದೈವವೂ ಶರಣ್ಯನೂ ನೀನೇ ಆಗಿರುವೆ.

೧೧. ನೀನೇ ಯಜ್ಞವು. ವಷಟ್ಕಾರವು. ಹೋತೃವು. ಅಧ್ವರ್ಯುವು. ಸರ್ವದೇವತೆಗಳ ಪಾಲಕನಾದ ನೀನಿಲ್ಲದೆ ಈ ಯಜ್ಞವು ಹೇಗೆ ನಡೆಯುತ್ತಿರುವುದು ?

೧೨. ಈ ಅಗ್ನಿಯು ಭಯದಿಂದ ಕೂಡಿದವನಾಗಿ ದೇವತೆಗಳ ಹವಿರ್ಭಾಗ

ಅನುಸ್ಮರನ್ ಪೂರ್ವವೈರಂ ನೈವ ದಾಸ್ಯತ್ಯಶಾಸಿತಃ ।
ಕಾಯಹೀನಸ್ಚ ಕರ್ತವ್ಯೋ ದಕ್ಷೋ ವಹ್ನಿಸ್ತಥೈವ ಚ ॥ ೧೩ ॥
ಯೇ ಚ ಯಜ್ಞೇ ಸಮಾನೀತಾ ದೇವಾ ದಕ್ಷಸ್ಯ ಶಂಕರ ।
ತೇ ಸರ್ವೇ ಕಾಯರಹಿತಾಃ ಕಾರ್ಯಾಸ್ತ್ರಿಪುರಸೂದನ ॥ ೧೪ ॥
ಏವಮುಕ್ತೇ ತ್ವಯಾ ದೇವಿ ಮಯೋಪ್ಯುಕ್ತಂ ವರಾನನೇ ।
ಪೂರ್ವಜನ್ಮನಿ ದಕ್ಷೋಽಯಂ ಪಿತಾ ತವ ಶುಚಿಸ್ಮಿತೇ ॥ ೧೫ ॥
ವಹ್ನಿಶ್ಚಾದೇಶಕಾರೀಚ ದೇವಾಃ ಕ್ರೀಡನಕಾಃ ಪ್ರಿಯೇ ।
ಮದೀಯಂ ವಚನಂ ಶ್ರುತ್ವಾ ಕೃತಃ ಕ್ರೋಧಸ್ತ್ವಯಾ ಪ್ರಿಯೇ ॥ ೧೬ ॥
ಲಲಾಟೇ ಭ್ರುಕುಟೀಂ ಕೃತ್ವಾ ಪ್ರೋಚ್ಛ್ವಸಂತ್ಯಾ ಪುನಃ ಪುನಃ ।
ಕ್ರೋಧಾತ್ಕರೇಣ ನಾಸಾಽಗ್ರಂ ಮರ್ದಿತಂ ಬಹುಶಸ್ತದಾ ॥ ೧೭ ॥
ತಸ್ಮಿನ್ ಸಂಮರ್ದ್ಯಮಾನೇ ತು ನಾಸಾಗ್ರೇ ಪರ್ವತಾತ್ಮಜೇ ।
ಜಾತಾಸ್ತ್ರೀಭ್ರುಕುಟೀವಕ್ತ್ರಾ ಚತುರ್ದಂಷ್ಟ್ರಾ ತ್ರಿಲೋಚನಾ ॥ ೧೮ ॥

---

ಗಳನ್ನೊಯ್ಯುತ್ತಿರುವನು. ಪ್ರಚೇತಪುತ್ರನಾದ ದಕ್ಷನು ಗರ್ವದಿಂದ ದೂಷಿತನಾಗಿರುವನು.

೧೩. ಹಿಂದಿನ ವೈರವನ್ನೇ ನೆನೆದು ನಿನಗೆ ಯಜ್ಞಭಾಗವನ್ನು ಕೊಡುವುದಿಲ್ಲ. ಆಗ ಆತನಿಗೆ ತಕ್ಕ ಶಾಸನವಾಗಲಿಲ್ಲ. ಈಗ ದಕ್ಷನೂ, ಅಗ್ನಿಯೂ ದೇಹವಿಲ್ಲದವರಂತೆ ಮಾಡಬೇಕು.

೧೪. ತ್ರಿಪುರನಾಶಕನೆ! ಹಾಗೆಯೇ ಈ ದಕ್ಷನ ಯಜ್ಞಕ್ಕೆ ಕರೆಯಲ್ಪಟ್ಟಿರುವ ದೇವತೆಗಳು ಯಾರಿರುವರೊ, ಅವರೆಲ್ಲರನ್ನೂ ದೇಹರಹಿತರನ್ನಾಗಿ ಮಾಡಬೇಕು.

೧೫. ದೇವಿಯೆ! ಇಂತೆಂದ ನಿನಗೆ ನಾನೆಂದೆನು. "ನಗೆಮೊಗದವಳೆ! ಹಿಂದಿನ ಜನ್ಮದಲ್ಲಿ ಈತನು ನಿನಗೆ ತಂದೆಯಾಗಿದ್ದನು.

೧೬. ಅಗ್ನಿಯು ನಿನ್ನ ಅಪ್ಪಣೆಯಂತೆ ನಡೆಯುವ ಸೇವಕನಾಗಿದ್ದನು. ದೇವತೆಗಳು ಆಟದ ಗೆಳೆಯರಾಗಿದ್ದರು." ನನ್ನ ಈ ಮಾತಿಗೆ ನೀನು ಕೋಪಗೊಂಡವಳಾದೆ.

೧೭. ಹಣೆಯಲ್ಲಿ ಹುಬ್ಬನ್ನು ಗಂಟಿಕ್ಕಿ ಮತ್ತೆ ಮತ್ತೆ ದೀರ್ಘಶ್ವಾಸಗಳನ್ನು ಬಿಡುತ್ತ ಕೋಪದಿಂದ ಅನೇಕವೇಳೆ ಮೂಗಿನ ತುದಿಯನ್ನುಜ್ಜಿದೆ.

೧೮. ಪರ್ವತಕುಮಾರಿಯೆ! ಇಂತು ಉಜ್ಜಲ್ಪಟ್ಟ ನಾಸಿಕದ ತುದಿಯಿಂದ ಹುಬ್ಬುಗಂಟಿಟ್ಟವಳೂ, ನಾಲ್ಕುಕೋರೆಹಲ್ಲುಗಳುಳ್ಳವಳೂ, ಮೂರುಕಣ್ಣಿನವಳೂ ಆದ ಹೆಂಗಸು ಹುಟ್ಟಿದಳು.

ಬದ್ಧಗೋಧಾಂಗುಲಿತ್ರಾ ಚ ಕವಚಾಬದ್ಧಮೇಖಲಾ ।
ಸ ಖಡ್ಗಾ ಸಧನುಷ್ಕಾ ಚ ಸತೂಣಾ ಸ ಪತಾಕಿನೀ ॥ ೧೯ ॥
ಸಹಸ್ರಾಸ್ಯಾ ಶತಭುಜಾ ಸಹಸ್ರಚರಣೋದರೀ ।
ಪ್ರತಿಕೂಲೈಃ ಪದೈರ್ದೇವಿ ಕಂಪಯಂತೀ ತಥಾ ಭುವಂ ॥ ೨೦ ॥
ಕೃತಂ ನಾಮ ತ್ವಯಾ ದೇವಿ ತಾಂ ದೃಷ್ಟ್ವಾ ಚ ತಮೋಮಯೀಂ ।
ಭದ್ರಕಾಲೀ ಚ ಮಾಯಾ ಚ ಸರ್ವಲೋಕನಮಸ್ಕೃತೇ ॥ ೨೧ ॥
ಮಯಾ ಸೃಷ್ಟಸ್ತು ಪುರುಷಸ್ತಾದೃಶೋ ಲೋಮಹರ್ಷಣಃ ।
ಸ ಚಾಽಪಿ ಪ್ರಾಂಜಲಿರ್ಭೂತ್ವಾ ಮಾಮುವಾಚ ಪುನಃ ಪುನಃ ।
ಆಜ್ಞಾಪಯ ಸುರೇಶಾನ ಕಿಂಕರೋಮಿ ಜಗತ್ಪ್ರಭೋ ॥ ೨೨ ॥
ತತೋ ದೇವಿ ಮಯಾಜ್ಞಪ್ತೋ ಭಾವಂ ಜ್ಞಾತ್ವಾ ತ್ವದೀಯಕಂ ।
ಕೃತ್ವಾ ನಾಮ ಮನೋಜ್ಞಂ ತು ವೀರಭದ್ರ ಇತಿ ಸ್ಮೃತಃ ॥ ೨೩ ॥
ವೀರಭದ್ರ ಮಮಾದೇಶಾದ್ಭದ್ರಕಾಲ್ಯಾ ಸಹಾಽನಯಾ ।
ಪ್ರಾಚೇತಸಾತ್ಮಜಂ ದಕ್ಷಂ ಸ ಗರ್ವಂ ಸಹದೈವತಂ ॥ ೨೪ ॥
ವಿಧ್ವಂಸಯ ಗಣಾಧ್ಯಕ್ಷ ಸ ಯಜ್ಞಂ ಸಪರಿಗ್ರಹಂ ।
ದತ್ತಂ ಮಯಾ ಮಹತ್ಸೈನ್ಯಮಸಂಖ್ಯೇಯಗುಣಸ್ಯ ಚ ॥ ೨೫ ॥

---

೧೯. ಅವಳು ಮುಂಗೈಬೆರಳುಗಳಿಗೆ ಕೈಚೀಲಗಳನ್ನೂ, ದೇಹಕ್ಕೆ ಕವಚವನ್ನೂ, ಕತ್ತಿ, ಬಿಲ್ಲು, ಬತ್ತಳಿಕೆ, ಪತಾಕೆಗಳನ್ನೂ ತಾಳಿದ್ದಳು.

೨೦. ಸಾವಿರಾರು ಮುಖಗಳೂ, ಪಾದಗಳೂ, ಹೊಟ್ಟೆಗಳೂ ಉಳ್ಳ ಆಕೆಯು ನೂರಾರು ಬಾಹುಗಳಿಂದ ಆಯುಧಗಳನ್ನು ಹಿಡಿದು ಹಿಂದಕ್ಕೆ ಇಡುವ ಹೆಜ್ಜೆಗಳಿಂದ ಭೂಮಿಯನ್ನು ನಡುಗಿಸುತ್ತಿದ್ದಳು.

೨೧. ತಮೋಮಯಾಕಾರವುಳ್ಳ ಆ ವ್ಯಕ್ತಿಯನ್ನು ಕಂಡು ಸಕಲಲೋಕವಂದಿತೆಯಾದ ನೀನು ಆಕೆಗೆ ಭದ್ರಕಾಳಿಯೆಂದೂ, ಮಾಯೆಯೆಂದೂ ಹೆಸರನ್ನಿಟ್ಟೆ.

೨೨. ನಾನೂ ಹಾಗೆಯೇ ರೋಮಾಂಚವನ್ನುಂಟುಮಾಡುವ ಪುರುಷನೊಬ್ಬನನ್ನು ಸೃಜಿಸಿದೆನು. ಅವನು ಕೈಗಳನ್ನು ಜೋಡಿಸಿಕೊಂಡು ನನ್ನನ್ನು ಮತ್ತೆ ಮತ್ತೆ ವಿಜ್ಞಾಪಿಸಿಕೊಂಡನು. "ಸುರೇಶ್ವರನೆ! ಲೋಕನಾಥನೆ! ನಾನು ಈಗೇನುಮಾಡಬೇಕೆಂಬುದನ್ನು ಅಪ್ಪಣೆ ಮಾಡು."

೨೩. ದೇವಿಯೆ! ಆಗ ನಾನು ನಿನ್ನ ಅಭಿಪ್ರಾಯವನ್ನು ತಿಳಿದುಕೊಂಡೇ ಆತನಿಗೆ ವೀರಭದ್ರನೆಂಬ ಸುಂದರವಾದ ಹೆಸರನ್ನಿತ್ತು ಆಜ್ಞಾಪಿಸಿದೆನು.

೨೪–೨೫. "ಎಲೈ ವೀರಭದ್ರನೆ! ನನ್ನ ಅಪ್ಪಣೆಯನ್ನು ಕೇಳು. ನೀನು ಈ ಭದ್ರಕಾಳಿಯೊಡನೆ ಹೋಗಿ ಪ್ರಚೇತನ ಮಗನಾದ ದಕ್ಷಪ್ರಜೇಶ್ವರನ ಗರ್ವವನ್ನು ಮುರಿದು ಅವನ ಯಜ್ಞದ ದೇವತೆಗಳನ್ನೂ, ಯಜ್ಞವನ್ನೂ, ಪರಿಕರಗಳನ್ನೂ

ತ್ವಯಾಽಪಿ ಭದ್ರಕಾಲ್ಯಾಸ್ತು ದತ್ತಂ ಸೈನ್ಯಂ ಭಯಾವಹಂ ।
ಕಪಾಲಕರ್ತ್ರಿಕಾಹಸ್ತಂ ಮಾತೄಣಾಂ ಗಣಮಕ್ಷಯಂ ॥ ೨೬ ॥
ತತಸ್ತೌ ತೇನ ಸೈನ್ಯೇನ ಮಹತಾತಿಸಮಾವೃತೌ ।
ಜಗ್ಮತುಸ್ತತ್ರ ಯತ್ರಾಸ್ತೇ ದಕ್ಷಃ ಪ್ರಾಚೇತಸೋಽಯಜತ್ ॥ ೨೭ ॥
ದೇವೈಃ ಪರಿವೃತೋ ದೇವಿ ಸದಸ್ಯೈರ್ಬ್ರಾಹ್ಮಣೈಃ ಸಹ ।
ತತೋ ದೇವಾಃ ಸುರುದ್ಧಾಸ್ತೇ ತೇನ ಸೈನ್ಯೇನ ಪಾರ್ವತಿ ।
ವಿಶ್ರಬ್ಧಾ ಮಂತ್ರಪೂತಂ ತು ಪಿಬಂತಃ ಸೋಮಮುದ್ಧ್ವರೇ ॥ ೨೮ ॥
ತ್ರಿನೇತ್ರೇಣ ತ್ರಿಶೂಲೇನ ತ್ರಿದಶಾಧಿಪ ಈಶ್ವರಃ ।
ತ್ರಾಸಿತಃ ಸಹಸಾ ಶಕ್ರೋ ಗಣೇನಾಧ್ವರಮಧ್ಯಗಃ ॥ ೨೯ ॥
ಯಮಾಖ್ಯೇನ ಗಣೇನೈವ ಯಮಕಲ್ಪಪ್ರಭೇಣ ಚ ।
ಸೋಮಪಾನೇ ಪ್ರಸಕ್ತಶ್ಚ ಯಮಶ್ಚಾಕರ್ಷಿತೋಽಧ್ವರೇ ॥ ೩೦ ॥
ಪಾಶೇನ ವರುಣೋ ಬದ್ಧಃ ಪಾಶೇನ ಗಣಪೇನ ತು ।
ಪಶ್ಚಿಮಾಶಾಧಿಪೋ ವೀರಃ ಪ್ರಾಣೇನ ಪರಮೇಶ್ವರಿ ॥ ೩೧ ॥

---

ಧ್ವಂಸಮಾಡಬೇಕು. ಗಣಾಧ್ಯಕ್ಷನೂ, ಸದ್ಗುಣಭರಿತನೂ ಆದ ನಿನಗೆ ನಾನು ಮಹಾಸೈನ್ಯವನ್ನು ಸಹಾಯವಾಗಿ ಕೊಡುವೆನು.''

೨೬. ದೇವಿಯೆ! ನೀನೂ ಭದ್ರಕಾಳಿಗೆ ಮಹಾಭಯಂಕರವಾದ ಸೈನ್ಯವನ್ನಿತ್ತೆ. ಅಸಂಖ್ಯೇಯರಾದ ಆ ಮಾತೃಗಣದವರು ಕಪಾಲಗಳನ್ನೂ, ಕತ್ತರಿಗಳನ್ನೂ ಕೈಗಳಲ್ಲಿ ಹಿಡಿದಿದ್ದರು.

೨೭. ಆಗ ವೀರಭದ್ರ ಭದ್ರಕಾಳಿಯರಿಬ್ಬರೂ ತಮ್ಮ ತಮ್ಮ ಸೈನ್ಯಗಳಿಂದ ಪರಿವಾರಿತರಾಗಿ ದಕ್ಷನು ಯಜ್ಞವನ್ನು ಮಾಡುತ್ತಿದ್ದ ಪ್ರದೇಶಕ್ಕೆ ಹೊರಟರು.

೨೮. ಆತನು ದೇವತೆಗಳಿಂದಲೂ, ಸಭಾಸದರಿಂದಲೂ, ಬ್ರಾಹ್ಮಣರಿಂದಲೂ ಪರಿವೃತನಾಗಿದ್ದನು. ಪಾರ್ವತಿಯೆ! ಆಗ ಆ ಯಜ್ಞದಲ್ಲಿ ಮಂತ್ರಪೂತವಾದ ಸೋಮರಸವನ್ನು ಪಾನಮಾಡುತ್ತಿದ್ದ ದೇವತೆಗಳೆಲ್ಲರನ್ನೂ ಗಣಸೈನ್ಯವು ನಿರೋಧಿಸಿ ಚೆದುರಿಸತೊಡಗಿತು.

೨೯–೩೦. ದೇವತೆಗಳಿಗೆ ಒಡೆಯನಾದ ಮಹೇಂದ್ರನನ್ನು ಯಜ್ಞಮಂಟಪ ಮಧ್ಯದಲ್ಲಿರಲು, ಒಬ್ಬ ಗಣನಾಯಕನು ಮೂರು ಮುಳ್ಳಿನ ತ್ರಿಶೂಲದಿಂದ ಅವನನ್ನು ತಿವಿದನು. ಯಮನಿಗೆ ಸಮಾನನಾದ ಪ್ರಭಾವಂತನಾದ ಯಮನೆಂಬ ಗಣಾಧ್ಯಕ್ಷನೇ ಸೋಮಪಾನದಲ್ಲಿ ಆಸಕ್ತನಾಗಿದ್ದ ಯಮನನ್ನು ಸೆಳೆದುಕೊಂಡು ಹೋದನು.

೩೧. ಮಹೇಶ್ವರಿಯೆ! ಪಾಶನೆಂಬ ಗಣಪತಿಯು ಪ್ರಾಣಪಾಶಗಳಿಂದ ಪಶ್ಚಿಮದಿಕ್ಕಿಗೆ ಅಧಿದೇವತೆಯಾದ ವರುಣನನ್ನು ಬಿಗಿದುಹಾಕಿದನು.

ತಾಡಿತೋಽನಿಲ ಏವಾಽಥ ಉತ್ತರೇ ನರವಾಹನಃ ।
ಉತ್ತರಾಶಾಧಿಪೋ ದೇವಿ ನಿಧಾನ್ಯೈಃ ಸಹಿತೋಽಧ್ವರೇ ।
ವೀರಭದ್ರನಿಯುಕ್ತಾಸ್ತೇ ಚಕ್ರುರ್ಯುದ್ಧಂ ಸುದಾರುಣಂ ॥ ೩೨ ॥
ಅಥ ಯುದ್ಧಂ ಚಕಾರೋಚ್ಚೈರ್ಭದ್ರಕಾಲೀ ಭಯಾವಹಾ ।
ವಿಕರಾಲೀ ಮಹಾಕಾಲೀ ಕಾಲಿಕಾ ಕಲಶೋದರೀ ॥ ೩೩ ॥
ಪ್ರಜ್ವಾಲಜ್ವಲನಾಕಾರಾ ಶುಷ್ಕಮಾಂಸಾಽತಿಭೈರವಾ ।
ಏತಾಶ್ಚಾಽನ್ಯಾಶ್ಚ ಶತಶೋ ನರಮಾಲಾವಿಭೂಷಣಾಃ ।
ಕಪಾಲಕರ್ತ್ರಿಕಾಹಸ್ತಾ ಜಘ್ನುರ್ದೇವಗಣಾಂಸ್ತದಾ ॥ ೩೪ ॥
ಇತಿ ಮಾತೃಗಣಂ ಕ್ರುದ್ಧಂ ಮರ್ದಯಂತಂ ಸುರಾಂಸ್ತದಾ ।
ದೃಷ್ಟ್ವಾಽಭ್ಯುಪಗತಾ ದೇವಾಸ್ತುಷಿತಾ ಯುದ್ಧಲಾಲಸಾಃ ॥ ೩೫ ॥
ಕೇಚಿಚ್ಚ ಚಿಕ್ಷಿಪುಃ ಶಕ್ತೀಃ ಕೇಚಿತ್ಪ್ರಾಸಾಂಸ್ತಥಾಽಪರೇ ।
ಕೇಚಿಚ್ಚ ತೋಮರೈಸ್ತೀಕ್ಷ್ಣೈಃ ಕೇಚಿತ್ ಖಡ್ಗೈಶ್ಚ ಪಟ್ಟಿಶೈಃ ॥ ೩೬ ॥
ಅರ್ದಿತೋ ಮಾತೃಸಂಘಸ್ತು ಪೀಡಿತಾಃ ಪ್ರಮಥಾ ಯದಾ ।
ಭದ್ರಕಾಲೀ ತದಾ ಕ್ರುದ್ಧಾ ಗದಯಾ ಶರವೃಷ್ಟಿಭಿಃ ॥ ೩೭ ॥

---

೩೨. ಹಾಗೆಯೇ ವಾಯುವೂ, ಉತ್ತರದಲ್ಲಿ ನರವಾಹನನಾದ ಕುಬೇರನೂ ಪೆಟ್ಟುಗಳನ್ನು ತಿಂದರು. ಉತ್ತರದಿಕ್ಕಿಗೆ ಅಧಿಪತಿಯಾದ ಆತನು ತನ್ನ ನವನಿಧಿಗಳೊಡನೆ ಬಹಳವಾಗಿ ಸಂಕಟಗೊಂಡನು. ಇಂತು ವೀರಭದ್ರನಿಂದ ಆಜ್ಞಪ್ತರಾದ ಗಣನಾಯಕರು ಭಯಂಕರವಾದ ಯುದ್ಧವನ್ನು ಮಾಡಿದರು.

೩೩–೩೪. ಅಲ್ಲದೆ ಭದ್ರಕಾಳಿಯೂ, ದೇವತೆಗಳಿಗೆ ಭಯವನ್ನುಂಟು ಮಾಡುತ್ತ ಮಹಾಯುದ್ಧದಲ್ಲಿ ತೊಡಗಿದಳು. ವಿಕರಾಳಿ, ಮಹಾಕಾಳಿ, ಕಾಳಿ, ಕಳಶೋದರಿ, ಪ್ರಜ್ವಾಲಾ, ಜ್ವಲನಾಕಾರಾ, ಶುಷ್ಕಮಾಂಸಾ, ಅತಿಭೈರವಾ—ಮೊದಲಾದ ನೂರಾರು ಮಾತೃಗಣಗಳೂ ನರದೇಹಗಳ ಮಾಲೆಗಳಿಂದಲಂಕೃತರಾಗಿ ಕಪಾಲ ಮತ್ತು ಕತ್ತರಿಗಳನ್ನು ಹಿಡಿದು ದೇವಸಮೂಹಗಳನ್ನು ಕೊಲ್ಲ ತೊಡಗಿದರು.

೩೫–೩೬. ಇಂತು ಮಾತೃಗಣವು ಕೋಪಗೊಂಡು ದೇವಸೈನ್ಯವನ್ನು ಸದೆಬಡಿಯುವುದನ್ನು ಕಂಡು ಯುದ್ಧದುರ್ಮದರಾದ ತುಷಿತರೆಂಬ ದೇವತೆಗಳೂ ಬಂದರು. ಕೆಲವರು ಶಕ್ತ್ಯಾಯುಧಗಳನ್ನೆಸೆದರು. ಹಲವರು ಪ್ರಾಸಗಳನ್ನು ಬೀಸಿದರು. ಕೆಲವರು ಮೊನಚಾದ ತೋಮರಗಳಿಂದಲೂ, ಖಡ್ಗಗಳಿಂದಲೂ, ಪಟ್ಟಿಶಗಳಿಂದಲೂ ಮಾತೃಸಮೂಹವನ್ನು ಹೊಡೆದರು.

೩೭. ಮಾತೃಗಣವು ಮರ್ದಿತವಾಗುವುದನ್ನೂ, ಪ್ರಮಥರು ಪೀಡಿತರಾಗಿರುವುದನ್ನೂ ಕಂಡು ಭದ್ರಕಾಳಿಯು ಕ್ರುದ್ಧಳಾಗಿ ಗದೆಯನ್ನು ಬೀಸುತ್ತ ಬಾಣಗಳ ಮಳೆಯನ್ನೇ ಕರೆಯುತ್ತಿದ್ದಳು.

ಖಡ್ಗಾದಿಭಿಃ ಷಡರ್ಕಾಂಶುಃ ಪೀಡಯಾಮಾಸ ಸಂಯುಗೇ ।
ಭಗಸ್ಯ ನೇತ್ರೇ ಪೂಷ್ಣಸ್ತು ದಶನಾಃ ಸ್ಪದಿತಾ ಮುಖಾತ್ ॥ ೩೮ ॥
ಕರಾನ್ದಿಸಕರಸ್ಯೈವ ಚರಣೌ ಭಾಸ್ಕರಸ್ಯ ಚ ।
ಮುಸಲೇನ ಹತಾ ಯೇಽಷ್ಟೌ ವಸವೋ ರಣಕೋವಿದಾಃ ॥ ೩೯ ॥
ವಮಂತೋ ರುಧಿರಂ ತೇಽಪಿ ನಷ್ಟಾ ಜರ್ಜರಮಸ್ತಕಾಃ ।
ವಿದೇಹಾಶ್ಚ ಕೃತಾ ಯುದ್ಧೇ ತುಷಿತಾ ರಣಗರ್ವಿತಾಃ ॥ ೪೦ ॥
ಬದ್ಧಃ ಪ್ರಾಚೇತಸೋ ದಕ್ಷಃ ಪಾಶೇನ ಸುದೃಢೇನ ಚ ।
ಶೇಷಾಶ್ಚ ತ್ರಿದಶಾ ಭೀತಾ ಬ್ರಹ್ಮಾಣಂ ಶರಣಂಗತಾಃ ॥ ೪೧ ॥
ವೃತ್ತಾಂತಃ ಕಥಿತಃ ಸರ್ವೋ ವಿಸ್ತರೇಣ ಯಥಾ ತಥಾ ।
ಆದ್ಯಾ ಯೇ ತುಷಿತಾ ದೇವಾ ವಿದೇಹಾಶ್ಚೈವ ತೇ ಕೃತಾಃ ॥ ೪೨ ॥
ನಷ್ಟಾಶ್ಚ ವಸವೋ ದೇವಾಃ ಪೀಡಿತಾ ಭಾಸ್ಕರಾ ರಣೇ ।
ನ ಜ್ಞಾಯತೇ ಸಹಸ್ರಾಕ್ಷೋ ನ ಯಮೋ ನ ಧನೇಶ್ವರಃ ।
ವರುಣೋ ಯಾದಸಾಂ ನಾಥಃ ಕ್ವ ಗತಃ ಪರಮೇಶ್ವರ ॥ ೪೩ ॥

---

೩೮. ಆರು ಮಂದಿ ಸೂರ್ಯರ ತೇಜಸ್ಸಿನಿಂದ ಕೂಡಿದ ಆಕೆಯು ಯುದ್ಧದಲ್ಲಿ ಖಡ್ಗಾಯುಧಗಳಿಂದ ದೇವಸೈನ್ಯವನ್ನು ಪೀಡಿಸಿದಳು. ಭಗನ ಕಣ್ಣುಗಳೂ, ಪೂಷನ ದಂತಗಳೂ ಕಿತ್ತುಹಾಕಲ್ಪಟ್ಟವು.

೩೯. ದಿನಕರನ ಕೈಗಳೂ, ಭಾಸ್ಕರನ ಪಾದಗಳೂ ಮುರಿದುಹಾಕಲ್ಪಟ್ಟವು. ಯುದ್ಧದುರ್ಮದರೆಂದು ಹೆಸರಾದ ಅಷ್ಟವಸುಗಳೂ ಮುಸಲಾಯುಧದ ಹೊಡೆತಕ್ಕೆ ತುತ್ತಾದರು.

೪೦. ಮತ್ತು ಜಜ್ಜಿದ ತಲೆಗಳಿಂದ ರಕ್ತಗಳನ್ನು ಕಾರುತ್ತ ಅವರು ಓಡಿಯೆ ಹೋದರು. ಯುದ್ಧಕುಶಲರೆಂದು ಗರ್ವದಿಂದಿದ್ದ ತುಷಿತರು ದೇಹವಿಲ್ಲದವರಾಗಿ ಮಾಡಲ್ಪಟ್ಟರು.

೪೧. ಪ್ರಚೇತಪುತ್ರನಾದ ದಕ್ಷನು ಬಲವಾದ ಪಾಶದಿಂದ ಬದ್ಧನಾದನು. ಕಳಿದುಳಿದ ದೇವತೆಗಳು ಬ್ರಹ್ಮದೇವನನ್ನು ಶರಣುಹೊಕ್ಕರು.

೪೨. ಅವರು ನಡೆದ ಸಮಾಚಾರವೆಲ್ಲವನ್ನೂ ಯಥಾರ್ಥವಾಗಿ ಆತನಲ್ಲಿ ನಿವೇದಿಸಿಕೊಂಡರು. "ದೇವದೇವ! ಮೊದಲನೆಯ ದೇವತೆಗಳಾದ ತುಷಿತರು ದೇಹವಿಲ್ಲದವರಾದರು.

೪೩. ಅಷ್ಟವಸುಗಳು ನಷ್ಟರಾದರು. ಯುದ್ಧದಲ್ಲಿ ಆದಿತ್ಯರು ಪೀಡೆಗೊಳಗಾದರು. ಮಹೇಂದ್ರನೂ, ಯಮನೂ, ಕುಬೇರನೂ ಎಲ್ಲಿರುವರೆಂಬುದು ತಿಳಿಯಲಿಲ್ಲ. ಜಲಗಳಿಗೆ ಅಧಿದೇವತೆಯಾದ ವರುಣನು ಸರ್ವೇಶ್ವರನಾದರೂ ಎಲ್ಲಿ ಅಡಗಿರುವನೊ!

ಭದ್ರಕಾಲ್ಯಾ ಹತಂ ಸರ್ವಂ ವೀರಭದ್ರಗಣೇನ ಚ ।
ಭಗ್ನಶ್ಚ ಯಜ್ಞಯೂಪೋ ವೈ ವಿಧ್ವಸ್ತಂ ಕಲಶಂ ತದಾ ॥ ೪೪ ॥
ಪ್ರದೀಪಿತಾ ಮಹಾಶಾಲಾ ಭಗ್ನಂ ವೈ ಯಜ್ಞತೋರಣಂ ।
ತೇಷಾಂ ತು ವಚನಂ ಶ್ರುತ್ವಾ ಬ್ರಹ್ಮಾ ಲೋಕಪಿತಾಮಹಃ ।
ಆಜಗಾಮ ಕೃಪಾವಿಷ್ಟೋ ಯತ್ರಾಽಹಂ ಮಂದರೇ ಸ್ಥಿತಃ ॥ ೪೫ ॥
ಸ್ತುತಿಂ ಕೃತ್ವಾ ಮದೀಯಾಂ ತು ವಾಕ್ಯಮುಕ್ತಮಿದಂ ತದಾ ।
ಆದ್ಯಾ ಯೇ ತುಷಿತಾ ದೇವಾ ವಿದೇಹಾಶ್ಚೈವ ತೇ ಕೃತಾಃ ॥ ೪೬ ॥
ಭದ್ರಕಾಲ್ಯಾ ಮಹಾದೇವ ವಸವೋ ಜರ್ಜರೀಕೃತಾಃ ।
ಪೀಡಿತಾ ಭಾಸ್ಕರಾ ಯುದ್ಧೇ ಶೇಷಾ ನಷ್ಟಾ ದಿಶೋ ಗತಾಃ ॥ ೪೭ ॥
ಕಾಯಾವರೋಹಣಂ ದೇವ ತುಷಿತಾನಾಂ ಕಥಂ ಭವೇತ್ ।
ಬ್ರಹ್ಮಣೋ ವಚನಂ ಶ್ರುತ್ವಾ ಮಯಾ ಪ್ರೋಕ್ತಂ ವರಾನನೇ ॥ ೪೮ ॥
ಮಹಾಕಾಲವನೇ ಕ್ಷೇತ್ರೇ ಗಚ್ಛಂತು ತುಷಿತಾಸ್ತ್ವಮೀ ।
ಲಕುಟೀಶೋ ಗತೋ ಯತ್ರ ಕಾಯಾವರೋಹಣಾದ್ಗೃಹಂ ॥ ೪೯ ॥

---

೪೪. ಭದ್ರಕಾಳಿಯಿಂದಲೂ, ವೀರಭದ್ರನ ಪ್ರಮಥಗಣದಿಂದಲೂ ಸಮಸ್ತವೂ ಧ್ವಂಸವಾಯಿತು. ಯಜ್ಞದ ಯೂಪಸ್ತಂಭವು ಮುರಿಯಿತು. ಕಳಶವು ಧ್ವಸ್ತವಾಯಿತು.

೪೫. ಯಜ್ಞಶಾಲೆಯು ಬೆಂಕಿಗೆ ಆಹುತಿಯಾಯಿತು. ಮಕರತೋರಣವು ಭಗ್ನವಾಯಿತು.'' ಇಂತೆಂದ ದೇವತೆಗಳ ಮಾತನ್ನು ಕೇಳಿ ಚತುರ್ಮುಖನು ಕನಿಕರಗೊಂಡು ಲೋಕಪಿತಾಮಹನೆನಿಸಿದ್ದುದರಿಂದ, ನಾನು ಮಂದರಪರ್ವತದಲ್ಲಿ ವಾಸವಾಗಿದ್ದೆಡೆಗೆ ಬಂದನು.

೪೬. ಆತನು ನನ್ನನ್ನು ಸ್ತುತಿಸಿ ಪ್ರಸನ್ನನಾಗಿಮಾಡಿಕೊಂಡು ಈ ಮಾತನ್ನು ಆಡಿದನು. "ಮಹೇಶ್ವರನೆ! ಆದಿದೇವತೆಗಳೆನಿಸಿದ ತುಷಿತರು ವಿದೇಹರಾಗಿ ಮಾಡಲ್ಪಟ್ಟರು.

೪೭. ಮಹಾದೇವ! ಭದ್ರಕಾಳಿಯು ಅಷ್ಟವಸುಗಳನ್ನು ಜರ್ಝರಿತರನ್ನಾಗಿ ಮಾಡಿದಳು. ದ್ವಾದಶಾದಿತ್ಯರು ಯುದ್ಧದಲ್ಲಿ ಸಂಕಟಕ್ಕೊಳಗಾದರು. ಇತರ ದೇವತೆಗಳು ದಿಕ್ಕುಪಾಲಾಗಿ ಚೆದರಿಹೋದರು.

೪೮. ಮಹೇಶ್ವರ! ಈ ತುಷಿತರಿಗೆ ಪುನಃ ದೇಹವೆಂತು ಪ್ರಾಪ್ತವಾಗುವುದು?'' ಪಾರ್ವತಿಯೆ! ಇಂತೆಂದ ಬ್ರಹ್ಮದೇವನಿಗೆ ನಾನು ಉಪಾಯವನ್ನು ಹೇಳಿದೆನು.

೪೯. "ಈ ತುಷಿತರು ಮಹಾಕಾಲವನವೆಂಬ ಉತ್ತಮಕ್ಷೇತ್ರಕ್ಕೆ ಹೋಗಲಿ. ಅಲ್ಲಿ ಲಕುಟೀಶನೂ ಕಾಯಾವರೋಹಣೇಶ್ವರನ ಅನುಗ್ರಹದಿಂದ ದೇಹವನ್ನು ಪಡೆದು ಪುನಃ ತನ್ನ ಮನೆಗೆ ಹೋದನು.

ಬ್ರಾಹ್ಮಣಾಶ್ಚ ಮಮಾದೇಶಾಚ್ಚತುಃ ಶಿಷ್ಯೈಃ ಸಮನ್ವಿತಾಃ ।
ದ್ವಾಪರೇ ಸಮತಿಕ್ರಾಂತೇ ಪ್ರಾಪ್ತೇ ಕಲಿಯುಗೇ ತಥಾ ॥ ೫೦ ॥
ತತ್ರ ಕಾಯಮನುಪ್ರಾಪ್ತಾ ಮಮ ಶಿಷ್ಯಾ ಮಮೋಪಮಾಃ ।
ಅವಸಂತ ಕ್ಷಿತೌ ಧನ್ಯಾ ರಕ್ಷಣಾರ್ಥಂ ದ್ವಿಜನ್ಮನಾಂ ॥ ೫೧ ॥
ಕ್ಷೇತ್ರಸ್ಯ ದಕ್ಷಿಣೇ ತಸ್ಯ ವಿದ್ಯತೇ ಲಿಂಗಮುತ್ತಮಂ ।
ಸರ್ವಸಂಪತ್ಕರಂ ದಿವ್ಯಂ ಸಿದ್ಧಾನಾಂ ಕಾಯದಾಯಕಂ ॥ ೫೨ ॥
ಪ್ರಸಾದಾತ್ತಸ್ಯ ಲಿಂಗಸ್ಯ ಕಾಯಾನ್ ಪ್ರಾಪ್ಸ್ಯಂತ್ಯಮೀ ಸುರಾಃ ।
ಮದೀಯಂ ವಚನಂ ಶ್ರುತ್ವಾ ಗತಾಸ್ತೇ ತುಷಿತಾಃ ಪ್ರಿಯೇ ॥ ೫೩ ॥
ಮುದಿತಾ ಬ್ರಹ್ಮಣಾ ಸಾರ್ಧಂ ಯತ್ರ ತಲ್ಲಿಂಗಮುತ್ತಮಂ ।
ಪ್ರಸಾದಾತ್ತಸ್ಯ ಲಿಂಗಸ್ಯ ಪ್ರಾಪ್ತಂ ಕಾಯಮನುತ್ತಮಂ ॥ ೫೪ ॥
ಪುನಸ್ತೇ ತಾದೃಶಾ ಜಾತಾಸ್ತುಷಿತಾ ಯಾದೃಶಾಽಭವನ್ ।
ಅತೋ ದೇವೈಃ ಕೃತಂ ನಾಮ ಕಾಯಾವರೋಹಣೇಶ್ವರಃ ।
ಸರ್ವಾಹಿತಪ್ರದೋ ನಿತ್ಯಂ ಖ್ಯಾತೋ ದೇವೋ ಭವಿಷ್ಯತಿ ॥ ೫೫ ॥

---

೫೦–೫೧. ನನ್ನ ಅಪ್ಪಣೆಯಂತೆ ಅಲ್ಲಿ ಶಿಷ್ಯರೊಡಗೂಡಿದ ನಾಲ್ಕುಮಂದಿ ಬ್ರಾಹ್ಮಣರೂ ದ್ವಾಪರಯುಗವು ಮುಗಿದು ಕಲಿಯುಗವು ಆರಂಭವಾದಾಗ ಅಲ್ಲಿ ದೇಹವಂತರಾಗಿ ನನ್ನ ಭಕ್ತರೂ, ನನಗೆ ಸಮಾನರೂ ಆಗಿ ಭೂಮಿಯಲ್ಲಿ ಬ್ರಾಹ್ಮಣ್ಯವನ್ನು ಸಂರಕ್ಷಿಸುವುದಕ್ಕಾಗಿಯೇ ಅಲ್ಲಿ ವಾಸಮಾಡುತ್ತ ಪರಮ ಧನ್ಯರೆನಿಸಿದರು.

೫೨. ಆ ಕ್ಷೇತ್ರದ ದಕ್ಷಿಣದಿಕ್ಕಿನಲ್ಲಿ ಸರ್ವೈಶ್ವರ್ಯಪ್ರದಾಯಕವೂ, ದಿವ್ಯವೂ, ಸಿದ್ಧರಿಗೆ ದೇಹವನ್ನು ಕೊಡುವುದೂ ಆದ ಉತ್ತಮಲಿಂಗವೊಂದು ಕಾಣಿಸುತ್ತಿರುವುದು.

೫೩. ಆ ಮಹಾಲಿಂಗದ ಪ್ರಸನ್ನತೆಯಿಂದ ಈ ದೇವತೆಗಳೂ ಪುನಃ ದೇಹಗಳನ್ನು ಪಡೆಯುವರು." ಪಾರ್ವತಿಯೆ! ಇಂತೆಂದ ನನ್ನ ಮಾತನ್ನು ಕೇಳಿ ತುಷಿತರು ಅಲ್ಲಿಗೆ ಹೋದರು.

೫೪. ಆನಂದದಿಂದ ಬ್ರಹ್ಮದೇವನೊಡನೆ ಆ ಉತ್ತಮಲಿಂಗವಿದ್ದಲ್ಲಿಗೆ ಹೋಗಿ ಅದರ ಅನುಗ್ರಹದಿಂದ ದಿವ್ಯಶರೀರಗಳನ್ನು ಪಡೆಯುವವರಾದರು.

೫೫. ಅವರು ಹಿಂದೆ ಇದ್ದುದಕ್ಕೆಸಮಾನವಾದ ರೂಪಗಳನ್ನೇ ಹೊಂದಿದರು. ಆಗ ದೇವತೆಗಳು ಆ ಲಿಂಗಕ್ಕೆ ಕಾಯಾವರೋಹಣವೆಂಬ ನಾಮವನ್ನಿತ್ತು ಇಂತೆಂದರು. "ಈ ಮಹಾದೇವನು ಸರ್ವಾಭೀಷ್ಟದಾಯಕನೆಂದು ಶಾಶ್ವತವಾದ ಕೀರ್ತಿಯನ್ನು ಪಡೆಯುವನು.

ಯೇ ಗತ್ವಾ ದಕ್ಷಿಣಾಮಾಶಾಂ ದೇವಂ ಕಾಯಾವರೋಹಣಂ ।
ಪಶ್ಯಂತಿ ಪರಯಾ ಭಕ್ತ್ಯಾ ಯಮಸ್ತೇಷಾಂ ಪಿತಾ ಭವೇತ್ ॥ ೫೬ ॥
ಜನ್ಮಕೋಟಿಸಹಸ್ರೈಸ್ತು ಯತ್ಪಾಪಂ ಸಮುಪಾರ್ಜಿತಂ ।
ತತ್ಸರ್ವಂ ನಾಶಮಾಯಾತಿ ದರ್ಶನಾದೇವ ನಾಽನ್ಯಥಾ ॥ ೫೭ ॥
ಸ್ವಕರ್ಮಣಾ ಗತಾ ಯೇ ಚ ನರಕೇ ಪಿತರೋ ಗಣಾಃ ।
ದರ್ಶನಾತ್ತಸ್ಯ ಲಿಂಗಸ್ಯ ತೇಷಾಂ ಮುಕ್ತಿರ್ಭವಿಷ್ಯತಿ ॥ ೫೮ ॥
ಯೇ ಪಶ್ಯಂತಿ ಪ್ರಸಂಗೇನ ದೇವಂ ಕಾಯಾವರೋಹಣಂ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೫೯ ॥
ಸ್ಪರ್ಶನಾತ್ತಸ್ಯ ಲಿಂಗಸ್ಯ ಪಾಪಿನೋಽಪಿ ಹಿ ಯೇ ನರಾಃ ।
ತೇ ಯಾಸ್ಯಂತಿ ಪರಂ ಸ್ಥಾನಂ ಸರ್ವಪಾಪವಿವರ್ಜಿತಂ ॥ ೬೦ ॥
ಶಾಠ್ಯೇನ ಪೂಜಿತೋ ದೇವಃ ಕಾಯಾವರೋಹಣೇಶ್ವರಃ ।
ದದಾತಿ ರಾಜ್ಯಂ ಭೋಗಾಂಶ್ಚ ಸ್ವರ್ಗಲೋಕಂ ಸನಾತನಂ ॥ ೬೧ ॥

---

೫೬. ಯಾರು ಈ ಕ್ಷೇತ್ರದ ದಕ್ಷಿಣಕ್ಕೆ ಹೋಗಿ ಈ ಕಾಯಾವರೋಹಣೇಶ್ವರನನ್ನು ನೋಡುವರೊ, ಅವರಿಗೆ ಯಮನು ತಂದೆಯಂತೆ ಸುಮುಖನಾಗುವನು.

೫೭. ಈ ಮಹಾಲಿಂಗದ ದರ್ಶನದಿಂದಲೇ ಸಾವಿರಾರುಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪಾತಕವೂ ನಿಶ್ಶೇಷವಾಗಿ ನಾಶವಾಗುವುದು. ಈ ಮಾತು ಸುಳ್ಳಲ್ಲವು.

೫೮. ಯಾವ ಪಿತೃಗಳು ತಮ್ಮ ದುಷ್ಕರ್ಮಗಳಿಂದ ನರಕಗಳಲ್ಲಿ ಬಳಲುತ್ತಿರುವರೊ, ಅವರಿಗೂ ತಮ್ಮ ಸಂತತಿಯಲ್ಲಿ ಯಾರೊಬ್ಬನಾದರೂ ಈ ಲಿಂಗವನ್ನು ನೋಡುವುದರಿಂದ ಮೋಕ್ಷಲಾಭವಾಗುವುದು.

೫೯. ಯಾರು ಯಾದೃಚ್ಛಿಕವಾಗಿಯಾದರೂ ಈ ಕಾಯಾವರೋಹಣೇಶ್ವರನ ದರ್ಶನವನ್ನು ಮಾಡುವರೊ, ಅವರಿಗೆ ನೂರುಕೋಟಿ ಕಲ್ಪಗಳಾದರೂ ಪುನರ್ಜನ್ಮವಿರುವುದಿಲ್ಲವು.

೬೦. ಪಾಪಿಗಳಾದರೂ ಯಾವ ಮಾನವರು ಈ ಲಿಂಗವನ್ನು ಮುಟ್ಟಿ ಸೇವಿಸುವರೊ, ಅವರು ಸಕಲಪಾತಕವರ್ಜಿತವಾದ ಉತ್ತಮಸ್ಥಾನವನ್ನೇ ಪಡೆಯುವರು.

೬೧. ಫಲಾಪೇಕ್ಷೆಯಿಂದ ಪೂಜಿಸಲ್ಪಟ್ಟರೂ ಈ ಕಾಯಾವರೋಹಣೇಶ್ವರನು ರಾಜ್ಯಾಧಿಕಾರವನ್ನೂ, ಭೋಗಗಳನ್ನೂ, ಶಾಶ್ವತವಾದ ಸ್ವರ್ಗಲೋಕವಾಸವನ್ನೂ ಕೊಡುವನು.

ದ್ವಾದಶ್ಯಾಂ ಯೇ ಪ್ರಪಶ್ಯಂತಿ ಸ್ನಾತ್ವಾ ಕಾಯಾವರೋಹಣಂ ।
ತೇ ಭಿತ್ವಾ ಬ್ರಹ್ಮಸದನಂ ಯಾಸ್ಯಂತಿ ಪರಮಾಂ ಗತಿಂ ॥ ೬೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕಾಯಾವರೋಹಣೇಶಸ್ಯ ಬಿಲ್ವೇಶ್ವರಮಥೋ ಶೃಣು ॥ ೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕಾಯಾವರೋಹಣೇಶ್ವರಮಾಹಾತ್ಮ್ಯವರ್ಣನಂ"
ನಾಮ ದ್ವ್ಯಶೀತಿತಮೋಽಧ್ಯಾಯಃ

---

೬೨. ದ್ವಾದಶಿಯಲ್ಲಿ ಯಾರು ಸ್ನಾನವನ್ನು ಮಾಡಿಕೊಂಡು ಈ ಕಾಯಾವರೋಹಣೇಶ್ವರನನ್ನು ನೋಡುವರೊ, ಅವರು ಬ್ರಹ್ಮನಿವಾಸವಾದ ಸತ್ಯಲೋಕವನ್ನು ಭೇದಿಸಿಕೊಂಡು ಪರಮಪದವನ್ನು ಹೊಂದುವರು.

೬೩. ದೇವಿಯೆ! ಇಂತು ನಿನಗೆ ಕಾಯಾವರೋಹಣೇಶ್ವರನ ಮಹಿಮೆಯ ಚರಿತ್ರೆಯನ್ನು ಹೇಳಿದೆನು. ಇನ್ನು ಬಿಲ್ವೇಶ್ವರನ ಮಾಹಾತ್ಮ್ಯೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕಾಯಾವರೋಹಣೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಂಬತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರ್ಯಶೀತಿತಮೋಽಧ್ಯಾಯಃ

### ಬಿಲ್ವೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ:—

ಬಿಲ್ವೇಶ್ವರಸ್ಯ ಮಾಹಾತ್ಮ್ಯಂ ಶೃಣು ಸುಂದರಿ ಸಾದರಂ ।
ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೧ ॥
ಆದಿಕಲ್ಪೇ ಮಹಾದೇವಿ ಲೋಕಾನಾಮನುಕಂಪಯಾ ।
ಕಲ್ಪವೃಕ್ಷಾಸ್ತತೋ ಜಾತಾ ಬ್ರಹ್ಮಣೋ ಧ್ಯಾಯತಃ ಪುರಾ ॥ ೨ ॥
ತೇಷಾಂ ಮಧ್ಯೇ ಬಿಲ್ವವೃಕ್ಷಃ ಶ್ರೀವೃಕ್ಷ ಇತಿ ಗೀಯತೇ ।
ಅಧಸ್ತಾತ್ತಸ್ಯ ವೃಕ್ಷಸ್ಯ ಪುರುಷಃ ಕಾಂಚನಪ್ರಭಃ ॥ ೩ ॥
ಉಪವಿಷ್ಟಸ್ತದಾ ದೃಷ್ಟೋ ಬ್ರಹ್ಮಣಾ ಲೋಕಕರ್ತೃಣಾ ।
ಫಲಾನಿ ತಸ್ಯ ಪತ್ರಾಣಿ ವಿವಿಧಾನಿ ನಿರಂತರಂ ॥ ೪ ॥
ಭಕ್ಷಯತ್ಯತಿಸಂಹೃಷ್ಟೋ ಹೃದ್ಯಾನಿ ಚ ಮೃದೂನಿ ಚ ।
ಬದ್ಧಗೋಧಾಂಗುಲಿತ್ರಶ್ಚ ಶರೀ ಧನ್ವೀ ತಥೈವ ಚ ॥ ೫ ॥

---

## ಕನ್ನಡದ ಅನುವಾದ

### ಬಿಲ್ವೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಇನ್ನು ಬಿಲ್ವೇಶ್ವರನ ಮಾಹಾತ್ಮ್ಯವನ್ನು ಆದರದಿಂದ ಕೇಳು. ಇದನ್ನು ಕೇಳುವುದರಿಂದಲೇ ಸಕಲ ಪಾತಕಗಳೂ ತೊಲಗುವುವು.

೨. ಮಹೇಶ್ವರಿಯೆ! ಆದಿಕಲ್ಪದಲ್ಲಿ ಲೋಕಾನುಗ್ರಹಾರ್ಥವಾಗಿ ತಪಸ್ಸನ್ನಾಚರಿಸುತ್ತಿದ್ದ ಬ್ರಹ್ಮದೇವನಿಂದ ಅನೇಕ ಕಲ್ಪವೃಕ್ಷಗಳು ಜನಿಸಿದುವು.

೩. ಅವುಗಳ ಮಧ್ಯದಲ್ಲಿ ಬಂದ ಬಿಲ್ವವೃಕ್ಷಕ್ಕೆ ಶ್ರೀವೃಕ್ಷವೆಂದು ಪ್ರಖ್ಯಾತಿಯಿರುವುದು. ಅದರ ಕೆಳಗೆ ಚಿನ್ನದ ಮೈಬಣ್ಣದ ಪುರುಷನೊಬ್ಬನು ಕುಳಿತಿದ್ದನು.

೪–೫. ಹೀಗೆ ಮಂಡಿಸಿದ್ದ ಆತನನ್ನು ಸೃಷ್ಟಿಕರ್ತನಾದ ಬ್ರಹ್ಮದೇವನು ಕಂಡನು. ಆ ವೃಕ್ಷದಲ್ಲಿದ್ದ ಹೃದ್ಯಗಳೂ, ಮೃದುಗಳೂ ಆದ ಫಲಗಳನ್ನೂ ವಿಧವಿಧಗಳಾದ ಪತ್ರಗಳನ್ನೂ ಎಡಬಿಡದೆ ಆತನು ಸಂತೋಷದಿಂದ ತಿನ್ನುತ್ತಿದ್ದನು. ಮುಂಗೈಗಳಿಗೆ ಚರ್ಮದ ಕವಚಗಳನ್ನೂ, ಬೆರಳುಗಳಿಗೆ ಕೈಚೀಲಗಳನ್ನೂ ಧರಿಸಿದ್ದನು.

ಖಡ್ಗೀ ಕಿರೀಟಮಾಲೀ ಚ ಕುಂಡಲೀ ಕವಚೀ ತಥಾ ।
ಮಹೋರಸ್ಕೋ ಮಹೋತ್ಸಾಹಃ ಸಿಂಹಸಂಹನನೋ ಯುವಾ ॥ ೬ ॥
ಬ್ರಹ್ಮಣಾ ಚ ಕೃತಂ ನಾಮ ಬಿಲ್ವ ಇತ್ಯಭಿವಿಶ್ರುತಂ ।
ತಮಿಂದ್ರೋ ವರಯಾಮಾಸ ರಾಜಾ ತ್ವಂ ಭೂತಲೇ ಭವ ॥ ೭ ॥
ತ್ರಿವಿಷ್ಟಪಸ್ಯ ಭೂಮಿಸ್ಥಃ ಸಖಾಭೂತೋ ಮಮ ಪ್ರಿಯಃ ।
ದದಾಮಿ ತೇ ವೈಜಯಂತೀಂ ಮಾಲಾಮಮ್ಲಾನಪಂಕಜಾಂ ॥ ೮ ॥
ಯಸ್ಯಾಃ ಪ್ರಭಾವತಃ ಶಸ್ತ್ರಂ ರಣೇ ನ ಪ್ರಭವಿಷ್ಯತಿ ।
ಸೋಽಬ್ರವೀದ್ಯದಿ ಮೇ ವಜ್ರಮಾಯುಧಂ ತ್ವಂ ಪ್ರಯಚ್ಛಸಿ ॥ ೯ ॥
ತತ್ಸ್ಯಾಂ ಪೃಥಿವ್ಯಾಂ ರಾಜಾಽಹಂ ನಾಽನ್ಯಥಾ ರೋಚತೇ ಮಮ ।
ತತೋಽಹಂ ಪಾಲಯಿಷ್ಯಾಮಿ ಸತ್ಯೇನೇಮಾಂ ವಸುಂಧರಾಂ ॥ ೧೦ ॥
ಏವಂ ಭವತು ಭದ್ರಂ ತೇ ಭವ ರಾಜಾ ಪ್ರಜಾಹಿತಃ ।
ಸ್ಮರಣಾದೇವ ವಜ್ರಸ್ತೇ ಕರೇ ಯಾಸ್ಯತಿ ನಾಽನ್ಯಥಾ ॥ ೧೧ ॥

---

೬. ಮತ್ತು ಖಡ್ಗ, ಕಿರೀಟ, ಕುಂಡಲ, ಕವಚಾದಿಗಳಿಂದಲಂಕೃತನಾಗಿ ವಿಶಾಲವಕ್ಷನೂ, ಮಹೋತ್ಸಾಹಿಯೂ, ಸಿಂಹಸದೃಶಪರಾಕ್ರಮಿಯೂ ಆದ ಯುವಕನಾಗಿದ್ದನು.

೭. ಆತನಿಗೆ ಬ್ರಹ್ಮನು ಬಿಲ್ವನೆಂಬ ಪ್ರಖ್ಯಾತವಾದ ಹೆಸರನ್ನಿತ್ತನು. ಆತನ ಬಳಿಗೆ ಬಂದು ಮಹೇಂದ್ರನು ಕೇಳಿಕೊಂಡನು. "ನೀನು ಭೂಲೋಕಕ್ಕೆ ರಾಜನಾಗು.

೮. ಭೂಮಿಯಲ್ಲಿದ್ದುಕೊಂಡೇ ಸ್ವರ್ಗಕ್ಕೂ ನನಗೂ ಪ್ರಿಯಸಖನಾಗಿರು. ಬಾಡದಿರುವ ಕಮಲಗಳಿಂದ ಕೂಡಿದ ವೈಜಯಂತಿಯೆಂಬ ಮಾಲೆಯನ್ನು ನಿನಗೆ ಕೊಡುವೆನು.

೯. ಅದರ ಪ್ರಭಾವದಿಂದ ಯುದ್ಧದಲ್ಲಿ ಶತ್ರುಗಳ ಶಸ್ತ್ರಾಸ್ತ್ರಗಳು ನಿನ್ನನ್ನು ಪೀಡಿಸಲಾರವು." ಇಂತೆಂದ ಇಂದ್ರನಿಗೆ ಆತನು ಹೇಳಿದನು. "ನನಗೆ ನಿನ್ನ ವಜ್ರಾಯುಧವನ್ನು ಕೊಡಬೇಕು.

೧೦. ಹಾಗಾದರೆ ನಾನು ಭೂಲೋಕದಲ್ಲಿ ರಾಜನಾಗುವೆನು. ಇಲ್ಲದಿದ್ದರೆ ನನಗೆ ಬೇಕಾಗಿಲ್ಲ. ನಾನಾದರೊ ಸತ್ಯದಿಂದಲೇ ಭೂಮಂಡಲವನ್ನೆಲ್ಲ ಪಾಲಿಸಬೇಕೆಂದಿರುವೆನು."

೧೧. ಇಂದ್ರನು ಹೇಳುತ್ತಾನೆ:—ಹಾಗೆಯೇ ಆಗಲಿ. ನಿನಗೆ ಮಂಗಳವುಂಟಾಗುವುದು. ಜನಪ್ರಿಯನಾದ ರಾಜನಾಗಿರು. ನೆನೆಸಿದಾಗ ವಜ್ರಾಯುಧವು ನಿನ್ನ ಕೈಗೆ ಬರುವುದು. ನನ್ನ ಮಾತು ಸುಳ್ಳಲ್ಲವು.

ಸ ಏವಮುಕ್ತಸ್ತೇಜಸ್ವೀ ಬಿಲ್ವೋ ರಾಜಾ ಬಭೂವ ಹ ।
ಕಪಿಲೋ ನಾಮ ವೇದವೇದಾಂಗಪಾರಗಃ ॥ ೧೨ ॥
ಸಖಾ ಬಭೂವ ಬಿಲ್ವಸ್ಯ ತಸ್ಯ ವಿಪ್ರರ್ಷಿಸತ್ತಮಃ ।
ಸ ತೇನ ಸಹ ಸಂಗಮ್ಯ ಸುಖಾಸೀನೋ ವರಾನನೇ ॥ ೧೩ ॥
ಚಕ್ರೇ ಕಥಾ ವಿಚಿತ್ರಾರ್ಥಾಃ ಪ್ರೀಯಮಾಣಃ ಪುನಃ ಪುನಃ ।
ತಥಾ ಕಥಾಂತರೇ ವಾದಃ ಪರಸ್ಪರಮಭೂತ್ತಯೋಃ ॥ ೧೪ ॥
ದಾನಂ ಪ್ರಧಾನಂ ತೀರ್ಥಂ ತು ಬಿಲ್ವೇನೋಕ್ತಂ ಪುನಃ ಪುನಃ ।
ಬ್ರಹ್ಮಶ್ರೇಷ್ಠಂ ತಪಃಶ್ರೇಷ್ಠಮಿತ್ಯುಕ್ತಂ ಕಪಿಲೇನ ತು ॥ ೧೫ ॥

ಬಿಲ್ವ ಉವಾಚ :—

ದಾನಾದ್ರಾಜ್ಯಂ ಸುಖಂ ಭೋಗಾ ಐಶ್ವರ್ಯಂ ಸ್ವರ್ಗಮಕ್ಷಯಂ ।
ಪ್ರಾಪ್ಯತೇ ದ್ವಿಜಶಾರ್ದೂಲ ಕಥಂ ಬ್ರಹ್ಮ ಪ್ರಶಂಸಸಿ ॥ ೧೬ ॥

ಕಪಿಲ ಉವಾಚ :—

ವೇದಾದ್ಯಜ್ಞಾಃ ಪ್ರವರ್ತಂತೇ ವೇದಾದಿಷ್ಟಿಶ್ಚ ಕಾಮಿಕಾ ।
ಪ್ರವರ್ತಂತೇ ಕ್ರಿಯಾ ವೇದಾದ್ವೇದಮೂಲಮಿದಂ ಜಗತ್ ॥ ೧೭ ॥

---

೧೨–೧೩. ಇಂತೆಂದು ಇಂದ್ರನು ಹೇಳಲು, ತೇಜಸ್ಸಂಪನ್ನನಾದ ಬಿಲ್ವನು ಚಕ್ರವರ್ತಿಯಾದನು. ಆ ಬಿಲ್ವನಿಗೆ ಧರ್ಮೈಕನಿರತನೂ, ವೇದವೇದಾಂಗಗಳಲ್ಲಿ ನಿಷ್ಣಾತನೂ, ಬ್ರಾಹ್ಮಣೋತ್ತಮನೂ ಆದ ಕಪಿಲನೆಂಬಾತನು ಸ್ನೇಹಿತನಾಗಿದ್ದನು. ಗಿರಿಜಾತೆಯೆ! ಒಮ್ಮೆ ಆತನು ಆ ಬ್ರಾಹ್ಮಣನೊಡನೆ ಸುಖಾಸೀನನಾಗಿದ್ದನು.

೧೪. ಆಗಲಾತನು ಆನಂದಭರಿತನಾಗಿ ಮತ್ತೆ ಮತ್ತೆ ಅನೇಕ ವಿಧಗಳಾದ ವಿಚಿತ್ರಕಥೆಗಳನ್ನು ಹೇಳುತ್ತಿದ್ದನು. ಈ ಮಾತುಗಳ ಮಧ್ಯದಲ್ಲಿಯೇ ಅವರಿಗೆ ಪರಸ್ಪರ ವಿವಾದವುಂಟಾಯಿತು.

೧೫. ಬಿಲ್ವನು ದಾನವೇ ಪರಮೋತ್ಕೃಷ್ಟವಾದ ಕರ್ತವ್ಯವೆಂದು ಪುನಃ ಪುನಃ ಒತ್ತಿ ಹೇಳಿದನು. ಕಪಿಲನು ವೇದವೂ, ತಪಸ್ಸೂ ಶ್ರೇಷ್ಠವೆಂದು ಸಾಧಿಸಿದನು.

೧೬. ಬಿಲ್ವನು ಹೇಳುತ್ತಾನೆ:—ಬ್ರಾಹ್ಮಣಶ್ರೇಷ್ಠನೆ! ದಾನದ ಫಲವಾಗಿಯೇ ರಾಜ್ಯವೂ, ಸೌಖ್ಯವೂ, ಭೋಗಗಳೂ, ಐಶ್ವರ್ಯವೂ, ಶಾಶ್ವತವಾದ ಸ್ವರ್ಗವೂ ಲಭಿಸುತ್ತಿರುವಾಗ ನೀನು ವೇದವನ್ನು ಹೇಗೆ ಪ್ರಶಂಸಿಸುವೆ?

೧೭. ಕಪಿಲನು ಹೇಳುತ್ತಾನೆ:—ವೇದದಿಂದ ಯಜ್ಞಗಳು ಹುಟ್ಟಿದುವು. ವೇದದಿಂದ ಕಾಮಪ್ರದಗಳಾದ ಇಷ್ಟಿಗಳುಂಟಾದುವು. ಸಕಲ ಕ್ರಿಯೆಗಳೂ ವೇದಗಳಿಂದಲೇ ಉದಿಸಿರುವುವು. ಈ ಸಮಸ್ತಪ್ರಪಂಚವೂ ವೇದಮೂಲದಿಂದಲೇ ಉಂಟಾಗಿರುವುದು.

ಬಿಲ್ವ ಉವಾಚ :—

ಸಂಸಾರೇ ಪಾರ್ಥಿವಾಃ ಶ್ರೇಷ್ಠಾಃ ಸಮರ್ಥಾ ಲೋಕಪಾಲನೇ ।
ಲೋಕಪಾಲೋಪಮಾ ಲೋಕೇ ಕಥಂ ಬ್ರಹ್ಮ ಪ್ರಶಂಸಸಿ ॥ ೧೮ ॥

ಕಪಿಲ ಉವಾಚ :—

ಮುಖ್ಯಾ ವೈ ಬ್ರಾಹ್ಮಣಾಃ ಪ್ರೋಕ್ತಾಃ ಶಾಪಾನುಗ್ರಹಕಾರಕಾಃ ।
ಪಿತರಃ ಪಾರ್ಥಿವಾನಾಂ ತು ಕಿಂ ತ್ವಂ ಬ್ರಹ್ಮ ನ ಮನ್ಯಸೇ ॥ ೧೯ ॥
ಏವಂ ಕೌತೂಹಲೇ ಜಾತೇ ಕಪಿಲೋ ದ್ವಿಜಸತ್ತಮಃ ।
ಬಿಲ್ವೇನ ತಾಡಿತೋ ಮೂರ್ಧ್ನಿ ವಜ್ರೇಣಾಸತಪರ್ವಣಾ ॥ ೨೦ ॥
ವಜ್ರೇಣಸದ್ವಿಧಾ ಭಿನ್ನಃ ಕಪಿಲೋ ಬ್ರಹ್ಮವಿದ್ಯಯಾ ।
ಸಂಧಾರ್ಯ ಸ್ವಶರೀರಂ ತು ಮಮಾಂತಿಕಮುಪಾಗತಃ ॥ ೨೧ ॥
ಸ್ತುತೋಽಹಂ ವಿವಿಧೈಃ ಸ್ತೋತ್ರೈಃ ಸಮ್ಯಗಾರಾಧಿತೋಹ್ಯಹಂ ।
ಮಯಾ ದತ್ತಮವ್ಯಯತ್ತ್ವಂ ಕುಲಿಶಾದ್ಬ್ರಾಹ್ಮಣಸ್ಯ ತು ॥ ೨೨ ॥
ದ್ವಿಜಃ ಸಮಾಗತೋ ಬಿಲ್ವಂ ಪುನಃ ಸಖ್ಯಮಭೂತ್ತಯೋಃ ।
ಪುನಸ್ತು ತಾದೃಶೋ ವಾದಃ ಸಂಜಾತಃ ಪರ್ವತಾತ್ಮಜೇ ॥ ೨೩ ॥

---

೧೮. ಬಿಲ್ವನು ಹೇಳುತ್ತಾನೆ:—ಸಂಸಾರದಲ್ಲಿ ಕ್ಷತ್ರಿಯರೇ ಶ್ರೇಷ್ಠರು. ಲೋಕರಕ್ಷಣದಲ್ಲಿ ಅವರೇ ಶಕ್ತರು. ಲೋಕಪಾಲಕರಿಗೆ ಸಮಾನರಾದ ಅವರನ್ನು ಕಡೆಗಳೆದು ಬ್ರಾಹ್ಮಣ್ಯವನ್ನು ಹೇಗೆ ಹೊಗಳುವೆ?

೧೯. ಕಪಿಲನು ಹೇಳುತ್ತಾನೆ:— ಶಾಪಾನುಗ್ರಹಗಳಲ್ಲಿ ಶಕ್ತರಾದ ಬ್ರಾಹ್ಮಣರೇ ಮುಖ್ಯರೆಂದು ಕರೆಯಲ್ಪಡುವರು. ಅವರು ಕ್ಷತ್ರಿಯರಿಗೂ ತಂದೆಗಳಂತಿರುವರು. ಬಿಲ್ವನೆ! ಅವರನ್ನೇಕೆ ನೀನು ಗೌರವಿಸುವುದಿಲ್ಲ?

೨೦. ಇಂತು ವಿವಾದವುಂಟಾಗಲು ಬಿಲ್ವನು ಉದ್ರೇಕದಿಂದ ವಜ್ರಾಯುಧವನ್ನು ತೆಗೆದುಕೊಂಡು ಬ್ರಾಹ್ಮಣಶ್ರೇಷ್ಠನಾದ ಕಪಿಲನ ತಲೆಗೆ ಹೊಡೆದನು.

೨೧. ಆ ವಜ್ರವು ತನ್ನನ್ನು ಇಬ್ಭಾಗವಾಗಿ ಸೀಳಲು ಕಪಿಲನು ತನ್ನ ವೇದವಿದ್ಯೆಯ ಪ್ರಭಾವದಿಂದ ಪುನಃ ಶರೀರವನ್ನು ಜೋಡಿಸಿಕೊಂಡು ನನ್ನ ಬಳಿಗೆ ಬಂದನು.

೨೨. ಆಗ ಆತನು ನನ್ನನ್ನು ಅನೇಕವಿಧ ಸ್ತೋತ್ರಗಳಿಂದ ಸ್ತುತಿಸಿ ಉತ್ತಮರೀತಿಯಿಂದ ಪೂಜಿಸಲು ನಾನು ಆತನಿಗೆ ವಜ್ರಾಯುಧದಿಂದ ನಾಶವಾಗದಂತೆ ವರವನ್ನಿತ್ತೆನು.

೨೩. ಪರ್ವತಕುಮಾರಿಯೆ! ಆತನು ಮತ್ತೆ ಬಿಲ್ವನ ಬಳಿಗೆ ಬರಲು ಇಬ್ಬರಿಗೂ ಸ್ನೇಹವುಂಟಾಗಿ ಮತ್ತೊಂದು ದಿನ ಅದೇ ವಿವಾದವು ಪ್ರಾರಂಭಿಸಿತು.

ವಾಮಪಾದೇನ ಚಾಪ್ಯೇನಂ ಬಿಲ್ವೋ ವಿಪ್ರಮತಾಡಯತ್ ।
ಪುನಶ್ಚ ವಜ್ರಮಾದಾಯ ಜಘಾನ್ಯೈನಂ ತದಾ ದೃಢಂ ॥ ೨೪ ॥
ನ ಮೃತಿಂ ನ ವ್ಯಥಾಂ ತಸ್ಯ ತದ್ವಜ್ರಮಕರೋತ್ಪನಃ ।
ಅವಧ್ಯತ್ವಮಥೋ ಜ್ಞಾತ್ವಾ ಬಿಲ್ವಸ್ತಸ್ಯ ಮಹಾತ್ಮನಃ ॥ ೨೫ ॥
ನಾರಾಯಣಮಥಾಸಾದ್ಯ ಪ್ರಾರ್ಥಯಾಮಾಸ ಚೇಪ್ಸಿತಂ ।
ವರದೋಽಸ್ಮೀತಿ ತುಷ್ಟೇನ ವಿಷ್ಣುನಾ ಸ ಚ ನೋದಿತಃ ।
ಪ್ರೋವಾಚ ಪ್ರಣತೋ ವಿಷ್ಣುಮಿದಂ ದೇವಿ ಮಹಾಮನಾಃ ॥ ೨೬ ॥

ಬಿಲ್ವ ಉವಾಚ :—

ಕಪಿಲೋ ನಾಮ ವಿಪ್ರರ್ಷಿರವಧ್ಯೋಽಕ್ಷಯ ಏವ ಚ ।
ಸಖಾ ಮಮ ಹೃಷೀಕೇಶ ಸ ಚ ಮಾಮಾಹ ನಿತ್ಯಶಃ ।
ಬಿಭೇಮ್ಯಹಂ ನ ದೇವಸ್ಯ ರಾಕ್ಷಸಸ್ಯಾಽಸುರಸ್ಯ ಚ ॥ ೨೭ ॥
ಪಿಶಾಚಸ್ಯಾಽಪಿ ಯಕ್ಷಸ್ಯ ನ ಚೈವಾಽನ್ಯಸ್ಯ ಕಸ್ಯಚಿತ್ ।
ಬಿಭೇಮೀತಿ ಯಥಾ ಬ್ರೂಯಾಂ ತಥಾ ತ್ವಂ ಕರ್ತುಮರ್ಹಸಿ ॥ ೨೮ ॥
ಏವಮುಕ್ತಸ್ತು ಬಿಲ್ವೇನ ಸ ದೇವಃ ಪುರುಷೋತ್ತಮಃ ।
ಏವಂ ಭವಿಷ್ಯತೀತ್ಯುಕ್ತ್ವಾ ಕಪಿಲಸ್ಯಾಶ್ರಮಂ ಗತಃ ॥ ೨೯ ॥

---

೨೪. ಆಗ ಬಿಲ್ವನು ಎಡಗಾಲಿನಿಂದ ಆ ಬ್ರಾಹ್ಮಣನನ್ನು ಒದ್ದು ವಜ್ರಾಯುಧವನ್ನು ತೆಗೆದುಕೊಂಡು ಬಲವಾಗಿ ಹೊಡೆದನು.

೨೫. ಆ ವಜ್ರವು ಆತನಿಗೆ ಮರಣವನ್ನಾಗಲಿ, ಸಂಕಟವನ್ನಾಗಲಿ ಉಂಟು ಮಾಡಲಿಲ್ಲ. ಆಗ ಬಿಲ್ವನು ಆ ಮಹಾತ್ಮನು ಅವಧ್ಯನೆಂಬುದನ್ನು ತಿಳಿದುಕೊಂಡನು.

೨೬. ಆಗ ಮಹಾವಿಷ್ಣುವಿನ ಬಳಿಗೆ ಹೋಗಿ ಈ ರೀತಿ ವರವನ್ನು ಬೇಡಿಕೊಂಡನು. ಆತನು ಸಂತುಷ್ಟನಾಗಿರುವೆನೆಂದು ಹೇಳಲು ಬಿಲ್ವನು ಆನಂದಭರಿತನಾಗಿ ನಮಸ್ಕರಿಸಿ ಆತನಿಗೆ ಇಂತೆಂದನು.

೨೭–೨೮. ಬಿಲ್ವನು ಹೇಳುತ್ತಾನೆ:—ಕಪಿಲನೆಂಬ ಬ್ರಾಹ್ಮಣಶ್ರೇಷ್ಠನು ಅವಧ್ಯನೂ, ಅಜೇಯನೂ ಆಗಿರುವನು. ನನ್ನ ಸ್ನೇಹಿತನಾದ ಆತನು ನಿತ್ಯವೂ ನನಗೆ ಇಂತೆಂದು ಹೇಳುತ್ತಿರುವನು. "ನಾನು ಯಾವ ದೇವತೆಗಳಿಗೂ, ರಾಕ್ಷಸರಿಗೂ, ಅಸುರರಿಗೂ, ಪಿಶಾಚರಿಗೂ, ಯಕ್ಷರಿಗೂ, ಬೇರೆ ಯಾವ ಪ್ರಾಣಿಗಳಿಗೂ ಭಯಪಡುವವನಲ್ಲ. ನೀನು ಶಕ್ತನಾದರೆ ನಾನು ಭಯಗೊಂಡೆನೆಂದು ಹೇಳುವಂತೆ ಮಾಡು."

೨೯. ಇಂತು ಬಿನ್ನವಿಸಿಕೊಂಡ ಬಿಲ್ವನಿಗೆ ಮಹಾವಿಷ್ಣುವು "ಹಾಗೆಯೇ ನಡೆಯುವುದು" ಎಂದು ಹೇಳಿಕಳುಹಿಸಿ ಕಪಿಲಮುನಿಯ ಆಶ್ರಮಕ್ಕೆ ಬಂದನು.

ಸ ಪ್ರವಿಶ್ಯಾಶ್ರಮಂ ದೇವಂ ಕಪಿಲೇನ ಪ್ರಪೂಜಿತಃ ।
ಕಪಿಲಂ ಪ್ರತ್ಯುವಾಚೇದಂ ಸಾಮಪೂರ್ವಂ ಜನಾರ್ದನಃ ॥ ೩೦ ॥
ಭಗವನ್ಬ್ರಾಹ್ಮಣಶ್ರೇಷ್ಠ ವೇದವೇದಾಂಗಪಾರಗ ।
ವರಮೇಕಂ ವೃಣೋಮ್ಯದ್ಯ ವಿಪ್ರೇಂದ್ರ ದಾತುಮರ್ಹಸಿ ॥ ೩೧ ॥
ಪ್ರಸಾದಿತೋಽಹಂ ಬಿಲ್ವೇನ ನೃಪೇಂದ್ರೇಣ ಪುನಃ ಪುನಃ ।
ವರದೋಽಸ್ಮೀತಿ ಚಾಪ್ಯುಕ್ತೋ ವರಂ ವವ್ರೇ ಮಹಾಮುನೇ ॥ ೩೨ ॥
ತ್ವಯಾ ಪ್ರೋಕ್ತಂ ಬಿಭೇಮೀತಿ ಬ್ರೂಹಿ ತಸ್ಮಾದನುಗ್ರಹಾತ್ ।
ಅಭೀತಸ್ತ್ವಂ ತಥಾಽಪ್ಯದ್ಯ ಮದರ್ಥಂ ತು ವದ ಪ್ರಭೋ ॥ ೩೩ ॥
ಕಪಿಲಸ್ತ್ವೇವಮುಕ್ತೋ ವೈ ವಿಷ್ಣುನಾ ಮಧುರಂ ವಚಃ ।
ಉವಾಚ ನ ಬಿಭೇಮೀತಿ ಭೂಯೋ ಭೂಯೋ ಜನಾರ್ದನೇ ॥ ೩೪ ॥
ನಾಽಹಂ ವಕ್ಷ್ಯೇ ಬಿಭೇಮೀತಿ ತೇನೋಕ್ತಂ ನೋಚ್ಯತೇ ಮಯಾ ।
ಏತಚ್ಛ್ರುತ್ವಾ ವಚಸ್ತಸ್ಯ ಕಪಿಲಸ್ಯ ಜನಾರ್ದನಃ ।
ಉವಾಚ ಚಕ್ರಮುದ್ಯಮ್ಯ ಭಯಂ ವಿಪ್ರಸ್ಯ ದರ್ಶಯನ್ ॥ ೩೫ ॥
ನ ಚೇದ್ವಕ್ಷ್ಯಸಿ ಭೀತೋಽಹಂ ಚಕ್ರಂ ತೇ ಪ್ರಹರಾಮಿ ವೈ ॥ ೩೬ ॥

---

೩೦. ಆ ಆಶ್ರಮವನ್ನು ಪ್ರವೇಶಿಸಲು ಕಪಿಲನು ಆತನಿಗೆ ಅತಿಥಿಸತ್ಕಾರವನ್ನು ಮಾಡಿದನು. ನಾರಾಯಣನು ಆಗ ಕಪಿಲನನ್ನು ಕುರಿತು ಮೃದುವಾದ ಮಾತಿನಿಂದ ಇಂತೆಂದನು.

೩೧. "ಅಯ್ಯಾ ಬ್ರಾಹ್ಮಣೋತ್ತಮನೆ! ನೀನು ಸಮಸ್ತ ವೇದವೇದಾಂಗಗಳಲ್ಲಿ ನಿಷ್ಣಾತನಾದವನಾಗಿರುವೆ. ನಾನು ನಿನ್ನಲ್ಲಿ ಒಂದು ವರವನ್ನು ಬೇಡುವೆನು. ಅದನ್ನು ಕೊಡಬೇಕು.

೩೨. ಬಿಲ್ವಮಹಾರಾಜನು ಪುನಃಪುನಃ ನನ್ನನ್ನು ಬೇಡಿಕೊಳ್ಳಲು ನಾನು ಪ್ರಸನ್ನನಾಗಿ "ವರಪ್ರದನಾಗಿರುವೆನು" ಎನ್ನಲು ನನ್ನಲ್ಲಿ ವರವೊಂದನ್ನು ಬೇಡಿಕೊಂಡನು.

೩೩. ನೀನು "ಭಯಗೊಂಡಿರುವೆನು" ಎಂದು ಹೇಳಬೇಕೆಂಬುದೇ ಆತನ ವರವು. ಆದುದರಿಂದ ನನ್ನಲ್ಲಿ ಅನುಗ್ರಹವನ್ನು ಮಾಡಿ ನೀನು ನಿಜವಾಗಿಯೂ ಭಯರಹಿತನಾದರೂ ನನಗಾಗಿ ಆ ಮಾತನ್ನು ಹೇಳಬೇಕು."

೩೪. ವಿಷ್ಣುವು ಇಂತು ಸೌಮ್ಯವಚನದಿಂದ ಕೇಳಲು ಕಪಿಲಮುನಿಯು ಮತ್ತೆ ಮತ್ತೆ "ನಾರಾಯಣ! ನಾನೆಂದಿಗೂ ಭಯಪಡಲಾರೆನು" ಎಂದೇ ಹೇಳುತ್ತಿದ್ದನು.

೩೫–೩೬. "ನಾನೆಂದಿಗೂ ಭೀತನಾಗಿರುವೆನೆಂದು ಹೇಳುವುದಿಲ್ಲ; ಆ ರಾಜನು ಹೇಳಿದ ಮಾತು ನನ್ನ ಬಾಯಲ್ಲಿ ಬರುವುದಿಲ್ಲ." ಇಂತೆಂದ ಕಪಿಲನ

ಕಪಿಲ ಉವಾಚ:—

ಕಿಂ ವೃಥಾ ಪ್ರಿಯಚಕ್ರಸ್ಯ ವಿಷ್ಣೋ ಕ್ಲೇಶಮಿಹೇಚ್ಛಸಿ ।
ನಾಽಹಂ ಚಕ್ರಸ್ಯ ತೇ ಗಮ್ಯಃ ಪ್ರಸಾದಾತ್ರ್ಯಂಬಕಸ್ಯಹಿ ॥ ೩೭ ॥
ತತಃ ಸ ಮುಷ್ಟಿಮಾದಾಯ ಕುಶಾನಾಂ ಕಪಿಲಸ್ತದಾ ।
ವಾಸುದೇವಂ ಸಮಾಸಾದ್ಯ ತಿಷ್ಠ ತಿಷ್ಠೇತ್ಯಭಾಷತ ॥ ೩೮ ॥
ಅದ್ಯ ಗರ್ವಂ ಚ ದರ್ಪಂ ಚ ಬಲಂ ಯಚ್ಚ ತವಾಽದ್ಭುತಂ ।
ತತ್ಸರ್ವಂ ನಾಶಯಿಷ್ಯಾಮಿ ತಿಷ್ಠೇದಾನೀಂ ಜನಾರ್ದನ ॥ ೩೯ ॥
ತತೋ ಯುದ್ಧಂ ಸಮಭವತ್ತುಮುಲಂ ಲೋಮಹರ್ಷಣಂ ।
ನಿಮೇಷಾಂತರಮಾತ್ರಂ ತು ಕೃಷ್ಣಸ್ಯ ಕಪಿಲಸ್ಯ ಚ ॥ ೪೦ ॥
ದಿವ್ಯಾಸ್ತ್ರಾಣಾಂ ಕುಶಾನಾಂ ಚ ಯುದ್ಧಂ ಸಮಭವದ್ದೃಢಂ ।
ನಿರಾಲಂಬೇಽಂಬರೇ ದೇವಿ ದೇವಾನಾಂ ಭಯಮಾವಿಶತ್ ॥ ೪೧ ॥
ಏತಸ್ಮಿನ್ನಂತರೇ ಬ್ರಹ್ಮಾ ಸುರೈಃ ಪರಿವೃತಸ್ತದಾ ।
ಆಜಗಾಮಾಽತಿಸಂತಪ್ತಃ ಕೃಷ್ಣಂ ವಚನಮಬ್ರವೀತ್ ॥ ೪೨ ॥

---

ಮಾತನ್ನು ಕೇಳಿ ಜನಾರ್ದನನು ತನ್ನ ಚಕ್ರಾಯುಧವನ್ನೆತ್ತಿ ಹಿಡಿದು ಆತನಿಗೆ ಭಯವನ್ನು ತೋರಿಸುತ್ತ "ಭಯಗೊಂಡಿರುವೆನೆಂದು ನೀನು ಹೇಳದಿದ್ದರೆ ಚಕ್ರದಿಂದ ನಿನ್ನನ್ನು ಕಡಿದುಹಾಕುವೆನು" ಎಂದನು.

೩೭. ಕಪಿಲನು ಹೇಳುತ್ತಾನೆ:—ವಿಷ್ಣುವೆ! ಸುಮ್ಮನೆ ಏಕೆ ನಿನ್ನ ಚಕ್ರಾಯುಧಕ್ಕೆ ಕಷ್ಟವನ್ನು ಕೊಡಲೆಳಸುವೆ? ಪರಮೇಶ್ವರನ ಪ್ರಸಾದದಿಂದ ನಾನು ನಿನ್ನ ಚಕ್ರಕ್ಕೆ ಬಲಿಯಾಗಲಾರೆನು.

೩೮. ಇಂತೆಂದು ಕಪಿಲನು ಒಂದುಹಿಡಿ ಕುಶಗಳನ್ನು ತೆಗೆದುಕೊಂಡು "ನಿಲ್ಲು, ನಿಲ್ಲು" ಎಂದು ಕೂಗುತ್ತ ವಾಸುದೇವನ ಎದುರಿಗೆ ಬಂದನು.

೩೯. "ಜನಾರ್ದನ! ಇಂದು ನನ್ನ ಎದುರಿನಲ್ಲಿ ನಿಂತಿದ್ದರೆ ನಿನ್ನ ಗರ್ವವನ್ನೂ, ದರ್ಪವನ್ನೂ, ಅಲ್ಲದೆ ಅದ್ಭುತವಾದ ಬಲವೆಲ್ಲವನ್ನೂ ನಾಶ ಮಾಡುವೆನು."

೪೦. ಬಳಿಕ ಒಂದುನಿಮಿಷಮಾತ್ರದಲ್ಲಿಯೇ ಕಪಿಲನಿಗೂ, ಶ್ರೀಮನ್ನಾರಾಯಣನಿಗೂ ರೋಮಹರ್ಷಕವಾದ ದ್ವಂದ್ವಯುದ್ಧವು ಹವಣಿಸಿತು.

೪೧. ದೇವಿಯೆ! ವಿಷ್ಣುವಿನ ದಿವ್ಯಾಸ್ತ್ರಗಳಿಗೂ, ಬ್ರಾಹ್ಮಣನ ಕುಶಗಳಿಗೂ ಆಕಾಶಮಾರ್ಗದಲ್ಲಿ ಬಲವಾದ ಕಾಳೆಗವುಂಟಾಗಲು ದೇವತೆಗಳಲ್ಲಿ ಭಯವು ಮೂಡಿತು.

೪೨. ಇಷ್ಟರಲ್ಲಿಯೇ ಬ್ರಹ್ಮನು ಬಹಳ ಸಂಕಟಕ್ಕೀಡಾಗಿ ದೇವತೆಗಳ ಪರಿವಾರದೊಡನೆ ಯುದ್ಧರಂಗಕ್ಕೆ ಬಂದು ನಾರಾಯಣನಿಗೆ ಹೇಳಿದನು.

ಭಗವನ್ಭೂತಭವ್ಯೇಶ ಭವಬಂಧಭಯಾಽಪಹ ।
ಹೃಷೀಕೇಶ ಹೃಷೀಕೇಶ ಸೃಷ್ಟಿಸಂಹಾರಕಾರಕ ॥ ೪೩ ॥
ಸಮಾರಾಧ್ಯ ಜಗನ್ನಾಥ ಶಕ್ರಾದ್ಯಾಸ್ತ್ರಿದಿವೌಕಸಃ ।
ವಸಂತಿ ಮುದಿತಾಃ ಸರ್ವೇ ಸರ್ವಕಾಮಸಮನ್ವಿತಾಃ ॥ ೪೪ ॥
ಆಬ್ರಹ್ಮಸ್ತಂಬಪರ್ಯಂತಂ ತ್ರೈಲೋಕ್ಯಂ ಸಚರಾಚರಂ ।
ಉತ್ಪಾದಿತಂ ಧೃತಂ ವ್ಯಾಪ್ತಂ ವಿಷ್ಣುನಾ ಪ್ರಭವಿಷ್ಣುನಾ ॥ ೪೫ ॥
ತೇನೈಕೇನ ವಿಶುದ್ಧೇನ ಸರ್ವಗೇನ ಮಹಾತ್ಮನಾ ।
ಇತಿಸ್ಮ ಮುನಯಃ ಸರ್ವೇ ಉದಿತಾ ಮುನಿಸತ್ತಮಾಃ ।
ವದಂತಿ ಕಾರಣಂ ಚಾಽಸ್ಯ ತ್ರೈಲೋಕ್ಯಸ್ಯ ಜನಾರ್ದನಃ ॥ ೪೬ ॥
ದೇವದಾನವದೈತ್ಯೈಶ್ಚ ಮುನಿಚಾರಣಪನ್ನಗೈಃ ।
ವರಾರ್ಥಿಭಿಶ್ಚ ಪ್ರವರೈಃ ಪೂಜ್ಯಸೇ ಗರುಡಧ್ವಜ ॥ ೪೭ ॥
ಕಿಂ ಭವಾನೇವ ಗೋವಿಂದ ವೃಥಾ ಯುಧ್ಯಸಿ ಸದ್ವಿಜೈಃ ।
ಕಪಿಲಸ್ಯ ಚ ವಿಪ್ರಸ್ಯ ಹರಾಲ್ಲಬ್ಧವರಸ್ಯ ಚ ॥ ೪೮ ॥

---

೪೩. “ಸ್ವಾಮಿಯೆ! ಭೂತಭವ್ಯನಾಥನೆ! ಸಂಸಾರಬಂಧದ ಭಯವನ್ನು ಕಳೆಯುವವನೆ! ಸರ್ವೇಂದ್ರಿಯನಿಯಾಮಕನೆ! ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವವನೆ!

೪೪. ನಿನ್ನನ್ನು ಪೂಜಿಸಿದುದರಿಂದಲೇ ಮಹೇಂದ್ರಾದಿ ದೇವತೆಗಳೆಲ್ಲರೂ ಸರ್ವಭೋಗಗಳಿಂದಲೂ ಕೂಡಿ ಆನಂದದಿಂದ ತಮ್ಮತಮ್ಮ ಲೋಕಗಳಲ್ಲಿ ವಾಸಿಸುತ್ತಿರುವರು.

೪೫. ಬ್ರಹ್ಮನಾದ ನನ್ನ ಮೊದಲಾಗಿ ಹುಲ್ಲುಕಡ್ಡಿಯವರೆಗಿನ ಚರಾಚರಗಳನ್ನೊಳಗೊಂಡ ಮೂರು ಲೋಕಗಳೂ ಆಯಾ ರೂಪಗಳನ್ನು ಧರಿಸಿದ ವಿಷ್ಣುವಿನಿಂದಲೇ ಹುಟ್ಟಿರುವುವು. ಧರಿಸಲ್ಪಟ್ಟಿರುವುವು. ವ್ಯಾಪ್ತಗಳಾಗಿರುವುವು.

೪೬. ಸಕಲದೋಷರಹಿತನೂ, ಸರ್ವಾಂತರ್ಯಾಮಿಯೂ ಆದ ಆ ಒಬ್ಬ ಮಹಾತ್ಮನಿಂದಲೇ ಎಲ್ಲವೂ ನಡೆಯುವುದು.” ಇಂತೆಂದು ಧ್ಯಾನನಿರತರಾದ ಸಮಸ್ತ ಮುನಿಗಳೂ ನೀನೇ ಮೂರು ಲೋಕಗಳಿಗೂ ಕಾರಣನೆಂದು ಹೇಳುತ್ತಿರುವರು.

೪೭. ಎಲೈ ಗರುಡಧ್ವಜನೆ! ವರಗಳನ್ನು ಬೇಡುವ ದೇವತೆಗಳಿಂದಲೂ, ದಾನವರಿಂದಲೂ, ದೈತ್ಯರಿಂದಲೂ ನೀನು ಪೂಜೆಗೊಳ್ಳುತ್ತಿರುವೆ.

೪೮. ಗೋವಿಂದ! ಇಂಥ ನೀನೇ ಹೀಗೆ ಬ್ರಾಹ್ಮಣರೊಡನೆಯೂ, ವಿಶೇಷವಾಗಿ ಪರಮೇಶ್ವರನಿಂದ ವರವನ್ನು ಪಡೆದಿರುವ ಕಪಿಲನೊಡನೆಯೂ ಯುದ್ಧವನ್ನು ಮಾಡಬಹುದೆ?

ಕಿಂ ನ ವೇತ್ಸಿ ಯಥಾ ಹ್ಯೇಷ ಪ್ರಸಾದಾತ್ಪಾರಮೇಶ್ವರಾತ್ ।
ಅವಧ್ಯತ್ವಮನುಪ್ರಾಪ್ತೋ ಹ್ಯಜೇಯತ್ವಂ ಚ ಸಂಯುಗೇ ॥ ೪೯ ॥
ನ ಚೈವಂ ತ್ವದ್ವಿಧಾ ದೇವ ಬ್ರಾಹ್ಮಣೇಷು ವಿಕುರ್ವತೇ ।
ಬ್ರಹ್ಮ ಚ ಬ್ರಹ್ಮಣೋ ಮೂಲಂ ತ್ವಯೈವ ಪ್ರಾಕ್ಪ್ರತಿಶ್ರುತಂ ॥ ೫೦ ॥
ತಸ್ಮಾದಾಶು ನಿವರ್ತಸ್ವ ಮತ್ವೈನಂ ಬ್ರಾಹ್ಮಣಂ ವಿಭೋ ।
ಇತ್ಥಂ ನಿಶಮ್ಯ ದೇವೇಶೋ ವಾಕ್ಯಂ ಬ್ರಹ್ಮಮುಖಾಚ್ಚ್ಯುತಂ ॥ ೫೧ ॥
ಯೋಗೇನ ತದ್ಬಲಂ ಜ್ಞಾತ್ವಾ ಕಪಿಲಸ್ಯ ತು ಶಂಕರಂ ।
ಜಗಾಮ ಪರಮಂ ಲೋಕಂ ಪೂಜ್ಯಮಾನಸ್ತ್ರಿವಿಷ್ಟಪೈಃ ॥ ೫೨ ॥
ಗತೇ ಜನಾರ್ದನೇ ಬಿಲ್ವೋ ವಿಲಲಾಪ ಪುನಃ ಪುನಃ ।
ಯುದ್ಧಂ ಸುದಾರುಣಂ ಶ್ರುತ್ವಾ ಕೃಷ್ಣಸ್ಯ ಕಪಿಲಸ್ಯ ಚ ॥ ೫೩ ॥
ಕಥಂ ಜೇಷ್ಯಾಮಿ ಕಪಿಲಂ ಕಥಂ ಮೇ ನಿರ್ವೃತಿರ್ಭವೇತ್ ।
ಕಸ್ಯಾಽಹಂ ಶರಣಂ ಯಾಮಿ ಕೋ ಮೇ ತ್ರಾತಾ ಭವಿಷ್ಯತಿ ॥ ೫೪ ॥
ಸ ಜಿತಃ ಕಪಿಲೋ ಯುದ್ಧೇ ವಿಷ್ಣುನಾ ಪ್ರಭವಿಷ್ಣುನಾ ।
ಮಯಾ ಸಂಸ್ಪರ್ಧತೇ ನಿತ್ಯಂ ಕಥಂ ಜೇಯೋ ಭವಿಷ್ಯತಿ ॥ ೫೫ ॥

---

೪೯. ಈತನು ಮಹಾದೇವನ ಅನುಗ್ರಹದಿಂದ ಅವಧ್ಯತ್ವವನ್ನೂ, ಯುದ್ಧದಲ್ಲಿ ಅಜೇಯತ್ವವನ್ನೂ ವರಗಳಾಗಿ ಪಡೆದಿರುವುದು ನಿನಗೆ ಗೊತ್ತಿಲ್ಲವೆ?

೫೦. ದೇವೇಶ! ನಿನ್ನಂತಹವರು ಬ್ರಾಹ್ಮಣರಲ್ಲಿ ಹೀಗೆ ವರ್ತಿಸಬಾರದು. ವೇದವೇ ಅವರ ಬ್ರಾಹ್ಮಣ್ಯಕ್ಕೆ ಮೂಲವೆಂದು ನೀನೇ ಹಿಂದೆ ಪ್ರತಿಪಾದಿಸಿರುವೆ.

೫೧. ಲೋಕನಾಥನೆ! ಆದುದರಿಂದ ಇವನು ಬ್ರಾಹ್ಮಣನೆಂದು ಮನಸ್ಸಿಗೆ ತಂದುಕೊಂಡು ಬೇಗ ಹಿಂದಿರುಗು.'' ಇಂತೆಂದು ಬ್ರಹ್ಮದೇವನ ಮುಖದಿಂದ ಬಂದ ಮಾತನ್ನು ವಿಷ್ಣುವು ಕೇಳಿದನು.

೫೨. ಯೋಗಬಲದಿಂದ ಮಹೇಶ್ವರನೇ ಆ ಕಪಿಲಮುನಿಗೆ ಬಲದಾಯಕನಾಗಿರುವುದನ್ನು ತಿಳಿದು ಆತನು ದೇವತೆಗಳ ಪೂಜೆಗಳನ್ನು ಕೈಗೊಂಡು ತನ್ನ ಲೋಕಕ್ಕೆ ಹೊರಟುಹೋದನು.

೫೩. ಜನಾರ್ದನನು ಹೊರಟುಹೋಗಲು ಆತನಿಗೂ ಕಪಿಲನಿಗೂ ನಡೆದ ಘೋರವಾದ ಯುದ್ಧವನ್ನು ಕೇಳಿ ಅತ್ಯಂತ ದುಃಖದಿಂದ ಬಿಲ್ವಮಹಾರಾಜನು ಪ್ರಲಾಪಿಸಿದನು.

೫೪. ''ನಾನು ಕಪಿಲನನ್ನು ಹೇಗೆ ಜಯಿಸಲಿ? ಹೇಗೆ ನನಗೆ ಸೌಖ್ಯವುಂಟಾದೀತು? ನಾನು ಯಾರಲ್ಲಿಗೆ ಶರಣುಹೋಗಲಿ? ಯಾರು ನನಗೆ ಪಾಲಕರಾಗುವರು?

೫೫. ಲೋಕಕಾರಣನಾದ ಮಹಾವಿಷ್ಣುವಿನೊಡನೆ ಯುದ್ಧವನ್ನು ಮಾಡಿ

ಅಜೇಯಾ ಬ್ರಾಹ್ಮಣಾ ಯುದ್ಧೇ ಶಾಪಾಽನುಗ್ರಹಕಾರಕಾಃ ।
ಭಸ್ಮ ಕುರ್ಯುರ್ಜಗತ್ಸರ್ವಂ ಸದೇವಾಸುರಮಾನುಷಂ ॥ ೫೬ ॥
ಬ್ರಾಹ್ಮಂ ಹಿ ಪರಮಂ ತೇಜೋ ದೇವೈರಪಿ ದುರಾಸದಂ ।
ಏವಂ ವಿಲಪತಸ್ತಸ್ಯ ವಾಸವಃ ಸಮುಪಾಗತಃ ॥ ೫೭ ॥
ವಿಲಪಂತಂ ಕೃಶಂ ಬಿಲ್ವಂ ವಜ್ರಹಸ್ತಮವೇಕ್ಷ್ಯ ಸಃ ।
ಮಮತ್ವಾಕೃಷ್ಟಹೃದಯಃ ಪ್ರತ್ಯುವಾಚ ಪುರಂದರಃ ॥ ೫೮ ॥
ಅಲಂ ಶೋಕೇನ ಭೂಪಾಲ ಶೃಣು ಮೇ ವಚನಂ ಪರಂ ।
ಯದಾಽಹಂ ಪೀಡಿತೋ ಯುದ್ಧೇ ಶಂಬರೇಣ ದುರಾತ್ಮನಾ ।
ಬಲಿಷ್ಠೇನ ಸಗರ್ವೇಣ ತದಾ ಪೃಷ್ಟೋ ಮಯಾ ಗುರುಃ ॥ ೫೯ ॥
ಬೃಹಸ್ಪತಿರ್ಮಹಾತೇಜಾಸ್ತೇನೋಕ್ತಂ ತು ತದಾ ನೃಪ ।
ಗಚ್ಛ ಶಕ್ರ ಮಮಾದೇಶಾನ್ಮಹಾಕಾಲವನಂ ಶುಭಂ ॥ ೬೦ ॥
ಯತ್ರ ಸಂತಿ ಸುದಿವ್ಯಾನಿ ಲಿಂಗಾನಿ ವಿವಿಧಾನಿ ಚ ।
ಭುಕ್ತಿಮುಕ್ತಿಕರಾಣ್ಯೇವ ವಾಂಛಿತಾರ್ಥಪ್ರದಾನಿ ಚ ॥ ೬೧ ॥

---

ದರೂ ಕಪಿಲನು ಸೋಲಲಿಲ್ಲ. ನಿತ್ಯವೂ ನನ್ನೊಡನೆ ಸೆಣಸುತ್ತಿರುವ ಈತನನ್ನು ಜಯಿಸುವುದು ಹೇಗೆ?

೫೬. ಶಾಪಾನುಗ್ರಹಗಳನ್ನು ಕೊಡಬಲ್ಲ ಬ್ರಾಹ್ಮಣರನ್ನು ಯುದ್ಧದಲ್ಲಿ ಜಯಿಸಲಾಗದು. ದೇವದಾನವ ಮಾನವರೊಡಗೂಡಿರುವ ಮೂರು ಲೋಕಗಳನ್ನೂ ಸುಡಲು ಸಮರ್ಥರಾಗಿರುವರು.

೫೭. ಬ್ರಾಹ್ಮಣರ ಉತ್ತಮ ತೇಜಸ್ಸು ದೇವತೆಗಳಿಗೂ ತಡೆಯಲಸಾಧ್ಯವಾಗಿರುವುದು.'' ಇಂತೆಂದು ಪ್ರಲಾಪಿಸುತ್ತಿದ್ದ ಬಿಲ್ವನ ಬಳಿಗೆ ಮಹೇಂದ್ರನು ಬಂದನು.

೫೮. ವಜ್ರವನ್ನು ಕೈಯಲ್ಲಿ ಹಿಡಿದಿದ್ದರೂ ದೀನನಾಗಿ ವಿಲಪಿಸುತ್ತಿರುವ ಬಿಲ್ವನನ್ನು ಕಂಡು ಮನಸ್ಸಿನಲ್ಲಿ ಅಭಿಮಾನವುಂಟಾಗಲು ಇಂದ್ರನು ಆತನಿಗೆಂದನು.

೫೯. "ಎಲೈ ಭೂಪಾಲನೆ! ದುಃಖವನ್ನು ಸಾಕುಮಾಡು. ಉತ್ತಮವಾದ ನನ್ನ ಮಾತನ್ನು ಕೇಳು. ಹಿಂದೆ ನಾನು ದುರಾತ್ಮನೂ, ಮಹಾ ಬಲಶಾಲಿಯೂ, ಉದ್ಧಟನೂ ಆದ ಶಂಬರಾಸುರನಿಂದ ಪೀಡಿತನಾಗಿದ್ದಾಗ ಗುರುಗಳನ್ನು ಪ್ರಶ್ನೆ ಮಾಡಿದೆನು.

೬೦. ಆಗ ಮಹಾ ತೇಜಸ್ವಿಯಾದ ಆತನು ಹೇಳಿದನು. "ಇಂದ್ರನೆ! ನನ್ನ ಮಾತಿನಂತೆ ನೀನು ಶುಭಕ್ಷೇತ್ರವಾದ ಮಹಾಕಾಲವನಕ್ಕೆ ಹೋಗು.

೬೧. ಅಲ್ಲಿ ದಿವ್ಯಗಳೂ, ಭೋಗಮೋಕ್ಷಪ್ರದಗಳೂ, ಸಕಲಾಭೀಷ್ಟದಾಯಕಗಳೂ ಆದ ಅನೇಕ ವಿಧಗಳಾದ ಲಿಂಗಗಳು ನೆಲಸಿರುವುವು.

ತೇಷಾಂ ಮಧ್ಯೇ ಲಿಂಗಮೇಕಮಾರಾಧಯ ಶಚೀಪತೇ ।
ಯಸ್ಯ ದರ್ಶನಮಾತ್ರೇಣ ರಣೇ ಧೃಷ್ಟೋ ಭವಿಷ್ಯಸಿ ॥ ೬೨ ॥
ತಸ್ಯ ತದ್ವಚನಾದ್ಬಿಲ್ವ ಸಮ್ಯಗಾರಾಧನಾ ಕೃತಾ ।
ಮಯಾ ಲಿಂಗಸ್ಯ ಹರ್ಷೇಣ ಜಿತೋ ವೈ ಶಂಬರಸ್ತದಾ ।
ಪ್ರಸಿದ್ಧಿಂ ತು ಗತೋ ದೇವಃ ಸ ಚೇಂದ್ರೇಶ್ವರಸಂಜ್ಞಕಃ ॥ ೬೩ ॥
ತಸ್ಮಾತ್ತ್ವಂ ಪಶ್ಚಿಮಾಮಾಶಾಂ ಗತ್ವಾ ಕ್ಷೇತ್ರಸ್ಯ ತಸ್ಯ ವೈ ।
ಸಮಾರಾಧಯ ಯತ್ನೇನ ಲಿಂಗಂ ವರುಣಪೂಜಿತಂ ।
ತಲ್ಲಿಂಗಂ ತ್ರಿಷು ಲೋಕೇಷು ತ್ವನ್ನಾಮ್ನಾ ಖ್ಯಾತಿಮೇಷ್ಯತಿ ॥ ೬೪ ॥
ಕಪಿಲಸ್ತ್ವತ್ಸಖಾ ವಿಪ್ರೋ ಜಿತೋಽಸ್ಮೀತಿ ವದಿಷ್ಯತಿ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾನ್ಮಿತ್ರಭಾವಂ ಗಮಿಷ್ಯತಿ ॥ ೬೫ ॥
ಇತ್ಯುಕ್ತ್ವಾ ತು ಗತೇ ಶಕ್ರೇ ದೇವಲೋಕಂ ಯಶಸ್ವಿನಿ ।
ಪೂಜಯಾಮಾಸ ಭಾವೇನ ಪುಷ್ಪೈರ್ದಿವ್ಯೈಃ ಸುಗಂಧಿಭಿಃ ॥ ೬೬ ॥
ಜಗಾಮ ಬಿಲ್ವೋ ಭೂಪಾಲೋ ಮಹಾಕಾಲವನಂ ಶುಭಂ ।
ದದರ್ಶ ಪಶ್ಚಿಮೇ ಭಾಗೇ ಲಿಂಗಂ ತ್ರಿದಶಪೂಜಿತಂ ॥ ೬೭ ॥

---

೬೨. ಶಚೀಪತಿಯೆ! ಅವುಗಳಲ್ಲಿ ನಾನು ತೋರಿಸುವ ಲಿಂಗವೊಂದನ್ನು ಪೂಜಿಸು. ಅದನ್ನು ನೋಡುವುದರಿಂದಲೇ ನೀನು ಯುದ್ಧದಲ್ಲಿ ಅಜೇಯನಾಗುವೆ."

೬೩. ಬಿಲ್ವನೆ! ಆತನ ಮಾತನ್ನು ಕೇಳಿ ನಾನು ಆ ಲಿಂಗದ ಪೂಜೆಯನ್ನು ವಿಧ್ಯುಕ್ತರೀತಿಯಿಂದ ಮಾಡಲು ಆ ಲಿಂಗವು ಪ್ರಸನ್ನವಾದುದರಿಂದ ನಾನು ಶಂಬರಾಸುರನನ್ನು ಜಯಿಸಿದೆನು. ಅಂದಿನಿಂದ ಆ ಲಿಂಗವು ಇಂದ್ರೇಶ್ವರನೆಂದೇ ಪ್ರಸಿದ್ಧಿಯನ್ನು ಪಡೆಯಿತು.

೬೪. ಆದುದರಿಂದ ನೀನೂ ಅದೇ ಕ್ಷೇತ್ರದ ಪಶ್ಚಿಮ ದಿಕ್ಕಿನಲ್ಲಿರುವ ಲಿಂಗದ ಬಳಿಗೆ ಹೋಗು. ವರುಣನಿಂದ ಪೂಜಿತವಾದ ಆ ಲಿಂಗವನ್ನು ಪ್ರಯತ್ನದಿಂದ ಆರಾಧಿಸು. ಆ ಲಿಂಗವು ನಿನ್ನ ಹೆಸರಿನಿಂದಲೇ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗುವುದು.

೬೫. ಕಪಿಲನೂ ಅದರ ಪ್ರಭಾವದಿಂದ ಜಿತನಾದೆನೆಂದು ಒಪ್ಪಿಕೊಂಡು ಮುನ್ನಿನಂತೆಯೇ ನಿನಗೆ ಪ್ರಿಯಸ್ನೇಹಿತನಾಗುವನು. ಆ ಲಿಂಗದ ಪ್ರಭಾವದಿಂದ ನಿನ್ನಲ್ಲಿ ಸ್ನೇಹಭಾವವನ್ನು ತೋರಿಸುವನು."

೬೬. ಪಾರ್ವತಿಯೆ! ಇಂತೆಂದು ನುಡಿದು ಮಹೇಂದ್ರನು ದೇವಲೋಕಕ್ಕೆ ಹೊರಟುಹೋದನು. ಬಿಲ್ವನೂ ಆತನನ್ನು ಸುಗಂಧಯುಕ್ತಗಳಾದ ಉತ್ತಮ ಪುಷ್ಪಗಳಿಂದ ಪೂಜಿಸಿ ಕಳುಹಿಸಿದನು.

೬೭. ಬಳಿಕ ಆ ರಾಜನೂ ಮಹಾಕಾಲವನವೆಂಬ ಪವಿತ್ರಕ್ಷೇತ್ರವನ್ನು

ಮುಕ್ತಾಫಲೈಶ್ಚ ರತ್ನೈಶ್ಚ ವಾಸೋಭಿರ್ಭೂಷಣೈಸ್ತಥಾ ।
ಏತಸ್ಮಿನ್ನಂತರೇ ಚೈವ ಕಪಿಲೋಽಪಿ ಸಮಾಗತಃ ॥ ೧೮ ॥
ದದರ್ಶ ಬಿಲ್ವಂ ಭೂಪಾಲಂ ಪೂಜಯಂತಂ ಪುನಃ ಪುನಃ ।
ಶರೀರೇ ತಸ್ಯ ಬಿಲ್ವಸ್ಯ ಮದೀಯಂ ರೂಪಮುತ್ತಮಂ ।
ದೃಷ್ಟ್ವಾ ಮತ್ವಾ ಮಹಾದೇವಂ ಜಿತೋಽಸ್ಮೀತಿ ದ್ವಿಜೋಽಬ್ರವೀತ್ ॥ ೧೯ ॥
ಪ್ರಾರ್ಥಯಾಮಿ ತ್ವಯಾ ಸಖ್ಯಮನಂತಂ ಶಿವಸನ್ನಿಧೌ ।
ಏವಮುಕ್ತಸ್ತದಾ ಬಿಲ್ವಃ ಕಪಿಲೇನ ಮಹಾತ್ಮನಾ ।
ಪ್ರಸನ್ನಃ ಪ್ರಾಂಜಲಿರ್ಭೂತ್ವಾ ಕಪಿಲಂ ದ್ವಿಜಸತ್ತಮಂ ॥ ೨೦ ॥
ಏವಂ ಭವತು ಭದ್ರಂ ತೇ ಕೃತಾರ್ಥೋಽಹಂ ಮಹಾತ್ಮನಾ ।
ಸಖ್ಯಂ ತದೇವ ಭವತು ಶಶ್ವದ್ಯದಸಿ ಮನ್ಯಸೇ ॥ ೨೧ ॥
ಏವಮನ್ಯೋನ್ಯಮುಕ್ತ್ವಾ ತೌ ಕೃತ್ವಾ ಸಖ್ಯಮನುತ್ತಮಂ ।
ಚಿಕ್ರೀಡತುಶ್ಚಿರಂ ಕಾಲಂ ಪರಂ ಹರ್ಷಮುಪಾಗತೌ ॥ ೨೨ ॥

---

ಸೇರಿ ಅದರ ಪಶ್ಚಿಮದಿಕ್ಕಿನಲ್ಲಿ ದೇವತೆಗಳಿಂದಲೂ ಪೂಜೆಯನ್ನು ಸ್ವೀಕರಿಸುತ್ತಿದ್ದ ದಿವ್ಯಲಿಂಗವನ್ನು ಕಂಡನು.

೧೮. ಮುತ್ತುಗಳಿಂದಲೂ, ನವರತ್ನಗಳಿಂದಲೂ, ವಸ್ತ್ರಗಳಿಂದಲೂ, ಆಭರಣಗಳಿಂದಲೂ ಅವರು ಲಿಂಗದ ಪೂಜೆಯನ್ನು ಮಾಡುತ್ತಿರುವಾಗಲೇ ಬಿಲ್ವನೂ ಅಲ್ಲಿಗೆ ಪ್ರಾಪ್ತನಾದನು.

೧೯. ಆ ಕಪಿಲಮುನಿಯು ಪುನಃ ಪುನಃ ಆ ಲಿಂಗವನ್ನು ಬಿಲ್ವನು ಪೂಜಿಸುತ್ತಿದ್ದುದನ್ನು ಕಂಡನು. ಮತ್ತು ಆತನ ದೇಹದಲ್ಲಿ ನನ್ನ ದಿವ್ಯರೂಪವನ್ನು ಕಂಡು ಈತನೇ ಮಹಾದೇವಾಂಶಸಂಭೂತನೆಂದು ತಿಳಿದು ತಾನು ಪರಾಜಿತನಾದೆನೆಂದೊಪ್ಪಿಕೊಂಡನು.

೨೦. "ಮಹೇಶ್ವರನ ಸನ್ನಿಧಿಯಲ್ಲಿ ನಿಂತು ನಿನ್ನೊಡನೆ ಯಾವಜ್ಜೀವವೂ ಸ್ನೇಹವಿರಬೇಕೆಂದು ನಿನ್ನನ್ನು ಬೇಡುತ್ತಿರುವೆನು." ಇಂತು ಮಹಾತ್ಮನಾದ ಕಪಿಲನು ಹೇಳಲು, ಬಿಲ್ವನು ಶಾಂತಮನಸ್ಕನಾಗಿ ಆ ಬ್ರಾಹ್ಮಣೋತ್ತಮನಿಗೆ ಕೈಮುಗಿದುಕೊಂಡು ಹೇಳಿದನು.

೨೧. "ಹಾಗೆಯೇ ಆಗಲಿ. ನಿನಗೆ ಶುಭವಾಗಲಿ. ಮಹಾತ್ಮನಾದ ನಿನ್ನಿಂದ ನಾನು ಕೃತಾರ್ಥನಾದೆನು. ನೀನು ಮನಸ್ಸಿನಲ್ಲಿ ನಿರ್ಧರಿಸಿರುವ ಸ್ನೇಹವೇ ನಮ್ಮಿಬ್ಬರಲ್ಲಿ ಶಾಶ್ವತವಾಗಿ ನಿಲ್ಲಲಿ."

೨೨. ಇಂತೆಂದು ಪರಸ್ಪರ ಸಂಭಾಷಣದಿಂದ ಪುನಃ ಅವರು ಸಖ್ಯವನ್ನು ಮಾಡಿಕೊಂಡು ಅತ್ಯಂತಾನಂದಭರಿತನಾಗಿ ಬಹಳಕಾಲದವರೆಗೂ ಕ್ರೀಡಿಸುತ್ತಿದ್ದರು.

ತಸ್ಯ ಲಿಂಗಸ್ಯ ಮಾಹಾತ್ಮ್ಯಾದ್ಭೂಯೋ ರಾಜ್ಯಂ ಚಕಾರ ಸಃ ।
ಸ ಹಿ ಮಿತ್ರೇಣ ಭೂಪಾಲೋ ಬಿಲ್ವೋ ದೇವಿ ಮುದಾನ್ವಿತಃ ॥ ೭೩ ॥
ತದಾ ಪ್ರಭೃತಿ ವಿಖ್ಯಾತೋ ದೇವೋ ಬಿಲ್ವೇಶ್ವರಃ ಕ್ಷಿತೌ ।
ಬಿಲ್ವೇನಾರಾಧಿತೋ ಲೋಕೇ ವಾಂಛಿತಾರ್ಥಫಲಪ್ರದಃ ॥ ೭೪ ॥
ಯೇ ಪಶ್ಯಂತಿ ವಿಶಾಲಾಕ್ಷಿ ದೇವಂ ಬಿಲ್ವೇಶ್ವರಂ ಪರಂ ।
ತೇ ಕೃತಾರ್ಥಾ ಭವಿಷ್ಯಂತಿ ಸರ್ವಪಾತಕವರ್ಜಿತಾಃ ॥ ೭೫ ॥
ಯೇಽನುಮೋದಂತಿ ದೇವಸ್ಯ ದರ್ಶನಂ ಪರ್ವತಾತ್ಮಜೇ ।
ತೇಽಪಿ ಪಾಪವಿನಿರ್ಮುಕ್ತಾಃ ಪ್ರಯಾಂತಿ ಮಮ ಮಂದಿರಂ ॥ ೭೬ ॥
ಸಮತೀತಂ ಭವಿಷ್ಯಂ ಚ ಕುಲಾನಾಮಯುತಂ ನರಃ ।
ಮಮ ಲೋಕಂ ನಯತ್ಯಾಶು ತಸ್ಯ ಲಿಂಗಸ್ಯ ದರ್ಶನಾತ್ ॥ ೭೭ ॥
ಪ್ರಯಾಂತಿ ಪಿತರೋ ಹೃಷ್ಟಾ ಮಮ ಲೋಕೇಽಪ್ಯತಂದ್ರಿತಾಃ ।
ವಿಮುಕ್ತಾಃ ಪಾತಕೈರ್ಘೋರೈಃ ಕೃತ್ವಾ ಲಿಂಗಸ್ಯ ದರ್ಶನಂ ॥ ೭೮ ॥
ಕೃತ್ವಾಽಪಿ ಪಾತಕಂ ಘೋರಂ ಬ್ರಹ್ಮಹತ್ಯಾದಿಕಂ ನರಃ ।
ತತ್ಪಾಪಂ ವಿಲಯಂ ಯಾತಿ ಶ್ರೀಬಿಲ್ವೇಶ್ವರದರ್ಶನಾತ್ ॥ ೭೯ ॥

---

೭೩–೭೪. ದೇವಿಯೆ! ಆ ಲಿಂಗದ ಮಾಹಾತ್ಮ್ಯದ ಫಲವಾಗಿ ಬಿಲ್ವಮಹಾರಾಜನು ಪುನಃ ಮಿತ್ರನೊಡಗೂಡಿ ಆನಂದದಿಂದಿರುತ್ತ ರಾಜ್ಯಭಾರವನ್ನು ಮಾಡುತ್ತಿದ್ದನು. ಬಿಲ್ವನು ಅಂದು ಪೂಜಿಸಿದುದರಿಂದ ಸರ್ವಾಭೀಷ್ಟಪ್ರದನಾದ ಆ ಮಹಾದೇವನು ಭೂಮಂಡಲದಲ್ಲಿ ಬಿಲ್ವೇಶ್ವರನೆಂದೇ ಪ್ರಖ್ಯಾತನಾಗಿರುವನು.

೭೫. ವಿಶಾಲಾಕ್ಷಿಯೆ! ಯಾರು ಸರ್ವೋತ್ತಮವಾದ ಈ ಬಿಲ್ವೇಶ್ವರ ಲಿಂಗವನ್ನು ನೋಡುವರೊ, ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಕೃತಕೃತ್ಯರಾಗುವರು.

೭೬. ಪರ್ವತರಾಜಕುಮಾರಿಯೆ! ಯಾರು ಈ ಲಿಂಗದ ದರ್ಶನವನ್ನು ಅನುಮೋದಿಸುವರೊ, ಅವರೂ ತಮ್ಮ ಪಾತಕಗಳನ್ನು ಕಳೆದುಕೊಂಡು ನನ್ನ ನಿವಾಸವನ್ನು ಸೇರುವರು.

೭೭. ಆ ಲಿಂಗವನ್ನು ನೋಡುವುದರಿಂದಲೇ ಮಾನವನು ಹಿಂದಣ ಹತ್ತು ಸಾವಿರ ಕುಲದವರನ್ನೂ ಮುಂದೆ ಬರಲಿರುವ ಹತ್ತುಸಾವಿರ ತಲೆಗಳ ಸಂತತಿಯನ್ನೂ ಉದ್ಧರಿಸಿ ನನ್ನ ಲೋಕಕ್ಕೆ ಕರೆದುಕೊಂಡುಹೋಗುವನು.

೭೮. ಈ ಲಿಂಗದ ದರ್ಶನವನ್ನು ಮಾಡಿದವನ ಪಿತೃಗಳು ತಮ್ಮ ಘೋರ ಪಾತಕಗಳನ್ನು ಕಳೆದುಕೊಂಡು ಆನಂದದಿಂದ ಶಾಶ್ವತವಾಗಿ ನನ್ನ ಲೋಕದಲ್ಲಿ ವಾಸಿಸುವರು.

೭೯. ಬ್ರಹ್ಮಹತ್ಯೆಯೇ ಮುಂತಾದ ಮಹಾಪಾತಕಗಳನ್ನು ಮಾಡಿರುವ

ಯಾ ತಿಥಿಃ ಶ್ರೂಯತೇ ದೇವಿ ಕೃಷ್ಣಪಕ್ಷೇ ತ್ರಯೋದಶೀ ।
ಸಾ ಪ್ರೋಕ್ತಾ ವಲ್ಲಭಾ ತಸ್ಯ ಸರ್ವಪಾತಕನಾಶಿನೀ ॥ ೮೦ ॥
ಯೇಽರ್ಚಯಂತಿ ನರಾಸ್ತಸ್ಯಾಂ ದೇವಂ ಬಿಲ್ವೇಶ್ವರಂ ಪ್ರಿಯೇ ।
ನ ತೇಷಾಂ ಪುನರಾವೃತ್ತಿರ್ಘೋರೇ ಸಂಸಾರಗಹ್ವರೇ ॥ ೮೧ ॥
ಕರ್ಮಣಾ ಮನಸಾ ವಾಚಾ ಯತ್ಪಾಪಂ ಸಮುಪಾರ್ಜಿತಂ ।
ತತ್ಕ್ಷಾಲಯತಿ ದೇವೋಽಸೌ ತಿಥೌ ತಸ್ಯಾಂ ಸಮರ್ಚಿತಃ ॥ ೮೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಬಿಲ್ವೇಶ್ವರಸ್ಯ ದೇವಸ್ಯ ಶ್ರೂಯತಾಮುತ್ತರೇಶ್ವರಂ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಬಿಲ್ವೇಶ್ವರಮಾಹಾತ್ಮ್ಯವರ್ಣನಂ"ನಾಮ
ತ್ರ್ಯಶೀತಿತಮೋಽಧ್ಯಾಯಃ

---

ಮಾನವನಾದರೂ ಈ ಬಿಲ್ವೇಶ್ವರನ ದರ್ಶನವನ್ನು ಮಾಡುವುದರಿಂದ ತನ್ನ ಪಾಪವನ್ನು ಕಳೆದುಕೊಳ್ಳುವನು.

೮೦. ದೇವಿಯೆ! ಪ್ರತಿಮಾಸದ ಕೃಷ್ಣಪಕ್ಷದ ತ್ರಯೋದಶಿಯೆಂಬ ತಿಥಿಯ ದಿವಸ ಸಕಲ ಪಾಪಾಪನೋದಕವಾಗಿ ಬಿಲ್ವೇಶ್ವರನಿಗೆ ಪರಮಪ್ರಿಯವಾಗಿರುವುದು.

೮೧. ಪ್ರಿಯಳೆ! ಆ ಶುಭದಿನದಲ್ಲಿ ಯಾರು ಬಿಲ್ವೇಶ್ವರನ ಪೂಜೆಯನ್ನು ಮಾಡುವರೊ, ಅವರಿಗೆ ಮತ್ತೆ ಈ ಭಯಂಕರ ಸಂಸಾರಸಮುದ್ರದಲ್ಲಿ ಬೀಳುವ ಪ್ರಸಂಗವಿರುವುದಿಲ್ಲ.

೮೨. ಮನುಷ್ಯನು ದೇಹದಿಂದಲೂ, ಮನಸ್ಸಿನಿಂದಲೂ, ಮಾತುಗಳಲ್ಲಿಯೂ ಯಾವ ಪಾತಕವನ್ನು ಮಾಡಿರುವನೊ, ಅವುಗಳನ್ನೆಲ್ಲ ಈ ಬಿಲ್ವೇಶ್ವರನ ದರ್ಶನವು ಕಳೆಯುವುದು.

೮೩. ದೇವಿಯೆ! ಇಂತು ನಿನಗೆ ಬಿಲ್ವೇಶ್ವರನ ಮಹಿಮಾನ್ವಿತವಾದ ಚರಿತ್ರೆಯನ್ನು ಹೇಳಿದೆನು. ಇನ್ನು ಉತ್ತರೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಬಿಲ್ವೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರಶೀತಿತಮೋಽಧ್ಯಾಯಃ

### ಉತ್ತರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಉತ್ತರೇಶ್ವರಮಾಹಾತ್ಮ್ಯಮಶೇಷಪಾಪನಾಶನಂ ।
ಜನ್ಮಮೃತ್ಯುಜರಾವ್ಯಾಧಿಸ್ಫೋಟನಂ ಶೃಣು ಪಾರ್ವತಿ ॥ ೧ ॥
ಅಯೋಧ್ಯಾಯಾಮತಿಖ್ಯಾತಕುಲೋತ್ಪನ್ನಶ್ಚ ಪಾರ್ಥಿವಃ ।
ಸುಧೀಃ ಪರೀಕ್ಷಿನ್ನಾಮ್ನಾ ಚ ಮೃಗಯಾಮಗಮತ್ಸ ಚ ॥ ೨ ॥
ಮೃಗಮನುಸಸಾರಾಽಥ ಮೃಗೋ ದೂರಮಪಾಸರತ್ ॥ ೩ ॥
ತದಾಽಧ್ವನಿ ಜಾತಶ್ರಮಃ ಕ್ಷುತ್ತೃಷ್ಣಾಽಭಿಭೂತಃ ।
ಕಸ್ಮಿಂಶ್ಚಿದ್ವನೋದ್ದೇಶೇ ನೀಲವನಮಪಶ್ಯಚ್ಚಾವಿವೇಶ ॥ ೪ ॥
ತಸ್ಯ ವನಖಂಡಸ್ಯ ದಕ್ಷಿಣಭಾಗೇ ಸರೋ ದೃಷ್ಟ್ವಾ ಸಾಶ್ವ ಏವ ವ್ಯಗಾಹತ ॥
ಅಥಾಽಶ್ವಸ್ಥಃ ಸನ್ಮೃಣಾಲಮಶ್ವಸ್ಯಾಗ್ರತೋ
ನಿಕ್ಷಿಪ್ಯ ಪುಷ್ಕರಿಣೀಂ ಸಮುಪಾವಿಶತ್ ॥ ೬ ॥

---

### ಕನ್ನಡದ ಅನುವಾದ

#### ಉತ್ತರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ ! ಸಕಲ ಪಾತಕಗಳನ್ನು ನಾಶಗೊಳಿಸುವುದೂ, ಜನನ, ಮರಣ, ಮುಪ್ಪು, ರೋಗಾದಿಗಳನ್ನು ಕಳೆಯುವುದೂ ಆದ ಉತ್ತರೇಶ್ವರನ ಮಾಹಾತ್ಮ್ಯದ ಕಥೆಯನ್ನು ಕೇಳು.

೨. ಅಯೋಧ್ಯೆಯಲ್ಲಿ ಪ್ರಖ್ಯಾತಕುಲೋತ್ಪನ್ನನೂ, ಮಹಾಪ್ರಾಜ್ಞನೂ ಆದ ಪರೀಕ್ಷಿತನೆಂಬ ಮಹಾರಾಜನೊಮ್ಮೆ ಬೇಟೆಗಾಗಿ ಹೊರಟನು.

೩. ಆತನೊಂದು ಜಿಂಕೆಯನ್ನಟ್ಟಿಸಿಕೊಂಡುಹೋಗಲು ಅದು ದೂರದೂರಕ್ಕೆ ಓಡಿಹೋಯಿತು.

೪. ಅದನ್ನು ಹಿಂಬಾಲಿಸಿ ದಾರಿಯಲ್ಲಿ ಆಯಾಸವಾಗಲು ಹಸಿವು ಬಾಯಾರಿಕೆಗಳಿಂದ ನೊಂದು ಒಂದಾನೊಂದು ಅರಣ್ಯಮಧ್ಯದಲ್ಲಿ ನೀಲವನರಾಜಿಯನ್ನು ಕಂಡು ಅದನ್ನು ಪ್ರವೇಶಿಸಿದನು.

೫. ಆ ವನದ ದಕ್ಷಿಣಭಾಗದಲ್ಲಿ ಒಂದು ಸರೋವರವನ್ನು ಕಂಡು ಕುದುರೆ ಮೇಲಿನಿಂದಲೇ ಅದರಲ್ಲಿ ಸ್ನಾನಮಾಡಿದನು.

೬. ಬಳಿಕ ಕುದುರೆಯ ಮುಂದೆ ತಾವರೆಯ ದಂಟುಗಳನ್ನು ಹಾಕಿ ತಾನೂ ಸರೋವರದ ಬಳಿಯಲ್ಲಿ ಕುಳಿತುಕೊಂಡಿದ್ದನು.

ಶಯಿತಸ್ತತಃ ಶಯಾನೋ ಗೀತಮಶೃಣೋತ್ ॥ ೭ ॥
ಸ ಶ್ರುತ್ವಾಽಚಿಂತಯನ್ನೇಹ ಮನುಷ್ಯಗತಿಂ ಪ್ರಪಶ್ಯಾಮಿ ॥ ೮ ॥
ಕಸ್ಯಖಲ್ವಯಂ ಗೀತಶಬ್ದ ಇತ್ಯವಲೋಕಯಾಮಾಸ ॥ ೯ ॥
ಅಥಾಽಪಶ್ಯತ್ಕನ್ಯಾಂ ಪರಮರೂಪದರ್ಶನೀಯಾಂ ।
ಪುಷ್ಪಾಣಿ ವಿಚಿನ್ವಂತೀಂ ಚಾಽಥ ರಾಜಾ ಸಮೀಪೇ ಪರ್ಯಕ್ರಾಮತ್॥೧೦॥
ತಾಮಬ್ರವೀದ್ರಾಜಾ ಕಸ್ಯಾಽಸಿ ತ್ವಂ ಕನ್ಯಾ ।
ಪರಮರೂಪದರ್ಶನೀಯಾ ಪುಷ್ಪಾಣಿ ವಿಚಿನ್ವಂತೀ ॥ ೧೧ ॥
ಸಾಽಥ ರಾಜಸಮೀಪೇ ಗತ್ವೇತಿ ಪ್ರೋವಾಚ ಕನ್ಯಾಽಸ್ಮೀತಿ ॥ ೧೨ ॥

ರಾಜೋವಾಚ :—

ಅರ್ಥೀ ತವಾಽಸ್ಮೀತಿ ॥ ೧೩ ॥

ಅಥೋವಾಚ ಕನ್ಯಾ :—

ಸಮಯೇನಾಽಹಂ ತ್ವಯಾ ಶಕ್ಯೋಪಾಲಬ್ಧುಂ ನಾಽನ್ಯಥೇತಿ ॥ ೧೪ ॥
ತಾಂ ರಾಜಾ ಸಮಪೃಚ್ಛತ್ಕಸ್ತೇ ಸಮಯ ಇತಿ ॥ ೧೫ ॥

---

೭. ಹಾಗೆಯೇ ಮಲಗಿರಲು ಆ ಮಹಾರಾಜನು ಸಂಗೀತದ ಧ್ವನಿಯನ್ನು ಕೇಳಿದನು.

೮. ಕೇಳಿ ಆತನಿಂತೆಂದು ಯೋಚಿಸಿದನು. "ಇಲ್ಲಿ ಯಾವ ಮನುಷ್ಯರ ಸಂಚಾರವನ್ನೂ ಕಾಣೆನಲ್ಲವೆ?

೯. ಈ ಗಾಯನದ ಶಬ್ದವು ಯಾರದಾಗಿರಬಹುದು?" ಇಂತೆಂದು ಸುತ್ತಲೂ ನೋಡಿದನು.

೧೦. ಆಗ ಸರ್ವಾಂಗಸುಂದರಿಯೂ, ದರ್ಶನೀಯಳೂ ಆದ ಒಬ್ಬ ಕನ್ಯೆಯು ಹೂವುಗಳನ್ನು ಬಿಡಿಸುತ್ತಿದ್ದುದನ್ನು ಕಂಡು ರಾಜನು ಆಕೆಯ ಬಳಿಯಲ್ಲಿಯೇ ಓಡಾಡುತ್ತಿದ್ದನು.

೧೧. ಅಲ್ಲದೆ ಆಕೆಯನ್ನು ಕುರಿತು, "ಪುಷ್ಪಗಳನ್ನು ಬಿಡಿಸುತ್ತಿರುವ ಸುಂದರಿಯಾದ ನೀನು ಯಾರ ಮಗಳು?" ಎಂದು ಪ್ರಶ್ನೆಮಾಡಿದನು.

೧೨. ಆಕೆಯೂ ಆತನ ಬಳಿಗೆ ಬಂದು "ನಾನು ಅವಿವಾಹಿತಳಾಗಿರುವೆನು" ಎಂದು ಹೇಳಿದಳು.

೧೩. ರಾಜನು "ನಾನೇ ನಿನ್ನನ್ನು ಕೋರಿರುವೆನು" ಎಂದನು.

೧೪. ಆಗ ಕನ್ಯೆಯು ಹೇಳುತ್ತಾಳೆ:—"ಒಂದು ನಿಯಮದ ಮೇಲೆ ಮಾತ್ರ ನನ್ನನ್ನು ಪಡೆಯುವೆಯಲ್ಲದೆ ಬೇರೆಯಾಗಲಾರದು."

೧೫. ರಾಜನು, "ಆ ನಿನ್ನ ನಿಯಮವೇನು" ಎಂದು ಪ್ರಶ್ನಿಸಿದನು.

ತತಃ ಕನ್ಯಾ ತಮುವಾಚ ನೋದಕಂ ದರ್ಶಯಿತವ್ಯಮಿತಿ ॥ ೧೬ ॥
ರಾಜಾ ಬಾಢಮಿತ್ಯುಕ್ತ್ವಾ ತಾಂ ಸಮಾಗಮ್ಯ ತಯಾ ಸಹಾಽಽಸ್ತೇ॥ ೧೭ ॥
ತತ್ರೈವಾಸನ್ನೇ ರಾಜನಿ ಸೇನಾ ತ್ವಾಗಚ್ಛತ್ ತಯಾ
ಸಹೋಪವಿಷ್ಟಂ ರಾಜಾನಂ ಪರಿವಾರ್ಯ ಚಾಽತಿಷ್ಠತ್ ॥ ೧೮ ॥
ಸಭಾಜಿತಶ್ಚ ರಾಜಾ ತಥೈವ ಶಿಬಿಕಯಾ ಪ್ರಾಯಾದಥ
ಝುಟಿತಿ ತಯಾ ಸಹ ಸ್ವಂ ನಗರಮುಸುಪ್ರಾಪ್ಯ ರಹಸಿ ತಯಾ ಸಹ
ರಮಮಾಣಃ ನಾನ್ಯಾಽನ್ಯಂ ಕಿಂಚಿದಪಶ್ಯದಥ ಪ್ರಧಾನೋಽಮಾತ್ಯ
ಸ್ತಸ್ಯಾಽಭ್ಯಾಶ ಚರಾಸ್ತಾಃ ಸ್ತ್ರಿಯೋಽಭ್ಯ ಪೃಚ್ಛತ್ ॥ ೧೯ ॥
ಕಿಮತ್ರ ಪ್ರಯೋಜನಂ ವಿದ್ಯತೇ ಇತ್ಯಬ್ರುವಂಸ್ತಾಃ
ಸ್ತ್ರಿಯೋ ಪೂರ್ವಮೇವ ಪಶ್ಯಾಮಸ್ತದುದಕಂ ನಾತ್ರಾಶ್ರಿಯತ ಇತಿ॥ ೨೦ ॥
ಅಥಾಽಮಾತ್ಯಶ್ಚ ನಿರುದಕಂ ಕಾರಯಿತ್ವಾ ದಾರುವೃಕ್ಷಂ
ವೃದ್ಧಪುಷ್ಪಫಲಂ ಶರದ್ಯುಪಲಭ್ಯ ರಾಜಾನಮಬ್ರವೀತ್
ವನಮಿದಮನುದಕಂ ಸಾಧ್ವತ್ರ ರಮ್ಯತಾಮಿತಿ ॥ ೨೧ ॥

---

೧೬. ಆಗಲಾ ಕನ್ಯೆಯು "ನನ್ನೊಡನಿರುವವರೆಗೂ ನನಗೆ ನೀರನ್ನು ತೋರಿಸಬಾರದು" ಎಂದು ಹೇಳಿದಳು.

೧೭. ರಾಜನು ಹಾಗೆಯೇ ಆಗಲೆಂದೊಪ್ಪಿಕೊಂಡು ಆಕೆಯೊಡಗೂಡಿದನು.

೧೮. ಅಲ್ಲಿದ್ದಂತೆಯೇ ಆತನ ಸೈನ್ಯವು ಬಂದು ಆಕೆಯೊಡನೆ ಕುಳಿತಿದ್ದ ರಾಜನನ್ನು ಸುತ್ತುವರೆದು ಬಿಡಾರವನ್ನು ಹಾಕಿಕೊಂಡಿತು.

೧೯. ಅವರ ಪೂಜೆಯನ್ನು ಕೈಕೊಂಡು ರಾಜನು ಅಂದಣವನ್ನೇರಿ ಹೊರಟನು. ಸ್ವಲ್ಪಕಾಲದಲ್ಲಿಯೇ ತನ್ನ ರಾಜಧಾನಿಯನ್ನು ಸೇರಿ ಏಕಾಂತದಲ್ಲಿ ಆ ಕನ್ಯೆಯೊಡನೆ ರಮಿಸುತ್ತ ಬೇರೆ ಯಾವುದನ್ನೂ ನೋಡಲೊಲ್ಲದವನಾಗಿದ್ದನು. ಆಗ ಮುಖ್ಯಮಂತ್ರಿಯು ಅಂತಃಪುರದ ಬಳಿಗೆ ಬಂದು ಅಲ್ಲಿ ಓಡಾಡುತ್ತಿದ್ದ ಪರಿಚಾರಿಕೆಯರನ್ನು ಪ್ರಶ್ನೆಮಾಡಿದನು.

೨೦. ಇಲ್ಲಿ ಯಾವ ವಿಶೇಷವಿರುವುದೆಂದು ಕೇಳಿದ ಆತನಿಗೆ ಸ್ತ್ರೀಯರೆಂದರು. "ಒಂದು ಅಪೂರ್ವವನ್ನು ನೋಡಿದೆವು. ಆಕೆಯ ಬಳಿಯಲ್ಲಿ ನೀರನ್ನು ತರಲಾಗದು."

೨೧. ಇದನ್ನು ಕೇಳಿ ಮಂತ್ರಿಯು ತಟಾಕಾದಿಗಳಿಲ್ಲದಂತೆ ಹಳೆಯ ಮರಗಳನ್ನು ಪುಷ್ಪಫಲಭರಿತಗಳನ್ನಾಗಿ ಮಾಡಿ ಶರತ್ಕಾಲದಲ್ಲಿ ರಾಜನ ಬಳಿಗೆ ಬಂದು ಹೇಳಿದನು. "ಈ ವನದಲ್ಲಿ ನೀರೆಂಬುದಿಲ್ಲ. ನಿನ್ನಿಚ್ಛೆಯಂತೆ ಇಲ್ಲಿ ವಿಹರಿಸಿಕೊಂಡಿರು."

ಸ ತಸ್ಯ ವಚನಾತ್ತಯೈವ ಸಹ ದೇವ್ಯಾವನಂ ಪ್ರಾವಿಶತ್ ॥ ೨೨ ॥
ಸಕಲತ್ರಸ್ತಸ್ಮಿನ್ವನೇ ರಮ್ಯೇ ತಯೈವ ಸಹ ರೇಮೇ ॥ ೨೩ ॥
ಪ್ರವಿಶ್ಯ ಚ ರಾಜಾ ಸಹಪ್ರಿಯಯಾ
ಸುಧಾಧವಲ ಸಲಿಲಪೂರ್ಣಾಂ ವಾಪೀಮಪಶ್ಯತ್ ॥ ೨೪ ॥
ವಾಪೀಂ ದರ್ದುರೈಃ ಪೂರ್ಣಾಂ ದೃಷ್ಟ್ವೈವ ಚ ತಾಂ
ತಸ್ಯಾ ಏವ ತೀರೇ ತಯಾ ದೇವ್ಯಾಽತಿಷ್ಠತ್ ॥ ೨೫ ॥
ಅಥ ತಾಂ ದೇವೀಂ ರಾಜಾಽಬ್ರವೀತ್
ಶಾಂತತರಂ ವಾಪೀ ಸಲಿಲಮಿತಿ ॥ ೨೬ ॥
ಸಾ ಚ ತದ್ವಚಃ ಶ್ರುತ್ವಾ ತೀರ್ಥವಾಪೀಂ ನ್ಯಮಜ್ಜನ್ನ ಪುನರುದಮಜ್ಜತ್ ।
ತಾಂ ಮೃಗಯಮಾಣೋ ರಾಜಾ ನಾಽಪಶ್ಯತ್ ॥ ೨೭ ॥
ವಾಪೀಂ ದರ್ದುರೈಃ ಪೂರ್ಣಾಂ ದೃಷ್ಟ್ವಾ ಆಜ್ಞಾಪಯಾಮಾಸ
ಭೃತ್ಯಾನ್ ಸರ್ವದರ್ದುರವಧಃ ಕ್ರಿಯತಾಮಿತಿ ॥ ೨೮ ॥
ಯೋ ಮಮಾರ್ಥೀ ಸತ್ವೈರ್ದರ್ದುರೈ ।
ರುಪಾಯನೈರ್ಮಾಮುಪತಿಷ್ಠೇತ್ ॥ ೨೯ ॥

---

೨೨. ಆತನ ಮಾತಿನಂತೆ ರಾಜನು ತನ್ನ ದೇವಿಯೊಡನೆ ಆ ವನವನ್ನು ಪ್ರವೇಶಿಸಿದನು.

೨೩. ರಮ್ಯವಾದ ಆ ಉದ್ಯಾನವನದಲ್ಲಿ ಪತ್ನಿಯಾದ ಆಕೆಯೊಡನೆ ರಮಿಸುತ್ತಿದ್ದನು.

೨೪. ಅಲ್ಲಿಯೇ ತಿರುಗಾಡುತ್ತ ಹಾಲಿನಂತೆ ಶುಭ್ರವಾಗಿದ್ದ ನೀರಿನಿಂದ ತುಂಬಿದ್ದ ಒಂದು ಕೊಳವನ್ನು ಆಕೆಯೊಡನೆ ಕಂಡನು.

೨೫. ಆ ಕೊಳವು ಕಪ್ಪೆಗಳಿಂದ ತುಂಬಿದ್ದುದನ್ನು ಕಂಡು ರಾಜನು ಪತ್ನಿಯೊಡನೆ ಆ ಕೊಳದ ತೀರದಲ್ಲಿಯೇ ಕುಳಿತು ನೋಡುತ್ತಿದ್ದನು.

೨೬. ಮತ್ತು ದೇವಿಯನ್ನು ಕುರಿತು, "ಈ ಕೊಳದ ನೀರು ಬಹು ಪ್ರಶಾಂತವಾಗಿರುವುದು" ಎಂದು ಶ್ಲಾಘಿಸಿದನು.

೨೭. ಆಕೆಯು ಆ ಮಾತನ್ನು ಕೇಳಿ ಆ ಕೊಳದ ನೀರಿನಲ್ಲಿ ಮುಳುಗಿ ಮತ್ತೆ ಮೇಲಕ್ಕೇಳಲೇ ಇಲ್ಲವು. ಎಷ್ಟು ಹುಡುಕಿದರೂ ಆಕೆಯು ರಾಜನಿಗೆ ದೊರಕಲಿಲ್ಲವು.

೨೮. ಆ ಕೊಳವು ಕಪ್ಪೆಗಳಿಂದ ತುಂಬಿದ್ದುದನ್ನು ಕಂಡು ರಾಜನು "ಈ ಕಪ್ಪೆಗಳನ್ನೆಲ್ಲ ಸಂಹರಿಸಿರಿ" ಎಂದು ಅಪ್ಪಣೆ ಮಾಡಿದನು.

೨೯. "ಯಾವನು ಸಮರ್ಥನೊ, ಅವನು ಕಪ್ಪೆಗಳ ಉಪಾಯನದೊಡನೆ ನನ್ನ ಬಳಿಗೆ ಬರಬೇಕು" ಎಂದೂ ಹೇಳಿದನು.

ಅಥ ಕಶ್ಚಿನ್ಮಹಾನ್ ದರ್ದುರೋ ದರ್ದುರವಧೇ
ಕ್ರಿಯಮಾಣೇ ಸರ್ವಾಸು ದಿಕ್ಷ್ವಭ್ಯಗಾತ್ ॥ ೩೦ ॥
ಉಪೇತ್ಯ ಚೈನಮುವಾಚೇದಂ ಜ್ಞಾತ್ವಾ ಕ್ರೋಧವಶಂ ಗತಂ ಪ್ರಸಾದಂ
ಕುರು ನಾಹರ್ಸಿ ದರ್ದುರಾಣಾಮನಪರಾನಾಂ ವಧಂ ಕರ್ತುಮಿತಿ॥ ೩೧ ॥
॥ ಶ್ಲೋಕಶ್ಚಾಽತ್ರ ಭವತಿ ॥
ಮಾ ದರ್ದುರಾನ್ ಪ್ರಭಿಂದ್ವ್ಯಾಸ್ತ್ವಂ ಕೋಪಂ ಸಂಧಾರಯಾಽಚ್ಯುತ ।
ಪ್ರಕ್ಷೀಯತೇ ಮಹಾಧರ್ಮೋ ಜನಾನಾಂ ಪರಿಜಾನತಾಂ ॥ ೩೨ ॥
ತಮೇವಂ ವಾದಿನಮಿಷ್ಟಜನವಿಯೋಗೇ
ಶೋಕ ಪರೀತಾತ್ಮಾನಂ ಸ ರಾಜಾ ಪ್ರೋವಾಚ
ನ ಹಿ ಕಾಮಮಪ್ಯೇತನ್ನಿಷ್ಕಾಮೇನ ನಿಬರ್ಹಣೀಯಾ ಇತಿ ॥ ೩೩ ॥
ಏತೈರ್ದುರಾತ್ಮಭಿರ್ಮೇ ಸ್ತ್ರೀ ಭಕ್ಷಿತಾ ಸರ್ವಥೈವ ।
ತ್ವಿಮೇ ವಧ್ಯಾ ದರ್ದುರಾಃ ನಾಽರ್ಹಸಿ ವಿದ್ವನ್ನುಪರೋದ್ಧುಮಿತಿ ॥ ೩೪ ॥
ಸ ತದ್ವಾಕ್ಯಮುಪಶ್ರುತ್ಯ ವ್ಯಥಿತೇಂದ್ರಿಯಮನಾಃ ।
ಪ್ರೋವಾಚ ಪ್ರಸೀದ ರಾಜನ್ನಹಮಾಯುರ್ನಾಮ ಭೂಪಾಲಃ ॥ ೩೫ ॥

---

೩೦. ಇದರಿಂದ ಸಕಲ ದಿಕ್ಕುಗಳಲ್ಲಿಯೂ ಕಪ್ಪೆಗಳ ವಧೆಯಾಗುತ್ತಿರಲು ಒಂದು ದೊಡ್ಡ ಕಪ್ಪೆಯು ರಾಜನ ಬಳಿಗೆ ಬಂದಿತು.

೩೧. ಆತನು ಕೋಪವಶನಾಗಿರುವನೆಂಬುದನ್ನು ತಿಳಿದು ಸಮೀಪಕ್ಕೆ ಬಂದು ಇಂತೆಂದಿತು. "ಅಯ್ಯಾ ರಾಜನೇ! ನಮ್ಮಲ್ಲಿ ಅನುಗ್ರಹವನ್ನುಮಾಡು. ನಿರಪರಾಧಿಗಳಾದ ಕಪ್ಪೆಗಳನ್ನು ಕೊಲ್ಲುವುದು ನಿನಗೆ ತಕ್ಕುದಲ್ಲ.

೩೨. ಈ ವಿಷಯದಲ್ಲಿ ಶ್ಲೋಕವೊಂದನ್ನೂ ಹೇಳಿತು: "ರಾಜಲಲಾಮ! ಕಪ್ಪೆಗಳನ್ನು ಸುಮ್ಮನೆ ಕೊಲ್ಲಬೇಡ. ನಿನ್ನ ಕೋಪವನ್ನು ಸೈರಿಸಿಕೊ. ನಿನ್ನ ಅಪ್ಪಣೆಯನ್ನು ತಿಳಿದು ನಡೆಯುತ್ತಿರುವವರಲ್ಲಿ ಅಹಿಂಸೆಯೆಂಬ ಮಹಾ ಧರ್ಮಕ್ಕೆ ಲೋಪವುಂಟಾಗುತ್ತಿರುವುದು."

೩೩. ಇಂತು ಸ್ವಜನರನ್ನು ಕಳೆದುಕೊಂಡು ಶೋಕದಿಂದ ಪರಿತಪಿಸುತ್ತಿರುವ ಆ ಕಪ್ಪೆಗೆ ರಾಜನು ಹೇಳಿದನು. "ನಿಷ್ಕಾಮನಾದ ನಾನು ವಿನೋದಕ್ಕಾಗಿ ಈ ಕಪ್ಪೆಗಳನ್ನು ನಾಶಮಾಡುತ್ತಿಲ್ಲ.

೩೪. ಈ ದುರಾತ್ಮರು ನನ್ನ ಪತ್ನಿಯನ್ನು ಭಕ್ಷಿಸಿರುವರಾದುದರಿಂದ ಸರ್ವಪ್ರಕಾರದಿಂದಲೂ ನಾನು ಈ ಕಪ್ಪೆಗಳನ್ನು ವಧಿಸುತ್ತೇನೆ. ಪ್ರಾಜ್ಞನಾದ ನೀನು ನನ್ನನ್ನು ತಡೆಯಬೇಡ."

೩೫. ಆತನ ಮಾತನ್ನು ಕೇಳಿ ಇಂದ್ರಿಯಗಳೂ ಮನಸ್ಸು ಸಂಕಟಗೊಳ್ಳಲು ಆ ಕಪ್ಪೆಯು ಹೇಳತೊಡಗಿತು. "ನನ್ನಲ್ಲಿ ಪ್ರಸನ್ನನಾಗು. ನಾನು ಆಯುವೆಂಬ ಚಕ್ರವರ್ತಿಯು.

ಶಯಿತಸ್ತತಃ ಶಯಾನೋ ಗೀತಮಶೃಣೋತ್ ॥ ೭ ॥
ಸ ಶ್ರುತ್ವಾಽಚಿಂತಯನ್ನೇಹ ಮನುಷ್ಯಗತಿಂ ಪ್ರಪಶ್ಯಾಮಿ ॥ ೮ ॥
ಕಸ್ಯಖಲ್ವಯಂ ಗೀತಶಬ್ದ ಇತ್ಯವಲೋಕಯಾಮಾಸ ॥ ೯ ॥
ಅಥಾಽಪಶ್ಯತ್ಕನ್ಯಾಂ ಪರಮರೂಪದರ್ಶನೀಯಾಂ ।
ಪುಷ್ಪಾಣಿ ವಿಚಿನ್ವಂತೀಂ ಚಾಽಥ ರಾಜಾ ಸಮೀಪೇ ಪರ್ಯಕ್ರಾಮತ್॥೧೦॥
ತಾಮಬ್ರವೀದ್ರಾಜಾ ಕಸ್ಯಾಽಸಿ ತ್ವಂ ಕನ್ಯಾ ।
ಪರಮರೂಪದರ್ಶನೀಯಾ ಪುಷ್ಪಾಣಿ ವಿಚಿನ್ವಂತೀ ॥ ೧೧ ॥
ಸಾಽಥ ರಾಜಸಮೀಪೇ ಗತ್ವೇತಿ ಪ್ರೋವಾಚ ಕನ್ಯಾಽಸ್ಮೀತಿ ॥ ೧೨ ॥

ರಾಜೋವಾಚ :—

ಅರ್ಥೀ ತವಾಽಸ್ಮೀತಿ ॥ ೧೩ ॥

ಅಥೋವಾಚ ಕನ್ಯಾ :—

ಸಮಯೇನಾಽಹಂ ತ್ವಯಾ ಶಕ್ಯೋಪಾಲಬ್ಧುಂ ನಾಽನ್ಯಥೇತಿ ॥ ೧೪ ॥
ತಾಂ ರಾಜಾ ಸಮಪೃಚ್ಛತ್ಕಸ್ತೇ ಸಮಯ ಇತಿ ॥ ೧೫ ॥

---

೭. ಹಾಗೆಯೇ ಮಲಗಿರಲು ಆ ಮಹಾರಾಜನು ಸಂಗೀತದ ಧ್ವನಿಯನ್ನು ಕೇಳಿದನು.

೮. ಕೇಳಿ ಆತನಿಂತೆಂದು ಯೋಚಿಸಿದನು. "ಇಲ್ಲಿ ಯಾವ ಮನುಷ್ಯರ ಸಂಚಾರವನ್ನೂ ಕಾಣೆನಲ್ಲವೆ?

೯. ಈ ಗಾಯನದ ಶಬ್ದವು ಯಾರದಾಗಿರಬಹುದು?" ಇಂತೆಂದು ಸುತ್ತಲೂ ನೋಡಿದನು.

೧೦. ಆಗ ಸರ್ವಾಂಗಸುಂದರಿಯೂ, ದರ್ಶನೀಯಳೂ ಆದ ಒಬ್ಬ ಕನ್ಯೆಯು ಹೂವುಗಳನ್ನು ಬಿಡಿಸುತ್ತಿದ್ದುದನ್ನು ಕಂಡು ರಾಜನು ಆಕೆಯ ಬಳಿಯಲ್ಲಿಯೇ ಓಡಾಡುತ್ತಿದ್ದನು.

೧೧. ಅಲ್ಲದೆ ಆಕೆಯನ್ನು ಕುರಿತು, "ಪುಷ್ಪಗಳನ್ನು ಬಿಡಿಸುತ್ತಿರುವ ಸುಂದರಿಯಾದ ನೀನು ಯಾರ ಮಗಳು?" ಎಂದು ಪ್ರಶ್ನೆಮಾಡಿದನು.

೧೨. ಆಕೆಯೂ ಆತನ ಬಳಿಗೆ ಬಂದು "ನಾನು ಅವಿವಾಹಿತಳಾಗಿರುವೆನು" ಎಂದು ಹೇಳಿದಳು.

೧೩. ರಾಜನು "ನಾನೇ ನಿನ್ನನ್ನು ಕೋರಿರುವೆನು" ಎಂದನು.

೧೪. ಆಗ ಕನ್ಯೆಯು ಹೇಳುತ್ತಾಳೆ:—"ಒಂದು ನಿಯಮದ ಮೇಲೆ ಮಾತ್ರ ನನ್ನನ್ನು ಪಡೆಯಬಹುದೆಯಲ್ಲದೆ ಬೇರೆಯಾಗಲಾರದು."

೧೫. ರಾಜನು, "ಆ ನಿನ್ನ ನಿಯಮವೇನು" ಎಂದು ಪ್ರಶ್ನಿಸಿದನು.

ತತಃ ಕನ್ಯಾ ತಮುವಾಚ ಸೋದಕಂ ದರ್ಶಯಿತವ್ಯಮಿತಿ ॥ ೧೬ ॥
ರಾಜಾ ಬಾಢಮಿತ್ಯುಕ್ತ್ವಾ ತಾಂ ಸಮಾಗಮ್ಯ ತಯಾ ಸಹಾಽಽಸ್ತೇ॥ ೧೭ ॥
ತತ್ರೈವಾಸನ್ನೇ ರಾಜನಿ ಸೇನಾ ತ್ವಾಗಚ್ಛತ್ ತಯಾ
ಸಹೋಪವಿಷ್ಟಂ ರಾಜಾನಂ ಪರಿವಾರ್ಯ ಚಾಽತಿಷ್ಠತ್ ॥ ೧೮ ॥
ಸಭಾಜಿತಶ್ಚ ರಾಜಾ ತಥೈವ ಶಿಬಿಕಯಾ ಪ್ರಾಯಾದಥ
ಶ್ಚುಟಿತಿ ತಯಾ ಸಹ ಸ್ವಂ ನಗರಮನುಪ್ರಾಪ್ಯ ರಹಸಿ ತಯಾ ಸಹ
ರಮಮಾಣಃ ಸನ್ನಾಽನ್ಯಂ ಕಿಂಚಿದಪಶ್ಯದಥ ಪ್ರಧಾನೋಽಮಾತ್ಯ
ಸ್ತಸ್ಯಾಽಭ್ಯಾಶ ಚರಾಸ್ತಾಃ ಸ್ತ್ರಿಯೋಽಭ್ಯ ಪೃಚ್ಛತ್ ॥ ೧೯ ॥
ಕಿಮತ್ರ ಪ್ರಯೋಜನಂ ವಿದ್ಯತೇ ಇತ್ಯಬ್ರುವಂಸ್ತಾಃ
ಸ್ತ್ರಿಯೋ ಪೂರ್ವಮೇವ ಪಶ್ಯಾಮಸ್ತದುದಕಂ ನಾತ್ರಾಶ್ರಿಯತ ಇತಿ॥ ೨೦ ॥
ಅಥಾಽಮಾತ್ಯಶ್ಚ ನಿರುದಕಂ ಕಾರಯಿತ್ವಾ ದಾರುವೃಕ್ಷಂ
ವೃದ್ಧಪುಷ್ಪಫಲಂ ಶರದ್ಯುಪಲಭ್ಯ ರಾಜಾನಮಬ್ರವೀತ್
ವನಮಿದಮನುದಕಂ ಸಾಧ್ವತ್ರ ರಮ್ಯತಾಮಿತಿ ॥ ೨೧ ॥

---

೧೬. ಆಗಲಾ ಕನ್ಯೆಯು "ನನ್ನೊಡನಿರುವವರೆಗೂ ನನಗೆ ನೀರನ್ನು ತೋರಿಸಬಾರದು" ಎಂದು ಹೇಳಿದಳು.

೧೭. ರಾಜನು ಹಾಗೆಯೇ ಆಗಲೆಂದೊಪ್ಪಿಕೊಂಡು ಆಕೆಯೊಡಗೂಡಿದನು.

೧೮. ಅಲ್ಲಿದ್ದಂತೆಯೇ ಆತನ ಸೈನ್ಯವು ಬಂದು ಆಕೆಯೊಡನೆ ಕುಳಿತಿದ್ದ ರಾಜನನ್ನು ಸುತ್ತುವರೆದು ಬಿಡಾರವನ್ನು ಹಾಕಿಕೊಂಡಿತು.

೧೯. ಅವರ ಪೂಜೆಯನ್ನು ಕೈಕೊಂಡು ರಾಜನು ಅಂದಣವನ್ನೇರಿ ಹೊರಟನು. ಸ್ವಲ್ಪಕಾಲದಲ್ಲಿಯೇ ತನ್ನ ರಾಜಧಾನಿಯನ್ನು ಸೇರಿ ಏಕಾಂತದಲ್ಲಿ ಆ ಕನ್ಯೆಯೊಡನೆ ರಮಿಸುತ್ತ ಬೇರೆ ಯಾವುದನ್ನೂ ನೋಡಲೊಲ್ಲದವನಾಗಿದ್ದನು. ಆಗ ಮುಖ್ಯಮಂತ್ರಿಯು ಅಂತಃಪುರದ ಬಳಿಗೆ ಬಂದು ಅಲ್ಲಿ ಓಡಾಡುತ್ತಿದ್ದ ಪರಿಚಾರಿಕೆಯರನ್ನು ಪ್ರಶ್ನೆಮಾಡಿದನು.

೨೦. ಇಲ್ಲಿ ಯಾವ ವಿಶೇಷವಿರುವುದೆಂದು ಕೇಳಿದ ಆತನಿಗೆ ಸ್ತ್ರೀಯರೆಂದರು. "ಒಂದು ಅಪೂರ್ವವನ್ನು ನೋಡಿದೆವು. ಆಕೆಯ ಬಳಿಯಲ್ಲಿ ನೀರನ್ನು ತರಲಾಗದು."

೨೧. ಇದನ್ನು ಕೇಳಿ ಮಂತ್ರಿಯು ತಟಾಕಾದಿಗಳಿಲ್ಲದಂತೆ ಹಳೆಯ ಮರಗಳನ್ನು ಪುಷ್ಪಫಲಭರಿತಗಳನ್ನಾಗಿ ಮಾಡಿ ಶರತ್ಕಾಲದಲ್ಲಿ ರಾಜನ ಬಳಿಗೆ ಬಂದು ಹೇಳಿದನು. "ಈ ವನದಲ್ಲಿ ನೀರೆಂಬುದಿಲ್ಲ. ನಿನ್ನಿಚ್ಛೆಯಂತೆ ಇಲ್ಲಿ ವಿಹರಿಸಿಕೊಂಡಿರು." ........ ........ ........

ಸ ತಸ್ಯ ವಚನಾತ್ತಯೈವ ಸಹ ದೇವ್ಯಾವನಂ ಪ್ರಾವಿಶತ್ ॥ ೨೨ ॥
ಸಕಲತ್ರಸ್ತಸ್ಮಿನ್ವನೇ ರಮ್ಯೇ ತಯೈವ ಸಹ ರೇಮೇ ॥ ೨೩ ॥
ಪ್ರವಿಶ್ಯ ಚ ರಾಜಾ ಸಹಪ್ರಿಯಯಾ
ಸುಧಾಧವಲ ಸಲಿಲಪೂರ್ಣಾಂ ವಾಪೀಮುಪಶ್ಯತ್ ॥ ೨೪ ॥
ವಾಪೀಂ ದರ್ದುರೈಃ ಪೂರ್ಣಾಂ ದೃಷ್ಟ್ವೈವ ಚ ತಾಂ
ತಸ್ಯಾ ಏವ ತೀರೇ ತಯಾ ದೇವ್ಯಾಽತಿಷ್ಠತ್ ॥ ೨೫ ॥
ಅಥ ತಾಂ ದೇವೀಂ ರಾಜಾಽಬ್ರವೀತ್
ಶಾಂತತರಂ ವಾಪೀ ಸಲಿಲಮಿತಿ ॥ ೨೬ ॥
ಸಾ ಚ ತದ್ವಚಃ ಶ್ರುತ್ವಾ ತೀರ್ಥವಾಪೀಂ ನ್ಯಮಜ್ಜನ್ನ ಪುನರುದಮಜ್ಜತ್ ।
ತಾಂ ಮೃಗಯಮಾಣೋ ರಾಜಾ ನಾಽಪಶ್ಯತ್ ॥ ೨೭ ॥
ವಾಪೀಂ ದರ್ದುರೈಃ ಪೂರ್ಣಾಂ ದೃಷ್ಟ್ವಾ ಆಜ್ಞಾಪಯಾಮಾಸ
ಭೃತ್ಯಾನ್ ಸರ್ವದರ್ದುರವಧಃ ಕ್ರಿಯತಾಮಿತಿ ॥ ೨೮ ॥
ಯೋ ಮಮಾರ್ಥೀ ಸತ್ವೈರ್ದರ್ದುರೈ ।
ರುಪಾಯನ್ನೈರ್ಮಾಮನುತಿಷ್ಠೇತ್ ॥ ೨೯ ॥

---

೨೨. ಆತನ ಮಾತಿನಂತೆ ರಾಜನು ತನ್ನ ದೇವಿಯೊಡನೆ ಆ ವನವನ್ನು ಪ್ರವೇಶಿಸಿದನು.

೨೩. ರಮ್ಯವಾದ ಆ ಉದ್ಯಾನವನದಲ್ಲಿ ಪತ್ನಿಯಾದ ಆಕೆಯೊಡನೆ ರಮಿಸುತ್ತಿದ್ದನು.

೨೪. ಅಲ್ಲಿಯೇ ತಿರುಗಾಡುತ್ತ ಹಾಲಿನಂತೆ ಶುಭ್ರವಾಗಿದ್ದ ನೀರಿನಿಂದ ತುಂಬಿದ್ದ ಒಂದು ಕೊಳವನ್ನು ಆಕೆಯೊಡನೆ ಕಂಡನು.

೨೫. ಆ ಕೊಳವು ಕಪ್ಪೆಗಳಿಂದ ತುಂಬಿದ್ದುದನ್ನು ಕಂಡು ರಾಜನು ಪತ್ನಿಯೊಡನೆ ಆ ಕೊಳದ ತೀರದಲ್ಲಿಯೇ ಕುಳಿತು ನೋಡುತ್ತಿದ್ದನು.

೨೬. ಮತ್ತು ದೇವಿಯನ್ನು ಕುರಿತು, "ಈ ಕೊಳದ ನೀರು ಬಹು ಪ್ರಶಾಂತವಾಗಿರುವುದು" ಎಂದು ಶ್ಲಾಘಿಸಿದನು.

೨೭. ಆಕೆಯು ಆ ಮಾತನ್ನು ಕೇಳಿ ಆ ಕೊಳದ ನೀರಿನಲ್ಲಿ ಮುಳುಗಿ ಮತ್ತೆ ಮೇಲಕ್ಕೇಳಲೇ ಇಲ್ಲವು. ಎಷ್ಟು ಹುಡುಕಿದರೂ ಆಕೆಯು ರಾಜನಿಗೆ ದೊರಕಲಿಲ್ಲವು.

೨೮. ಆ ಕೊಳವು ಕಪ್ಪೆಗಳಿಂದ ತುಂಬಿದ್ದುದನ್ನು ಕಂಡು ರಾಜನು "ಈ ಕಪ್ಪೆಗಳನ್ನೆಲ್ಲ ಸಂಹರಿಸಿರಿ" ಎಂದು ಅಪ್ಪಣೆ ಮಾಡಿದನು.

೨೯. "ಯಾವನು ಸಮರ್ಥನೊ, ಅವನು ಕಪ್ಪೆಗಳ ಉಪಾಯನದೊಡನೆ ನನ್ನ ಬಳಿಗೆ ಬರಬೇಕು" ಎಂದೂ ಹೇಳಿದನು.

ಅಥ ಕಶ್ಚಿನ್ಮಹಾನ್ ದರ್ದುರಕೋ ದರ್ದುರವಧೇ
ಕ್ರಿಯಮಾಣೇ ಸರ್ವಾಸು ದಿಕ್ಷ್ವಭ್ಯಗಾತ್ ॥ ೩೦ ॥
ಉಪೇತ್ಯ ಚೈನಮುವಾಚೇದಂ ಜ್ಞಾತ್ವಾ ಕ್ರೋಧವಶಂ ಗತಂ ಪ್ರಸಾದಂ
ಕುರು ನಾಹರ್ಸಿ ದರ್ದುರಾಣಾಮನಪರಾನಾಂ ವಧಂ ಕರ್ತುಮಿತಿ॥ ೩೧ ॥
॥ ಶ್ಲೋಕಶ್ಚಾಽತ್ರ ಭವತಿ ॥
ಮಾ ದರ್ದುರಾನ್ ಪ್ರಭಿಂದ್ಯಾಸ್ತ್ವಂ ಕೋಪಂ ಸಂಧಾರಯಾಽಚ್ಯುತ ।
ಪ್ರಕ್ಷೀಯತೇ ಮಹಾಧರ್ಮೋ ಜನಾನಾಂ ಪರಿಜಾನತಾಂ ॥ ೩೨ ॥
ತಮೇವಂ ವಾದಿನಮಿಷ್ಟಜನವಿಯೋಗೇ
ಶೋಕ ಪರೀತಾತ್ಮಾನಂ ಸ ರಾಜಾ ಪ್ರೋವಾಚ
ನ ಹಿ ಕಾಮಮುಪ್ಯೇತನ್ನಿಷ್ಕಾಮೇನ ನಿಬರ್ಹಣೀಯಾ ಇತಿ ॥ ೩೩ ॥
ಏತೈರ್ದುರಾತ್ಮಭಿರ್ಮೇ ಸ್ತ್ರೀ ಭಕ್ಷಿತಾ ಸರ್ವಥೈವ ।
ತ್ವಿಮೇ ವಧ್ಯಾ ದರ್ದುರಾಃ ನಾಽರ್ಹಸಿ ವಿದ್ವನ್ಮಾಪರೋದ್ಧುಮಿತಿ ॥ ೩೪ ॥
ಸ ತದ್ವಾಕ್ಯಮುಪಶ್ರುತ್ಯ ವ್ಯಥಿತೇಂದ್ರಿಯಮನಾಃ ।
ಪ್ರೋವಾಚ ಪ್ರಸೀದ ರಾಜನ್ನಹಮಾಯುರ್ನಾಮ ಭೂಪಾಲಃ ॥ ೩೫ ॥

---

೩೦. ಇದರಿಂದ ಸಕಲ ದಿಕ್ಕುಗಳಲ್ಲಿಯೂ ಕಪ್ಪೆಗಳ ವಧೆಯಾಗುತ್ತಿರಲು ಒಂದು ದೊಡ್ಡ ಕಪ್ಪೆಯು ರಾಜನ ಬಳಿಗೆ ಬಂದಿತು.

೩೧. ಆತನು ಕೋಪವಶನಾಗಿರುವನೆಂಬುದನ್ನು ತಿಳಿದು ಸಮೀಪಕ್ಕೆ ಬಂದು ಇಂತೆಂದಿತು. "ಅಯ್ಯಾ ರಾಜನೇ! ನಮ್ಮಲ್ಲಿ ಅನುಗ್ರಹವನ್ನುಮಾಡು. ನಿರಪರಾಧಿಗಳಾದ ಕಪ್ಪೆಗಳನ್ನು ಕೊಲ್ಲುವುದು ನಿನಗೆ ತಕ್ಕುದಲ್ಲ.

೩೨. ಈ ವಿಷಯದಲ್ಲಿ ಶ್ಲೋಕವೊಂದನ್ನೂ ಹೇಳಿತು: "ರಾಜಲಲಾಮ! ಕಪ್ಪೆಗಳನ್ನು ಸುಮ್ಮನೆ ಕೊಲ್ಲಬೇಡ. ನಿನ್ನ ಕೋಪವನ್ನು ಸೈರಿಸಿಕೊ. ನಿನ್ನ ಅಪ್ಪಣೆಯನ್ನು ತಿಳಿದು ನಡೆಯುತ್ತಿರುವವರಲ್ಲಿ ಅಹಿಂಸೆಯೆಂಬ ಮಹಾ ಧರ್ಮಕ್ಕೆ ಲೋಪವುಂಟಾಗುತ್ತಿರುವುದು."

೩೩. ಇಂತು ಸ್ವಜನರನ್ನು ಕಳೆದುಕೊಂಡು ಶೋಕದಿಂದ ಪರಿತಪಿಸುತ್ತಿರುವ ಆ ಕಪ್ಪೆಗೆ ರಾಜನು ಹೇಳಿದನು. "ನಿಷ್ಕಾಮನಾದ ನಾನು ವಿನೋದಕ್ಕಾಗಿ ಈ ಕಪ್ಪೆಗಳನ್ನು ನಾಶಮಾಡುತ್ತಿಲ್ಲ.

೩೪. ಈ ದುರಾತ್ಮರು ನನ್ನ ಪತ್ನಿಯನ್ನು ಭಕ್ಷಿಸಿರುವರಾದುದರಿಂದ ಸರ್ವ ಪ್ರಕಾರದಿಂದಲೂ ನಾನು ಈ ಕಪ್ಪೆಗಳನ್ನು ವಧಿಸುತ್ತೇನೆ. ಪ್ರಾಜ್ಞನಾದ ನೀನು ನನ್ನನ್ನು ತಡೆಯಬೇಡ."

೩೫. ಆತನ ಮಾತನ್ನು ಕೇಳಿ ಇಂದ್ರಿಯಗಳೂ ಮನಸ್ಸು ಸಂಕಟಗೊಳ್ಳಲು ಆ ಕಪ್ಪೆಯು ಹೇಳತೊಡಗಿತು. "ನನ್ನಲ್ಲಿ ಪ್ರಸನ್ನನಾಗು. ನಾನು ಆಯುವೆಂಬ ಚಕ್ರವರ್ತಿಯು.

ಪ್ರಾಪ್ತಾ ಸಾ ಮಮ ದುಹಿತಾ ಸಾ ಕನ್ಯಾ ನಾಗಲೋಕಂ ಗತಾ ।
ಅತ್ರಾಸ್ತೇ ನಾಗಚೂಡೋ ನಾಗರಾಜಃ ಸ್ಮೃತಾ ಆಗಮಿಷ್ಯತಿ ॥ ೩೬ ॥
ತಾಮುಬ್ರವೀದ್ರಾಜಾ ತಾಂ ಸ್ಮೃತ್ವಾನೀಯ ಮೇ ದೀಯತಾಮಿತಿ ॥ ೩೭ ॥
ಅಥೈನಾಂ ಸ್ಮೃತ್ವಾ ರಾಜ್ಞೇ ಅದಾತ್ ಅಬ್ರವೀಚ್ಚ ॥ ೩೮ ॥
ಮಯಾಽವಹಸಿತೋ ಗಾಲವೋ ಮಹಾತ್ಮನಿಃ ತಪಸಾ
ಕರ್ಶಿತಾಂಗಃ ಕ್ಷಮೇಶ್ವರೋ ದರ್ದುರಬಾಲ್ಯಾತ್ಪ್ರಕೋಪಿತಃ ।
ತೇನಾಽಹಂಶಪ್ತಃ ಯನ್ಮಾಮನಾದೃತ್ಯ ದರ್ದುರ
ಬಾಲ್ಯಾದವಹಸಿತಸ್ತಸ್ಮಾದ್ದರ್ದುರೋ ಭವಿಷ್ಯಸಿ ॥ ೩೯ ॥
ಪ್ರಸಾದಿತಸ್ತು ವಿಪ್ರಃ ಪ್ರತ್ಯುವಾಚ ॥ ೪೦ ॥
ಅವಿತಥೋಽಯಂ ಮಮ ಶಾಪಸ್ತಸ್ಮಾದನ್ಯಜನ್ಮನಿ ದರ್ದುರ
ರಾಜೋ ಭೂತ್ವಾ ತ್ವಂ ಹಿ ದುಹಿತರಮಿಕ್ಷ್ವಾಕುಕುಲೋತ್ಪನ್ನಾಯ ।
ಸರ್ವಗುಣಾನ್ವಿತಾಯ ದತ್ವಾ ಯದಾ ಯಾಸ್ಯಸಿ ಮಹಾಕಾಲವನೇ
ತಸ್ಯೋತ್ತರದಿಗ್ಭಾಗೇ ತದಾ ಲಿಂಗಸ್ಯ ದರ್ಶನೇನ ಮುಕ್ತಿಮವಾಪ್ಸ್ಯಸಿ ॥

---

೩೬. ನೀನು ಹೊಂದಿದ್ದವಳು ನನ್ನ ಪುತ್ರಿಯು. ಆಕೆಯು ಈಗ ನಾಗಲೋಕಕ್ಕೆ ಹೋಗಿರುವಳು. ಅಲ್ಲಿ ನಾಗಚೂಡನೆಂಬ ಸರ್ಪರಾಜನು ಆಳುತ್ತಿರುವನು. ನಾನು ಸ್ಮರಿಸಿದರೆ ಆಕೆಯು ಇಲ್ಲಿಗೆ ಬರುವಳು.

೩೭. ರಾಜನು, "ನಿನ್ನ ಮಗಳನ್ನು ಸ್ಮರಿಸಿ ನನಗೆ ತಂದುಕೊಡು" ಎಂದನು.

೩೮. ಅದರಂತೆ ಆತನು ಮಗಳನ್ನು ಸ್ಮರಿಸಿ ಆಕೆಯನ್ನು ರಾಜನಿಗೊಪ್ಪಿಸಿ ಇಂತೆಂದನು.

೩೯. "ನಾನೊಮ್ಮೆ ತಪಸ್ಸಿನಿಂದ ಕೃಶಶರೀರನಾಗಿದ್ದ ಗಾಲವಮಹಾಮುನಿಯನ್ನು ಕಂಡು ಅಪಹಾಸ್ಯಮಾಡಿದೆನು. ಕ್ಷಮಾಶೀಲನಾದರೂ ನನ್ನ ಬಾಲ್ಯದ ಉದ್ಧಟತನದಿಂದ ಆತನು ಕೋಪಗೊಂಡನು. ಆತನೇ ನನಗೆ "ಬಾಲ್ಯದ ಉದ್ಧಟತನದಿಂದ ನೀನು ನನ್ನನ್ನು ಕಡೆಗಂಡು ಅಪಹಾಸ್ಯಮಾಡಿದೆಯಾದುದರಿಂದ ಕಪ್ಪೆಯ ಜನ್ಮವನ್ನು ತಾಳುವೆ" ಎಂದು ಶಾಪವನ್ನಿತ್ತನು.

೪೦. ಬಳಿಕ ಆತನನ್ನು ಬೇಡಿಕೊಂಡು ಪ್ರಸನ್ನನಾಗಿ ಮಾಡಿಕೊಳ್ಳಲು, ಬ್ರಾಹ್ಮಣನಿಂತೆಂದನು.

೪೧. ನನ್ನ ಶಾಪವು ಸುಳ್ಳಾಗಲಾರದು. ಆದುದರಿಂದ ನೀನು ಕಪ್ಪೆಗಳಿಗೆ ರಾಜನಾಗುವೆ. ಈ ನಿನ್ನ ಮಗಳನ್ನು ಇಕ್ಷ್ವಾಕುವಂಶಸಂಭೂತನೂ, ಸಕಲ ಸದ್ಗುಣಭರಿತನೂ ಆದ ಒಬ್ಬ ರಾಜನಿಗೆ ಕೊಟ್ಟು ಮಹಾಕಾಲವನಕ್ಕೆ ಹೋಗಿ ಆ ಕ್ಷೇತ್ರದ ಉತ್ತರದಿಕ್ಕಿನಲ್ಲಿರುವ ಒಂದು ಲಿಂಗವನ್ನು ನೋಡುವುದರಿಂದ ನೀನು ಶಾಪದಿಂದ ಮುಕ್ತನಾಗುವೆ.

ದುಹಿತಾ ಕಿಯತ್ಕಾಲಂ ಯಾಸ್ಯತಿ ಸ್ಮೃತಾ ಚಾಗಮಿಷ್ಯತಿ ।
ಸ್ವಸ್ತಿ ತೇಽಸ್ತು ಸಾಧಯಿಷ್ಯಾಮಿ ಕಾರ್ಯಾಣಿ ।
ಇತ್ಯುಕ್ತ್ವಾ ದರ್ದುರೋ ಮಹಾಕಾಲವನಂ ಗಚ್ಛತ್ ॥ ೪೨ ॥
ತಸ್ಯೋತ್ತರೇ ಲಿಂಗಂ ದದರ್ಶ ತಸ್ಯ ದರ್ಶನಾದನೇಕಮಾಣಿಕ್ಯ ರಚಿತಂ ।
ಸಿದ್ಧ ಗಂಧರ್ವಸೇವಿತಂ ವಿಮಾನ ವರಮಾರುಹ್ಯ ಶಕ್ರಲೋಕಂ ಗತಃ ॥ ೪೩ ॥
ತಸ್ಯ ಮಾಹಾತ್ಮ್ಯಮವಲೋಕ್ಯ ದೇವಾಚಾರ್ಯೋ
ಬೃಹಸ್ಪತಿರ್ವಾಕ್ಯಂ ಜಗಾದ ॥ ೪೪ ॥
ಅಹೋ ಲಿಂಗಸ್ಯ ಮಾಹಾತ್ಮ್ಯಮಹೋ ಲಿಂಗಸ್ಯ ವೈಭವಂ ।
ಸಂಪ್ರಾಪ್ತೋ ವಾಸವಂ ಲೋಕಂ ಶಾಪಭ್ರಷ್ಟೋಽಹಿ ದರ್ದುರಃ ॥ ೪೫ ॥
ಆಯುರಾಖ್ಯೋ ಹಿ ಭೂಪಾಲೋ ಮುಕ್ತೋ ದರ್ದುರತಾಂ ಗತಃ ॥ ೪೬ ॥
ಇತಿ ತದ್ವಚನಂ ಶ್ರುತ್ವಾ ದೇವಾಚಾರ್ಯಸ್ಯ ಪಾರ್ವತಿ ।
ದೇವಾಸ್ತೇ ಹೃಷ್ಟಮನಸೋ ನಾಮ ಚಕ್ರುಃ ಸಮಾಹಿತಾಃ ॥ ೪೭ ॥
ಯಸ್ಮಾದ್ದರ್ದುರಭೂಪಾಲೋ ಮುಕ್ತೋ ದರ್ದುರ ಯೋನಿತಃ ।
ದರ್ಶನಾತ್ತಸ್ಯ ಲಿಂಗಸ್ಯ ತಸ್ಮಾತ್ಖ್ಯಾತೋ ಭವಿಷ್ಯತಿ ॥ ೪೮ ॥

---

೪೨. ನಿನ್ನ ಮಗಳು ಅಲ್ಲಿಯವರೆಗೂ ಪಾತಾಳದಲ್ಲಿರುವಳು. ನೀನು ನೆನಸಿದೊಡನೆ ನಿನ್ನಲ್ಲಿಗೆ ಬರುವಳು. ಇಂತು ನಾನು ಶಾಪಗ್ರಸ್ತನಾದೆನು. ರಾಜೇಂದ್ರನೆ! ನಿನಗೆ ಮಂಗಳವಾಗಲಿ. ನಾನು ಮುಂದಿನ ಕಾರ್ಯವನ್ನು ಸಾಧಿಸುವೆನು.'' ಇಂತೆಂದು ಆ ಕಪ್ಪೆಯು ಮಹಾಕಾಲವನಕ್ಷೇತ್ರವನ್ನು ಸೇರಿತು.

೪೩. ಆ ಕ್ಷೇತ್ರದ ಉತ್ತರದಿಕ್ಕಿನಲ್ಲಿದ್ದ ಲಿಂಗವನ್ನು ನೋಡಿ ಆ ದರ್ಶನದ ಫಲವಾಗಿ ಅನೇಕ ರತ್ನಗಳಿಂದ ನಿರ್ಮಿತವೂ, ಸಿದ್ಧಗಂಧರ್ವರಿಂದ ಸೇವಿತವೂ ಆಗಿದ್ದ ಒಂದು ವಿಮಾನವನ್ನೇರಿ ಇಂದ್ರಲೋಕಕ್ಕೆ ಹೋಯಿತು.

೪೪. ಆ ಮಹಾಲಿಂಗದ ಮಾಹಾತ್ಮ್ಯವನ್ನು ಕಂಡು ದೇವಗುರುವಾದ ಬೃಹಸ್ಪತಿಯು ಇಂತೆಂದನು.

೪೫. ''ಆಹಾ! ಈ ಲಿಂಗದ ಮಾಹಾತ್ಮ್ಯವೆಷ್ಟು! ಇದರ ವೈಭವ ವೆಂತಹುದು! ಶಾಪದಿಂದ ಭ್ರಷ್ಟನಾಗಿ ಕಪ್ಪೆಯ ಜನ್ಮವನ್ನು ತಾಳಿದ್ದವನೂ ಮಹೇಂದ್ರಲೋಕವನ್ನು ಪಡೆದನು.

೪೬. ಆಯುರ್ನಾಮಕನಾದ ಚಕ್ರವರ್ತಿಯು ಕಪ್ಪೆಯ ಜನ್ಮದಿಂದ ಮುಕ್ತನಾದನು.''

೪೭. ಪಾರ್ವತಿಯೆ! ಇಂತೆಂದ ಬೃಹಸ್ಪತ್ಯಾಚಾರ್ಯನ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಆನಂದಭರಿತರಾಗಿ ಆ ಲಿಂಗಕ್ಕೆ ಹೆಸರನ್ನಿಟ್ಟರು.

೪೮. ದರ್ದುರರಾಜನು ಈ ಮಹಾಲಿಂಗವನ್ನು ನೋಡಿದುದರ ಫಲವಾಗಿ

ಉತ್ತರೇಶ್ವರದೇವಶ್ಚ ಶಾಪಪಾಪಪ್ರಣೋದಕಃ ।
ಇತ್ಯುಕ್ತ್ವಾ ತ್ರಿದಶೈಃ ಸರ್ವೈಃ ಪೂಜಿತೋಹ್ಯುತ್ತರೇಶ್ವರಃ ॥ ೪೯ ॥
ಭುಕ್ತಿಮುಕ್ತಿಪ್ರದೋ ದೇವಿ ಮಹಾಪಾತಕನಾಶನಃ ।
ಕ್ಷೇತ್ರಸ್ಯ ರಕ್ಷಣಾರ್ಥಾಯ ನಿಯುಕ್ತೋ ಯೋ ಮಯಾ ಗಣಃ ।
ದರ್ದುರೋ ಹಿ ದರಾಧರ್ಷಃ ಸಚಾಪೀಶ್ವರತಾಂ ಗತಃ ॥ ೪೯ ॥
ಉತ್ತರಾಶಾಮುಖೋ ಗತ್ವಾ ಯಃ ಪಶ್ಯೇದುತ್ತರೇಶ್ವರಂ ।
ಸ ಸರ್ವೈಶ್ವರ್ಯಸಂಯುಕ್ತೋ ಯಾತಿ ಲೋಕಮಥೋತ್ತರಂ ॥ ೫೧ ॥
ಸುಭಗಃ ಸರ್ವದಾ ದಾಂತಃ ಸುರೂಪಃ ಪುತ್ರವಾನಿತಿ ।
ನೀರೋಗಃ ಪುಣ್ಯಶೀಲಶ್ಚ ಜಾಯತೇ ಸಪ್ತಜನ್ಮ ಚ ॥ ೫೨ ॥
ಯಾ ವೃದ್ಧಿಸ್ತು ಕುಬೇರಸ್ಯ ಶಕ್ರಸ್ಯ ಚ ಯಮಸ್ಯ ಚ ।
ವರುಣಸ್ಯ ಚ ಯಾ ವೃದ್ಧಿಃ ಸಾ ವೃದ್ಧಿರುತ್ತರೋತ್ತರಾ ।
ಜಾಯತೇ ನಾತ್ರ ಸಂದೇಹ ಉತ್ತರೇಶ್ವರ ದರ್ಶನಾತ್ ॥ ೫೩ ॥

---

ತನ್ನ ನೀಚಯೋನಿಯಿಂದ ಮೋಕ್ಷವನ್ನು ಪಡೆದುದರಿಂದ ಇದು ಪ್ರಖ್ಯಾತವಾಗುವುದು.

೪೯. ಉತ್ತರೇಶ್ವರನೆಂಬ ಈ ದೇವನು ಸಮಸ್ತ ಶಾಪಪಾಪಗಳನ್ನೂ ಕಳೆಯುವನು. ಇಂತೆಂದು ಸಮಸ್ತ ದೇವತೆಗಳೂ ಆ ಉತ್ತರೇಶ್ವರನನ್ನು ಪೂಜಿಸಿದರು.

೫೦. ದೇವಿಯೆ! ಈ ಮಹೇಶ್ವರನು ಭುಕ್ತಿಮುಕ್ತಿಗಳನ್ನು ಕೊಟ್ಟು ಮಹಾಪಾತಕಗಳನ್ನೂ ಪರಿಹರಿಸುವನು. ದರ್ದುರನೆಂಬ ಅಜೇಯನಾದ ನನ್ನ ಗಣನಾಯಕನೊಬ್ಬನನ್ನು ಕ್ಷೇತ್ರದ ಪರಿಪಾಲನಕ್ಕಾಗಿ ಇಲ್ಲಿ ನಿಲ್ಲಿಸಿದೆನು. ಆತನೇ ಲಿಂಗರೂಪದಿಂದ ನೆಲಸಿರುವನು.

೫೧. ಉತ್ತರದಿಕ್ಕಿಗೆ ಹೋಗಿ ಈ ಉತ್ತರೇಶ್ವರನ ದರ್ಶನವನ್ನು ಯಾವನು ಮಾಡುವನೊ, ಅವನು ಈ ಲೋಕದಲ್ಲಿ ಸಕಲೈಶ್ವರ್ಯಗಳನ್ನು ಪಡೆದು ಕಡೆಗೆ ಉತ್ತಮಲೋಕವನ್ನು ಸೇರುವನು.

೫೨. ಮತ್ತು ಏಳುಜನ್ಮಗಳವರೆಗೂ ಸೌಭಾಗ್ಯವಂತನೂ, ಯಾವಾಗಲೂ ಇಂದ್ರಿಯನಿಗ್ರಹಪರನೂ, ಸುಂದರರೂಪನೂ, ಪುತ್ರಪೌತ್ರಸಂಪನ್ನನೂ, ಆರೋಗ ದೃಢಕಾಯನೂ, ಪುಣ್ಯಶೀಲನೂ ಆಗಿ ಹುಟ್ಟುತ್ತಿರುವನು.

೫೩. ಈ ಉತ್ತರೇಶ್ವರನನ್ನು ನೋಡುವುದರಿಂದ ಕುಬೇರ, ಇಂದ್ರ, ವರುಣ, ಯಮರಲ್ಲಿ ಯಾವ ಸಂಪದಭಿವೃದ್ಧಿಯಿರುವುದೊ ಅದೇ ಜನ್ಮಜನ್ಮಕ್ಕೂ ಹೆಚ್ಚಾಗುತ್ತ ಭಕ್ತನಿಗೊದಗುವುದರಲ್ಲಿ ಸಂದೇಹವಿಲ್ಲ.

ಕೃಷ್ಣಪಕ್ಷೇ ಚತುರ್ದಶ್ಯಾಂ ಯೇ ಪಶ್ಯಂತಿ ಯಶಸ್ವಿನಿ।
ಉತ್ತರೇಶ್ವರಸಂಜ್ಞಂ ತು ತೇ ಕೃತಾರ್ಥಾಃ ಕಲೌಯುಗೇ ॥ ೫೪ ॥
ಕಿಂ ದಾನೈಃ ಕಿಂ ತಪೋಭಿಶ್ಚ ಕಿಂ ಯಜ್ಞೈರ್ಬಹುದಕ್ಷಿಣೈಃ।
ದರ್ಶನಾಲ್ಲಭತೇ ರಾಜ್ಯಂ ಸ್ವರ್ಗಂ ಮೋಕ್ಷಂ ಕ್ರಮೇಣ ತು ॥ ೫೫ ॥
ಆಜನ್ಮ ಚ ಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು।
ತತ್ಸರ್ವಂ ನಾಶಮಾಯಾತಿ ಉತ್ತರೇಶ್ವರ ದರ್ಶನಾತ್ ॥ ೫೬ ॥
ಇತ್ಯೇವಂ ಚತುರಾಶೀತಿಃ ಸಂಖ್ಯಾತಾ ಈಶ್ವರಾಸ್ತವ।
ಕಥಿತಾ ಯೇ ತ್ವಯಾ ಪೃಷ್ಟಾ ಮಹಾಕಾಲವನೇ ಮಯಾ ॥ ೫೭ ॥
ಯ ಏತೇಷಾಂ ದೇವಿ ಯಾತ್ರಾಂ ಪ್ರತಿಲೋಮಾಽನುಲೋಮತಃ।
ಕರಿಷ್ಯಂತಿ ನರಾ ಭಕ್ತ್ಯಾ ತೇ ಯಾಸ್ಯಂತಿ ಪರಂ ಪದಂ ॥ ೫೮ ॥
ಯಶ್ಚಾಽಪಿ ಪೂಜಯೇತ್ತತ್ರ ಲಿಂಗಂ ಭಕ್ತ್ಯಾ ತು ಮಾನವಃ।
ಸ ಕುಲಂ ತಾರಯತ್ಯೇವ ಪೈತೃಕಂ ಮಾತೃಕಂ ಶತಂ ॥ ೫೯ ॥

---

೫೪. ಮಂಗಳಾಂಗಿಯೆ! ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಯಾರು ಈ ಉತ್ತರೇಶ್ವರನನ್ನು ನೋಡುವರೊ ಅವರು ಈ ಕಲಿಯುಗದಲ್ಲಿ ಕೃತಕೃತ್ಯರಾಗುವರು.

೫೫. ಅನೇಕ ದಾನಗಳಿಂದಲೂ, ತಪಶ್ಚರಣೆಗಳಿಂದಲೂ, ಅಸಂಖ್ಯಾತ ದಕ್ಷಿಣೆಗಳಿಂದೊಡಗೂಡಿದ ಯಜ್ಞಗಳನ್ನು ಮಾಡುವುದರಿಂದಲೂ ವಿಶೇಷ ಫಲವೇನು? ಈ ಲಿಂಗದ ದರ್ಶನವೊಂದರಿಂದಲೇ ಮನುಜನು ರಾಜ್ಯಾಧಿಕಾರವನ್ನೂ, ಸ್ವರ್ಗವಾಸವನ್ನೂ, ಕಡೆಯಲ್ಲಿ ಮೋಕ್ಷವನ್ನೂ ಕ್ರಮವಾಗಿ ಸಂಪಾದಿಸುವನು.

೫೬. ಜನ್ಮಾದಾರಾಭ್ಯ ಮಾಡಿರುವ ಪಾತಕಗಳು ಎಷ್ಟು ಅಲ್ಪ ಅಥವಾ ಮಹತ್ತರಗಳಾಗಿದ್ದರೂ ಅವುಗಳೆಲ್ಲವೂ ಉತ್ತರೇಶ್ವರನ ದರ್ಶನದಿಂದ ನಾಶವಾಗುವುವು.

೫೭. ಪಾರ್ವತಿಯೆ! ಹಿಂದೆ ನೀನು ಮಹಾಕಾಲವನದಲ್ಲಿ ಪ್ರಶ್ನೆಮಾಡಿದಾಗ ನಿರೂಪಿಸಿದ ಎಂಬತ್ತನಾಲ್ಕು ಮಹಾಲಿಂಗಗಳನ್ನು ನಿನಗೆ ಪುನಃ ಕೀರ್ತಿಸಿರುವೆನು.

೫೮. ದೇವಿಯೆ! ಯಾರು ಪ್ರದಕ್ಷಿಣೆಯಾಗಿಯೊ, ಅಪ್ರದಕ್ಷಿಣೆಯಿಂದಲೊ ಈ ಎಲ್ಲ ಲಿಂಗಗಳಿಗೂ ಯಾತ್ರೆಯನ್ನು ಮಾಡುವರೊ, ಅವರು ಪರಮಪದವನ್ನು ಪಡೆಯುವರು.

೫೯. ಅವುಗಳಲ್ಲಿ ಯಾವೊಂದು ಲಿಂಗವನ್ನು ಭಕ್ತಿಯಿಂದ ಪೂಜಿಸಿದರೂ ಮಾನವನು ತಾಯಿತಂದೆಗಳ ಉಭಯಕುಲಗಳೊಡನೆಯೂ ಒಂದುನೂರು ಕುಲದವರನ್ನುದ್ಧರಿಸುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಚತುರಶೀತಿ ಲಿಂಗಾನಾಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಉತ್ತರೇಶ್ವರಮಾಹಾತ್ಮ್ಯವರ್ಣನಂ" ನಾಮ
ಚತುರಶೀತಿತಮೋಽಧ್ಯಾಯಃ

**ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯಂ**
**ಸಂಪೂರ್ಣಂ**

---

೬೦. ದೇವಿಯೆ! ಇಂತು ನಿನಗೆ ಮಹಾಕಾಲವನಕ್ಷೇತ್ರದಲ್ಲಿರುವ ಎಂಬತ್ತನಾಲ್ಕು ಲಿಂಗಗಳ ಮಹಾಚರಿತ್ರೆಗಳನ್ನೂ ಹೇಳಿರುವೆನು. ಈಗ ಮತ್ತೇನನ್ನು ಕೇಳಲೆಳಸುವೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಉತ್ತರೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

**ಅವಂತೀಸ್ಥ ಚತುರಶೀತಿಲಿಂಗಮಾಹಾತ್ಮ್ಯವು ಸಮಾಪ್ತವು**








---

1248—48. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು